# ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ
# ಒಂದು ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕಿ
ಟಿ.ಆರ್.ಹೇಮಾವತಿ

ಮಾರ್ಗದರ್ಶಕರು
ಡಾ.ಸ.ಚಿ.ರಮೇಶ್
ಪ್ರವಾಚಕರು ಮತ್ತು ಮುಖ್ಯಸ್ಥರು
ಜಾನಪದ ವಿಭಾಗ



ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೪

# ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ ಒಂದು ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕಿ
ಟಿ.ಆರ್.ಹೇಮಾವತಿ

ಮಾರ್ಗದರ್ಶಕರು
ಡಾ.ಸ.ಚಿ.ರಮೇಶ್
ಪ್ರವಾಚಕರು ಮತ್ತು ಮುಖ್ಯಸ್ಥರು
ಜಾನಪದ ವಿಭಾಗ








ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೪

# ದೃಢೀಕರಣ ಪತ್ರ

ಕುಮಾರಿ ಟಿ.ಆರ್.ಹೇಮಾವತಿ ಇವರು **'ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ : ಒಂದು ಅಧ್ಯಯನ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಮಹಾಪ್ರಬಂಧವನ್ನು ಸಲ್ಲಿಸಲಾಗಿದೆ. ಈ ಮಹಾಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಿ ಇವರು ಬಳಸಿ ಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೨೯.೦೪.೨೦೦೪

**(ಡಾ.ಸ.ಚಿ.ರಮೇಶ್)**

ಮಾಗದರ್ಶಕರು

ಪ್ರವಾಚಕರು ಹಾಗೂ ಮುಖ್ಯಸ್ಥರು

ಜಾನಪದ ವಿಭಾಗ

ಕನ್ನಡ ವಿಶ್ವವಿದ್ಯಾಲಯ ಹಂಪಿ

# ಪ್ರಮಾಣ ಪತ್ರ

**'ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ : ಒಂದು ಅಧ್ಯಯನ'** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ.ಸ.ಚಿ.ರಮೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಮಹಾಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಟಿ.ಆರ್.ಹೇಮಾವತಿ

**(ಟಿ.ಆರ್.ಹೇಮಾವತಿ)**

ಸಂಶೋಧಕಿ

ಸ್ಥಳ : ವಿದ್ಯಾರಣ್ಯ

ದಿನಾಂಕ : ೨೯.೦೪.೨೦೦೪

# ಕೃತಜ್ಞತೆಗಳು

ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ ಒಂದು ಅಧ್ಯಯನ ಎಂಬ ಪ್ರೌಢ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಮರ್ಪಿಸುವುದು ನನಗೆ ಅತ್ಯಂತ ಹರ್ಷವೆನಿಸುತ್ತದೆ. ಈ ಸಂದರ್ಭದಲ್ಲಿ ನನ್ನ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಅಂದಿನ ಕುಲಪತಿಗಳಾದ ಡಾ.ಎಂ.ಎಂ.ಕಲಬುರ್ಗಿ ಹಾಗೂ ಡಾ.ಎಚ್.ಜೆ.ಲಕ್ಕಪ್ಪಗೌಡ ಇಂದಿನ ಪ್ರಭಾರ ಕುಲಪತಿಗಳಾದ ಡಾ.ಕೆ.ವಿ.ನಾರಾಯಣ ಇವರುಗಳಿಗೆ,

ಅಧ್ಯಯನ ಕೈಗೊಳ್ಳಲು ಆಡಳಿತಾತ್ಮಕ ಅನುಮತಿ ನೀಡಿ ಸೂಕ್ತಸಲಹೆ, ಮಾರ್ಗದರ್ಶನ, ಸಹಕಾರ ನೀಡಿದ ಹಿಂದಿನ ಕುಲಸಚಿವರಾಗಿದ್ದ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ, ಅಧ್ಯಯನಾಂಗದ ನಿರ್ದೇಶಕರಾದ ಡಾ.ಕರಿಗೌಡ ಬೀಚನಹಳ್ಳಿಯವರಿಗೆ,

ಪಿಎಚ್.ಡಿ. ಅಧ್ಯಯನ ಪ್ರಾರಂಭಿಸಬೇಕು ಎಂಬ ಸಮಯದಲ್ಲಿ, ವಿಷಯದ ಆಯ್ಕೆಯಿಂದ ಹಿಡಿದು ಮಹಾಪ್ರಬಂಧದ ರಚನೆಯ ಪ್ರತಿಯೊಂದು ಹಂತದಲ್ಲಿ ನನಗೆ ಸಲಹೆ, ಸೂಚನೆಗಳನ್ನು ನೀಡಿ ಸರಕರಿಸಿದ ಡಾ ಹಿ.ಚಿ.ಬೋರಲಿಂಗಯ್ಯನವರಿಗೆ,

ಈ ಮಹಾಪ್ರಬಂಧವನ್ನು ಸಿದ್ಧಪಡಿಸಲು ಮಾರ್ಗದರ್ಶಕರಾಗಿ ಪ್ರತಿಯೊಂದು ಹಂತದಲ್ಲಿಯೂ ಸಲಹೆ, ಮಾರ್ಗದರ್ಶನ, ಸಹಕಾರಗಳನ್ನು ನೀಡಿದ ಮಾರ್ಗದರ್ಶಕರಾದ ಡಾ ಸ.ಚಿ.ರಮೇಶ್‌ರವರಿಗೆ ಹಾಗೂ ಕರಡು ಪ್ರತಿ ತಿದ್ದಿ ಸರಿಪಡಿಸಿದ ಡಾ.ಜಾಜಿ ದೇವೇಂದ್ರಪ್ಪನವರಿಗೆ,

ಪ್ರಬಂಧದ ರಚನೆಯ ಸಂದರ್ಭದಲ್ಲಿ ಹಲವು ಸಲಹೆ ಸೂಚನೆಗಳನ್ನು ಕೊಟ್ಟು ಸಹಕರಿಸಿದ ಡಾ.ಮಂಜುನಾಥ ಬೇವಿನಕಟ್ಟಿ, ಡಾ.ಸಿ.ಟಿ.ಗುರುಪ್ರಸಾದ್, ಡಾ.ಮೊಗಳ್ಳಿ ಗಣೇಶ್, ಡಾ.ಎಚ್.ಕೆ.ನಾಗೇಶ್, ಹರಿಶ್ಚಂದ್ರ ದಿಗ್ಸಂಗೀಕರ್, ರಾಜಪ್ಪ ದಳವಾಯಿ, ಎಸ್.ಜಿ.ಸಿದ್ಧರಾಮಯ್ಯ, ಶ್ರೀಸುಹಾಸ್, ಶ್ರೀ ವಿರೇಶ್ ರವರಿಗೆ,

ಪಿಎಚ್.ಡಿ.ಅಧ್ಯಯನ ಮಾಡಲು ಪ್ರೊತ್ಸಾಹಿಸಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಪ್ರವಾಸೋದ್ಯಮ ಇಲಾಖೆಯ ಜಂಟಿ ನಿರ್ದೇಶಕರಾದ ಶ್ರೀ ಶಿವಾನಂದ ಆರಾಧ್ಯ, ಉಪನಿರ್ದೇಶಕರಾದ ಬೋರೆಗೌಡರವರಿಗೆ, ಹೊಸಪೇಟೆಯ ಸಹಾಯಕ ನಿರ್ದೇಶಕರಾಗಿದ್ದ ಶ್ರೀ ಶಿವಲಿಂಗಪ್ಪ, ಶ್ರೀ ಹತ್ತಿಕಾಳ್, ಶ್ರೀಮತಿ ರಜಿನಾ, ಶ್ರೀ ವಿಠ್ಠಲ ಹಾಗೂ ಶ್ರೀ ಜೆ.ಕೃಷ್ಣಮೂರ್ತಿ ಅವರಿಗೆ,

ಪಿಎಚ್.ಡಿ. ಅಧ್ಯಯನಕ್ಕೆ ಪ್ರೋತ್ಸಾಹಿಸಿ, ಈ ಮಹಾಪ್ರಬಂಧದ ಅವಧಿಯಲ್ಲಿ ಎಲ್ಲ ರೀತಿಯ ನೆರವು, ಸಹಕಾರ, ಅನುಕೂಲತೆಗಳನ್ನು ಒದಗಿಸಿಕೊಟ್ಟ ನನ್ನ ತಂದೆ ಶ್ರೀ ಎಸ್.ರೇಣುರವರಿಗೆ ಮತ್ತು ನನ್ನ ತಾಯಿ ಎಸ್.ಜಿ.ಶಶಿಕಲಾರವರಿಗೆ,

ಅಧ್ಯಯನದ ಸಂದರ್ಭದಲ್ಲಿ ಎಲ್ಲಾ ವಿಷಯದಲ್ಲಿಯೂ ನನ್ನನ್ನು ಪ್ರೋತ್ಸಾಹಿಸಿದ ನನ್ನ ಅಣ್ಣ ಟಿ.ಆರ್. ಸಂತೋಷ್, ಅಮೇರಿಕಾದಲ್ಲಿ ನೆಲೆಸಿರುವ ಅಕ್ಕ ಭಾವ ಮತ್ತು ಮನೆಯವರೆಲ್ಲರಿಗೆ,

ಅಧ್ಯಯನದ ಅವಧಿಯಲ್ಲಿ ಒತ್ತಾಸೆಯಾಗಿ ನಿಂತ ಗೆಳತಿಯರಾದ ಜಿ.ಎಸ್.ಲತಾ, ಎಸ್.ಲಕ್ಷ್ಮೀದೇವಿ ಎನ್.ನಳಿನ, ಪಂಕಜ ಹಾಗೂ ಗೆಳೆಯರಿಗೆ

ಅಧ್ಯಯನದ ಅವಧಿಯಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ನನಗೆ ಹೊಸಪೇಟೆಯಲ್ಲಿ ವಸತಿಯನ್ನು ಕಲ್ಪಿಸಿಕೊಟ್ಟ ಮಲ್ಲಿಗಿ ಹೋಟೇಲ್‌ನ ಆಡಳಿತವರ್ಗಕ್ಕೆ,

ಮಹಾಪ್ರಬಂಧವನ್ನು ಅಂದವಾಗಿ ಡಿ.ಟಿ.ಪಿ. ಮಾಡಿದ ಹೊಸಪೇಟೆಯ ಯಾಜಿ ಗ್ರಾಫಿಕ್ಸ್‌ನ ಶ್ರೀಮತಿ ಸವಿತ ಯಾಜಿ ಹಾಗೂ ಗಣೇಶ್ ಯಾಜಿಯವರಿಗೆ ಹಾಗೂ ನನ್ನ ಎಲ್ಲಾ ಬಂಧುಗಳಿಗೆ,

ನನ್ನ ಹೃದಯಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ವಿದ್ಯಾರಣ್ಯ
೨೯.೦೪.೨೦೦೪

ಟಿ.ಆರ್.ಹೇಮಾವತಿ

# ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ಪೀಠಿಕೆ

ಇತ್ತೀಚಿನ ದಿನಗಳಲ್ಲಿ ಜಾನಪದ ಅಧ್ಯಯನವು ಹೆಚ್ಚು ಗಂಭೀರವೂ ಜನಪ್ರಿಯವೂ ಆಗುತ್ತಿದೆ. ನಿಸರ್ಗದಡಿಯಲ್ಲಿ ವಾಸಿಸುವ ಮಾನವ ಮಾತು ಕಲಿತು ತನ್ನ ಅನಿಸಿಕೆಗಳನ್ನು ಪ್ರಕಟಸ ತೊಡಗಿದನೊ, ಅಂದಿನಿಂದಲೂ ಜಾನಪದ ಹರಿಯತೊಡಗಿದೆ. ಜಾನಪದ ಜನತೆಯ ಗ್ರಂಥಸ್ಥವಲ್ಲದ, ಸಹಸ್ರಾರು ಕಂಠಗಳ ಮೂಲಕ ಹರಿದು ಹುಟ್ಟಿಬರುವ ಸಂಪ್ರದಾಯದ ಮೊತ್ತ. "ಶಿಷ್ಟ ಸಾಹಿತ್ಯ ಹುಟ್ಟುವ ಮೊದಲೇ ಆದಿಮಾನವರು ತಮ್ಮ ದೈನಂದಿನ ನೋವು-ನಲಿವುಗಳನ್ನು, ಅನಿಸಿಕೆ-ಅನುಭವಗಳನ್ನು, ಕನಸು-ಕಲ್ಪನೆಗಳನ್ನು, ಕ್ರಿಯೆ-ಪ್ರತಿಕ್ರಿಯೆಗಳನ್ನು ಮೌಖಿಕವಾಗಿ ಹಾಡಿನ ಮೂಲಕ, ಕಥೆಯ ಮೂಲಕ, ಗಾದೆ, ಒಗಟು, ಒಡಪುಗಳ ಮೂಲಕ ತೋಡಿಕೊಂಡರು."[೧] ಅನಕ್ಷರಸ್ಥರ ಸಾಹಿತ್ಯ, ಜಾನಪದವಾದರೆ, ಅಕ್ಷರಸ್ಥರ ಸೃಷ್ಟಿ ಶಿಷ್ಟ ಸಾಹಿತ್ಯ. ಜಾನಪದ ಒಂದು ಪರಂಪರೆ. ಅದರ ಒಂದು ಅಂಗ ಜನಪದ ಸಾಹಿತ್ಯ. ಇದರಲ್ಲಿ ಪದ್ಯ ಪ್ರಕಾರಗಳು, ಜಾನಪದ ಗೀತೆ, ಲಾವಣಿ, ಖಂಡಕಾವ್ಯ ಹಾಗೂ ಜನಪದ ಮಹಾಕಾವ್ಯಗಳು ಎಂಬುದಾಗಿ ವಿಂಗಡಿಸಬಹುದು. ಶಿಷ್ಟ ಸಾಹಿತ್ಯದಲ್ಲಿ ಮಹಾಕಾವ್ಯ ವ್ಯಾಪಕವಾದ ನೆಲೆಯುಳ್ಳದ್ದಾಗಿ ಹಲವಾರು ಪಾತ್ರಗಳು ಮತ್ತು ಘಟನೆಗಳಿಂದ ಕೂಡಿದ ಗಂಭೀರವಾದ ಛಂದಸ್ಸಿನಲ್ಲಿ ರಚಿತವಾದ ದೀರ್ಘ ಕತೆಯುಳ್ಳ ವಿಸ್ತಾರವಾದ ವ್ಯಾಪ್ತಿವುಳ್ಳದ್ದು. ಇದು ಒಂದು ಸಾಂಸ್ಕೃತಿಕ ಜನಾಂಗದ ಅಥವಾ ಒಂದು ನಾಡಿನ ಜನತೆಯ ಲೋಕದೃಷ್ಟಿಯನ್ನು, ಆಸೆ ಆಕಾಂಕ್ಷೆಗಳನ್ನು ಬಿಂಬಿಸುವ ಸಾಧನ. ಆದರೆ ಜನಪದ ಮಹಾಕಾವ್ಯ ಕೇವಲ ಓದುವ ಅಥವಾ ವಾಚಿಸುವುದಲ್ಲ, ವ್ಯಕ್ತಿಗತವೂ ಅಲ್ಲ, ಇಡೀ ಒಂದು ಸಮೂಹಕ್ಕೆ ಸೇರಿದ್ದು. "ತಮ್ಮ ಇಡೀ ಪ್ರದೇಶದ, ಪರಿಸರದ, ಜನಾಂಗದ ಆದರ್ಶ ವೀರನನ್ನು, ಮುಖಂಡನನ್ನು, ಅವನು ಮಾಡಿದ ಅಸಾಧಾರಣವಾದ ಸಾಧನೆಗಳನ್ನು ಮತ್ತು ತೋರಿಸಿದ ವಿಶಿಷ್ಟ ಸಾಹಸಗಳನ್ನು, ತನ್ನ ಬದುಕಿನ ಮೂಲಕ ಧ್ವನಿಸಿದ ಜೀವನ ತತ್ವವನ್ನು ಸುದೀರ್ಘ ಕಾವ್ಯಗಳ ಮೂಲಕ ಅನನ್ಯವಾಗಿ ಅಭಿವ್ಯಕ್ತಿಸಿದ್ದಾರೆ. ಈ ಸುದೀರ್ಘವಾದ ಅನನ್ಯ ಅಭಿವ್ಯಕ್ತಿಯೇ ಜನಪದ ಮಹಾಕಾವ್ಯ ಎನಿಸಿಕೊಳ್ಳುತ್ತದೆ."[೨] ಜನಪದ ಮಹಾಕಾವ್ಯ ಕಥೆ, ಭಾವಗೀತಾತ್ಮಕ ಶೈಲಿಗಳೆರಡನ್ನೂ ರೂಢಿಸಿಕೊಂಡ ದೃಶ್ಯಕಾವ್ಯ. ಶಿಷ್ಟಕಾವ್ಯವನ್ನು ಓದುವಂತೆ ಅಥವಾ ವಾಚನ ಮಾಡುವಂತೆ ಜನಪದ ಕಾವ್ಯದಲ್ಲಿ ಏಕಮುಖವಾದ ಅಭಿವ್ಯಕ್ತಿ ಇಲ್ಲ. ಇದರ ಮೂಲ ಕರ್ತೃ ಯಾರು ಎಂದು ತಿಳಿಯುವುದಿಲ್ಲ. ಪೀಳಿಗೆಯಿಂದ ಪೀಳಿಗೆಗೆ ಮೌಖಿಕವಾಗಿ ಇವು ಬೆಳೆಯುತ್ತಾ ಸೃಷ್ಟಿಯಾಗಿ, ಕಥೆಯ ತಿರುಳು ಮೂಲ ಸೃಷ್ಟಿಯಲ್ಲಿದ್ದರೂ ವಿವರಗಳು ಹಾಡುಗಾರರಿಂದ ಬದಲಾಗುತ್ತಾ ಹೋಗುತ್ತದೆ. ಜನಪದ ಮಹಾಕಾವ್ಯವನ್ನು ಹಾಡುವ ಗಾಯಕರು ಕನಿಷ್ಠ

ಮೂವರಿಂದ ಎಂಟು ಜನರಿರುತ್ತಾರೆ. ಹಾಡುತ್ತಾ-ಹಾಡುತ್ತಾ ತಮ್ಮ ತಮ್ಮೊಳಗೇ ಪಾತ್ರಗಳಾಗಿ ಅಭಿನಯಿಸಿ, ಸಂಭಾಷಿಸಿ ಸಾಮೂಹಿಕ ಗಾನವನ್ನು ನಡೆಸಿಕೊಡುತ್ತಾರೆ. ಶಿಷ್ಟ ಕಾವ್ಯದಲ್ಲಿ ಇದು ಸಾಧ್ಯವಿಲ್ಲ. ಇದು ಒಂದು ನಿರ್ದಿಷ್ಟ ಕಾಲದಲ್ಲಿ, ನಿರ್ದಿಷ್ಟ ವ್ಯಕ್ತಿಯಿಂದ ರಚಿತವಾಗಿರುವಂತಹುದು. ಆದರೆ ಜನಪದ ಕಾವ್ಯ ಪ್ರತಿನಿತ್ಯವೂ ಪುನರ್ ಸೃಷ್ಟಿಯಾಗುತ್ತಲೇ ಹೋಗುತ್ತದೆ. ಇದು ಒಂದು ಸಮುದಾಯದ ಸೃಷ್ಟಿ. ಜನಪದ ಮಹಾಕಾವ್ಯಕ್ಕೆ ಚಾರಿತ್ರಿಕ ಅಥವಾ ಸಾಮಾಜಿಕ ಹಿನ್ನೆಲೆಯೊಂದು ಇರುತ್ತದಾದರೂ ಸಮುದಾಯದ ಅಂದಂದಿನ ಬೇಕು ಬೇಡಗಳು ಇಲ್ಲಿ ಪ್ರಾಧಾನ್ಯತೆ ಪಡೆದುಕೊಂಡು ಕಾವ್ಯ ಅಂದಿನದೂ ಇಂದಿನದೂ ಆಗಿ ಬದಲಾಗುತ್ತದೆ. ಮೌಖಿಕ ಮಹಾಕಾವ್ಯಗಳಲ್ಲಿ ಶಿಷ್ಟ ಮಹಾಕಾವ್ಯಗಳಲ್ಲಿರುವ ಹಾಗೆ ಅಷ್ಟಾದಶ ವರ್ಣನೆಗಳಲ್ಲದೆ ಕಂಡದ್ದನ್ನು ಕಂಡ ಹಾಗೆ ನೇರವಾಗಿ ಹೇಳುವ ಪರಿಪಾಠವಿದ್ದು, ಒಟ್ಟಿನಲ್ಲಿ ಶಿಷ್ಟ ಮನಸ್ಸಿನ ನಂಬಿಕೆಗಳಿಗೆ ತದ್ವಿರುದ್ಧವಾದದ್ದು. ಸಾಮಾನ್ಯವಾಗಿ ಜನಪದ ಮಹಾಕಾವ್ಯ ರಾಶಿಯಲ್ಲಿ ವೀರರ ಸಾಹಸಗಳನ್ನು ತ್ಯಾಗ ಬಲಿದಾನದ ಕಥೆಗಳನ್ನು, ಧಾರ್ಮಿಕ ವ್ಯಕ್ತಿಗಳ ಸಾಧನೆಗಳನ್ನು ವಿವರಿಸುತ್ತಾ ಆಯಾ ಸಾಂಸ್ಕೃತಿಕ ವರ್ಗದ ಅಥವಾ ದೇಶದ ಪುರಾಣವೇ ಆಗಿರುವುದಲ್ಲದೆ, ಅವು ಇಂದಿಗೂ ಜನರ ಜೀವನದಲ್ಲಿ ಪರಿಣಾಮವನ್ನು ಬೀರುತ್ತಿವೆ. ಕನ್ನಡದಲ್ಲಿ ಸಂಗ್ರಹಿಸಲಾಗಿರುವ ಮಲೆಯಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ ಮುಂತಾದವುಗಳು ಜನಪದ ಮಹಾಕಾವ್ಯಗಳು.

ಜಾನಪದವನ್ನು ಅದರ ಸಾಹಿತ್ಯಿಕ ಶಕ್ತಿಯ ಮೂಲಕ ನೋಡುವ ಸಾಂಪ್ರದಾಯಿಕ ಕ್ರಮ ಈಗ ತಪ್ಪಿ ಹೋಗುತ್ತಿದ್ದು, ಅದರ ಬದಲು ನಿರ್ದಿಷ್ಟ ಸಮುದಾಯದ ಅಥವಾ ಸಮಾಜವೊಂದರ ಸಮಗ್ರ ಚೌಕಟ್ಟಿನೊಳಗಡೆ ಜಾನಪದವನ್ನು ಅಧ್ಯಯನ ಮಾಡುವ ಪ್ರವೃತ್ತಿ ಇತ್ತೀಚಿನ ದಿನಗಳಲ್ಲಿ ಕಂಡುಬರುತ್ತಿದೆ.

ಜನಪದ ಜೀವನದ ಸಾಂಸ್ಕೃತಿಕ ಕೇಂದ್ರಬಿಂದು ಹೆಣ್ಣು. ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣಿನ ಬಗ್ಗೆ ಇರುವ ಪರಿಕಲ್ಪನೆಗಳು, ಶೀಲ, ಚಾರಿತ್ರ್ಯ, ಪಾತಿವ್ರತ್ಯಗಳು, ತ್ಯಾಗ, ಬಲಿದಾನಗಳೇ ಚರ್ಚೆಯಲ್ಲಿವೆ. ಹೆಣ್ಣಿನ ಸ್ಥಾನಮಾನ ಸ್ಥಿತಿಗತಿಗಳು ಎಲ್ಲಾ ಸಂಸ್ಕೃತಿಗಳಲ್ಲಿ ಒಂದೇ ರೀತಿ ಇರುವುದಿಲ್ಲ. ಪುರುಷ ಪ್ರಧಾನ ಸಮಾಜ ಹೆಣ್ಣಿನ ಅಭಿವ್ಯಕ್ತಿಯನ್ನು ದಾಖಲಿಸದೆ ಅವಳನ್ನು ಮರೆಗೆತಳ್ಳಿದೆ. ಲೈಂಗಿಕತೆ, ಗರ್ಭಧಾರಣೆ, ತಾಯ್ತನ, ಪಾಲನೆಗಳಂತಹ ಚಟುವಟಿಕೆಯಲ್ಲಿ ಮುಖ್ಯಪಾತ್ರ ವಹಿಸುತ್ತಿದ್ದ ಹೆಣ್ಣು ಸಾಂಸ್ಕೃತಿಕ ಚಟುವಟಿಕೆಯಲ್ಲಿ ತಟಸ್ಥಳಾಗಲು, ಮೌನವಾಗಲು ಕಾರಣಗಳ ಹುಡುಕಾಟಕ್ಕೆ ಸ್ತ್ರೀವಾದಿ ಅಧ್ಯಯನ ಒಂದು ಊರುಗೋಲು. ಇದಕ್ಕೆ ಹಿನ್ನೆಲೆಯಾಗಿ ಮಾತೃಪ್ರಧಾನ ಕುಟುಂಬದ ಬೆಳವಣಿಗೆಯನ್ನು ಅವಲೋಕಿಸಬೇಕಾಗಿದೆ.

ಆದಿಮಾನವ, ನಿಸರ್ಗ ಏನು ಕೊಡುತ್ತಿದ್ದಿತೋ ಅದನ್ನು ಸಂಗ್ರಹಿಸಿ ತಿನ್ನುತ್ತಿದ್ದ. ಹಣ್ಣುಗಳನ್ನು, ಹಕ್ಕಿಗಳ ಮೊಟ್ಟೆಗಳನ್ನು ಸಂಗ್ರಹಿಸುವುದು, ನೆಲವನ್ನು ಚೂಪಾದ ಕಲ್ಲುಗಳಿಂದ, ಕೋಲುಗಳಿಂದ ಅಗೆದು ತೆಗೆದ ಗೆಡ್ಡೆಗೆಣಸುಗಳನ್ನು ತಿನ್ನುತ್ತಿದ್ದನು. ಜೀವನೋಪಾಯ ಚಟುವಟಿಕೆಯನ್ನು 'ಆಹಾರ ಸಂಗ್ರಹಣೆ' ಎಂದು ಕರೆಯಲಾಗುತ್ತದೆ. ಇದು ಮನುಷ್ಯ ನಾಗರೀಕನಾಗಲು ಹವಣಿಸಿದ ಮೊದಲಘಟ್ಟ. ಆಮೇಲೆ ಜನ ಗುಂಪು ಗುಂಪಾಗಿ ಚೂಪು ಮಾಡಿದ ಕೋಲುಗಳನ್ನು ಕೈಕೊಡಲಿಗಳನ್ನು ಹಿಡಿದುಕೊಂಡು ಪ್ರಾಣಿಗಳನ್ನು ಬೇಟೆಯಾಡ ತೊಡಗಿದರು. ಇದು ಮನುಷ್ಯನ ಮೊದಲ ಜೀವನೋಪಾಯವಾಗಿದ್ದಿತ್ತು. ಕಾಲಕ್ರಮೇಣ ಬೇಟೆಗಾರಿಕೆಯಿಂದ ಪಶುಪಾಲನೆ ಹುಟ್ಟಿಕೊಂಡಿತು. ಕೃಷಿಯನ್ನು ಮಹಿಳೆ ಆವಿಷ್ಕರಣೆ ಮಾಡಿದಳು. ಧಾನ್ಯ ಸಂಗ್ರಹಣೆಯಿಂದ

ಕೃಷಿಕಾರ್ಯ ಹುಟ್ಟಿಕೊಂಡಿತು. ಒಂದು ಗುಂಪಿನ ಜನ ಒಟ್ಟಾಗಿ ವಾಸಿಸುವ ಮೂಲಕ ತಮಗೊಂದು ಅಸ್ತಿತ್ವ ಕಂಡುಕೊಳ್ಳುತ್ತಿದ್ದ ಕಾಲ ಅದು. ಇಲ್ಲಿ ಯಾರು ಗಂಡ ಅಥವಾ ಯಾರು ಹೆಂಡತಿ ಎಂಬ ಕಲ್ಪನೆ ಇರಲಿಲ್ಲ. ಸಮೂಹ ಜೀವನ ಅದು. ಮಕ್ಕಳನ್ನು ಹಡೆಯಬಲ್ಲ ಶಕ್ತಿ ಪಡೆದ ತಾಯಿ ಮಾತ್ರ ಅಲ್ಲಿ ಮುಖ್ಯ. ಅವಳಿಗೆ ಅಲ್ಲಿ ಪ್ರಾಧಾನ್ಯ. ಆಹಾರ ಸಂಗ್ರಹಣೆಗಾಗಿ ಹೊರಟ ಗಂಡಸು ಹಿಂತಿರುಗಿ ಬಂದಾಗ ಲಭ್ಯವಿದ್ದ ಹೆಂಗಸಿನ ಜೊತೆ ತನ್ನ ಲೈಂಗಿಕ ತೃಷೆ ತೀರಿಸಿಕೊಳ್ಳುತ್ತಿದ್ದ ಅಷ್ಟೆ. ಆದರೆ ಯಾರು ಮಗುವಿನ ತಾಯಿಯಾಗುತ್ತಾಳೊ ಅವಳಿಗೆ ವಿಶೇಷ ಸ್ಥಾನಮಾನ. ಅದರ ತಂದೆ ಯಾರೆಂಬುದು ಇಲ್ಲಿ ಗೌಣ, ತಾಯಿಯೇ ಸತ್ಯ. ಇದಲ್ಲದೆ ಗಂಡಸರು ಹೊರಗಿನಿಂದ ಸಂಗ್ರಹಿಸಿ ತಂದ ಆಹಾರಗಳನ್ನು ಸಂರಕ್ಷಿಸುವುದು, ಹೆತ್ತ ಮಕ್ಕಳನ್ನು ಪೋಷಿಸುವುದು ಹಾಗೂ ಇಡೀ ಸಮೂಹದ ಜವಾಬ್ದಾರಿಯೂ ತಾಯಿಯದೇ ಆಗಿತ್ತು. ಗಂಡಿನ ಉತ್ಪಾದನಾ ಸಾಮರ್ಥ್ಯಕ್ಕಿಂತ ಫಲವಂತಿಕೆಯ ಶಕ್ತಿ ಇರುವ ಹೆಣ್ಣಿನ ಮರು ಉತ್ಪಾದನೆಗೆ ಮಹತ್ವ ಇದ್ದುದರಿಂದ ಸಾಮಾಜಿಕವಾಗಿ ಹೆಣ್ಣಿನ ಸ್ಥಾನ ಉನ್ನತವಾಗಿತ್ತು. ಹೀಗಾಗಿ ಸೃಷ್ಟಿಗೆ ಕಾರಣಳಾದ ಮತ್ತು ಪೋಷಣೆಗೆ ಪೂರಕಳಾದ ಮಾತೆಯನ್ನು ಗೌರವಿಸಿ ಆರಾಧಿಸುತ್ತಿದ್ದುದು ಸಹಜವಾಯಿತು. ಹೀಗೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಅಧಿಕಾರವು ಮಹಿಳೆಯ ದಾಗಿತ್ತು. ಆದಿವಾಸಿ ಬುಡಕಟ್ಟು ಕುಟುಂಬದಲ್ಲಿ ತಾಯಿಗೆ ಹೆಚ್ಚು ಪ್ರಾಮುಖ್ಯವಿದ್ದಿತು. ಹೆಂಗಸಿನ ಲೈಂಗಿಕ ಸ್ವಾತಂತ್ರ್ಯ, ಮಣ್ಣಿನ ಫಲವಂತಿಕೆಯನ್ನು ಹೆಚ್ಚಿಸುತ್ತದೆಂದು ನಂಬಿದ್ದರು. ಶಿಶುವಿನ ಜನನದಲ್ಲಿ ಪಿತೃವಿನ ಪಾತ್ರದ ಅರಿವು ಅನೇಕ ಆದಿವಾಸಿ ಬುಡಕಟ್ಟು ಜನಾಂಗಗಳಿಗೆ ಇರಲಿಲ್ಲವಾಗಿ ತಾಯಿ ತನ್ನ ಮಕ್ಕಳೊಡನೆ ಕುಟುಂಬವನ್ನು ಸೃಷ್ಟಿಸಿಕೊಳ್ಳಬೇಕಾದ ಅನಿವಾರ್ಯತೆ ಇದ್ದಿತು. ಭಾರತೀಯ ಸಮಾಜದ ವಿಭಜನೆ ಹಾಗೂ ಮಾತೃಪ್ರಧಾನ ಮೌಲ್ಯಗಳ ನಶಿಸುವಿಕೆ ಪ್ರಾರಂಭವಾಗಿ ಲಿಂಗ ವ್ಯವಸ್ಥೆಯ ಅಸಮಾನತೆ ಹೊಸ ಹೊಸ ರೂಪ ತಳೆಯಿತು. ಕಾಲಕ್ರಮದಲ್ಲಿ ನೇಗಿಲಿನಿಂದ ಬೇಸಾಯ ಮತ್ತು ಜಾನುವಾರು ಸಾಕಣೆ ಬೆಳವಣಿಗೆ ಹೊಂದಿದಂತೆ ಹೆಚ್ಚುವರಿ ಉತ್ಪಾದನೆ ಸಾಧ್ಯವಾಗಿ ಅದರ ಮೇಲೆ ಗಂಡಸು ನಿಯಂತ್ರಣ ಸಾಧಿಸುವಂತಾಯ್ತು. ಹೀಗೆ ಗಂಡಸಿನ ಅರಿವು ಹೆಚ್ಚಿದಂತೆ ಸಮಾಜದಲ್ಲಿ ಪುರುಷ ದಬ್ಬಾಳಿಕೆ ಹಾಗೂ ಶೋಷಣೆ ಹೆಚ್ಚಾಗಿ ಸ್ತ್ರೀಯರನ್ನು ಕೃಷಿ ವ್ಯವಸ್ಥೆಯಿಂದ ದೂರವಿಟ್ಟರು. ಪುರುಷರ ದಬ್ಬಾಳಿಕೆ ಮತ್ತು ಶೋಷಣೆ ಹೆಚ್ಚಾಗಿ ಮಹಿಳೆಯನ್ನು ಗೃಹಬಂಧಿಯನ್ನಾಗಿಸಿದರು. ಖಾಸಗಿ ಆಸ್ತಿಯ ಕಲ್ಪನೆಯೊಂದಿಗೆ ತಂದೆ-ತಾಯಿ ಮತ್ತು ಮಕ್ಕಳು ಒಟ್ಟಿಗೆ ವಾಸಿಸಲು ಪ್ರಾರಂಭಿಸಿ, ಹೆಂಗಸಿನ ಮೇಲೆ ಪೂರ್ಣ ನಿಯಂತ್ರಣ ಸಂಪಾದಿಸುವಂತಾಗಿ, ಪಿತೃಪ್ರಧಾನ ವ್ಯವಸ್ಥೆ ಸರ್ವವ್ಯಾಪ್ತಿಯಾಗಿ ತನ್ನ ಬಾಹುಗಳನ್ನು ಚಾಚಿತು. ಮಾನವನಿಗೆ ವಿವೇಚನಾಶಕ್ತಿ ಬಂದಾಗ ಲೈಂಗಿಕ ಜ್ಞಾನ, ಲಜ್ಜೆ ಮೊದಲಾದವು ಅವನಲ್ಲಿ ರೂಪುಗೊಂಡು 'ಸ್ತ್ರೀ' ತನ್ನ ಸ್ವಂತ ಆಸ್ತಿ ಎಂದು ಪರಿಗಣಿಸಿದ. ಇಲ್ಲಿ ತಂದೆಯೇ ಕುಟುಂಬದ ಸರ್ವಾಧಿಕಾರಿ. ಅವನು ಅವರ ಪೋಷಕ. ಮಕ್ಕಳು ತಂದೆಯ ವಂಶಕ್ಕೆ ಸೇರಿದವರು. ಕುಟುಂಬದ ಆಸ್ತಿ ತಂದೆಯಿಂದ ಮಗನಿಗೆ ಎನ್ನುವ ಆಸ್ತಿ ಹಕ್ಕುಗಳ ದೃಷ್ಟಿಕೋನ ಬಂದಿತು. ದೈಹಿಕ ಸುಖದ ಪರಿಕಲ್ಪನೆಯ ಸ್ವಾರ್ಥದಿಂದಲೋ, ಸುರಕ್ಷತೆಯ ದೃಷ್ಟಿಯಿಂದಲೋ, ಯಾವುದೇ ರೀತಿಯ ಅನುಮಾನವೂ ಬಾರದ ಹಾಗೆ ಪುರುಷ ಸ್ತ್ರೀಯನ್ನು ಕಟ್ಟುಕಟ್ಟಳೆಗಳ ಸಂಕೋಲೆಯಲ್ಲಿ ಸಿಲುಕಿಸಿ ಆಕೆಗೆ ಆದರ್ಶದ ಹುಸಿ ಕೀರ್ತಿಯ ಅಮಲು ಹಿಡಿಸಿದ. ಇಲ್ಲಿ ಹೆಣ್ಣಿನಶೀಲ, ಪಾತಿವ್ರತ್ಯಕ್ಕೆ ಹೆಚ್ಚು ಒತ್ತುಕೊಟ್ಟು ಧರ್ಮದ

ಸಂಕೋಲೆಯಲ್ಲಿ ಬಂಧಿಸಿದ. ಬಳೆ, ಕಾಲುಂಗರ ಎಲ್ಲವೂ ಕಟ್ಟುಹಾಕುವ ಚಿಹ್ನೆಗಳೇ. ಒಟ್ಟಿನಲ್ಲಿ ಪಿತೃಪ್ರಧಾನತೆ ನೆಲೆಯೂರಿದ ಮೇಲೆ ತೋರಿದ ಕ್ರೌರ್ಯ ದೌರ್ಜನ್ಯಗಳಿಗೆ ಮಿತಿ ಇಲ್ಲ.

ನಮ್ಮ ಗರತಿಯ ಹಾಡುಗಳಲ್ಲೆಲ್ಲ ಪ್ರಧಾನವಾಗಿ ಕಾಣುವ 'ಪಾತಿವ್ರತ್ಯ'ದ ಆಶಯ ಇನ್ನಿಲ್ಲದ ಮಹತ್ವವನ್ನು ಪಡೆದಿದೆ. ಪುರುಷ ಹೆಣ್ಣಿನ ಪಾತಿವ್ರತ್ಯವನ್ನು ಪ್ರಮಾಣಿಸಿ ನೋಡುವ, ಶಿಕ್ಷಿಸುವ ಸಾಮಾಜಿಕ ಹೊಣೆಗಾರಿಕೆಯನ್ನು ಹೊಂದಿದ್ದರೆ, ಹೆಣ್ಣಿಗೆ ಅದನ್ನು ಜಾಣತನದಿಂದ ರಕ್ಷಿಸಿಕೊಳ್ಳುವ ವೈಯಕ್ತಿಕ ಜವಾಬ್ದಾರಿಯನ್ನು ಹೊರಿಸಲಾಗಿದೆ. ಇದರ ವೈಭವೀಕರಣವು ಎಷ್ಟು ಅತಿರೇಕಕ್ಕೆ ಹೋಯಿತೆಂದರೆ ಗಂಡನ ಮರಣಾನಂತರ ಉರಿವ ಚಿತೆಯಲ್ಲಿ ಹಾರಿ ಸತ್ತಗಂಡನೊಂದಿಗೆ ತಾನೂ ಉರಿದು ಹೋಗುವಂಥ ಆತ್ಮಾಹುತಿಯ ಪದ್ಧತಿಯನ್ನು ಹುಟ್ಟುಹಾಕಿತು. ಪಾತಿವ್ರತ್ಯದ ನಂತರದ ಸ್ಥಾನ ಹೆಣ್ಣಿಗೆ ತಾಯ್ತನ, ನಮ್ಮ ಜನಪದ ಹೆಣ್ಣುಗಳಲ್ಲಿರುವ ದಟ್ಟವಾದ ಬಯಕೆ, ಬವಣೆಗಳನ್ನು ಅತ್ಯಂತ ಸೂಕ್ಷ್ಮವಾಗಿ ವ್ಯಕ್ತಪಡಿಸುವುದನ್ನು ಜನಪದ ಗೀತೆಗಳಲ್ಲಿ ಕಾಣಬಹುದಾಗಿದೆ.

ಮಹಿಳೆಗೆ ನಿಸರ್ಗದ ವಿಶಿಷ್ಟ ಕೊಡುಗೆಯೆಂದರೆ ಫಲವಂತಿಕೆ. ಇದರಿಂದಾಗಿಯೇ ಹೆಣ್ಣನ್ನು ನಿಸರ್ಗದೊಂದಿಗೆ ಹೋಲಿಸುವುದು. ಭಾರತದಲ್ಲಿ ಸಂತಾನ ಮುಂದುವರಿಕೆಗೆ, ವಂಶೋದ್ಧಾರಕ್ಕೆ ಮೊದಲ ಆದ್ಯತೆ. ಜನಪದರ ದೃಷ್ಟಿಯಲ್ಲಿ ಕುಂತಿ ಮತ್ತು ಸೀತೆಯರು ತಾಯ್ತನದ ಆದರ್ಶಕ್ಕೆ ಪ್ರತೀಕವಾಗಿದ್ದಾರೆ.

'ಬಂಜೆ' ಎಂಬ ಶಬ್ದಕ್ಕೆ ಹೆಣ್ಣು ಬೆಚ್ಚುತ್ತಾಳೆ, ಭಯಪಡುತ್ತಾಳೆ. ತನ್ನ ಬದುಕು 'ಬಾಳೆಲೆಯ ಹಾಸ್ಕುಂಡು, ಬೀಸಿ ಒಗದ್ಹಾಂಗೆ' ಎಂದು ಸಂಕಟಪಡುತ್ತಾಳೆ. ವಿವಾಹ ಸಂಬಂಧದ ಅಭದ್ರತೆಗೆ ದಾರಿ ಇದು. ಗಂಡಿಗೆ ಮರುಮದುವೆಗೆ ಅನೈತಿಕ ಲೈಂಗಿಕ ಅವ್ಯವಹಾರಗಳಿಗೆ ಪರವಾನಿಗೆ ನೀಡುವ ಪ್ರಶಸ್ತಿ ಪತ್ರ. ಹೆಣ್ಣಿನಲ್ಲಿ ಫಲವತ್ತತೆಯಿದ್ದು, ಸಂತಾನ ಹೀನತೆಗೆ ಗಂಡಿನ ದೈಹಿಕ ದೋಷವಿದ್ದ ಸಂದರ್ಭದಲ್ಲಿಯೂ ಪುರುಷಪ್ರಧಾನ ಸಮಾಜ ಅದನ್ನು ಮುಚ್ಚಿ ಹಾಕಿ, ಆ ದೋಷವನ್ನು ಹೆಣ್ಣಿನ ತಲೆಗೆ ಕಟ್ಟಿ ಅವಳನ್ನು 'ಬಂಜೆ' ಎಂದು ನಿಕೃಷ್ಟವಾಗಿ ಕಾಣುತ್ತಿದ್ದುದನ್ನು ಜನಪದಗೀತೆಗಳು ಮನಮಿಡಿಯುವಂತೆ ಅವಳ ಮನೋವೇದನೆಯನ್ನು ಚಿತ್ರಿಸಿವೆ. ಬಂಜೆ ಹೆಣ್ಣು ನೆಲದ ಫಲವತ್ತತೆಯನ್ನು ಬರಡುಗೊಳಿಸುವಳೆಂಬುದು ಜನಪದರ ನಂಬಿಕೆ.

ಹೀಗೆ ಪುರುಷನ ಸ್ವಾರ್ಥದ ಅರಿವಿಲ್ಲದೆ ಹೆಣ್ಣು ಆಗಿನಿಂದಲೂ ಆತನ ಶೋಷಣೆಗೆ ಒಳಗಾಗುತ್ತಲೇ ಬಂದಿದ್ದಾಳೆ. ಇದು ಹಲವು ರೂಪಗಳಲ್ಲಿ ಮುಂದುವರೆಯುತ್ತದೆಯಾದರೂ, ಹೆಣ್ಣಿಗೆ ಪುರುಷನ ಕ್ರೌರ್ಯದ ಪರಿಚಯವಾದಂತೆ ಇದನ್ನು ಪ್ರಶ್ನಿಸುತ್ತಾ ಪ್ರತಿಭಟಿಸತೊಡಗಿದಳು. ಸ್ವಾಯತ್ತ ಬದುಕಿನೆಡೆಗೆ ಹೋಗ ಬಯಸಿದಳು.

ಕನ್ನಡ ಜನಪದ ಮಹಾಕಾವ್ಯಗಳಲ್ಲಿ ಹೆಚ್ಚಿನ ಪಾಲು ಹೆಣ್ಣಿನ ಶೀಲ ಹಾಗೂ ಪಾತಿವ್ರತ್ಯದ ಬಗ್ಗೆ ಒತ್ತು ಕೊಟ್ಟಿದ್ದರೂ ಹೆಣ್ಣಿನ ಶೋಷಣೆಯ ವಿರುದ್ಧ ಪ್ರತಿಭಟನೆಗೈದುದನ್ನು, ಸಮಾನತೆಗೆ ಹೆಚ್ಚಿನ ಒತ್ತು ಕೊಟ್ಟಿರುವುದನ್ನು ಕಾಣುತ್ತೇವೆ. ಅದರಲ್ಲೂ ಜನಪದ ಮಹಾಕಾವ್ಯಗಳ ವಿಶಿಷ್ಟ ರೂಪದ ಅರಿವಿಗೆ ಪ್ರಯತ್ನಿಸಿದಾಗ ಜಾತಿಪದ್ಧತಿಯನ್ನು ಆಧರಿಸಿ ಕಟ್ಟಿರುವ ನಮ್ಮ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಪುರೋಹಿತವರ್ಗ,

ರಾಜಪ್ರಭುತ್ವಗಳಿಂದ ಜೀವನದುದ್ದಕ್ಕೂ ನೋವು, ತಿರಸ್ಕಾರ ಹಾಗೂ ಅಪಮಾನಗಳಿಗೆ ಬಲಿಯಾಗುತ್ತಾ ಬಂದ ಜನವರ್ಗವೊಂದು ಸಾಮಾಜಿಕ ಮತ್ತು ಸಾಂಸ್ಕೃತಿಕ ಕೀಳರಿಮೆಗಳನ್ನು ಮೆಟ್ಟಿ ಆ ಮೂಲಕ ತೊಂಡಿ ಸಂಪ್ರದಾಯದಲ್ಲಿ ತಮ್ಮತನಗಳನ್ನು ಅರ್ಥೈಸಿಕೊಂಡಿರುವ ದೃಷ್ಟಿಕೋನವನ್ನು ವಿಶ್ಲೇಷಣೆಗೆ ಒಳಪಡಿಸಿ, ಅದರಲ್ಲಿ ಬಹಳ ದಟ್ಟವಾಗಿರುವ ಸ್ತ್ರೀಸಂವೇದನೆಯನ್ನು ಹೊರತೆಗೆದು, ಹೊಸ ದೃಷ್ಟಿಯಿಂದ ಅದನ್ನು ನೋಡಬೇಕಾದುದು ಅಗತ್ಯವಾಗಿದೆ. ಹೊಸ ಹೊಸ ಅನುಭಾವಿ ಪಂಥಗಳ ಅಸ್ತಿತ್ವದಿಂದಾಗಿ ಜಾನಪದ ಧಾರ್ಮಿಕ ಪಂಥಗಳಿಗೆ ಚೈತನ್ಯ ಬಂದಿರುವುದನ್ನು ಕಾಣಬಹುದು. ನಾಯಕ ಪ್ರಧಾನವಾದಂಥ ಜನಪದ ಮಹಾಕಾವ್ಯಗಳಲ್ಲಿ ಧಾರ್ಮಿಕ ಕಥಾನಕ ವಸ್ತುವಿದ್ದು, ಸ್ತ್ರೀ ಪಾತ್ರಗಳ ಬಗೆಗೆ ವಿವರಗಳು ಹೆಚ್ಚಾಗಿ ದೊರೆಯುವುದಿಲ್ಲವಾದರೂ ಸ್ತ್ರೀ ಧಾರ್ಮಿಕ ವಿಧಿಗಳನ್ನು ಆಚರಿಸುತ್ತಿದ್ದುದರ ದೃಷ್ಟಾಂತಗಳನ್ನು ನೀಡುತ್ತವೆ.

ಜಾನಪದ ನಂಬಿಕೆ, ಆಚರಣೆ ಇತ್ಯಾದಿಗಳನ್ನು ಜನಪದ ಮಹಾಕಾವ್ಯಗಳಲ್ಲಿ ಪ್ರಧಾನವಾಗಿ ನಾವು ಕಾಣಬಹುದಾಗಿದೆ. ಮಲೆಯಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಬುಡಕಟ್ಟು ಮಹಾಕಾವ್ಯಗಳಾದ ಜನಪದ ರಾಮಾಯಣ, ಜನಪದ ಮಹಾಭಾರತ ಮುಂತಾದ ಬುಡಕಟ್ಟು ಮೌಖಿಕ ಕಾವ್ಯಗಳು ಸ್ತ್ರೀ ಶೋಷಣೆ ವಿರುದ್ಧ ಧ್ವನಿ ಎತ್ತಿವೆಯಲ್ಲದೆ, ಹೆಣ್ಣಿನ ಸ್ವಾಯತ್ತತೆ, ಸ್ವಾತಂತ್ರ್ಯಗಳನ್ನು ಪುರಸ್ಕರಿಸಿವೆ. ಹೆಣ್ಣಿನ ಸಹಜ ನಿಲುವುಗಳ ಸ್ತ್ರೀ ಶಕ್ತಿಕೇಂದ್ರಗಳ ನಿಜವಾದ ಅರಿವಿಗಾಗಿ ಸ್ತ್ರೀ ಸಂವೇದನೆಯ ಆಳವಾದ ಅಧ್ಯಯನಕ್ಕಾಗಿ ಮಲೆಯ ಮಾದೇಶ್ವರ ಕಾವ್ಯ, ಮಂಟೇಸ್ವಾಮಿ ಕಾವ್ಯ, ಜುಂಜಪ್ಪನ ಕಾವ್ಯ ಹಾಗೂ ಇತರೆ ಜನಪದ ಕಾವ್ಯಗಳಾದ ಗೊಂಡರ ರಾಮಾಯಣ, ಗಾಮೊಕ್ಕಲ ಮಹಾಭಾರತ, ಸ್ಯಾಸಿ ಚಿನ್ನಮ್ಮ ಕಾವ್ಯಗಳನ್ನು ಈ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಅದರಲ್ಲಿ ಸ್ತ್ರೀ ಪಾತ್ರಗಳ ಬಹಿರಂಗಗಳನ್ನು ಎತ್ತಿತೋರಿಸಲು ಈ ಪ್ರಬಂಧದ ಮೂರು, ನಾಲ್ಕು, ಐದನೆ ಮತ್ತು ಆರನೇ ಅಧ್ಯಾಯಗಳಲ್ಲಿ ಪ್ರಯತ್ನ ಮಾಡಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಗಳನ್ನು ಕುರಿತು ಚರ್ಚಿಸಲಾಗಿದೆ. ಅಧ್ಯಯನ ಎರಡರಲ್ಲಿ ಪ್ರಮುಖವಾಗಿ ಎರಡು ಭಾಗಗಳನ್ನು ಮಾಡಿಕೊಂಡಿದ್ದು, ಮೊದಲ ಭಾಗದಲ್ಲಿ ಕನ್ನಡದ ಒಟ್ಟಾರೆ ಜನಪದ ಮಹಾಕಾವ್ಯಗಳ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ. ಎರಡನೆ ಭಾಗದಲ್ಲಿ ಕನ್ನಡದ ಪ್ರಮುಖ ಜನಪದ ಮಹಾಕಾವ್ಯಗಳಾದ ಮಲೆಯಮಾದೇಶ್ವರ, ಮಂಟೇಸ್ವಾಮಿ ಮತ್ತು ಜುಂಜಪ್ಪ ಕಾವ್ಯಗಳನ್ನು ಸಮೀಕ್ಷಿಸಲಾಗಿದೆ.

'ಮಲೆಯಮಾದೇಶ್ವರ ಕಾವ್ಯ' ಎಂಬ ಮೂರನೆ ಅಧ್ಯಾಯದಲ್ಲಿನ ಉಪಶೀರ್ಷಿಕೆ 'ಮಲೆಯಮಾದೇಶ್ವರ ಕಾವ್ಯದ ಸ್ತ್ರೀ ಪಾತ್ರಗಳ ಸ್ವರೂಪ'ದಲ್ಲಿ ಸ್ತ್ರೀ ಪಾತ್ರಗಳ ಧೋರಣೆಗಳನ್ನು ಕುರಿತು ವಿವೇಚಿಸಲಾಗಿದೆ. ಕಾವ್ಯದ ಸ್ತ್ರೀ ಪಾತ್ರಗಳು ಪ್ರತಿಬಿಂಬಿಸುವ ಜೀವನಧರ್ಮವನ್ನು ಆ ಕಾಲಮಾನದ ಹಿನ್ನೆಲೆಯಲ್ಲಿ ಗುರುತಿಸಿ, ವಿಶ್ಲೇಷಿಸಲಾಗಿದೆಯಲ್ಲದೆ ಪುರುಷ ಪ್ರಧಾನ ನಿರ್ಮಿತ ವ್ಯವಸ್ಥೆಯಲ್ಲಿ ಬೆಂದು ನರಳುವ ಹಾಗೂ ಇಡೀ ಸ್ತ್ರೀ ಕುಲದ ಸ್ವಾಭಿಮಾನವನ್ನು ಮತ್ತು ಸ್ತ್ರೀಯ ಮಾನಸಿಕ ಸ್ಥೈರ್ಯವನ್ನೂ ಮಲೆಯಮಾದೇಶ್ವರ ಕಾವ್ಯದ ಹೃದಯಸ್ಪರ್ಶಿ ಪಾತ್ರವಾದ 'ಸಂಕಮ್ಮ'ನ ಪಾತ್ರದಲ್ಲಿ ಸ್ಥೂಲವಾಗಿಯೇ ಚರ್ಚಿಸಲಾಗಿದೆ. ಇದಕ್ಕೆ ವಿರುದ್ಧ ಪಾತ್ರವಾದ ಬೇವಿನಹಟ್ಟಿ ಕಾಳಮ್ಮನ ಧೋರಣೆ ಮಾತೃಪ್ರಧಾನವಾದ ಧೋರಣೆಯಾಗಿದ್ದು, ಇವೆರಡೂ

ಪಾತ್ರಗಳಲ್ಲದೆ, ಒಂದು ದುಷ್ಟ ಪಾತ್ರವಾದ ಇಕ್ಕೇರಿ ದೇವಮ್ಮ ಮತ್ತು ಈ ಪಾತ್ರಕ್ಕೆ ವಿರುದ್ಧವಾದ ಮಾದೇಶ್ವರರ ತಾಯಿ ಉತ್ರಾಜಮ್ಮನ ಪಾತ್ರಗಳನ್ನು ಪ್ರತ್ಯೇಕವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

'ಮಾತೃಪ್ರಧಾನ ವ್ಯವಸ್ಥೆ ಮತ್ತು ಸ್ತ್ರೀ ಪಾತ್ರಗಳು' ಬುಡಕಟ್ಟು ವ್ಯವಸ್ಥೆಯಲ್ಲಿನ ಮಾತೃಪ್ರಧಾನ ವ್ಯವಸ್ಥೆಯ ಸ್ವರೂಪ ಹಾಗೂ ಕಾವ್ಯದಲ್ಲಿನ ಮಾತೃಪ್ರಧಾನ ಮತ್ತು ಪುರುಷ ಪ್ರಧಾನ ಸಂಸ್ಕೃತಿಗಳ ನಡುವಿನ ಸಂಘರ್ಷದಲ್ಲಿ ಸ್ತ್ರೀ ಪಾತ್ರಗಳನ್ನು ವಿವೇಚನೆಗೆ ಒಳಪಡಿಸಲಾಗಿದೆ.

ಪ್ರಸ್ತುತ ಪ್ರಬಂಧದ ನಾಲ್ಕನೇ ಅಧ್ಯಾಯಕ್ಕೆ ಮಂಟೇಸ್ವಾಮಿ ಕಾವ್ಯವನ್ನು ಆಯ್ದುಕೊಂಡು ಅದರಲ್ಲಿ 'ಮಂಟೇಸ್ವಾಮಿ ಮತ್ತು ಅನುಭಾವಿ ಸ್ತ್ರೀ' ಮತ್ತು 'ಸ್ತ್ರೀ ದೇವತೆಗಳು ಮತ್ತು ಮಂಟೇಸ್ವಾಮಿ ಸ್ತ್ರೀ ಪರಿಭಾವನೆ' ಬಗ್ಗೆ ವಿವೇಚಿಸಲಾಗಿದೆ. 'ಉತ್ತರದೇಶ'ದಿಂದ ದಕ್ಷಿಣ ಕತ್ತಲ ರಾಜ್ಯಕ್ಕೆ 'ನಿಜ' ಶರಣತತ್ವ ಪ್ರಚಾರಕ್ಕೆ ಬಂದವರು ಮಂಟೇಸ್ವಾಮಿಗಳು. ಇವರು ಮಾಡಿದ ದೀರ್ಘ ಸಂಚಾರ, ಎದುರಿಸಿದ ವ್ಯಾಪಕ ವಿರೋಧ ಅವುಗಳನ್ನು ಸಾಮದಾನಾದಿ ಚತುರೋಪಾಯಗಳಿಂದ ನಿಗ್ರಹಿಸಿದ ಬಗೆ ಇವೆಲ್ಲವನ್ನೂ ಮಂಟೇಸ್ವಾಮಿ ಕಾವ್ಯ ದಾಖಲಿಸುತ್ತದೆ. ಮಂಟೇಸ್ವಾಮಿಗೆ ಧರೆಗೆ ದೊಡ್ಡವರು ಎಂಬ ಹೆಸರು. ಧರೆಗೆ ದೊಡ್ಡವರ ಕಥೆಯಲ್ಲಿ ದೊಡ್ಡಮ್ಮ ತಾಯಿಯವರ ಪಾತ್ರ ಹಿರಿಯದಾದುದು. ಇಲ್ಲಿ ಎಲ್ಲಾ ಧಾರ್ಮಿಕ ಕ್ರಿಯೆಯಲ್ಲಿ ತಾಯ್ತನದ ಸ್ಥಾನ ಇವರದು. ಈಕೆ ಅನುಭಾವಿ ಸ್ತ್ರೀ. ನೀಲಗಾರ ಪರಂಪರೆಯಲ್ಲಿ ದೊಡ್ಡಮ್ಮತಾಯಿಯವರನ್ನು ಅನುಭಾವಿ ಸ್ತ್ರೀತ್ವ ಪ್ರತೀಕವಾಗಿ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ. 'ಸ್ತ್ರೀ ದೇವತೆಗಳು ಮತ್ತು ಮಂಟೇಸ್ವಾಮಿ ಸ್ತ್ರೀ ಪರಿಭಾವನೆ' ಬಗ್ಗೆ ಮಾನವನಲ್ಲಿ ದೇವರ ಕಲ್ಪನೆ ಮೂಡಿಬಂದ ಬಗೆಯನ್ನೂ, ಗ್ರಾಮದೇವತೆಗಳ ಲಕ್ಷಣ ಕಾರ್ಯದಕ್ಷತೆಯನ್ನು ವಿವೇಚಿಸುತ್ತಾ, ಮಾರಿಯರು ಮಂಟೇಸ್ವಾಮಿಗಳ ಹಿಡಿತದಲ್ಲಿದ್ದ ಬಗೆಯನ್ನು ಅಧ್ಯಯನದಲ್ಲಿ ಸ್ಥೂಲವಾಗಿ ಸಮೀಕ್ಷಿಸಲಾಗಿದೆ.

'ಜುಂಜಪ್ಪ' ಕಾಡುಗೊಲ್ಲರ ಸಾಂಸ್ಕೃತಿಕ ವೀರ. ಮೂಲತ: ಅಲೆಮಾರಿ ಜನಾಂಗವಾದ ಕಾಡುಗೊಲ್ಲರ ಜನಾಂಗೀಯ ಇತಿಹಾಸ, ಪುರಾಣ, ಸಾಮಾಜಿಕ ಕಟ್ಟು ಕಟ್ಟಳೆಗಳನ್ನು ಈ ಸುದೀರ್ಘ ಮೌಖಿಕ ಕಥನ ದಾಖಲಿಸುತ್ತದೆ. ಕಾಡುಗೊಲ್ಲರು ಗಂಡು ದೇವತೆಗಳನ್ನು ಪೂಜಿಸುವುದಲ್ಲದೆ, ಒಂದು ಹೆಣ್ಣು ದೇವತೆಯನ್ನೂ ಪೂಜಿಸುತ್ತಾರೆ. ಆಕೆಯನ್ನು ಗೌರಸಂದ್ರದ ಮಾರಕ್ಕ, ಬೇವಿನಹಳ್ಳಿ ಕರಿಯಮ್ಮ, ಕರೇ ಓಬೇನಹಳ್ಳಿ ಮಾರಮ್ಮ, ಗೊಲ್ಲರಹಳ್ಳಿಯಮ್ಮ ಎಂಬ ಬೇರೆ ಬೇರೆ ಹೆಸರಿನಲ್ಲಿ ಬೇರೆ ಬೇರೆ ಪ್ರದೇಶದಲ್ಲಿ ಪೂಜಿಸುತ್ತಾರೆ. ಕಾಡುಗೊಲ್ಲರ ಬದುಕಿನಲ್ಲಿ ಇವತ್ತಿಗೂ ಈ ಸ್ತ್ರೀ ದೇವತೆಗಳ ಪಾತ್ರ ತುಂಬಾ ಪ್ರಮುಖವಾದುದು. ಆದಕಾರಣ 'ಪಶುಪಾಲಕರ ಸ್ತ್ರೀ ಆರಾಧನೆ' ಎಂಬ ಐದನೇ ಅಧ್ಯಾಯದಲ್ಲಿ ಜುಂಜಪ್ಪ ಮಹಾಕಾವ್ಯದಲ್ಲಿ ಸ್ತ್ರೀ ಆರಾಧನೆ ಯಾವ ರೀತಿ ಹೊರಹೊಮ್ಮಿದೆ ಎಂಬುದನ್ನು ತಿಳಿಸಲು ಪ್ರಯತ್ನಿಸಿದ್ದೇನೆ. ಕಾಡುಗೊಲ್ಲ ಕಾವ್ಯದ ನಾಯಕ, ವೀರಭದ್ರನ ಅವತಾರಿ ಜುಂಜಪ್ಪ. ತಾಯಿ ಸಿನ್ನಮ್ಮನ ಬಲಹೆಗಲಿನಿಂದ ಹುಟ್ಟಿದವನು. ಕಾಡುಗೊಲ್ಲರ ಸಂಪ್ರದಾಯ ತುಂಬ ಕಟ್ಟುನಿಟ್ಟಿನದಾಗಿದೆ. ಇವರು ರೂಪಿಸಿರುವ ಸಂಸ್ಕೃತಿಯಲ್ಲಿನ ಸ್ತ್ರೀ ಕಟ್ಟಳೆಗಳು ಭಯ, ಭೀತಿ ಸಂದೇಹಗಳನ್ನು ಹುಟ್ಟಿಸುವಂತಹುದು. ಜುಂಜಪ್ಪ ಸಾಧ್ವಿಯಾದ ತನ್ನ ತಾಯಿಯ ಶೀಲವನ್ನು ಸಿದ್ಧಮಾಡಲು ಸ್ವತ: ತಾಯಿಯನ್ನು ಎಂಟು ಭೀಕರ ದಿವ್ಯಗಳಿಗೆ ಗುರಿಮಾಡುತ್ತಾನೆ. ಇದು ಅವಳ ಮೇಲೆ ತೋರಿದ ಕ್ರೌರ್ಯ,

ದೌರ್ಜನ್ಯಗಳು, ಸ್ತ್ರೀ ಶೋಷಣೆಯ ಉಗ್ರ ಸ್ವರೂಪ. ಈ ಬಗ್ಗೆ 'ಜುಂಜಪ್ಪನ ಕಾವ್ಯದಲ್ಲಿ ತಾಯಿಯ ಸ್ಥಾನ ಮಾನ' ಎಂಬುದರಲ್ಲಿ ಕಾಡುಗೊಲ್ಲ ಬುಡಕಟ್ಟು ಜನಾಂಗದ ಸ್ತ್ರೀ ಬದುಕನ್ನು ಕುರಿತಂತೆ ಅವರಲ್ಲಿನ ಧೋರಣೆ ಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ನಮ್ಮ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳು ಶಿಷ್ಟರೂಪಕ್ಕೆ ಬರುವ ಮೊದಲು ಜಾನಪದದಲ್ಲಿ ರಾಜಕುಮಾರರ ಹೋರಾಟದ ಬದುಕಿನ ಜನಪ್ರಿಯ ಕಥೆಗಳ ರೂಪದಲ್ಲಿ ಬಳಕೆಯಲ್ಲಿದ್ದವು. ಈ ಕಥೆಗಳು ಬಾಯಿಂದ ಬಾಯಿಗೆ ಹರಿದು ಮುಂದೆ ಸತ್ವಶಾಲಿಯಾದ ಕವಿಯ ಕೈಯಲ್ಲಿ ಅವನ ಪ್ರತಿಭೆಯಿಂದ ಶಿಷ್ಟರೂಪ ತಳೆದವು. ಯಾವುದೇ ದೇಶದ ರಾಷ್ಟ್ರೀಯ ಮಹಾಕಾವ್ಯಗಳು ರೂಪುಗೊಳ್ಳುವುದು ಇದೇ ರೀತಿಯ ಲ್ಲೆಂದು ತಜ್ಞರ ಅಭಿಮತ. ಜನಪದ ರಾಮಾಯಣ ಮತ್ತು ಮಹಾಭಾರತದ ಕತೆಗಳು ಗದ್ಯ ಪದ್ಯಗಳೆರಡ ರಲ್ಲಿಯೂ ವಿಪುಲವಾಗಿವೆ. ಆದಿವಾಸಿಗಳ ಭಾಷೆ ಕಾವ್ಯಮಯವಾಗಿತ್ತೆನ್ನುವುದಾದರೆ, ಪದ್ಯ ಕಥೆಗಳೇ ಮೊದಲಿನ ವೆನ್ನಬಹುದು. ಜನಪದ ರಾಮಾಯಣ, ಮಹಾಭಾರತದ ಕಥೆಗಳು ಶಿಷ್ಟ ಕಥೆಗಳಿಗಿಂತ ಭಿನ್ನವಾಗಿವೆ. ಇವುಗಳಲ್ಲಿ ಬರುವ ಪಾತ್ರಗಳ ಮಾನವೀಯ ಗುಣಾಧಿಕತೆಯೇ, ಈ ಹಾಡುಗಳು ಉಳಿದು ಬೆಳೆಯಲು ಕಾರಣವಾಗಿವೆ. ನಮ್ಮ ದೇಶದ ಧಾರ್ಮಿಕ ಜೀವನವನ್ನು ರೂಪಿಸುವಲ್ಲಿ ಇವು ಮುಖ್ಯಪಾತ್ರ ವಹಿಸಿವೆ ಎನ್ನಬಹುದು. ಜನಪದ ರಾಮಾಯಣ ಮತ್ತು ಮಹಾಭಾರತವನ್ನು ಕುರಿತು ಒಂದೆರಡು ಸಂಗ್ರಹಗಳು ಪ್ರಕಟವಾಗಿವೆ. ಇದರಲ್ಲಿ ಪ್ರಮುಖವಾದುದೆಂದರೆ, ರಾಗೌ, ಪಿ.ಕೆ.ರಾಜಶೇಖರ, ಎಸ್.ಬಸವಯ್ಯರವರುಗಳು ಸಂಗ್ರಹಿಸಿ, ಪ್ರಕಟಿಸಿರುವ 'ಜನಪದ ರಾಮಾಯಣ' ಕೆಲಮಟ್ಟಿಗೆ ಸೀತಾ ಪ್ರಧಾನವಾದುದೆಂದು ಸಂಗ್ರಹಕಾರರೇ ಹೇಳಿಕೊಂಡಿದ್ದಾರೆ. ಬುಡಕಟ್ಟು ಸಮಾಜದಲ್ಲಿಯೂ ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ಮೌಖಿಕ ಕಾವ್ಯಗಳು ಲಭ್ಯವಿದೆ. ಇವುಗಳಲ್ಲಿ ತಿಮ್ಮಪ್ಪಗೊಂಡ ಹಾಡಿರುವ 'ಗೊಂಡರ ರಾಮಾಯಣ' ಒಂದು. ಬುಡಕಟ್ಟು ಗಳು ಕಾಡಿನ ಜನರೇ ಆದುದರಿಂದ (ರಾಮಾಯಣ ನಡೆದದ್ದು ಕಾಡಿನಲ್ಲಿ) ರಾಮಾಯಣದ ಬಗ್ಗೆ ಅವರ ಕಲ್ಪನೆ ಏನು? ಮತ್ತು ಅದರಲ್ಲಿನ ನಾಯಕ, ನಾಯಕಿಯರನ್ನು ಬುಡಕಟ್ಟು ಜನ ಹೇಗೆ ಪರಿಭಾವಿಸಿದ್ದಾರೆ? ಇಲ್ಲಿ ಸೀತೆಯ ಪಾತ್ರವೇನು ಎಂಬುದನ್ನು ವಾಲ್ಮೀಕಿ ರಾಮಾಯಣ ಹಾಗೂ ಮೇಲೆ ಹೆಸರಿಸಿರುವ 'ಜನಪದ ರಾಮಾಯಣ'ಗಳ ಮೂಲಕ ತಿಳಿಸುವ ಪ್ರಯತ್ನವನ್ನು ಪ್ರಸ್ತುತ ಪ್ರಬಂಧದಲ್ಲಿನ ಅಧ್ಯಾಯ ಆರರ 'ಇತರೆ ಜನಪದ ಮಹಾಕಾವ್ಯಗಳ ಸ್ತ್ರೀ ಪಾತ್ರಗಳು' ಎಂಬ ಶೀರ್ಷಿಕೆ ಅಡಿಯಲ್ಲಿ 'ಜನಪದ ರಾಮಾಯಣ-ಸೀತೆ' ಎಂಬುದರಲ್ಲಿ ಮಾಡಲಾಗಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಗಾಮೊಕ್ಕಲು ಬುಡಕಟ್ಟು ಜನಾಂಗದಲ್ಲಿ ಪ್ರಚಲಿತದಲ್ಲಿರುವ 'ಗಾಮೊಕ್ಕಲ ಮಹಾಭಾರತ'ದಲ್ಲಿನ ಕಥಾವಸ್ತು, ವ್ಯಾಸ ಮಹಾಭಾರತದ ಕಥಾವಸ್ತುವಿಗಿಂತ ಹೇಗೆ ಭಿನ್ನವಾಗಿದೆ ಎಂಬುದನ್ನು ಪ್ರಸ್ತುತ ಪ್ರಬಂಧದಲ್ಲಿನ ಅಧ್ಯಾಯ ಆರರ ಅಡಿ 'ಜನಪದ ಮಹಾಭಾರತ-ದ್ರೌಪದಿ' ಎಂಬುದರಲ್ಲಿ ವಿವರಿಸುತ್ತಾ 'ದ್ರೌಪದಿ' ಪಾತ್ರವನ್ನು ಸ್ತ್ರೀವಾದಿ ನಿಲುವಿನ ಮೂಲಕ ಅರ್ಥೈಸಿಕೊಡುವ ಪ್ರಯತ್ನ ಮಾಡಲಾಗಿದೆ. ಇದೇ ಅಧ್ಯಾಯದ 'ಬುರ್ರಕಥಾ ಕಾವ್ಯ- ಸ್ಯಾಸಿ ಚಿನ್ನಮ್ಮ' ಎಂಬುದರಲ್ಲಿ ಶೈವ ಮತ್ತು ವೈಷ್ಣವ ಪಂಥಗಳು ತಮ್ಮ ಬಲಾಬಲಗಳನ್ನು ಪ್ರಯೋಗಿಸಿ ಶರಣರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳುವ ಸಾಂಸ್ಕೃತಿಕ ಸಂಘರ್ಷವನ್ನು ದಾಖಲಿಸಿದೆ. ಇಲ್ಲಿನ ವೈಷ್ಣವ ಪಂಥದ ಕಥಾನಾಯಕಿ ಚಿನ್ನಮ್ಮಳನ್ನು ಶೈವಪಂಥಕ್ಕೆ ಸೇರಿಸಿಕೊಳ್ಳುವ ಹುನ್ನಾರ ನಡೆಯುತ್ತದೆ. ಇದಕ್ಕೆ ಚಿನ್ನಮ್ಮ ಬಲಿಯಾದರೂ, ತನ್ನ ವಾಸ್ತವ ಬದುಕಿನ ಸ್ಥಿರತೆಯಿಂದ ತನ್ನ ಧರ್ಮಕ್ಕೆ

ಅಂಟಿಕೊಂಡು, ತಾನು ನಂಬಿದ ದೈವದಲ್ಲಿ ಐಕ್ಯವಾಗುವ ಬಗೆಯನ್ನು ವಿಶ್ಲೇಷಿಸುತ್ತಾ ಚಿನ್ನಮ್ಮ ಸ್ತ್ರೀತ್ವದ ಪ್ರತೀಕವಾಗಿ ಗುರುತಿಸಿಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

ಅಧ್ಯಾಯ ಏಳು 'ಸಮಾರೋಪ'ವಾಗಿದ್ದು ಅದರಲ್ಲಿ ಇದುವರೆಗೂ ಕಂಡುಕೊಂಡ ಫಲಿತಗಳನ್ನು ಮತ್ತೆ ಸಂಕ್ಷಿಪ್ತವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ನನ್ನ ಅಧ್ಯಯನದ ಆಸಕ್ತಿ ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಶಕ್ತಿಯ ಸ್ವಾಯತ್ತತೆಯ ಕೇಂದ್ರಗಳನ್ನು ಹಾಗೂ ದನಿಗಳನ್ನು ಗುರುತಿಸಿ ಸ್ತ್ರೀ ಸಂವೇದನೆಯನ್ನು ಕಂಡುಕೊಳ್ಳುವುದಾಗಿದೆ. ಈ ಹಿನ್ನೆಲೆಯನ್ನು ಇಟ್ಟುಕೊಂಡು ನನ್ನ ಅಧ್ಯಯನದ ವಿಧಾನವನ್ನು ರೂಪಿಸಿಕೊಳ್ಳಲಾಗಿದೆ. ಜನಪದ ಮಹಾಕಾವ್ಯದಲ್ಲಿ ಹೆಣ್ಣಿನ ಶೋಷಣೆಯ ವಿವಿಧ ಮುಖಗಳು ತಾನೇ ತಾನಾಗಿ ಕಂಡುಬಂದರೂ ಸ್ಥಾಪಿತ ಪಾತಿವ್ರತ್ಯದ ಚೌಕಟ್ಟನ್ನು ಮೀರಿಯೂ ಪುರುಷ ಒಡ್ಡುವ ದಿವ್ಯಗಳನ್ನು ತಣ್ಣನೆಯ ಪ್ರತಿಭಟನೆಯ ರೂಪದಲ್ಲಿ (ದಿವ್ಯ ನಿರ್ಲಕ್ಷ್ಯದಿಂದ) ಸ್ತ್ರೀ ಎದುರಿಸಿ ತನ್ನ ಪಾತಿವ್ರತ್ಯವನ್ನು ಸಾಬೀತುಪಡಿಸುತ್ತಾಳೆ. ಅವಳು ಎಲ್ಲಿಯೂ ಪಲಾಯನವಾದಿಯಲ್ಲ ಆಕೆ ಸ್ವಾಭಿಮಾನದ ಸಂಕೇತ. ಎದುರಾದ ಸಂದರ್ಭಕ್ಕೆ ಮುಖಾಮುಖಿಯಾಗಿ ನಿಲ್ಲುವ ದಿಟ್ಟತನದಿಂದಲೇ ಗೆಲುವು ಸಾಧಿಸುತ್ತಾಳೆ. ಶಿಷ್ಟ ರಾಮಾಯಣದ ಪತಿವ್ರತೆ ಸೀತೆ ಬುಡಕಟ್ಟುಗಳಲ್ಲಿ ಸ್ವೇಚ್ಛೆ ಮತ್ತು ಮುಕ್ತತೆಯನ್ನು ಬಯಸುವ ಹೆಣ್ಣಾಗಿ ಪರಿವರ್ತನೆಗೊಳ್ಳುತ್ತಾಳೆ. ಜನಪದ ಮಹಾಕಾವ್ಯಗಳಲ್ಲಿ ಜನಪ್ರಿಯವಾಗಿರುವ ಸಂಕಮ್ಮ, ಬೇವಿನಹಟ್ಟಿ ಕಾಳಮ್ಮ, ಸಿನ್ನಮ್ಮ, ಸೀತೆ, ದ್ರೌಪದಿ ಮೊದಲಾದವರನ್ನು ಈ ಹಿನ್ನೆಲೆಯಲ್ಲಿ ಅರ್ಥೈಯಿಸಿಕೊಳ್ಳುವ ಪ್ರಯತ್ನ ಇಲ್ಲಿದೆ.

ಜನಪದ ಹೆಣ್ಣಿಗೆ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಯಾವ ಸ್ವಾತಂತ್ರ್ಯವೂ ಇಲ್ಲದೆ ಪುರುಷನ ಶೋಷಣೆಗೆ ಒಳಗಾಗಿದ್ದಾಳೆ. ಇಲ್ಲಿ ಹೆಣ್ಣಿನ ಶೀಲ ಮತ್ತು ಪಾತಿವ್ರತ್ಯ, ವೈವಾಹಿಕ ಜೀವನ ಅತಿಮುಖ್ಯ ಪಾತ್ರ ವಹಿಸುತ್ತವೆ. ಜನಪದ ಸಂಸ್ಕೃತಿಯಲ್ಲಿ ಹೆಣ್ಣನ್ನು ಯಾವ ರೀತಿ ಕಂಡು ಹೆಣ್ಣುತನವನ್ನು ಹೇಗೆ ಅರ್ಥೈಸಿದ್ದಾರೆ ಹಾಗೂ ಅಲ್ಲಿನ ಸಂಘರ್ಷ ಅದಕ್ಕೆ ಕಂಡುಕೊಂಡ ಪರಿಹಾರ ಇವುಗಳನ್ನು ಅಧ್ಯಯನಮಾಡಿ, ಅರ್ಥೈಸುವ ಮೊದಲ ವಿಧಾನವೆಂದರೆ, ಹೆಣ್ಣಿನ ದನಿಯನ್ನು ಗುರುತಿಸುವುದು. ಹೆಣ್ಣಿನ 'ಮೌನ' ಸಾಂಸ್ಕೃತಿಕ ಸೂಕ್ಷ್ಮಗಳನ್ನು ಆಲಿಸಿದರೆ ಮಾತ್ರ ಹೆಣ್ಣಿನ ಅನುಭವಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯ. ಜಾನಪದ ಅಧ್ಯಯನದಲ್ಲಿ ಸ್ತ್ರೀತ್ವವನ್ನು ಕುರಿತು ಅಧ್ಯಯನ ಮಾಡುವಾಗ ಹೆಣ್ಣುತನವನ್ನು ಸಾಧ್ವಿ, ತ್ಯಾಗಿ, ಪತಿವ್ರತೆ ಎಂದೋ ಅಥವಾ ದುಷ್ಟೆ, ಕಪಟೆ, ರಕ್ಕಸಿ ಎಂದೂ ಎರಡು ಅತಿರೇಕಗಳಲ್ಲಿ ವರ್ಣಿಸಲ್ಪಟ್ಟಿರುವುದು ಕಾಣಿಸುತ್ತದೆ. ''ಮೌಖಿಕ ಪರಂಪರೆಯಲ್ಲಿ ಹೆಣ್ಣಿನ 'ಮಾತು' ಇದೆ. ಲಿಖಿತ ಪರಂಪರೆಯಲ್ಲಿ ಹೆಣ್ಣಿನ 'ಮೂಕತೆ' ಇದೆ. ಮಾತೃರೂಪಿ ಸಂಸ್ಕೃತಿಯಲ್ಲಿ ಹೆಣ್ಣು 'ಅಸ್ತಿತ್ವ' ಪಡೆದಿದ್ದಾಳೆ. ಪಿತೃರೂಪಿ ವ್ಯವಸ್ಥೆಯಲ್ಲಿ ಹೆಣ್ಣು 'ಅದೃಶ್ಯ'ಳಾಗಿದ್ದಾಳೆ ಎಂದರೆ ಅದು ಪುರುಷ ಶಕ್ತಿರಾಜಕಾರಣಕ್ಕೆ ನೇರವಾಗಿ ಸಂಬಂಧಿಸಿದ್ದಾಗಿದೆ. ಭಾರತೀಯ ಹೆಣ್ಣುತನವನ್ನು ಈ ಮಾತು-ಮೂಕತೆ, ಅಸ್ತಿತ್ವ ಅದೃಶ್ಯಗಳ ಸಂಕೀರ್ಣ ಸ್ಥಿತಿಯಲ್ಲಿ ಪರಿಭಾವಿಸಬೇಕಾಗಿದೆ.''[೩]

ಸ್ತ್ರೀವಾದಿ ಚಿಂತನೆ, ಮಹಿಳಾ ಹೋರಾಟದ ನೆಲೆಯಲ್ಲಿ ಜನಪದ ಮಹಾಕಾವ್ಯಗಳಲ್ಲಿ ಬಹಳ ದಟ್ಟವಾಗಿರುವ ಸ್ತ್ರೀ ಸಂವೇದನೆಯನ್ನು ಹೊಸ ದೃಷ್ಟಿಯಿಂದ ನೋಡುವುದು ಅಗತ್ಯವಾಗಿದೆ. ಉದಾಹರಣೆಗಾಗಿ

ಮಲೆಯಮಾದೇಶ್ವರ ಕಾವ್ಯದ ಸಂಕಮ್ಮ, ಮಾದೇಶ್ವರನಿಂದ ಸಂತಾನ ಪಡೆಯುವುದನ್ನು 'ಹಾದರದ' ಕಣ್ಣಲ್ಲಿ ನೋಡದೆ, ಮದುವೆಯಾದ ೧೨ ವರ್ಷಗಳಿಂದ ಗಂಡನಿಂದ ಪಡೆಯಲಾಗದ ಸಂತಾನ ಹಾಗೂ ಬಂಜೆ ಎಂಬ ಶಬ್ದದ ಕೀಳರಿಮೆಯ ವಿರುದ್ಧ ಸಂತಾನ ಪಡೆಯುವುದಕ್ಕಾಗಿ ಗೆರೆ ದಾಟುವಾಗ ಅವಳನ್ನು ಕಾಣುವ ಮನೋಭಾವವನ್ನು ವೈಜ್ಞಾನಿಕ ದೃಷ್ಟಿಯಿಂದ ನೋಡಬೇಕಾಗುವುದಲ್ಲದೆ ಪುರುಷ ಸ್ಥಾಪಿತ ಪಾತಿವ್ರತ್ಯದ ನೆಲೆಯಲ್ಲಿ ನಿರ್ವಚಿಸಲಾಗದು. ಜಾನಪದದ 'ಬಂಜೆತನ' ಎಂಬ ಪರಿಕಲ್ಪನೆಯ ಜೊತೆಗೆ 'ಪಾತಿವ್ರತ್ಯ'ದ ಪರಿಕಲ್ಪನೆಯನ್ನು ಸೇರಿಸಬಾರದು.

ಹೆಣ್ಣಿನ ಮೌನವನ್ನು 'ಹೆಣ್ಣಾಗಿ' ಆಲಿಸುವ ಮತ್ತು ಅವರ ಅಂತರಂಗವನ್ನು ಹೊಕ್ಕು ಅವರ ತುಡಿತವನ್ನು ಬಗೆದು ಗ್ರಹಿಸುವುದು ಸ್ತ್ರೀ ಸಂವೇದನೆಗೆ ಸಾಧ್ಯ. "ಗತದ ತಡಕಾಟದ ಮೂಲಕ ವರ್ತಮಾನವನ್ನು ಕಟ್ಟಿಕೊಳ್ಳುವ ಪ್ರಕ್ರಿಯೆ ಸ್ತ್ರೀವಾದಿ ಅಥವಾ ಯಾವುದೇ ಶೋಷಿತ ಸಂಸ್ಕೃತಿಯ ಅಧ್ಯಯನದ ಉದ್ದೇಶವಾಗಬೇಕು."[೪]

ಈ ಅಭ್ಯಾಸದಲ್ಲಿ ಮುಖ್ಯವಾಗಿ ವಿವರಣಾತ್ಮಕ ಸಂಶೋಧನಾ ಪದ್ಧತಿಯನ್ನು ಅನುಸರಿಸಲಾಗಿದೆ. ಅಧ್ಯಯನದುದ್ದಕ್ಕೂ ಅಗತ್ಯವಿರುವ ಕಡೆಗಳಲ್ಲಿ ತೌಲನಿಕ ದೃಷ್ಟಿಕೋನವನ್ನು ಅವಲಂಬಿಸಲಾಗಿದೆಯೇ ಹೊರತಾಗಿ ತೌಲನಿಕ ಸಾಹಿತ್ಯದ ತತ್ವಗಳನ್ನು ಅನ್ವಯಿಸಿ ಈ ಮಹಾಪ್ರಬಂಧವನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿಲ್ಲ.

ಕೊನೆಯ ಅಧ್ಯಾಯವು ಒಟ್ಟು ಅಧ್ಯಯನದ ಫಲಿತಗಳನ್ನು ಸಂಗ್ರಹಿಸುವುದರೊಂದಿಗೆ ಸ್ತ್ರೀಯರ ಬಗೆಗಿನ ಅಧ್ಯಯನಕ್ಕೆ ಸಹಾಯಕಾರಿಯಾಗುವುದೆಂದು ಭಾವಿಸಿದ್ದೇನೆ.

**ಅಡಿಟಿಪ್ಪಣಿಗಳು**

೧. ಡಾ.ಎಚ್.ಜೆ.ಲಕ್ಕಪ್ಪಗೌಡ, ಡಾ.ಪದ್ಮಪ್ರಸಾದ್ ಎಸ್.ಪಿ. (ಸಂ), ಜೈನಕಥಾ ಸಾಹಿತ್ಯ ಮತ್ತು ಜಾನಪದ, ೧೯೯೭, ಪ್ರಧಾನ ಸಂಪಾದಕರ ಮಾತು, ಪುಟ III

೨. ಡಾ.ಎಚ್.ಜೆ.ಲಕ್ಕಪ್ಪಗೌಡ, ಅಧ್ಯಕ್ಷರ ಮಾತು, ಡಾ.ಶಂಕರನಾರಾಯಣ ತೀ.ನಂ. (ಸಂ), ಕರ್ನಾಟಕ ಜನಪದ ಮಹಾಕಾವ್ಯಗಳು, ೧೯೯೮, ಪುಟ XXII

೩. ಡಾ.ಗಾಯತ್ರಿ ನಾವಡ, ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ೧೯೯೯, ಪುಟ ೩

೪. ಡಾ.ಗಾಯತ್ರಿ ನಾವಡ, ಭಾರತೀಯ ಸ್ತ್ರೀವಾದ ಒಂದು ಸಂಕಥನ, ೨೦೦೦, ಪುಟ ೬

## ಅಧ್ಯಾಯ ೨

# ಕನ್ನಡದಲ್ಲಿ ಜನಪದ ಮಹಾಕಾವ್ಯಗಳು

೨.೧. ಕನ್ನಡದಲ್ಲಿ ಜನಪದ ಮಹಾಕಾವ್ಯಗಳ ಸ್ವರೂಪ

೨.೨. ಕನ್ನಡದ ಪ್ರಮುಖ ಜನಪದ ಮಹಾಕಾವ್ಯಗಳ ಸಮೀಕ್ಷೆ

೨.೨.೧. ಮಲೆಯಮಾದೇಶ್ವರ

೨.೨.೨. ಮಂಟೇಸ್ವಾಮಿ

೨.೨.೩. ಜುಂಜಪ್ಪ

# ಅಧ್ಯಾಯ ೨

# ಕನ್ನಡದಲ್ಲಿ ಜನಪದ ಮಹಾಕಾವ್ಯಗಳು

## ೨.೧. ಕನ್ನಡದಲ್ಲಿ ಜನಪದ ಮಹಾಕಾವ್ಯಗಳ ಸ್ವರೂಪ

ಜಾನಪದ ಎನ್ನುವುದು ಒಂದು ಪರಂಪರೆ. ಅದರ ಒಂದು ಅಂಗ ಜನಪದ ಸಾಹಿತ್ಯ. ಇದರ ಒಂದು ಕವಲು ಜನಪದ ಕಾವ್ಯ. ಜನಪದ ಸಾಹಿತ್ಯದ ಪ್ರಕಾರಗಳು: ಜನಪದ ಗೀತೆ, ಕಥನಗೀತೆ ಅಥವಾ ಲಾವಣಿ, ಖಂಡಕಾವ್ಯ ಮತ್ತು ಜನಪದ ಮಹಾಕಾವ್ಯ.

ಜನಪದ ಮಹಾಕಾವ್ಯಕ್ಕೆ ಮೂಲ ಆದಿಮ ಗೀತೆಗಳು ಮತ್ತು ಲಾವಣಿಗಳು, ಅನಕ್ಷರಸ್ಥರಾದ, ಸಾಮಾನ್ಯ ಜನ ಮೌಖಿಕ ಪರಂಪರೆಯಲ್ಲಿ ಹಾಡಿದ ಹಾಡುಗಳೇ ಜನಪದ ಗೀತೆಗಳು. ಮೌಖಿಕ ಪರಂಪರೆಯಲ್ಲಿ ಒಂದು ಕತೆಯನ್ನು ಹೇಳುವ, ಹಾಡು ಅಥವಾ ಹಾಡಿನಲ್ಲಿ ಹೇಳಲಾದ ಒಂದು ಕತೆ, ಲಾವಣಿ ಅಥವಾ ಕಥನಗೀತೆ, ಕಥನಗೀತೆಯ ವ್ಯಾಪ್ತಿ ಚಿಕ್ಕದು-ಕಥನ ಗೀತೆಗಳ ಮುಂದುವರಿದ ರೂಪವೇ ಖಂಡಕಾವ್ಯ. ಇದರ ವ್ಯಾಪ್ತಿ ಕಥನ ಕಾವ್ಯಕ್ಕಿಂತ ದೊಡ್ಡದು. ಮಹಾಕಾವ್ಯಕ್ಕಿಂತ ಚಿಕ್ಕದು. ಮೌಖಿಕ ಖಂಡಕಾವ್ಯದ ಮುಂದುವರೆದ ರೂಪವೇ ಜನಪದ ಮಹಾಕಾವ್ಯವೆನ್ನಬಹುದು. ಕಥಾನಕಗಳ ಗುಚ್ಚವೇ ಮಹಾಕಾವ್ಯ. ವಿಂಟರ್‌ನಿಟ್ಸ್ ಅವರ ಹಳೆಯ ಲಾವಣಿಗಳು (Ancient Ballads) ಮಹಾಕಾವ್ಯದ ಮೂಲವಿರಬಹುದು ಎನ್ನುವ ವಾದಕ್ಕೆ ಬಹುಜನ ವಿದ್ವಾಂಸರು ಬೆಂಬಲಿಸುತ್ತಾರೆ. ಲಾವಣಿಗಳೇ ಬೆಳೆದು ಜನಪದ ಮಹಾಕಾವ್ಯಗಳಾಗುವುದಲ್ಲದೆ, ಈ ಮಹಾ ಕಾವ್ಯಗಳು ಸಾಮಾಜಿಕ, ರಾಜಕೀಯ ಸ್ಥಾನಮಾನಗಳಿಂದ ಅಲಕ್ಷಿತವಾಗುವ ಜನಸಮುದಾಯದಲ್ಲಿ ಹುಟ್ಟಿ ಕೊಳ್ಳುತ್ತವೆ.

ಜನಪದ ಮಹಾಕಾವ್ಯ ಎನ್ನುವುದು ಜಾನಪದದಲ್ಲಿ ಆಧುನಿಕ ಪರಿಕಲ್ಪನೆ. 'ಸೂತ್ರ'ಬದ್ಧ ಮತ್ತು ಅಲಂಕಾರಿಕ ಶೈಲಿಯಲ್ಲಿರುವ ಅತಿಮಾನವರ ಸಾಹಸಗಳೇ ಜನಪದ ಅಥವಾ ಮೌಖಿಕ ಸಂಪ್ರದಾಯದ ಮಹಾಕಾವ್ಯ ವೆನ್ನುತ್ತಾರೆ. (OINAS F.J.)

ಗ್ರಾಮೀಣ ಜನರು ತಮ್ಮ ಇಡೀ ಪ್ರದೇಶದ, ಪರಿಸರದ, ಜನಾಂಗದ ಆದರ್ಶ ವೀರನನ್ನು ಮುಖಂಡನನ್ನು ಅವನು ಮಾಡಿದ ಅಸಾಧಾರಣವಾದ ಸಾಧನೆಗಳನ್ನು ಮತ್ತು ತೋರಿಸಿದ ವಿಶಿಷ್ಟ ಸಾಹಸಗಳನ್ನು ತನ್ನ ಬದುಕಿನ ಮೂಲಕ ಧ್ವನಿಸಿದ ಜೀವನ ತತ್ವವನ್ನು ಸುದೀರ್ಘ ಕಾವ್ಯಗಳ ಮೂಲಕ ಅನನ್ಯವಾಗಿ ಅಭಿವ್ಯಕ್ತಿಸಿದ್ದಾರೆ. ಈ ಸುದೀರ್ಘವಾದ ಅನನ್ಯ ಅಭಿವ್ಯಕ್ತಿಯೇ ಜನಪದ ಮಹಾಕಾವ್ಯವೆನ್ನುತ್ತಾರೆ. ಡಾ.ಎಚ್.ಜೆ.ಲಕ್ಕಪ್ಪಗೌಡರು. ಟಿಕ್‌ಬ್ರೆಂಡ್‌ರವರು ಮಹಾಕಾವ್ಯವೆಂದರೆ, ಒಂದು ಉತ್ಕೃಷ್ಟ ಕಥೆ. ಅದೊಂದು ಜನಪದ ಪ್ರಕಾರವಾಗಿದ್ದು,

ಮೊದಲ ದರ್ಜೆಯ ನಿರೂಪಣ ಕಾವ್ಯವೆನ್ನುತ್ತಾರೆ. ಫೆಲಿಕ್ಸ್ ಜೆ.ಓಯನಾಸ್‌ರವರು, "ಜನಪದ ಅಥವಾ ವಾಚಿಕ ಮಹಾಕಾವ್ಯಗಳು ಸೂತ್ರಾತ್ಮಕ ಮತ್ತು ಅಲಂಕಾರಿಕ ಶೈಲಿಯಲ್ಲಿರುವ ಅಸಾಧಾರಣ ವ್ಯಕ್ತಿಗಳ ಸಾಹಸ ಗಳನ್ನು ಕುರಿತ ಕಥನ ಕವನಗಳು" ಎಂದು ವ್ಯಾಖ್ಯಾನಿಸಿದ್ದಾರೆ. ಹರ್ಡರ್‌ಡ್‌ರವರು, ಜಾನಪದ ಕಾವ್ಯವನ್ನು 'ಆತ್ಮದ ಅಚ್ಚು' ಮತ್ತು ರಾಷ್ಟ್ರೀಯತೆಯ ವಾಙ್ಮಯ ಭಂಡಾರ ಎಂದು ಬಣ್ಣಿಸಿದ್ದಾರೆ. ಜನಪದ ಮಹಾಕಾವ್ಯ ಗಳಲ್ಲಿ ಅವುಗಳ ಮೂಲ ಕವಿ ಯಾರೆಂದು ತಿಳಿದಿರುವುದಿಲ್ಲ. ತಲೆಮಾರಿನಿಂದ ತಲೆಮಾರಿಗೆ ಇವು ಬೆಳೆಯುತ್ತಾ ಸಮೂಹ ಸೃಷ್ಟಿಯಾಗಿರುತ್ತವೆ. ಕಥೆಯ ಚೌಕಟ್ಟು ಒಂದೇ ಇದ್ದರೂ ವಿವರಗಳು ಹಾಡುಗಾರರಿಂದ ಹಾಡು ಗಾರರಿಗೆ ಬದಲಾಗುತ್ತಾ ಹೋಗುತ್ತವೆ. ಈ ಬಗೆಯ ರಚನೆಗಳನ್ನು ಜನಪದ ಮಹಾಕಾವ್ಯಗಳೆಂದೂ, Folk Epic ಅಥವಾ Oral Epic ಎಂದೂ ಸಾಹಿತ್ಯ ವಿಮರ್ಶಕರು, ಭಾಷಾ ವಿಜ್ಞಾನಿಗಳು ಹೆಸರಿಸುತ್ತಾರೆ.

ಮೌಖಿಕ ಮಹಾಕಾವ್ಯ ಅತ್ಯಂತ ವಿಸ್ತಾರವೂ ವ್ಯಾಪಕವಾದ ನೆಲೆಯನ್ನುಳ್ಳ ಅನೇಕ ಪಾತ್ರ ಮತ್ತು ಘಟನೆ ಗಳಿಂದ ಕೂಡಿದ ದೀರ್ಘವಾದ ಕಥೆ ಹಾಗೂ ವಿಸ್ತಾರವಾದ ಹರವುಳ್ಳ ರಚನೆ ಆಗಿದ್ದು, ಕೇಳುಗರನ್ನು ಆಕರ್ಷಿಸು ವಂತಹುದು. ಎಲ್ಲ ಕಾವ್ಯಗಳಿಗೂ ಮಹಾಕಾವ್ಯ ಎನಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಮಹಾಕಾವ್ಯ ಇಡೀ ಸಮುದಾಯದ ಆಶೋತ್ತರಗಳಿಗೆ ಸ್ಪಂದಿಸುವ ಕಾವ್ಯ.

ಮೌಖಿಕ ಮಹಾಕಾವ್ಯಗಳು ಹೇಗೆ ರೂಪುಗೊಂಡು ಬೆಳೆದು ಬಂದವು ಎನ್ನುವ ಬಗ್ಗೆ ಎರಡು ಬಗೆಯ ತರ್ಕಗಳಿವೆ. ಒಂದು ಜನಪದ ಮಹಾಕಾವ್ಯಗಳ ಬಗ್ಗೆ, ಹತ್ತೊಂಬತ್ತನೆ ಶತಮಾನದ ಪೂರ್ವಾರ್ಧದಲ್ಲಿ ಯುರೋಪಿನ ವಿದ್ವಾಂಸರಲ್ಲಿ ಆಸಕ್ತಿಮೂಡಿ, ಮೌಖಿಕ ಮಹಾಕಾವ್ಯಗಳ ಸಂಗ್ರಹ ಹಾಗೂ ಸಂಪಾದನ ಕಾರ್ಯ ದಲ್ಲಿ ತೊಡಗಿ, ಚದುರಿ ಹೋಗಿದ್ದ ಜನಪದ ಕಥೆಗಳನ್ನು ಒಟ್ಟುಗೂಡಿಸಿದರೆ, ಜನಪದ ಮಹಾಕಾವ್ಯ ಒಂದನ್ನು ಕಂಡುಕೊಳ್ಳಲು ಸಾಧ್ಯವೆನ್ನುವ ವಿಚಾರ ಬಂದದ್ದು ವೃತ್ತಿಯಿಂದ ವೈದ್ಯನಾದ ಫಿನ್‌ಲೆಂಡ್‌ನ ಲೋನ್‌ರಾಟ್ ಎಲಿಯಾಸ್ ಎಂಬ  ಜಾನಪದ ವಿದ್ವಾಂಸನಿಗೆ. ಈತ ಫಿನ್‌ಲೆಂಡ್‌ನ ವೀರರಿಗೆ ಸಂಬಂಧಿಸಿದ ಕೆಲವು ಕಥನ ಗೀತೆಗಳನ್ನು ಸಂಗ್ರಹಿಸುತ್ತಾ, ಅವುಗಳನ್ನು ವ್ಯವಸ್ಥಿತ ರೂಪದಲ್ಲಿ ಜೋಡಿಸಿಕೊಂಡು ಅದಕ್ಕೊಂದು ಸಂಬಂಧ ಕಲ್ಪಿಸಿದಾಗ, ಅದು ಮಹಾಕಾವ್ಯದ ರೂಪ ಪಡೆಯಿತು. ಈತ ಹೀಗೆ ೧೮೩೫ರಲ್ಲಿ ಮೊದಲನೆಯದಾಗಿ ಸಂಪಾದಿಸಿ ಪ್ರಕಟಿಸಿದ ಜಗತ್ತಿನ ಮೊದಲ ಜನಪದ ಮಹಾಕಾವ್ಯವೇ 'ಕಾಲೇವಾಲ'. ಈ ಜನಪದ ಮಹಾಕಾವ್ಯ ಭಾರತೀಯರಿಗೆ ರಾಮಾಯಣ, ಮಹಾಭಾರತಗಳಿದ್ದ ಹಾಗೆ, ಫಿನ್‌ಲೆಂಡ್ ಜನರಿಗೆ ಇಂದಿಗೂ ಒಂದು ಮಹತ್ವದ ಜನಪದ ಮಹಾಕಾವ್ಯವಾಗಿದೆ. ಇನ್ನೊಂದು ತರ್ಕವೆಂದರೆ ಜನಪದ ಕಥನಗಳು ಒಂದು ಪ್ರದೇಶ ದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸುವ ಚಾರಣರಿಂದ, ಮೂಲದಲ್ಲಿ ಚಿಕ್ಕದಾಗಿದ್ದರೂ, ಕಾಲಾನಂತರದಲ್ಲಿ ದೊಡ್ಡದಾಗಿ ಬೆಳೆಯುತ್ತಾ ಹೋಯಿತು. ಇವರ ಹಲವು ಪೀಳಿಗೆಗಳು ಇಂಥ ಕಾವ್ಯಗಳ ಹುಟ್ಟಿಗೆ ಕಾರಣ ಎನ್ನುತ್ತಾರೆ. 'ಹೋಮರ್' ಎನ್ನುವ ಒಂದು ಕುರುಡರ ಪರಂಪರೆಗೆ ಸೇರಿದ ಕುರುಪರು ಸಂಚರಿಸುತ್ತಾ 'ಒಡೆಸ್ಸಿ' ಮತ್ತು 'ಇಲಿಯಡ್' ಮಹಾಕಾವ್ಯಗಳನ್ನು ರೂಪಿಸಿದರು ಎನ್ನುವ ಅಭಿಪ್ರಾಯವಿದೆ. ಹಾಗೆಯೇ ಆಂಗ್ಲೋ ಸ್ಯಾಕ್ಸನ್ ಪರಂಪರೆಯಲ್ಲಿ 'ಸ್ಕಾಫ್' ಅನ್ನುವಂಥ ಸಂಚಾರಿ ಗಾಯಕರ ದಂಡೇಯಿದ್ದ ಬಗ್ಗೆ ಪುರಾವೆಗಳಿವೆ. ರಾಮಾಯಣವನ್ನು ಮೂಲದಲ್ಲಿ ವಾಲ್ಮೀಕಿ ಮಹರ್ಷಿಗಳು 'ಕುಶೀಲವ' ಎಂದು ಕರೆಯುವ ಸಂಚಾರಿ ಗಾಯಕ

ವರ್ಗಕ್ಕೆ ಕಲಿಸಿದ್ದು, ಇವರುಗಳು, ನಂತರ ರಾಮಾಯಣವನ್ನು ರಾಜಬೀದಿಗಳಲ್ಲಿ ಹಾಡುತ್ತಿದ್ದರು. ಮುಂದೆ 'ಕುಶೀಲವ' ಎನ್ನುವುದು ರಾಮನ ಇಬ್ಬರ ಮಕ್ಕಳ ಹೆಸರಾಯಿತು. ಮಹಾಭಾರತವೂ ಕೂಡ ಮೂಲತಃ ಸೂತರು ಹಾಡಿದ್ದು. ಪಾಂಡವರು ಕುರುಕ್ಷೇತ್ರ ಯುದ್ಧದಲ್ಲಿ ಜಯಗಳಿಸಿದ್ದಕ್ಕೆ ಮೂಲದಲ್ಲಿ 'ಜಯ' ಎಂಬ ಹೆಸರಿನಲ್ಲಿ ವೀರಾಧೆಯಿದ್ದು ಶತಮಾನಗಳುರುಳಿದಂತೆ ಈ ಜಯ ಕಥೆಗೆ ಭರತವಂಶೀಯರ ಕಥೆ ಹಾಗೂ ಬೇರೆ ಕತೆಗಳು ಸೇರಿ ಭಾರತವಾಗಿ ನಂತರ, ಇಂದಿನ 'ಮಹಾಭಾರತ'ವಾಗಿದೆ.

ಮೌಖಿಕದ ಮಹಾಕಾವ್ಯಗಳು ಅನಾದಿ ಕಾಲದಲ್ಲಿ ಹುಟ್ಟಿ ಕ್ರಮೇಣ ಬೆಳೆಯುತ್ತಾ ಬಂದವು. ಗಿಲ್ಗಮಿಷ್ ಅನ್ನುವ ಬ್ಯಾಬಿಲೋನಿಯನ್ನರ ಮೌಖಿಕ ಮಹಾಕಾವ್ಯ, ಪಾಶ್ಚಾತ್ಯ ಪ್ರಪಂಚದಲ್ಲಿಯೇ ಅತ್ಯಂತ ಪ್ರಾಚೀನವಾದ ರಚನೆ ಎಂಬ ಪ್ರತೀತಿ ಇದೆ. ಮೌಖಿಕ ಮಹಾಕಾವ್ಯಗಳು ಉಚ್ಚವರ್ಗಗಳಲ್ಲಿ ರಾಜ 'ಪರಿವಾರ'ದ ಗಾಯಕರಲ್ಲಿ ಹುಟ್ಟಿ, ಅನಂತರ ಅವನ್ನು ವೃತ್ತಿಗಾಯಕರು ವಹಿಸಿಕೊಂಡು ಬೆಳೆಸುತ್ತಾ ಹೋದರು ಎನ್ನುವ ಅಭಿಪ್ರಾಯ, ಈಗ ಸಂಪೂರ್ಣವಾಗಿ ಬದಲಾಗಿದ್ದು ಮೌಖಿಕ ಮಹಾಕಾವ್ಯಗಳ ಹುಟ್ಟಿಗೆ ಕಾರಣ ಸಾಮಾನ್ಯಜನ-ರೈತಾಪಿ ಜನ-ಕಾರ್ಮಿಕ ಜನ ಎಂದು ಗುರುತಿಸಲಾಗಿದೆ. ಮೌಖಿಕ ಮಹಾಕಾವ್ಯದ ಮುಖ್ಯವಾದ ಲಕ್ಷಣವೆಂದರೆ ರಾಷ್ಟ್ರೀಯ ಮನೋಭಾವ. ಇದಕ್ಕೆ ಉತ್ತಮ ಉದಾಹರಣೆ, ಫಿನ್ಲೆಂಡಿನ ಮೌಖಿಕ ಮಹಾಕಾವ್ಯ 'ಕಾಲೇವಾಲ'. ಮೌಖಿಕ ಮಹಾಕಾವ್ಯದ ಗಾತ್ರದ ಬಗ್ಗೆ ಯಾವ ನಿಯಮವಿಲ್ಲದಿದ್ದರೂ ಒಂದು ಕಾವ್ಯವನ್ನು ಮಹಾಕಾವ್ಯ ಎಂದು ಗುರುತಿಸುವಲ್ಲಿ ಅದರ ಗಾತ್ರದ ಪಾತ್ರವೂ ಇರುತ್ತದೆ. ಘಟನೆಗಳು ವಿವರವಾಗಿ ನಿರೂಪಿಸಲ್ಪಟ್ಟು ಹಿರಿದಾದ ವ್ಯಾಪ್ತಿಯನ್ನು ಅದು ಹೊಂದಿರಬೇಕಾಗುತ್ತದೆ. ಲೌರಿಹಾಂಕೊ ಅವರು "ಒಂದು ಮಹಾಕಾವ್ಯ ಬಹುಮುಖ್ಯವಾಗಿ ಸುದೀರ್ಘವಾಗಿದ್ದು, ಕನಿಷ್ಟ ಸಾವಿರ ಪಂಕ್ತಿಗಳಿರಬೇಕು ಹೀಗಿಲ್ಲವಾದಾಗ ಅದು ಕವಿತೆ ಆಗುತ್ತದೆ ಎನ್ನುತ್ತಾರೆ."[1]

ಸುಮೇರಿಯನ್ ಭಾಷೆಯ ಗಿಲ್ಗಮಿಷ್ ಜನಪದ ಮಹಾಕಾವ್ಯ ಜಗತ್ತಿನ ಎಲ್ಲ ಮಹಾಕಾವ್ಯಗಳಲ್ಲಿ ಅತ್ಯಂತ ಚಿಕ್ಕ ಗಾತ್ರದ ಮಹಾಕಾವ್ಯವೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಹೋಮರ್ ಕವಿಯ, ಇಲಿಯಡ್ ಕಾವ್ಯದಲ್ಲಿ ೧೫,೦೦೦ ಸಾಲುಗಳಿದ್ದರೆ, 'ಒಡೆಸ್ಸಿ' ಕಾವ್ಯ ೧೨,೦೦೦ ಸಾಲುಗಳ ಸುದೀರ್ಘ ಮಹಾಕಾವ್ಯಗಳು. ೧೮೩೫ರಲ್ಲಿ ಪ್ರಕಟವಾದ 'ಕಾಲೇವಾಲ'ದಲ್ಲಿ ೧೨,೦೭೮ ಸಾಲುಗಳಿದ್ದವು. ೧೮೪೯ರಲ್ಲಿ ಇದನ್ನು ಪರಿಷ್ಕರಿಸಿ ವಿಸ್ತೃತ ರೂಪದಲ್ಲಿ ಪ್ರಕಟಿಸಿದಾಗ ೫೦ ಅಧ್ಯಾಯಗಳಲ್ಲಿ ೨೨,೭೯೫ ಸಾಲುಗಳಾದವು. ಇದೇ ಇಂದು ಜಗತ್ತಿಗೆ ಪರಿಚಿತವಾಗಿರುವ ಈ ವಿಸ್ತೃತಿಯ ಆವೃತ್ತಿ 'ಕಲೆವಾಲಾ' ಕಾವ್ಯವನ್ನು ಡಾ.ಕೆ.ಆರ್.ಸಂಧ್ಯಾರೆಡ್ಡಿಯವರು ಕನ್ನಡಕ್ಕೆ ಅನುವಾದಿಸಿದ್ದಾರೆ"[2]

"ದೇಶಿಯವಾದ ರೂಢಿ, ಪದ್ಧತಿ, ಆಚರಣೆ, ಸಂಪ್ರದಾಯಗಳು ಅಸ್ತಿತ್ವದಲ್ಲಿರುವಂತಹ ಭಾರತಕ್ಕೆ ಪಾಶ್ಚಾತ್ಯ ವಿದ್ವಾಂಸರು ಮಹಾಕಾವ್ಯದ ಕುರಿತು ಹೇಳುವಂಥ ಗಾತ್ರ, ವಿಸ್ತಾರತೆ ಹಾಗೂ ಲಕ್ಷಣಗಳು ಸಮಂಜಸವಲ್ಲವೆಂದು ಡಾ.ಹೆಚ್.ಕೆ.ನಾಗೇಶ್‌ರವರೆನ್ನುತ್ತಾರೆ"[3]

ಕರ್ನಾಟಕದ ಜನಪದ ಮಹಾಕಾವ್ಯಗಳಲ್ಲಿ 'ಮಲೆಯಮಾದೇಶ್ವರ' ಕಾವ್ಯವನ್ನು ಡಾ.ಪಿ.ಕೆ.ರಾಜಶೇಖರವರು ಸಂಪಾದಿಸಿ ೧೯೭೩ರಲ್ಲಿ ಪ್ರಕಟಿಸಿರುವ ಆವೃತ್ತಿಯಲ್ಲಿ ಸುಮಾರು ೩೦,೦೦೦ ಸಾಲುಗಳಿದ್ದರೆ, ಕನ್ನಡ

ವಿಶ್ವವಿದ್ಯಾಲಯದ ಡಾ.ಕೇಶವನ್ ಪ್ರಸಾದ್‌ರವರು ಸಂಪಾದಿಸಿ, ಕನ್ನಡ ವಿಶ್ವವಿದ್ಯಾಲಯ ೧೯೯೭ರಲ್ಲಿ ಪ್ರಕಟಿಸಿದ, ಹೆಬ್ಬಣಿ ಮಾದಯ್ಯ ಹಾಡಿರುವ 'ಮಲೆಮಾದೇಶ್ವರ' ಪಠ್ಯದಲ್ಲಿ ೧೬,೦೦೦ ಸಾಲುಗಳಿವೆ. ಡಾ.ಜೀ.ಶಂ.ಪರಮಶಿವಯ್ಯರವರು ೧೯೭೩ರಲ್ಲಿ ಸಂಪಾದಿಸಿ, ಪ್ರಕಟಿಸಿರುವ 'ಶ್ರೀ ಮಂಟೇಸ್ವಾಮಿ' ಕಾವ್ಯದಲ್ಲಿ ೬,೪೧೦ ಸಾಲುಗಳಿದ್ದರೆ, ಕನ್ನಡ ವಿಶ್ವವಿದ್ಯಾಲಯದ ಡಾ.ಹಿ.ಚಿ.ಬೋರಲಿಂಗಯ್ಯನವರು ಸಂಪಾದಿಸಿದ ಎಚ್. ಮಹದೇವಯ್ಯ ಮತ್ತು ಸಂಗಡಿಗರು ಹಾಡಿರುವ 'ಮಂಟೇಸ್ವಾಮಿ' ಎಂಬ ಕಾವ್ಯವನ್ನು ಕನ್ನಡ ವಿಶ್ವವಿದ್ಯಾಲಯ ೧೯೯೭ರಲ್ಲಿ ಪ್ರಕಟಿಸಿದ್ದು, ಇದರ ಆವೃತ್ತಿಯಲ್ಲಿ ಸುಮಾರು ೨೭,೫೦೦ ಸಾಲುಗಳಿವೆ. ಚಲುವರಾಜುರವರು ಸಂಪಾದಿಸಿದ ೧೯೯೭ರಲ್ಲಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ 'ಜುಂಜಪ್ಪ' ಕಾವ್ಯ ೨೩,೬೦೦ ಸಾಲುಗಳ ಸುದೀರ್ಘ ಜನಪದ ಮಹಾಕಾವ್ಯವಾಗಿದ್ದರೆ, ಡಾ.ವೀರಣ್ಣದಂಡೆಯವರು ಸಂಪಾದಿಸಿರುವ 'ಹಾಲುಮತ ಪುರಾಣ'ವನ್ನು ಕನ್ನಡ ಪುಸ್ತಕ ಪ್ರಾಧಿಕಾರ ೨೦೦೦ ಪ್ರಕಟಿಸಿರುವ ಆವೃತ್ತಿಯಲ್ಲಿ ೨೩,೨೫೦ ಸಾಲುಗಳಿವೆ. ಲೌರಿಹಾಂಕೋ ಸಂಗ್ರಹಿಸಿರುವ 'ಸಿರಿ' ಮಹಾಕಾವ್ಯದಲ್ಲಿ ಸುಮಾರು ೧೫,೬೮೩ ಗೆರೆಗಳನ್ನು ದಾಟಿ ಹಾಡಿ ರುವವರು ಗೋಪಾಲ ನಾಯ್ಕ.

"ಮೌಖಿಕ ಕಾವ್ಯ ಸಂರಚನೆಯ ಪ್ರಕ್ರಿಯೆ ಸಾಮಾನ್ಯವಾಗಿ ಮೂರು ಹಂತಗಳಲ್ಲಿ ನಡೆಯುತ್ತದೆನ್ನುತ್ತಾರೆ ಪ್ರೊ.ಎ.ವಿ.ನಾವಡರವರು. ಮೊದಲ ಹಂತದಲ್ಲಿ ಪರಿಣಿತ ಗಾಯಕನೊಬ್ಬ ಹಾಡುವ, ಹಾಡನ್ನು ಗಮನವಿಟ್ಟು ಆತ/ಆಕೆ ಕೇಳುವ ವೇಳೆ ಹಾಡಿನ ಲಯಗತಿ, ದಾಟಿ, ಉಕ್ತಿ, ವೈಚಿತ್ರ್ಯಗಳು ಅಂತಸ್ಥಗೊಳ್ಳುತ್ತಾ ಹೋಗುತ್ತ ವಲ್ಲದೆ, ಕತೆಯಲ್ಲಿ ಪಾತ್ರಗಳ, ಕಾಲದೇಶ, ಎಲ್ಲ ವಿಚಾರಗಳನ್ನು ಮನಸ್ಸಿನಲ್ಲಿ ದಾಖಲಿಸಿಕೊಳ್ಳು ತ್ತಾನೆ/ಳೆ. ಎರಡನೆ ಹಂತದಲ್ಲಿ ಗಾಯಕನೊಬ್ಬನಿಗೆ ಅನುಕರಣ ಕ್ರಿಯೆ ಕೆಲಸ ನಿರ್ವಹಿಸುತ್ತದೆ. ಒಬ್ಬನೇ ಕುಳಿತು ಗ್ರಹಿಸಿ ದ್ದುದನ್ನು ಅತ್ಯಂತ ವಿಶಿಷ್ಟವಾದ ತಿರುಳನ್ನು ನೆನಪಿಸುತ್ತಾ ಅನುಕರಿಸುತ್ತಾನೆ/ಳೆ. ಆದರೆ ಬಾಯಿಪಾಠ ಪ್ರಯತ್ನಕ್ಕೆ ತೊಡಗುವುದಿಲ್ಲ. ಹಾಡು ಹೇಗಿರಬೇಕು ಎಂಬ ಆಲೋಚನೆ ಮಾಡುತ್ತಾ ಅದರ ಉತ್ತಮಿಕೆಗಾಗಿ ಮನಸ್ಸು ತುಡಿಯತೊಡಗುತ್ತದೆ. ಹಲವರ ಹಾಡುಗಳನ್ನು ಕೇಳಿಸಿಕೊಂಡಾಗ ಅವನ/ಳ ಕಾವ್ಯಾಭಿವ್ಯಕ್ತಿಯಲ್ಲಿ ಅವರ ಭಾಷೆ ಹಾಗೂ ಸೂತ್ರಗಳು ಪರಿಣಾಮ ಬೀರುತ್ತದೆ. ಒಬ್ಬ ಚತುರಗಾಯಕ ಒಂದು ಹಾಡನ್ನು ಹಲವು ರೀತಿಯಲ್ಲಿ ನಿರೂಪಿಸಬಲ್ಲ. ಮೂರನೆ ಹಂತದಲ್ಲಿ ಪ್ರೇಕ್ಷಕರೆದುರು ಕುಳಿತು ಹಾಡನ್ನು ಹಾಡುವ ಸಾಮರ್ಥ್ಯ ಗಾಯಕನಿಗೆ ಬಂದಿರುತ್ತದೆ. ಈ ಹಂತದಲ್ಲಿ ಹಲವಾರು ಹಾಡುಗಳು ಪೂರ್ತಿಯಾಗಿ ಅಲ್ಲದಿದ್ದರೂ ಹಾಡಲು ಬರುತ್ತದೆ. ಹಾಡನ್ನು ಪೂರ್ತಿಗೊಳಿಸುವ ಸಾಮರ್ಥ್ಯಕ್ಕೆ ತಲುಪಿರುತ್ತಾನೆ. ಪ್ರೇಕ್ಷಕನಿಗೆ ಏನು ಬೇಕೆಂದು ತಿಳಿದು ಅದಕ್ಕೆ ತಕ್ಕಂತೆ ಕಾವ್ಯವನ್ನು ಆಯಾ ಸನ್ನಿವೇಶಕ್ಕೆ ತಕ್ಕ ಮಾತುಗಳನ್ನು ಜೋಡಿಸುತ್ತಾ ನಿರಂತರವಾಗಿ ಗಾಯಕ/ಕಿಯರು ಹಾಡುತ್ತಾರೆ"[೪] ಮುಂದೆ ಅನುಭವಗೊಂಡಂತೆಲ್ಲಾ ಅವನ/ಳ ಕಾವ್ಯ ಭಂಡಾರ ಶ್ರೀಮಂತವಾಗುತ್ತದೆ. ಮೌಖಿಕ ಗಾಯಕರ ಕಾವ್ಯ ನಿರ್ಮಾಣದ ಕೌಶಲದ ವೇಗವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಯಾವ ಗಾಯಕರು ಕಾವ್ಯದ ಪೂರ್ಣ ಪಾಠವನ್ನು ಬಾಯಿಪಾಠ ಮಾಡಲು ಹೋಗುವುದಿಲ್ಲ. ಜನಪದ ಮಹಾಕಾವ್ಯವನ್ನು ಗಾಯಕರು ಹಾಡುತ್ತಿದ್ದರೂ, ಅವರಿಗೆ ಆ ಕಲ್ಪನೆ ಇರುವುದಿಲ್ಲ. ಅವರು ಅದನ್ನು ಕಥೆ ಎಂದೋ ಪದ ಎಂದೊ ಕರೆಯು ತ್ತಾರೆ. ಕಾವ್ಯದ ದೀರ್ಘತೆಯನ್ನು ಗಮನಿಸಿದ ವಿದ್ವಾಂಸರು ಮಾತ್ರ ಅದನ್ನು ಜನಪದ ಮಹಾಕಾವ್ಯವೆನ್ನುತ್ತಾರೆ.

ಉದಾಹರಣೆಗೆ: ಮಲೆಯಮಾದೇಶ್ವರನ ಮಹಾಕಾವ್ಯವನ್ನು ಕಾವ್ಯ ಅಥವಾ ಮಹಾಕಾವ್ಯ ಅಂತ ಜನಸಾಮಾನ್ಯರು ಕರೆಯುವುದಿಲ್ಲ. ಅದನ್ನು 'ಮಾದಪ್ಪನ ಕತೆ' ಎನ್ನುತ್ತಾರೆ.

ಕಂಠಸ್ಥ ನಿರೂಪಣೆ, ಮೌಖಿಕ ಸಾಹಿತ್ಯದ ಒಂದು ಪ್ರಧಾನ ಲಕ್ಷಣ. ಅನಕ್ಷರಸ್ಥ ಗಾಯಕ ಪರಂಪರೆಯ ಮೂಲಕ ಹಲವು ತಲೆಮಾರುಗಳಿಂದ ಕಾವ್ಯ ರೂಪದಲ್ಲಿ ಹರಿದು ಬಂದ ಮೌಖಿಕ ಕಾವ್ಯಗಳು, ಕಾವ್ಯ ಸಂರಚನೆಯ ಸಂದರ್ಭದಲ್ಲಿ ವಸ್ತು ಹಿಗ್ಗುವಿಕೆಗೆ ಅಥವಾ ಕುಗ್ಗುವಿಕೆಗೆ ಒಳಗಾಗುವುದುಂಟು. ಪ್ರದರ್ಶನ ಸಂದರ್ಭದಲ್ಲಿ ಹುಟ್ಟಿದ ಹಾಡು ಒಳ್ಳೆಯದಿರಲಿ ಅಥವಾ ಸಾಮಾನ್ಯವಾದುದಾಗಿರಲಿ ಅದು ಅವನ ಭಂಡಾರ. ಒಬ್ಬನ ಪಾಠ ಒಂದು ರೀತಿ ಇದ್ದರೆ ಇನ್ನೊಬ್ಬ ಗಾಯಕನ ಪಾಠ ಇನ್ನೊಂದು ರೀತಿ ಇರುತ್ತದೆ. ಪ್ರತಿ ಪ್ರದರ್ಶನ ದಲ್ಲಿ ಸಂರಚನೆಗೊಳ್ಳುವ ಮೌಖಿಕ ಕಾವ್ಯ ಹೊಸದಾಗಿಯೇ ಆಗಿರುತ್ತದೆ. ಭಾಷೆಯ ಗುಣ ಬದಲಾಗುವ ಸಾಧ್ಯತೆ ಇರುತ್ತದೆ. ಗಾಯಕನು ಹಾಡುವಾಗ ಕೆಲವೊಮ್ಮೆ ಆಡುಮಾತಿನ ನುಡಿಗಟ್ಟುಗಳು ನೆನಪಿನಿಂದ ಜಾರಿ ಅಲ್ಲಿ ಸೂಕ್ತವೆಂದು ಗಾಯಕನಿಗೆ ಹೊಳೆಯುವ ಇನ್ನಾವುದೋ ಪದ ತುಂಬಿ ಬರಬಹುದು. ಹೀಗೆ ಬದಲಾವಣೆ ಗಳಾಗುವುದು ಕೇಳುಗರ ಮತ್ತು ವಿದ್ವಾಂಸರ ಗಮನಕ್ಕೆ ಬಂದಿರಬಹುದು. ಒಂದು ಪಠ್ಯವನ್ನು ಒಬ್ಬನೇ ಹಾಡುಗಾರನಿಂದ ಕಾಲದ ಅಂತರದಲ್ಲಿ ಹಲವು ಬಾರಿ ಹಾಡಿಸಿದಾಗಲೂ ವ್ಯತ್ಯಾಸ ಗೋಚರಿಸುವು ದುಂಟು. ಯಾವುದೇ ಮೌಖಿಕ ಕಾವ್ಯ ಒಮ್ಮೆ ಸೃಷ್ಟಿಯಾಗಿ ಮುಂದೆ ಯಾವುದೇ ಬದಲಾವಣೆ ಆಗದೆ ಬಾಯಿಪಾಠದ ಮೂಲಕ ಹರಿದು ಬರುತ್ತದೆ ಎನ್ನುವುದು ಹಳೆಯ ವಾದ. ಅನಕ್ಷರಸ್ಥ ಗಾಯಕರ ಹಾಡು ಮಾನವ ಸಹಜವಾದ ಸ್ಮರಣೆಯ ದೋಷದಿಂದ ಬದಲಾವಣೆಯಾದರೆ ಆಶ್ಚರ್ಯವಿಲ್ಲವೆನ್ನುತ್ತಾರೆ ಜೆರಾಲ್ಡ್ ಎನ್ನುವ ವಿದ್ವಾಂಸರು. ಮೌಖಿಕ ಕಾವ್ಯದ ಪುನರ್‌ಸೃಷ್ಟಿಯು ಗಾಯಕರಿಂದ ಗಾಯಕರಿಗೆ, ವ್ಯಕ್ತಿಗತ ವ್ಯತ್ಯಾಸ ಗೋಚರಿಸುತ್ತದೆ. ಪ್ರತಿ ಪ್ರದರ್ಶನದಲ್ಲಿ ಸೃಷ್ಟಿಯಾಗುವ ಒಂದೊಂದು ಕಾವ್ಯ ಪಠ್ಯವು ಅಧಿಕೃತವಾದುದು. "ಜಾನಪದ ಪ್ರಕ್ರಿಯೆಯ ದೃಷ್ಟಿಯಿಂದ ಎಲ್ಲಾ ಪಾಠಗಳು ಅಧಿಕೃತವೆಂದು ಪೀಟರ್ ಕ್ಲಾಸ್ ಹೇಳುತ್ತಾರೆ"[7] ಅದು ಮೂಡಿ ಬರುವ ಸಂದರ್ಭ, ಆವರಣ, ಸಾಮಾಜಿಕ, ಸಾಂಸ್ಕೃತಿಕ ಒತ್ತಡಗಳಿಂದ ಕಾಲವನ್ನು ಖಚಿತವಾಗಿ ಹೇಳುವಂತಿಲ್ಲ. ಯುರೋಪಿನಲ್ಲಿ ಮತ್ತು ಅಮೇರಿಕಾದಲ್ಲಿ, ನಮ್ಮಲ್ಲಿನ ಹಾಗೆ ಜೀವಂತವಾದ ರೀತಿಯಲ್ಲಿ ಜನಪದ ಕಥೆ ಮತ್ತು ಕಾವ್ಯಗಳನ್ನು ಹೇಳುವ ಮತ್ತು ಹಾಡುವ ಪರಂಪರೆಗಳಿಲ್ಲ. ಕಾಲೇವಾಲ ಮಹಾಕಾವ್ಯವನ್ನು ಯಾವ ಒಬ್ಬ ಹಾಡುಗಾರ ಹಾಡಿರಲಿಲ್ಲ. ಅನೇಕ ಬಿಡಿ ಬಿಡಿ ಪಾಠಗಳನ್ನು ಬೆರೆಸಿ ಸಂಪಾದಿಸಿದ್ದೇ ಇದಕ್ಕೆ ಕಾರಣ. ಸುದೀರ್ಘವಾದ ಪೂರ್ಣಕಾವ್ಯ ಹಾಡುವವರು ಇಲ್ಲದಾಗ, ಪಾಠಗಳನ್ನು ಬೆರೆಸಿ ಒಂದು ಶುದ್ಧ ಪಾಠವನ್ನು ಸಂಪಾದಿಸುವ ಕ್ರಮವು ಕೆಲವು ವಿದ್ವಾಂಸರು, ದೋಷವೆಂದಾದರೂ, ಇದು ಅನಿವಾರ್ಯವೆನಿಸುತ್ತದೆ. "ಡಾ.ಪಿ.ಕೆ. ರಾಜಶೇಖರರವರು ಮಲೆಯಮಾದೇಶ್ವರ ಜನಪದ ಮಹಾಕಾವ್ಯದ ಸಂಪಾದನ ಕಾರ್ಯಕ್ಕೆ ಅನುಸರಿಸಿರುವ ಕ್ರಮವನ್ನು ಗ್ರಂಥ ಸಂಪಾದನ ಶಾಸ್ತ್ರದ ದೃಷ್ಟಿಯಿಂದ ನೋಡಿದಾಗ ಇದೊಂದು ಮಿಶ್ರಪ್ರತಿ ಎನಿಸಬಹು ದೆನ್ನುತ್ತಾರೆ. ಡಾ.ತೀ.ನಂ. ಶಂಕರನಾರಾಯಣರವರು"[8] ಆದರೆ ಕನ್ನಡದಲ್ಲಿ ಮಲೆಯಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ ಕಾವ್ಯಗಳನ್ನು ಹಾಡುಗಾರನೇ ಹಾಡುವುದರಿಂದ ಒಬ್ಬೊಬ್ಬರ ಪಾಠವನ್ನೇ ಪ್ರತ್ಯೇಕ ವಾಗಿ ಪ್ರಕಟಿಸಬಹುದು.

ಜನಪದ ಮಹಾಕಾವ್ಯಗಳ ಲಕ್ಷಣಗಳನ್ನು ಕುರಿತು ಅನೇಕ ವಿದ್ವಾಂಸರು ಹಾಗೂ ಭಾರತೀಯ ವಿದ್ವಾಂಸರು, ಮಹಾಕಾವ್ಯಗಳನ್ನು ಬೇರೆ ಬೇರೆ ದೃಷ್ಟಿಗಳಿಂದ ಚರ್ಚಿಸಿ ಅಭ್ಯಾಸ ಮಾಡಿ ಅವುಗಳ ಲಕ್ಷಣವನ್ನು ಗುರುತಿಸಿದ್ದಾರೆ. ಜನಪದ ಮಹಾಕಾವ್ಯಗಳ ಲಕ್ಷಣಗಳು ಗೊತ್ತಾಗುವುದು ನಮ್ಮಲ್ಲಿ ಈಗ ಜೀವಂತವಾಗಿರುವ ಜನಪದ ಮಹಾಕಾವ್ಯದ ಬಗ್ಗೆ ಅಭ್ಯಾಸ ಮಾಡಿದಾಗ. ಕರ್ನಾಟಕದಲ್ಲಿ ಡಾ.ತೀ.ನಂ.ಶಂಕರನಾರಾಯಣ, ಡಾ.ಪಿ.ಕೆ. ರಾಜಶೇಖರ್, ಡಾ.ಎಂ.ಬಿ.ನೇಗಿನಹಾಳ, ಡಾ.ಎಚ್.ಜೆ.ಲಕ್ಕಪ್ಪಗೌಡ, ಡಾ.ಬಿ.ಎ.ವಿವೇಕ ರೈ, ಡಾ.ಹಿ.ಚಿ. ಬೋರಲಿಂಗಯ್ಯ, ಡಾ.ವಾಮನ ನಂದಾವರ, ಪ್ರೊ.ಎ.ವಿ.ನಾವಡ, ಡಾ.ಚಿನ್ನಪ್ಪಗೌಡ ಮೊದಲಾದವರು ಈ ಬಗ್ಗೆ ಕೆಲಸ ಮಾಡುತ್ತಿದ್ದಾರೆ. ಕನ್ನಡದಲ್ಲಿ ಸುದೀರ್ಘವಾದ ಜನಪದ ಮಹಾಕಾವ್ಯಗಳು ಬೆಳಕಿಗೆ ಬಂದಿವೆ. 'ಮಲೆಯಮಾದೇಶ್ವರ ಕಾವ್ಯ', 'ಮಂಟೇಸ್ವಾಮಿ ಕಾವ್ಯ', 'ಜುಂಜಪ್ಪನ ಕಾವ್ಯ'ಮುಂತಾದ ಮಹಾಕಾವ್ಯಗಳು ಪ್ರೊ.ಬಿ.ಎ.ವಿವೇಕ ರೈರವರು ತುಳುವಿನಲ್ಲಿ 'ಕೋಟಿ-ಚೆನ್ನಯ್ಯ' ಮತ್ತು 'ಸಿರಿ ಪಾಡ್ದನ'ಗಳನ್ನು ತುಳುನಾಡಿನ ಅವಳಿ ಜನಪದ ಮಹಾಕಾವ್ಯಗಳೆಂದು ಗುರುತಿಸಿದ್ದಾರೆ. ಹಾಗೂ ಅಪಾರ ಸಂಖ್ಯೆಯಲ್ಲಿ ವೀರಕಾವ್ಯಗಳು, ವಾಸ್ತವಿಕ ಲಾವಣಿಗಳು, ರಮ್ಯ ಕಾವ್ಯಗಳು, ಚಾರಿತ್ರಿಕ ಕಾವ್ಯಗಳು ಮುಂತಾದ ಅನೇಕ ಬಗೆಯ ಕಾವ್ಯಗಳು ಈಗ ಸಂಕಲಿತವಾಗಿವೆ.

ಜನಪದ ಮಹಾಕಾವ್ಯದ ವಸ್ತು ಮಹತ್ವದ್ದಾಗಿರಬೇಕು. ಅದು ಒಬ್ಬ ಸಾಂಸ್ಕೃತಿಕ ವೀರನ ಅಥವಾ ಧಾರ್ಮಿಕ ನಾಯಕನ ಸುತ್ತ ಹೆಣೆದುಕೊಂಡು ತನ್ನ ವಿಸ್ತಾರ ಮತ್ತು ವ್ಯಾಪ್ತಿಗಳಿಂದ ಅನೇಕ ಮಜಲುಗಳಲ್ಲಿ ಸಾಗುತ್ತದೆ. ತನ್ನ ಘನತೆಯನ್ನು ಕಾಪಾಡಿಕೊಳ್ಳಲು ನಾಯಕನು ಯಾವುದೇ ರೀತಿಯ ಸವಾಲನ್ನು ಎದುರಿಸಲು ತಯಾರಿರುತ್ತಾನೆ. ಈತ ಪವಾಡ ಪುರುಷನಾಗಿ ಭಕ್ತ ಜನರ ಕಷ್ಟ ಪರಂಪರೆಗಳನ್ನು ಹೋಗಲಾಡಿಸಿ, ಅವರ ಉದ್ಧಾರಕ ನಂತಿರುತ್ತಾನೆ. ಮಹಾಕಾವ್ಯದ ನಾಯಕನಿಗೆ, ಕಥನದ ಉದ್ದಕ್ಕೂ ಪ್ರತಿಯಾಗಿ ಪ್ರತಿನಾಯಕರುಗಳು ಕಾಣಿಸಿಕೊಳ್ಳುತ್ತಾರೆ. ನಾಯಕನ ಮುಂದೆ ಜಗತ್ತಿನ ಯಾವ ಶಕ್ತಿಯೂ ಪ್ರತಿಭಟಿಸಿ ನಿಲ್ಲುವಂತಿಲ್ಲ. ಅವನು ದುಷ್ಟರಿಗೆ ದುಷ್ಟ, ಶಿಷ್ಟರಿಗೆ ಶಿಷ್ಟ. ದುಷ್ಟರು ನಾಯಕನಿಗೆ ಶರಣಾಗಿ ಕೊನೆಗೆ ಅವರ ಅನುಯಾಯಿಗಳಾಗಿ, ತಮ್ಮ ಮನೆದೇವರಾಗಿ, ಸ್ವೀಕರಿಸುತ್ತಾರೆ. ಇಲ್ಲವೆ ಸರ್ವನಾಶವಾಗುತ್ತಾರೆ. ಅಧರ್ಮವನ್ನು ನಾಶಮಾಡಿ, ಧರ್ಮವನ್ನು ಸ್ಥಾಪಿಸುವುದೆ ನಾಯಕನ ಪರಮೋದ್ದೇಶ. ತನ್ನದೇ ಆದ ಧ್ಯೇಯ ಧೋರಣೆಗಳಿಂದ, ಒಂದು ಸಾಂಸ್ಕೃತಿಕ ನೆಲೆಗಟ್ಟಿನ ಮೇಲೆ ನಿಂತು ಕೆಲಸ ಮಾಡುತ್ತಾನೆ. ಈ ನಾಯಕ ಎಲ್ಲಾ ಕಾಲದ ಜನರಿಗೆ ಸ್ಫೂರ್ತಿಯ ಸೆಲೆಯಾಗಿ ಕಾವ್ಯದುದ್ದಕ್ಕೂ ಕಥಾನಾಯಕನಾಗಿ ವಿಜೃಂಭಿತನಾಗಿರುತ್ತಾನೆ. ಜನಪದ ಮಹಾಕಾವ್ಯದಲ್ಲಿ ಆ ಕಾಲದ ಜೀವನ ಧರ್ಮ, ಸಾಂಸ್ಕೃತಿಕ ಪರಿಸರ, ಜನರ ಆಶೋತ್ತರಗಳು, ಅಭಿವ್ಯಕ್ತಿ ಪಡೆದುಕೊಳ್ಳುತ್ತವೆ. ಜನಪದ ಮಹಾಕಾವ್ಯ ಇಡೀ ಜನಾಂಗದ ಸೃಷ್ಟಿಯಾಗಿ, ಒಂದು ಜನಾಂಗದ ಸಂಸ್ಕೃತಿ ಇತಿಹಾಸಗಳ ಪ್ರೇರಕವಾಗಿ, ಆ ಜನಾಂಗದ ಬದುಕಿಗೆ ಮಾರ್ಗದರ್ಶಕವಾಗಿ ಇರುವಂತಹುದು. ಕಾವ್ಯ ಕಾಲಮಾನದ ದೃಷ್ಟಿಯಿಂದ ಅತ್ಯಂತ ಹಳೆಯದಾದುದು. ಪ್ರಾಚೀನ ವಸ್ತು ಸಂಗತಿಗಳಿಂದ ರಚಿತವಾದುದು. ಕಾಲದಿಂದ ಕಾಲಕ್ಕೆ ಹಲವರ ಬಾಯಲ್ಲಿ, ಕಲ್ಪನೆಯಲ್ಲಿ, ಹೊಸ ಘಟನೆ ಸಂಗತಿ ವಿಚಾರಗಳನ್ನು ಒಳಗೊಂಡು ಬೆಳೆಯುತ್ತದೆ.

ಹೀಗಾಗಿ ಜನಪದ ಮಹಾಕಾವ್ಯ ಆಯಾ ಸಾಂಸ್ಕೃತಿಕ ವರ್ಗದ ಅಥವಾ ದೇಶದ ಪುರಾಣವೇ ಆಗಿರುತ್ತದೆ. ಜಾನಪದ ಸಾಹಿತ್ಯದಲ್ಲಿ ಮಾದೇಶ್ವರ ಮತ್ತು ಮಂಟೇಸ್ವಾಮಿಗಳಂಥ ಒಬ್ಬಿಬ್ಬರು ಸಿಗಬಹುದು. ಮಾದೇಶ್ವರರು

ಬೇವಿನಹಟ್ಟಿ ಕಾಳಮ್ಮ, ಇಕ್ಕೇರಿ ದೇವಮ್ಮರನ್ನು ನಾಶಮಾಡಿ, ತನಗೊಲಿದ ಸಂಕಮ್ಮನಿಗೆ ಮಕ್ಕಳ ಫಲ ಕೊಟ್ಟು ಆಕೆಯನ್ನು ಉದ್ಧಾರ ಮಾಡುವುದು, ಮಂಟೇಸ್ವಾಮಿ ಶಿಷ್ಯ ಸಿದ್ದಪ್ಪಾಜಿ ಹಲಗೂರಿನ ಪಾಂಚಾಳ ವಂಶದವರೊಂದಿಗೆ ಸೆಣಸುವುದು, ಜುಂಜಪ್ಪ ತನ್ನ ಸೋದರ ಮಾವಂದಿರೊಂದಿಗೆ ಹೋರಾಡುವುದನ್ನು ಉಲ್ಲೇಖಿಸಬಹುದಾಗಿದೆ. ಈ ಕಥಾನಾಯಕರುಗಳು ಒಂದು ಕಾಲದಲ್ಲಿ ಜನಸಾಮಾನ್ಯರೊಂದಿಗೆ ಬಾಳಿ ಬದುಕಿದವರಾಗಿ, ಅವರ ಒಳಿತಿಗಾಗಿ ಮುಂದಾಳತ್ವ ವಹಿಸಿಕೊಂಡಿರುತ್ತಾರೆ. ಇಂತಹ ನಾಯಕರು ಮಡಿದಾಗ ಅವರು ನಡೆಸಿದ ಹೋರಾಟ ಮತ್ತು ಮಾಡಿದ ಸಹಾಯವನ್ನು ನೆನೆಯುತ್ತಾ, ಅವರ ಎಲ್ಲಾ ಸಾಂಸ್ಕೃತಿಕ ಚಟುವಟಿಕೆಗಳು ಒಂದೊಂದು ಘಟನೆಗಳಾಗಿ ಜನರ ಮನಸ್ಸಿನಲ್ಲಿ ನೆಲೆನಿಂತು, ಅದೇ ಮಹಾಕಾವ್ಯವಾಗಿ ಬೆಳೆಯುತ್ತಾ ಹೋಗುತ್ತದೆ.' ಆತನಿದ್ದ ಕಾಲ, ದೇಶ, ಪರಿಸರ, ಭಾಷೆಯ ಸಹಜತೆಯ ಸತ್ಯವನ್ನು, ಮೌಲ್ಯಗಳನ್ನು, ಆಪ್ತವಾಗಿ ಪ್ರತಿನಿಧಿಸುತ್ತದೆ. ಇದು ಇಡೀ ಜನಾಂಗದ ಆಸ್ತಿ, ಈ ಮೌಖಿಕ ಮಹಾಕಾವ್ಯದ ನಾಯಕರನ್ನು ಜನ ದೇವರ ಪ್ರತಿರೂಪವೆಂದು ಭಾವಿಸಿ, ಇಂದಿಗೂ ಪೂಜಿಸಿಕೊಂಡು ಬಂದಿರುತ್ತಾರೆ. ಅಂಥ ವೀರರು ಹುಟ್ಟಿ ಬೆಳೆದ ಅಥವಾ ನೆಲೆನಿಂತ ಸ್ಥಳಗಳು ಪುಣ್ಯಕ್ಷೇತ್ರಗಳಾಗಿ ಮಾರ್ಪಾಡಾಗಿರುತ್ತವೆ. ಜನ ಭಕ್ತಿಯಿಂದ ಜಾತ್ರೆಗಳನ್ನು ನಡೆಸುತ್ತಾರೆ. ಜಾತ್ರೆಗಳಂಥ ವಿಶೇಷ ಸಂದರ್ಭಗಳಲ್ಲಿ ಇಂಥ ಮಹಾಕಾವ್ಯಗಳನ್ನು ಹಾಡಿ ವೀರನ ಗುಣಗಾನ ಮಾಡುವುದನ್ನು ಕಾಣಬಹುದು. ಇದು ಭಾರತೀಯ ಮಹಾಕಾವ್ಯದ ವಿಶಿಷ್ಟ ಲಕ್ಷಣ. ಆಯಾ ಧಾರ್ಮಿಕ ಪಂಥಕ್ಕೆ ಸೇರಿದ ಗಾಯಕರು ತಮ್ಮ ಪಂಥದ ಪುರಾಣಗಳನ್ನು ಮೌಖಿಕವಾಗಿ ಹಾಡುವ, ಕೇಳುವ ಹರಕೆಯನ್ನು ಹೊತ್ತು ಕೊಂಡಿರುತ್ತಾರೆ. ಆದರೆ ಇವೆಲ್ಲವೂ ಧಾರ್ಮಿಕ ಆಚರಣೆಗಳ ಒಂದು ಭಾಗ. ಮಹಾಕಾವ್ಯದ ಎಲ್ಲಾ ಭಾಗಗಳನ್ನು ಎಲ್ಲ ಸಂದರ್ಭಗಳಲ್ಲೂ ಹಾಡುವುದಿಲ್ಲ. ಒಬ್ಬ ಹಾಡುಗಾರನಿಗೆ ಪೂರ್ತಿ ಕಾವ್ಯಗೊತ್ತಿರ ಬೇಕೆಂದಿಲ್ಲ. ಕೆಲವು ವೇಳೆ ಪೂರ್ತಿ ಕಾವ್ಯ ಹಾಡಲು ಗೊತ್ತಿದ್ದರು ಹಾಡಲು ಸಾಧ್ಯವಾಗದೆ ಹೋಗಬಹುದು. ಜನರಿಗೆ ಆಸಕ್ತಿ ಉಂಟುಮಾಡುವ ಕಥೆಗಳು ಮಾತ್ರ ಹೆಚ್ಚು ಜನಪ್ರಿಯವಾಗುತ್ತವೆ. ಅಂತಹ ಪ್ರಸಂಗಗಳನ್ನು ಮಾತ್ರ ಹಾಡುವುದನ್ನು ಕಾಣುತ್ತೇವೆ. ಶೋತೃವಿಗೆ ತನ್ನ ಜೀವಮಾನದಲ್ಲಿ ಒಟ್ಟಿಗೆ ಕಾವ್ಯವನ್ನು ಕೇಳುವ ಪ್ರಸಂಗ ಬರದೆ ಇರಬಹುದು.

ಜನಪದ ಮಹಾಕಾವ್ಯಗಳಲ್ಲಿ ಕಥಾನಾಯಕನ ಮರಣ ಬಹಳ ಮುಖ್ಯ ಪಾತ್ರವಹಿಸುತ್ತದೆ. ಇದು ಮಹಾಕಾವ್ಯಗಳ ರಚನೆಗೆ ಮುಖ್ಯ ಕಾರಣವಾಗುತ್ತದೆ. ಮರಣದ ಕಾರಣದಿಂದ ಕಥಾನಾಯಕ ಜನಪ್ರಿಯ ನಾಗುತ್ತಾನೆ. ಮರಣಾನಂತರ ಜನ ಆತನಿಗೆ ದೈವತ್ವವನ್ನು ಆರೋಪಿಸಿ ಈ ಬಗೆಯ ಮಹಾಕಾವ್ಯಗಳ ರಚನೆಯ ಮೊದಲ ಹಂತದಲ್ಲಿ ಕಥಾನಾಯಕನನ್ನು ವೀರಮಾನವನನ್ನಾಗಿ ಚಿತ್ರಿಸಲಾಗುತ್ತದೆ. ಕಾಲಕಳೆದಂತೆ ಇತಿಹಾಸ (History) ಕ್ರಮೇಣ ಐತಿಹ್ಯ (Legend)ವಾಗುತ್ತದೆ. ಕೊನೆಯ ಹಂತದಲ್ಲಿ ಪುರಾಣದ (Myth)ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಮೌಖಿಕ ಮಹಾಕಾವ್ಯ ಮೊದಲ ಹಂತದಲ್ಲಿ ವೀರನೊಬ್ಬನ ಮಾನುಷ ಘಟನೆಯಾಗಿದ್ದು, ಹಂತ-ಹಂತವಾಗಿ ಅತಿಮಾನುಷ ಆಯಾಮಗಳನ್ನು ಪಡೆದುಕೊಳ್ಳುತ್ತದೆ. ಚರಿತ್ರೆ ಮತ್ತು ಐತಿಹ್ಯಗಳ ಸಮನ್ವಯವನ್ನು ಗಮನಿಸಬಹುದಲ್ಲದೆ, ಚರಿತ್ರೆ ಮತ್ತು ಕಾವ್ಯದ ಸಮನ್ವಯವನ್ನೂ ನೋಡಬಹುದಾಗಿದೆ. ಆದರೆ ಮೌಖಿಕ ಮಹಾಕಾವ್ಯಗಳ ಚರಿತ್ರೆಗೆ ಸಹಾಯವಾಗಬಹುದೆ ಹೊರತು ಅದೇ ಚರಿತ್ರೆಯಾಗಲಾರದು. ಆದರೆ ಕೆಲವು ಚಾರಿತ್ರಿಕ ಅಂಶಗಳು ಅದರಲ್ಲಿ ಸೇರಲು ಸಾಧ್ಯ.

ಕನ್ನಡ ಮಹಾಕಾವ್ಯಗಳ ಶರೀರದ ಒಳಗಡೆ ಕೆಲ ರಾಚನಿಕ ವಿನ್ಯಾಸಗಳನ್ನು ಕಾಣುತ್ತೇವೆ. ಮಹಾಕಾವ್ಯದ ಹಾಡುಗಾರಿಕೆಯ ಪ್ರಾರಂಭದಲ್ಲಿ, ಸ್ತುತಿ ಇದ್ದು ಮಂಗಳ ಕೊನೆಯಲ್ಲಿರುವುದು. ನಾಯಕನೊಬ್ಬನ ಸಾಹಸ ಸಾಧನೆಗಳ ಸುತ್ತಾ ಬೆಳೆಯುವ ಕಾವ್ಯಗಳು ಅನೇಕ ಕಥೆ ಉಪಕಥೆಗಳನ್ನೊಳಗೊಂಡಿರುತ್ತವೆ. ಪುನರಾವರ್ತನೆಯ ಗುಣ ಜನಪದ ಕಾವ್ಯಕ್ಕೆ ಸಂಬಂಧಿಸಿದಂತೆ ಸಾಮಾನ್ಯ ಸೊಲ್ಲುಗಳಂತೂ ಪ್ರತಿ ಸಾಲಿಗೂ ಪುನರಾವರ್ತನೆಯಾಗುತ್ತದೆ. "ಯಾವುದೇ ಒಂದು ಮಹಾಕಾವ್ಯವನ್ನು ಹಿಗ್ಗಿಸುವುದು ಅಥವಾ ಕುಗ್ಗಿಸುವುದು ಪುನರಾವರ್ತನೆಯಿಂದ ಸಾಧ್ಯವಾಗುತ್ತದೆ. ಪ್ರೊ.ಲೋರಿಹಾಂಕೋರವರು ದಕ್ಷಿಣ ಕನ್ನಡ ಜಿಲ್ಲೆಯ ತುಳು ಮಹಾಕಾವ್ಯ ಸಿರಿ ಪಾಡ್ದನದಲ್ಲಿ ಪುನರಾವರ್ತನೆಗೊಳ್ಳುವ ಸಾಧನಗಳು ಒಂದು ಸಾಲಿನಿಂದ ಹಿಡಿದು ಹತ್ತಾರು ಸಾಲುಗಳು ದೀರ್ಘವಾಗಿವೆ ಎನ್ನುವುದನ್ನು ಹೇಳುತ್ತಾ, ಇವುಗಳನ್ನು Multiforms ಎಂದು ಕರೆದಿದ್ದಾರೆ."[೭] ಇದು ಕಾವ್ಯಕ್ಕೆ ಮೆರಗನ್ನು ತರುತ್ತದೆ. ಕಾವ್ಯದ ಶಕ್ತಿಯನ್ನು ಕುಂದಿಸುವುದಿಲ್ಲ. ಪುನರಾವರ್ತನೆಗೊಳ್ಳುವ ಸೊಲ್ಲನ್ನು ಮತ್ತು ಕಾವ್ಯದ ಕೆಲವು ಭಾವನಾಪೂರ್ಣ ಭಾಗಗಳನ್ನು ಹಾಡುಗಾರಿಕೆಯ ತಂಡದ, ಇತರ ಸದಸ್ಯರು ಮುಖ್ಯಗಾಯಕನೊಡನೆ ಹಾಡುತ್ತಾರೆ. "ಜನಪದ ಕಾವ್ಯಗಳಲ್ಲಿ ಸೊಲ್ಲು/ಪಲ್ಲವಿ ಕಾವ್ಯದ ಪುನರ್‌ಸೃಷ್ಟಿಗೆ ಪೂರಕವಾದ ಒಂದು ಪ್ರಧಾನವಾದ ಮೌಖಿಕ ಸೂತ್ರ. ಇವು ಕಾವ್ಯದ ನಿರಂತರ ಚಲನೆಗೆ ಅನುಕೂಲವಾಗುವುದರ ಜೊತೆಗೆ ಪ್ರಧಾನ ಗಾಯಕರಿಗೆ ಇಂಬುಕೊಡುವ ಒಂದು ವ್ಯವಸ್ಥೆ"[೮] ಪಾತ್ರಪ್ರಧಾನವಾದ ಮಲೆಯಮಾದೇಶ್ವರ, ಮಂಟೇಸ್ವಾಮಿ, ಮೈಲಾರಲಿಂಗ ಮುಂತಾದ ಕಾವ್ಯಗಳಲ್ಲಿ ರೂಪಾಂತರ ಕ್ರಿಯೆ ತೀರ ಸಾಮಾನ್ಯವಾಗಿ ಕಾಣಿಸಿಕೊಂಡು, ಇದೊಂದು ರೀತಿಯಲ್ಲಿ ಕಥಾಪುರುಷನ ಲೀಲೆ ಎಂಬಂತೆ ಭಾವಿಸಲಾಗುತ್ತದೆ. ಜನಪದ ಮಹಾಕಾವ್ಯಗಳಲ್ಲಿ ಇದು ಸಾಮಾನ್ಯ ಸಂಗತಿ. ಜನಪದ ಮಹಾಕಾವ್ಯಗಳಲ್ಲಿನ ಕಥಾನಾಯಕ ಸದಾ ಅಲೆದಾಡುತ್ತಲೇ ಇರುತ್ತಾನೆ. 'ಮಾದೇಶ್ವರ, ಮಂಟೇಸ್ವಾಮಿ, ಮೈಲಾರಲಿಂಗನಂತಹ ನಾಯಕರು ಸದಾ ಅಲೆದಾಡುತ್ತಾ ತಮ್ಮ ಹಿರಿಮೆ ಮಹಿಮೆಗಳನ್ನು ಭಕ್ತರಿಗೆ ತೋರುತ್ತಾ, ತಮ್ಮ ಪ್ರಭಾವವನ್ನು ಎಲ್ಲೆಡೆ ಬೆಳೆಸುತ್ತಾ ಭಕ್ತರ ಒಕ್ಕಲನ್ನು ಹೆಚ್ಚಿಸಿಕೊಳ್ಳುತ್ತಿರುತ್ತಾರೆ.' ಕೊನೆಯದಾಗಿ ಕಥೆ ಯಾವ ಪ್ರದೇಶದಲ್ಲಿ ಬಳಕೆಯಲ್ಲಿರುತ್ತದೋ ಆ ಪ್ರಾದೇಶಿಕ ಭಾಷೆ ಕಾವ್ಯಕ್ಕೆ ಸಹಜವಾಗಿ ಬರುತ್ತದೆ. ಮಲೆಯಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ ಮುಂತಾದ ಕಾವ್ಯಗಳು ಗದ್ಯ ಪದ್ಯ ಮಿಶ್ರಿತ ಚಂಪೂ ರೀತಿಯಲ್ಲಿವೆ. ಇಲ್ಲಿನ ಗದ್ಯವನ್ನು ರಾಗ ಬದ್ಧವಾಗಿ ಹೇಳುವುದನ್ನು ಕಾಣುತ್ತೇವೆ. ಈ ಕಾವ್ಯಗಳ ಗದ್ಯಕ್ಕೂ ಜನಪದ ಕಥೆಗಳ ಗದ್ಯಕ್ಕೂ ವ್ಯತ್ಯಾಸವಿದ್ದು ಈ ಕಾವ್ಯಗಳ ಗದ್ಯವನ್ನು ಸೃಜನಾತ್ಮಕ ಜನಪದ ಗದ್ಯವೆನ್ನುತ್ತಾರೆ. 'ಹಾಲುಮತ ಮಹಾಕಾವ್ಯ' ಸಂಪೂರ್ಣ ಪದ್ಯರೂಪದಲ್ಲಿದೆ. ಕೃಷ್ಣಗೊಲ್ಲರ ಕಾವ್ಯ, ಕುಮಾರರಾಮನ ಕಾವ್ಯ ಮುಂತಾದ ಕಾವ್ಯಗಳು ದೀರ್ಘ ಸಂಭಾಷಣೆಗಳನ್ನೊಳಗೊಂಡು ನಾಟಕೀಯ ದಾಟಿಯಲ್ಲಿವೆ.

ಜನಪದ ಮಹಾಕಾವ್ಯಗಳಲ್ಲಿ ಕಥೆಗೆ ನೇರವಾಗಿ ಸಂಬಂಧಿಸಿದ ವಿವರಗಳು ಮಾತ್ರ ನಿರೂಪಿತವಾಗುತ್ತವೆ ಹೊರತು, ಪಾತ್ರಕ್ಕೆ ಕಥೆಗೆ ಹೊರತಾದ ಯಾವುದೇ ಜೀವನದ ಸುಳಿವೂ ಇರುವುದಿಲ್ಲ. ಇಲ್ಲಿ ಬರುವ ಹೆಚ್ಚಿನ ಪಾತ್ರಗಳು ಮತ್ತು ಘಟನೆಗಳು ಜನಸಾಮಾನ್ಯರಿಗೆ ಬಹು ಹತ್ತಿರವಾಗಿರುತ್ತವೆ. ಇಲ್ಲಿ ಪರಂಪರಾಗತ ವರ್ಣನೆಗಳಿಗೂ ಮತ್ತು ಅಲಂಕಾರಿಕ ಶೈಲಿಗೂ ಸ್ಥಳವಿಲ್ಲ. ಹೆಚ್ಚಾಗಿ ಆಡುಭಾಷೆಯಲ್ಲಿ ನಿರೂಪಿಸಲ್ಪಡುವ ಈ ಕಥನದಲ್ಲಿ ಜನ ಬಳಕೆಯ ಗಾದೆಗಳು, ಒಗಟುಗಳು, ಇತ್ಯಾದಿ ಬಳಸಲ್ಪಡುತ್ತವೆ.

ಜನಪದ ಕಾವ್ಯಗಳಲ್ಲಿ ನಾಯಕರು, ಪವಾಡಗಳಲ್ಲಿ, ಮಾಯ-ಮಾಟ, ತಂತ್ರ ವಿದ್ಯೆಗಳಲ್ಲಿ ಪರಿಣಿತರಾಗಿರುತ್ತಾರೆ. ಪವಾಡಗಳು ಜನತೆಯ ಅಂತರಂಗದ ಹಂಬಲಕ್ಕೆ ಬೆಂಬಲ ಕೊಟ್ಟ ಅಭಿವ್ಯಕ್ತಿ. ಜನರಲ್ಲಿನ ಹಗಲು ಗನಸುಗಳಂತೆ ಸುಪ್ತ ಮನಸ್ಸಿನ ಆಸೆಗಳಂತೆ ಪವಾಡಗಳು ಸಂಭವಿಸುತ್ತವೆ. ಈ ಪವಾಡ ಶಕ್ತಿಯನ್ನು ಜನತೆಯ ಹಿತಕ್ಕೆ ಬಳಸುತ್ತಿದ್ದರು. ಈ ನಾಯಕರು ತಮ್ಮ ಪವಾಡಗಳಿಂದ ದುರ್ಬಲರ ಸಂಕಷ್ಟವನ್ನು ನಿವಾರಿಸುತ್ತಾರಲ್ಲದೆ ಹೆಣ್ಣು ಮಕ್ಕಳ ರಕ್ಷಣೆ ಮಾಡುವಲ್ಲಿ ಸಾಕಷ್ಟು ನೆರವಾಗುತ್ತಾರೆ. ಉದಾ: ಮಾದೇಶ್ವರ ಕಾವ್ಯದಲ್ಲಿ ತನಗೊಲಿದ ಸಂಕಮ್ಮನಿಗೆ ಮಕ್ಕಳ ಫಲಕೊಟ್ಟು, ಆಕೆಯ ಗಂಡ ಅವಳ ಶೀಲವನ್ನು ಶಂಕಿಸಿ ಅನೇಕ ದಿವ್ಯಗಳನ್ನು ಒಡ್ಡಿದಾಗ, ಮಾದೇಶ್ವರನ ಸಹಾಯದಿಂದ, ಮಾಡುವ ಎಲ್ಲಾ ಪವಾಡಗಳಿಂದ ಗೆದ್ದು ಬರುವುದು. ಮಂಟೇಸ್ವಾಮಿ ಕಾವ್ಯದಲ್ಲಿ ಸಿದ್ದಪ್ಪಾಜಿ, ಹಲಗೂರಿನ ಪಾಂಚಾಳ ದೊರೆಗಳು ಒಡ್ಡುವ ದಿವ್ಯಗಳೊಂದಿಗೆ ಸೆಣಸಿ ಗೆಲ್ಲುವುದು. ಜುಂಜಪ್ಪ ತನ್ನ ಸೋದರ ಮಾವಂದಿರನ್ನು ತಾನು ಸತ್ತ ಏಳು ದಿನಕ್ಕೆ ಎದ್ದು ಬಂದು ನಾಶಮಾಡುವುದನ್ನು ನಾವು ಕಾಣಬಹುದು. ಪವಾಡಗಳು ಪವಾಡ ಪುರುಷರ ಘನತೆಯನ್ನು ಉನ್ನತ ಮಟ್ಟಕ್ಕೇರಿಸುವುದಲ್ಲದೆ, ಅನೇಕರನ್ನು ತನ್ನ ಭಕ್ತರನ್ನಾಗಿಯೂ, ಒಕ್ಕಲನ್ನಾಗಿಯೂ ಪಡೆಯಲು ಸಹಕಾರಿಯಾಗುತ್ತದೆ. ಪವಾಡಗಳು ಜನಪದ ಮಹಾಕಾವ್ಯದ ಸಹಜ ಸರಣಿ. ಮಹದೇಶ್ವರ ಮತ್ತು ಮಂಟೇಸ್ವಾಮಿ ಕಾವ್ಯಗಳಲ್ಲಿ ಪವಾಡಗಳ ಸರಮಾಲೆಯನ್ನೇ ಕಾಣಬಹುದು.

ಕನ್ನಡ ಮೌಖಿಕ ಮಹಾಕಾವ್ಯಗಳಲ್ಲಿ ಮಹಾತ್ಮರ ಜನನ ಸಹಜವಾಗಿ ಆಗದೆ ಅಯೋನಿಜವಾಗಿಯೇ ಆಗುವುದು. ಅವರು ಗಂಡು, ಹೆಣ್ಣಿನ ಸಂಯೋಗದಿಂದ ಜನಿಸುವುದಿಲ್ಲ ಎಂಬುದು ಇಲ್ಲಿ ಮುಖ್ಯ. ಅಂದರೆ ಮಹಾತ್ಮರು ಸಾಮಾನ್ಯರ ಹಾಗೆ ತಾಯಿಯ ಜನನಾಂಗದ ಮೂಲಕ ಹೊರಬರುವುದು ಮೈಲಿಗೆ ಮತ್ತು ಅಶುಚಿಯಿಂದ ಕೂಡಿದುದು ಎಂದು ಭಾವಿಸಿರುವುದರಿಂದ, ಈ ರೀತಿಯ ಜನಪದರ ಆಶಯಗಳನ್ನು ಕಾಣಬಹುದು. ಜಗತ್ತಿನ ಎಲ್ಲ ಮಹಾಕಾವ್ಯಗಳಲ್ಲೂ ನಾಯಕನ ಹುಟ್ಟು ಎನ್ನುವುದು ದೊಡ್ಡ ವಿಚಾರವಾಗಿರುತ್ತದೆ. ಸಾಮಾನ್ಯವಾಗಿ ಈ ನಾಯಕನ ಹುಟ್ಟು ಹಾಗೂ ಸಾವು ವಿಶಿಷ್ಟ ರೀತಿಯದು. ಅವನು ಸಾಮಾನ್ಯರಂತೆ ಹುಟ್ಟದೆ ಅಸಮಾನ್ಯರಂತೆ ಸಾಯುತ್ತಾನೆ. ದೈವೀಕರಿಸಲ್ಪಟ್ಟ ನಾಯಕ ನಾಯಕಿಯರು ಅವರ ದೈವಾಂಶಕ್ಕೆ ತಕ್ಕಂತೆ ಆಯೋನಿಜರಾಗುತ್ತಾರೆ. ಮಾದೇಶ್ವರ ಹಾಗೂ ಜುಂಜಪ್ಪರು ಎಲ್ಲರೂ ಬರುವ ಮಾರ್ಗದಲ್ಲಿ ಧರೆಗೆ ಬರದೆ ತಾಯಂದಿರಿಗೆ ಮೊದಲೇ ತಿಳಿಸಿ, ಅವರ ಬೆನ್ನನ್ನು ಉಗುರಿನಿಂದ ಸೀಳಿಕೊಂಡು ಹೊರಬರುತ್ತಾರೆ. ಹೊರ ಬಂದ ನಂತರ ಬೆನ್ನನ್ನು ಮೊದಲಿದ್ದ ರೂಪಕ್ಕೆ ತರುತ್ತಾರೆ. 'ಸಿರಿ' ಅಡಿಕೆಯ ಹೊಂಬಾಳೆಯಲ್ಲಿ ಜನಿಸುತ್ತಾಳೆ.

ಜನಪದ ಮಹಾಕಾವ್ಯಗಳು ಇಂದು ಕರ್ನಾಟಕದಲ್ಲಿ ಜೀವಂತವಾಗಿರುವುದು ವೃತ್ತಿಗಾಯಕರಿಂದ. ವೃತ್ತಿಗಾಯಕರ ದೊಡ್ಡ ತಂಡಗಳನ್ನು ಪಡೆದ ಸಮೃದ್ಧ ನೆಲೆ ಕರ್ನಾಟಕ. ಡಾ.ದೇ.ಜವರೇಗೌಡರು ವೃತ್ತಿಗಾಯಕರು ಇಲ್ಲದಿದ್ದರೆ ಎಷ್ಟೋ ಮಹಾಕಾವ್ಯಗಳು ಕಾಲಗರ್ಭದಲ್ಲಿ ಹೂತು ಹೋಗುತ್ತಿದ್ದವು ಎನ್ನುತ್ತಾರೆ.

ಡಾ.ಜೀ.ಶಂ.ಪ.ರವರು ಕರ್ನಾಟಕದ ವೃತ್ತಿಗಾಯಕರ ಬಗ್ಗೆ ಅಪೂರ್ವ ಸಂಶೋಧನೆ ನಡೆಸಿ, ಅವರ ವಿವಿಧ ಸಂಪ್ರದಾಯಗಳನ್ನು ಮೊದಲು ಸ್ಪಷ್ಟವಾಗಿ ಗುರುತಿಸಿದವರು. ''ಈ ವೃತ್ತಿಗಾಯಕರನ್ನು ಸ್ಥೂಲವಾಗಿ

ಧಾರ್ಮಿಕ ಮತ್ತು ಲೌಕಿಕ ಕಥೋಪಜೀವಿಗಳೆಂದು ಎರಡು ಗುಂಪುಗಳಾಗಿ ವಿಂಗಡಿಸುವುದುಂಟು.''[೯] ''ಸಾಮಾನ್ಯವಾಗಿ ಸುದೀರ್ಘವಾದ ಕಾವ್ಯಗಳನ್ನು ಹಾಡುತ್ತಾ ತಲೆಮಾರಿನಿಂದ ತಲೆಮಾರಿಗೆ, ಆ ಕಾವ್ಯಗಳನ್ನು ಒಯ್ಯುತ್ತಾ ತಮ್ಮದೇ ಆದ ಹಾಡುಗಾರಿಕೆಯ ಸಂಪ್ರದಾಯವನ್ನೂ ಕಾವ್ಯ ಪರಂಪರೆಯನ್ನೂ ಹೊಂದಿರುವ ಗಾಯಕ ಸಮೂಹವೇ ವೃತ್ತಿಗಾಯಕರು.''[೧೦] ಇವರು ತಮ್ಮ ಕಲೆಯನ್ನೇ ಅವಲಂಬಿಸಿ ಬದುಕುವವರು. ಗಾಯನ ಕಲೆ ಅವರಿಗೆ ಗುರು ಮುಖದಿಂದಲೋ ಅಥವಾ ವಂಶ ಪಾರಂಪರ್ಯವಾಗಿ ಬಂದಿರುತ್ತದೆ. ವಿವಿಧ ಪರಂಪರೆಯ ವೃತ್ತಿಗಾಯಕರು ವೈವಿಧ್ಯಮಯ ವೇಷಭೂಷಣಗಳಿಂದ ಶೋಭಿತರಾಗಿ ದೇವರ ಪ್ರತಿನಿಧಿಯಂತೆ, ದೇವರ ಲಾಂಛನಗಳನ್ನು ಧರಿಸಿ ತಮ್ಮ ವಿಶಿಷ್ಟ ಸ್ವರೂಪದ ವಾದ್ಯಗಳೊಡನೆ ಜಾತ್ರೆ, ಉತ್ಸವಗಳಲ್ಲಿ ಹಬ್ಬ -ಹರಿದಿನಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ತಮ್ಮ ಅಧಿದೈವದ ಮಹಿಮೆಗಳನ್ನು ಹಾಡಿನ ರೂಪದಲ್ಲಿ ನಿರೂಪಿಸುತ್ತಾ ಗಾಯನ ಪರಂಪರೆಯನ್ನು ಎತ್ತಿ ಹಿಡಿಯುತ್ತಾ, ಜನತೆಯಲ್ಲಿ ಧರ್ಮ-ಶ್ರದ್ಧೆ, ಭಕ್ತಿ-ನಿಷ್ಠೆಗಳನ್ನು ಬೆಳೆಸುತ್ತಾರೆ. ಇವರನ್ನು ಆಯಾ ದೈವದ ಒಕ್ಕಲುಗಳು ಗೌರವಿಸುತ್ತಾರೆ. ತ್ಯಾಗಶೀಲತೆಯನ್ನು ಕಾಪಾಡಿಕೊಂಡು ಬರುವುದು ಇವರ ಉದ್ದೇಶ. ಒಂದೇ ಸ್ಥಳದಲ್ಲಿ ಹತ್ತಾರು ದಿನ ಬೇರೆ ಬೇರೆ ಕಥೆಗಳನ್ನು ಹಾಡುವಷ್ಟು ದೊಡ್ಡ ಕಣಜವೇ ಇವರ ಬಳಿ ಇರುತ್ತದೆ. ಭಾರತೀಯ ಜನಪದ ಮಹಾಕಾವ್ಯಗಳಿಗೆ ಸಂಬಂಧಿಸಿದ ವಿಶಿಷ್ಟ ಸಂಗತಿ ಎಂದರೆ, ಈ ಕಾವ್ಯಗಳ ಗಾಯಕ-ಗಾಯಕಿಯರು, ಅಧಿಕೃತ ಶ್ರೋತೃಗಳು, ಬಹುತೇಕ ಕಾವ್ಯಗಳ ನಾಯಕ-ನಾಯಕಿಯರು, ಭಾರತೀಯ ಸಮಾಜದಲ್ಲಿ ಅತೀವ ಶೋಷಣೆಗೆ ಒಳಗಾದ 'ಕೆಳ' ಜಾತಿಯ ದಲಿತರು. ಉದಾ: ಗಾಯಕರಾದ ದೇವರ ಗುಡ್ಡರು, ನೀಲಗಾರರು, ಕಾಡುಗೊಲ್ಲರು, ಗೊರವರು ಮುಂತಾದ ಸಮುದಾಯದವರು ಮತ್ತು ಈ ಕಾವ್ಯಗಳ ಅಧಿಕೃತ ಶ್ರೋತೃಗಳು- ಇವರೆಲ್ಲರೂ ಅನುಸೂಚಿತ ಜಾತಿ-ಜನಾಂಗಗಳಿಗೆ ಸೇರಿದವರು. ಹಾಗೆಯೇ ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ ಮುಂತಾದ ಕಾವ್ಯದ ನಾಯಕರೂ ಆಯಾ ಅನುಸೂಚಿತ ಜಾತಿ-ಜನಾಂಗಗಳಿಗೆ ಸೇರಿದವರು.

ಪ್ರತಿಯೊಂದು ಜನಪದ ಮಹಾಕಾವ್ಯವು ತನ್ನದೇ ಆದ ಒಂದು ನಿರ್ದಿಷ್ಟ ವಾದ್ಯ ಸಲಕರಣೆಯನ್ನು ಹೊಂದಿರುತ್ತದೆ. ಮಾದೇಶ್ವರ ಕಾವ್ಯವನ್ನು ಹಾಡುವ ದೇವರಗುಡ್ಡ ಗಾಯಕರು, 'ಕಂಸಾಳೆ' ಎಂಬ ಕಂಚಿನ ವಾದ್ಯವನ್ನೂ, ಚರ್ಮದಿಂದ ಮಾಡಿದ ಕಂಜರವನ್ನು ಬಳಸಿದರೆ, ಮಂಟೇಸ್ವಾಮಿ ಕಾವ್ಯವನ್ನು ಹಾಡುವ ನೀಲಗಾರರು ತಂಬೂರಿ, ಗಗ್ಗರಗಳನ್ನು ಬಳಸುತ್ತಾರೆ. 'ಜುಂಜಪ್ಪ' ಕಾವ್ಯ ಹಾಡುವ ಗಣೆಯವರು 'ಗಣೆ' (ಉದ್ದವಾದ ಕೊಳಲು)ಯನ್ನು ಬಳಸುತ್ತಾರೆ. 'ಮೈಲಾರಲಿಂಗ'ನ ಕಾವ್ಯವನ್ನು ಹಾಡುವ 'ಗೊರವರು' ಡಮರುಗ ಮತ್ತು ಕೊಳಲನ್ನು ಬಳಸಿದರೆ, ಸವದತ್ತಿ ಎಲ್ಲಮ್ಮನ ಕಾವ್ಯ ಹಾಡುವ ಚೌಡಿಕೆಯವರು, ಕೊಳಗಾಕಾರದ ತಂತಿವಾದ್ಯವಾದ 'ಚೌಡಿಕೆ'ಯನ್ನು ಹಿನ್ನೆಲೆ ವಾದ್ಯವಾಗಿ ಬಳಸುತ್ತಾರೆ. ಧಾರ್ಮಿಕ ಸಂಪ್ರದಾಯದವರಿಗೆ ಈ ವಾದ್ಯಗಳು ಪೂಜ್ಯವಸ್ತುಗಳು. ಮೌಖಿಕ ಮಹಾಕಾವ್ಯಗಳ ಗಾಯನ ಸಂದರ್ಭದಲ್ಲಿ ಸ್ತ್ರೀ ಮತ್ತು ಪುರುಷ ಇಬ್ಬರೂ ಭಾಗವಹಿಸಬಹುದು. ಇದು ಬರೀ ಹೆಂಗಸರಿಗಾಗಲಿ ಅಥವಾ ಗಂಡಸರಿಗಾಗಲಿ ಮೀಸಲಾದುದಲ್ಲ. ಸಾಮಾನ್ಯವಾಗಿ ಸೌದತ್ತಿ ಎಲ್ಲಮ್ಮ, ಕುಮಾರರಾಮನ ಕಾವ್ಯಗಳನ್ನು ಹೆಂಗಸರೇ ಹೆಚ್ಚಾಗಿ ಹಾಡುತ್ತಾರೆ. ಜುಂಜಪ್ಪನ ಕಾವ್ಯವನ್ನು ಸಹ ಸ್ತ್ರೀಯರು ಕೊಳಲು ಬಳಸದೆ ಸೋಬಾನ ಪದಗಳ ರೀತಿಯಲ್ಲಿ ಸುಶ್ರಾವ್ಯವಾಗಿ ಹಾಡುವುದುಂಟು.

ಪ್ರತಿಯೊಂದು ಮಹಾಕಾವ್ಯದಲ್ಲಿ ಒಬ್ಬೊಬ್ಬ ಸಾಂಸ್ಕೃತಿಕ ವೀರನಾಯಕನಾಗಿ ಅವನ ಭಕ್ತರ ಜನಮನವನ್ನು ಆಳಿರುವುದನ್ನು ಕಾಣಬಹುದು. ಕನ್ನಡದಲ್ಲಿ 'ಶ್ರೀಮಲೆಯಮಾದೇಶ್ವರ ಸ್ವಾಮಿ', 'ಮಂಟೇಸ್ವಾಮಿ', 'ಜುಂಜಪ್ಪ' ಮೊದಲಾದ ಜನಪದ ಮಹಾಕಾವ್ಯಗಳಿವೆ.

ಡಾ.ಎಚ್.ಜೆ.ಲಕ್ಕಪ್ಪಗೌಡರು ಮಹಾಕಾವ್ಯವನ್ನು 'ಮಹಾವಸ್ತು, ಮಹಾಶೈಲಿ, ಮಹಾಛಂದಸ್ಸು, ಮಹಾ ಚಿಂತನೆ, ಮಹಾಕಲ್ಪನೆ, ಮಹಾಪ್ರತಿಭೆ, ಮಹಾಸಂಸ್ಕೃತಿಗಳ ಅದ್ಭುತ ರಸಪಾಕವೇ ಮಹಾಕಾವ್ಯ' ಎಂದಿರುವುದು ಅರ್ಥಪೂರ್ಣವಾಗಿದೆ.

ಮೌಖಿಕ ಮಹಾಕಾವ್ಯದ ಬಗ್ಗೆ ಮೊದಲ ಚರ್ಚೆ ಕಂಡು ಬರುವುದು ಫಿನ್ಲೆಂಡಿನ ಜಾನಪದ ವಿದ್ವಾಂಸರಿಂದ. ಇವರ ಪ್ರಯತ್ನದ ಫಲ ಜಗತ್ತಿನ ಹಲವಾರು ದೇಶಗಳಲ್ಲಿ ಮಹಾಕಾವ್ಯಗಳ ಅಧ್ಯಯನಕ್ಕೆ ಪ್ರಚೋದನೆ ನೀಡಿ ಜನಪದ ಮಹಾಕಾವ್ಯಗಳ ಸಂಪಾದನೆ ಪ್ರಾರಂಭವಾಗಿ ತಮ್ಮ-ತಮ್ಮ ದೇಶಗಳಲ್ಲೂ ಜನಪದ ಮಹಾಕಾವ್ಯ ಗಳಿವೆ ಎಂಬುದನ್ನು ಶೋಧಿಸತೊಡಗಿದರು.

ಭಾರತದ ವಿವಿಧ ಭಾಷೆಗಳಲ್ಲಿ ಮೌಖಿಕ ಮಹಾಕಾವ್ಯದ ಬಗ್ಗೆ ನಡೆಸಿರುವ ಅಧ್ಯಯನಗಳನ್ನು ಅನುಲಕ್ಷಿಸಿ ಬ್ಲಾಕ್‌ಬರ್ನ್‌ರು "ಜನಪದ ಮಹಾಕಾವ್ಯ ಒಂದು ಜನಪದ ಗುಂಪಿನ ಸ್ವಯಂ ಪ್ರತಿಮೆ ಏನೆಂಬುದನ್ನು ತಿಳಿ ಸುತ್ತದೆ. ಆ ಗುಂಪಿನ ಇತಿಹಾಸದ ಯಾವುದೋ ಒತ್ತಡದ ಸ್ಥಿತಿಯಲ್ಲಿ ಹುಟ್ಟಿಕೊಂಡಿರಬೇಕು ಅಥವಾ ಒಂದು ವ್ಯವಸ್ಥೆಯಿಂದ ಇನ್ನೊಂದು ವ್ಯವಸ್ಥೆಗೆ ಆ ಸಮುದಾಯ ವರ್ಗಾವಣೆಗೊಳ್ಳುವ ಒತ್ತಡದ ಸಂಕ್ರಮಣಾವಸ್ಥೆಯಲ್ಲಿ ಈ ಮಹಾಕಾವ್ಯಗಳು ಹುಟ್ಟಿಕೊಳ್ಳುತ್ತವೆ. ಇಂದು ಜನಪದ ಮಹಾಕಾವ್ಯಗಳು ಹೆಚ್ಚಿನ ಮಹತ್ವ ಗಳಿಸಿಕೊಳ್ಳುತ್ತಿ ರುವುದಕ್ಕೆ ಈ ಅಂಶಗಳು ಪ್ರಮುಖ ಕಾರಣಗಳಾಗಿವೆ"[೧೧] ಎನ್ನುತ್ತಾರೆ.

ಪಾಶ್ಚಾತ್ಯ ದೇಶದ ಚರಿತ್ರೆಯಲ್ಲಿ ಅನೇಕ ಯೋಧರು ತಮ್ಮ ತಮ್ಮ ಚಕ್ರವರ್ತಿಗಳಿಗಾಗಿ ಹೋರಾಡಿ ಮಡಿದ ಕಥೆಗಳೇ ಮಹಾಕಾವ್ಯಗಳಾಗಿವೆ. ಮಹಾಕಾವ್ಯದ ಅಧ್ಯಯನ ಪ್ರಾರಂಭಿಸಿದ ಪಾಶ್ಚಾತ್ಯರು, ಅವರದೇ ಅಧ್ಯಯನ ಮಾದರಿಗಳಿಂದ ಭಾರತದ ಅನುಭಾವೀ ಕಥನಗಳನ್ನು ಅಭ್ಯಸಿಸಲಾಗುತ್ತಿದೆ. 'ಇಲ್ಲಿ ಆಯಾ ದೇಶದ ಅನುಭಾವೀ ಕಥನಗಳನ್ನು, ಒಳಗಿನ ಮನಸ್ಸಿನ ಸೂಕ್ಷ್ಮ ವಿಶ್ಲೇಷಣೆಯನ್ನು ಹಾಗೂ ಆ ದೇಶದಲ್ಲಿನ ಅಲಕ್ಷಿತ ಸಮುದಾಯಗಳ ಸಾಂಸ್ಕೃತಿಕ ಮನಸ್ಸಿನ ಅಗಾಧ ಕತ್ತಲ ಲೋಕವನ್ನು ಪರಿಗಣಿಸಿದ ಹಾಗೆ ಕಾಣುವುದಿಲ್ಲ ಎನ್ನುವ ಮೊಗಳ್ಳಿ ಗಣೇಶ್‌ರವರ ವಾದ ಸಮಂಜಸವಾದುದು. ನಮ್ಮ ಜನಪದ ದೈವಗಳು ಅವತರಿಸಿದ್ದು ನೀತಿ ಬೋಧನೆಗಾಗಿ, ಧರ್ಮಸ್ಥಾಪನೆಗಾಗಿ. ಪಾಶ್ಚಾತ್ಯರ ಮನಸ್ಸಿಗೆ ಮಂಟೇಸ್ವಾಮಿಯ ತಾತ್ವಿಕ ಹೊಯ್ದಾಟ, ಜುಂಜಪ್ಪನ ಸಾಂಸ್ಕೃತಿಕ ಸಂಕೀರ್ಣತೆಯ ಸ್ಪಷ್ಟ ಅರಿವು ದಕ್ಕಿರಲಾರದು. ಈ ನಾಯಕರದೇನಿದ್ದರೂ ತಾತ್ವಿಕ ಹೋರಾಟ. ಭಕ್ತರಾದವರನ್ನು ರಕ್ಷಿಸುವ ದುಷ್ಟರನ್ನು ನಿಗ್ರಹಿಸುವ, ದಲಿತರನ್ನು ಉದ್ಧಾರ ಮಾಡುವ, ದೂರ್ತರಿಗೆ ಪಾಠ ಕಲಿಸುವ ನಮ್ಮ ಕಥಾನಕಗಳಲ್ಲಿ, ರೊಲಂಡ್ ಬೋವೋಲ್ಫ್‌ತರಂತೆ, ಭಯಂಕರ ಯುದ್ಧ ಗಳನ್ನು ಮಾಡಿದವರು ಮಾದೇಶ್ವರ ಅಥವಾ ಮಂಟೇಸ್ವಾಮಿಗಳಲ್ಲ. ಆದಕಾರಣ ಕಥನದ ಒಳಗೆ ಬರುವ ಸಾಂಸ್ಕೃತಿಕ ತರ್ಕಗಳಿಂದಲೇ ಅವುಗಳನ್ನು ವಿವೇಚಿಸಿ ಅವುಗಳನ್ನು ಕಟ್ಟಿದ ಸಮುದಾಯಗಳ ಪ್ರತಿರೋಧದ ನೆಲೆಗಳನ್ನು ಶೋಧಿಸಿ, ಅದಕ್ಕೆ ರಾಜಕೀಯ ಶಕ್ತಿಯನ್ನು ತಂದುಕೊಡುವ ಅಧ್ಯಯನ ಕ್ರಮ ಅಗತ್ಯವಾಗಿದೆ ಎನ್ನುತ್ತಾರೆ ಡಾ.ಪುರುಷೋತ್ತಮ ಬಿಳಿಮಲೆಯವರು.

ಒಟ್ಟಿನಲ್ಲಿ ನಮ್ಮ ಜನರ ಪ್ರಸಕ್ತ ಬದುಕಿನ ಸ್ಥಿತಿಗತಿಗಳನ್ನು, ಒಟ್ಟು ಜೀವನ ಕ್ರಮವನ್ನು ಅರ್ಥೈಸುವ ರೀತಿಯಲ್ಲಿ ಜನಪದ ಮಹಾಕಾವ್ಯಗಳ ಅಧ್ಯಯನ ಸಾಗಬೇಕು.

ಭಾರತದಲ್ಲಿ ಜನಪದ ಮಹಾಕಾವ್ಯಗಳ ಶ್ರೀಮಂತವಾದ ನಿಧಿಯೇ ಇದೆ. ಮರಾಠಿಯಲ್ಲಿ 'ಖಂಡೋಬನ ಕಾವ್ಯ', ರಾಜಾಸ್ಥಾನದಲ್ಲಿ 'ದೇವನಾರಾಯಣ ಕಥಾ' ಉತ್ತರ ಭಾರತದಲ್ಲಿ 'ಪಾಬೂಜಿ' ಮೊದಲಾದ ಅನೇಕ ಜನಪದ ಮಹಾಕಾವ್ಯಗಳನ್ನು ಸಂಗ್ರಹಿಸಲಾಗಿದೆ.

ಕರ್ನಾಟಕದಲ್ಲಿ ಜಾನಪದ ಸಂಗ್ರಹ ಮತ್ತು ಅಧ್ಯಯನ ಕಾರ್ಯ ೧೯ನೆಯ ಶತಮಾನದ ಆದಿಯಲ್ಲಿಯೇ ಆರಂಭಗೊಂಡಿತು. ಪಾಶ್ಚಾತ್ಯರು ಕರ್ನಾಟಕ ಸಂಸ್ಕೃತಿಯ ಬಗ್ಗೆ ಅಪಾರ ಆಸಕ್ತಿಯಿಂದ ಕೆಲಸ ಮಾಡಿದರು.

ಕರ್ನಾಟಕದಲ್ಲಿ ಜನಪದ ಮಹಾಕಾವ್ಯಗಳ ಅಧ್ಯಯನದ ಬಗ್ಗೆ ಹೇಳುವುದಾದರೆ ಶ್ರೀ ಮತ್ತಿಘಟ್ಟ ಕೃಷ್ಣಮೂರ್ತಿಯವರ 'ಏಳುಕೊಳ್ಳದ ಎಲ್ಲಮ್ಮ' ಕೃತಿಯಲ್ಲಿ ಸವದತ್ತಿ ಎಲ್ಲಮ್ಮನ ಕಾವ್ಯ ಹಾಗೂ ಸಂಪ್ರದಾಯ ಗಳ ಬಗ್ಗೆ ಪ್ರಸ್ತಾಪವಿದೆ. ಸುಮಾರು ೧೯೫೦ರವರೆಗೂ ಶ್ರೀಯುತರನ್ನು ಹೊರತುಪಡಿಸಿ ಬೇರೆ ಯಾರೂ ಜನಪದ ಅಧ್ಯಯನವನ್ನು ತಮ್ಮ ಪೂರ್ಣಕಾಲದ ಅಧ್ಯಯನವನ್ನಾಗಿಸಿಕೊಳ್ಳಲಿಲ್ಲ. ಕರ್ನಾಟಕ ವಿಶ್ವ ವಿದ್ಯಾಲಯ ಮೊಟ್ಟ ಮೊದಲ ಬಾರಿಗೆ ಡಾ.ಗದ್ದಗೀಮಠರು 'ಕನ್ನಡ ಜನಪದ ಗೀತೆಗಳ' ಬಗ್ಗೆ ಸಲ್ಲಿಸಿದ ಮಹಾಪ್ರಬಂಧಕ್ಕೆ ೧೯೫೫ರಲ್ಲಿ ಪಿಎಚ್.ಡಿ ಪದವಿ ನೀಡಿದೆ. ಆ ಕಾಲಕ್ಕೆ ಡಾ.ಬಿ.ಎಸ್.ಗದ್ದಗೀಮಠರವರು ಉತ್ತರ ಕರ್ನಾಟಕದ ಎಲ್ಲ ಜನಪದ ಸಂಪ್ರದಾಯಗಳ ಬಗ್ಗೆ, ಕಾವ್ಯ ಸಂಪ್ರದಾಯಗಳ ಬಗ್ಗೆ, ಅಧಿಕಾರ ವಾಣಿಯಿಂದ ಮಾತನಾಡುವ ಸಾಮರ್ಥ್ಯವನ್ನು ಹೊಂದಿದ್ದ ಏಕಮಾತ್ರ ವಿದ್ವಾಂಸರಾಗಿದ್ದರು. ಡಾ. ಜೀ.ಶಂ. ಪರಮಶಿವಯ್ಯರವರು ಜಾನಪದ ಕ್ಷೇತ್ರದ ಅತ್ಯಂತ ಮಹತ್ವದ 'ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು' ಪಿಎಚ್.ಡಿ. ಗ್ರಂಥದಲ್ಲಿ 'ಮಲೆಯಮಾದೇಶ್ವರ', 'ಮಂಟೇಸ್ವಾಮಿ', 'ಜುಂಜಪ್ಪ', 'ಮೈಲಾರಲಿಂಗ', 'ಸವದತ್ತಿ ಎಲ್ಲಮ್ಮ'- ಕಾವ್ಯಗಳ ಬಗೆಗೆ ಸಂಶೋಧನಾತ್ಮಕ ಅಧ್ಯಯನ ನಡೆಸಿ ಕರ್ನಾಟಕದಲ್ಲಿ ಜನಪದ ಮಹಾಕಾವ್ಯಗಳ ಅಧ್ಯಯನಕ್ಕೆ ನಾಂದಿ ಹಾಡಿದ್ದಾರೆ ಎನ್ನಬಹುದು.

೧೯೩೦ರ ದಶಕದಲ್ಲಿ ಕನ್ನಡದ ಜನಪದ ಸಾಹಿತ್ಯಕ್ಕೆ ಶ್ರೀಮಂತಿಕೆಯನ್ನು ತಂದ ಮಹತ್ವ ಹಲಸಂಗಿ ಗೆಳೆಯರದು. ಇವರ 'ಗರತಿಯ ಹಾಡು' ಕನ್ನಡದ ಪ್ರಪ್ರಥಮ ಜನಪದ ಕಾವ್ಯ ಸಂಕಲನವಾಗಿದ್ದು, ಗುಣದ ದೃಷ್ಟಿಯಿಂದ ಇಂದಿಗೂ ಮಹತ್ವದ ಸಂಕಲನವಾಗಿದೆ. ಜನಪದ ಕಾವ್ಯಗಳ ಹಾಗೂ ಗೀತೆಗಳ ಅಧ್ಯಯನದಲ್ಲಿ ೧೯೬೫ರ ವರೆಗಿನ ಸಾಧನೆ ಶಿಖರಪ್ರಾಯವಾದದ್ದು. ಕಾವ್ಯಗಳನ್ನು ಹಾಗೂ ಕಾವ್ಯ ಸಂಪ್ರದಾಯಗಳನ್ನು ಪರಿಚಯಿಸುವ ಅಪೂರ್ವ ಲೇಖನಗಳು ಮೇಲಿಂದ ಮೇಲೆ ಪ್ರಕಟವಾಗತೊಡಗಿದವು. ಕನ್ನಡ ಜನಪದ ಕಾವ್ಯಲೋಕ ವಿಸ್ತಾರವಾಯಿತು. ಕಾಳಿಂಗರಾಯ, ಮೈಲಾರಲಿಂಗ, ಜುಂಜಪ್ಪನ ಕಾವ್ಯ, ಮಂಟೇಸ್ವಾಮಿ ಕಾವ್ಯ, ಮಲೆಯಮಾದೇಶ್ವರ ಕಾವ್ಯ, ಶಿವ, ಗಿರಿಜೆ, ಗಿರಿಜಾ ಕಲ್ಯಾಣ, ಚಾಮುಂಡಿ ಪುರಾಣ, ಈರೋಬಿ, ಉತ್ತರದೇವಿ ಮುಂತಾಗಿ ಅಪಾರ ಸಂಖ್ಯೆಯ ಕಾವ್ಯಗಳು ಗುರುತಿಸಲ್ಪಟ್ಟು, ಸಂಗ್ರಹ ಕಾರ್ಯವೂ ನಡೆಯಿತು. ಅಲ್ಲಲ್ಲಿ ಕೆಲವು ಸಂಕಲನ ರೂಪದಲ್ಲಿ ಲೇಖನ ರೂಪದಲ್ಲಿ ಪ್ರಕಟಗೊಂಡವು. ಜನಪದ ಕಾವ್ಯಗಳ ವಿಪುಲ ಸಂಪತ್ತು ಆಶ್ಚರ್ಯಕರ ರೀತಿಯಲ್ಲಿ ಗೋಚರಿಸಿ, ಎಲ್ಲರ ದೃಷ್ಟಿಯೂ ಹರಿಯಲು ಪ್ರೇರಕವಾಯಿತು.

ಜಾನಪದ ಅಧ್ಯಯನ ಇತಿಹಾಸದಲ್ಲಿ ೧೯೬೦ರಿಂದ ಈಚಿನ ದಿನಗಳು ಹೊಸ ಆಯಾಮವನ್ನು ಕಂಡವು. ಜಾನಪದದ ಸಮಸ್ತ ಶಾಖೆಗಳ ಕಡೆ ವಿದ್ವಾಂಸರ ಆಸಕ್ತಿ ಹರಿದಾಡಿದವು.

ಕನ್ನಡದಲ್ಲಿ ಜಾನಪದಕ್ಕೆ ಸಂಬಂಧಿಸಿದ ಗ್ರಂಥಗಳು ಸಾವಿರಕ್ಕೂ ಮಿಗಿಲಾಗಿ ಪ್ರಕಟವಾಗಿದ್ದು, ಅವುಗಳಲ್ಲಿ ಹೆಚ್ಚಿನ ಕೃತಿಗಳು ಜನಪದ ಕಾವ್ಯಗಳಿಗೆ ಸಂಬಂಧಿಸಿವೆ. ಮಹಾಕಾವ್ಯಗಳು ಮತ್ತು ಪುರಾಣಗಳ ಬಗ್ಗೆ ಡಾ.ಪಿ.ಕೆ.ರಾಜಶೇಖರ ಮತ್ತು ರಾಮೇಗೌಡ, ಡಾ.ತೀ.ನಂ.ಶಂಕರನಾರಾಯಣ, ಡಾ.ವಾಮನ ನಂದಾವರರು, ತಂಬಂಡ ವಿಜಯ ಪೂಣಚ್ಚ ಅಧ್ಯಯನ ಮಾಡಿದ್ದಾರೆ. ಪ್ರೊ.ಎ.ವಿ.ನಾವಡ ಮತ್ತು ಡಾ.ಗಾಯತ್ರಿ ನಾವಡ ಅವರ ಕಾಡ್ಯನಾಟ ಕನ್ನಡ ಹಾಗೂ ಇಂಗ್ಲಿಷ್ ಆವೃತ್ತಿಗಳಲ್ಲಿ ಪ್ರಕಟವಾಗಿದ್ದು, ಈ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯಾಗಿದೆ. ಸ್ತ್ರೀವಾದಿ ನಿಲುವಿನಿಂದ ಡಾ.ಗಾಯತ್ರಿ ನಾವಡ, ಡಾ.ಕೆ.ಆರ್.ಸಂಧ್ಯಾರೆಡ್ಡಿ ಮೌಲಿಕ ಅಧ್ಯಯನ ಮಾಡಿದ್ದಾರೆ.

ಡಾ.ಪಿ.ಕೆ.ರಾಜಶೇಖರರವರು 'ಮಲೆಯಮಾದೇಶ್ವರ' ಮಹಾಕಾವ್ಯದ ಎರಡು ಬೃಹತ್ ಸಂಪುಟವನ್ನು ಸಂಪಾದಿಸಿರುವುದಲ್ಲದೆ ಅದಕ್ಕೆ ಅವರು ಬರೆದಿರುವ ಪ್ರಸ್ತಾವನೆ ಅತ್ಯಂತ ಮಹತ್ವದಾಗಿದ್ದು ಹಲವಾರು ಮೂಲಭೂತ ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ. ರಾಗೌ ಇತರರೊಂದಿಗೆ ಸೇರಿ ಸಂಗ್ರಹಿಸಿ ಸಂಪಾದಿಸಿರುವ 'ಜನಪದ ರಾಮಾಯಣ', 'ಜನಪದ ಬಸವಪುರಾಣ' ಸಂಪುಟಗಳು ಹಾಗೂ ಡಾ.ತೀ.ನಂ.ಶಂಕರನಾರಾಯಣ ರವರ 'ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು' ಎಂಬ ವಿಷಯದ ಬಗೆಗಿನ ಮಹಾಪ್ರಬಂಧ ಕೃತಿ ಅಧ್ಯಯನ ಯೋಗ್ಯವಾಗಿವೆ. ಡಾ.ಚಕ್ಕೆರೆ ಶಿವಶಂಕರ್‌ರವರು ಸಂಪಾದಿಸಿ ಪ್ರಕಟಿಸಿರುವ 'ಕೋರಣ್ಯ ನೀಡವ್ವ ಕೋಡುಗಲ್ಲಯ್ಯನಿಗೆ' (೧೯೮೨) 'ಮೈಲಾರಲಿಂಗನ ಕಾವ್ಯ', ಡಾ.ಸ್ವಾಮಿಯವರು ಸಂಪಾದಿಸಿ ಪ್ರಕಟಿಸಿರುವ 'ಮಲೆಯಮಾದೇಶ್ವರ' ಜಾನಪದ ಮಹಾಕಾವ್ಯ. ಡಾ.ವೀರಣ್ಣದಂಡೆಯವರು ಸಂಪಾದಿಸಿ ಕನ್ನಡ ಪುಸ್ತಕ ಪ್ರಾಧಿಕಾರ ೨೦೦೦ರಲ್ಲಿ ಪ್ರಕಟಿಸಿರುವ 'ಜಾನಪದ ಹಾಲುಮತ ಮಹಾಕಾವ್ಯ' ಎಂಬ ಬೃಹತ್ ಕೃತಿ ಒಂದು ಮಹತ್ವದ ಕಾಣಿಕೆ. ಜಾನಪದ ಅಧ್ಯಯನಕ್ಕೆ ಹಾಗೂ ಜಾನಪದ ಮಹಾಕಾವ್ಯಗಳ ಸಂಗ್ರಹಣೆ ಮತ್ತು ಪ್ರಕಟಣೆಗಳಿಗೆ ಮೈಸೂರು ವಿಶ್ವವಿದ್ಯಾನಿಲಯ, ಕರ್ನಾಟಕ ವಿಶ್ವವಿದ್ಯಾಲಯ, ಕುವೆಂಪು ವಿಶ್ವವಿದ್ಯಾಲಯ, ಗುಲಬರ್ಗಾ ಮತ್ತು ಮಂಗಳೂರು ವಿಶ್ವವಿದ್ಯಾಲಯಗಳು ಹೆಚ್ಚಿನ ಒತ್ತನ್ನು ನೀಡಿವೆ. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕರ್ನಾಟಕ ಜಾನಪದ ಟ್ರಸ್ಟ್, ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಸಾಹಿತ್ಯ ಅಕಾಡೆಮಿ ಮತ್ತು ಕನ್ನಡ ಪುಸ್ತಕ ಪ್ರಾಧಿಕಾರ ಮುಂತಾದವುಗಳ ಕೊಡಗೆ ಅಪಾರವಾದುದು. ಕರ್ನಾಟಕ ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರ ಉಡುಪಿ ತುಂಬಾ ಸ್ತುತ್ಯವಾದ ಕೆಲಸ ನಿರ್ವಹಿಸುತ್ತಿದೆ. ತುಳು ಜಾನಪದ ಮಹಾಕಾವ್ಯಕ್ಕೆ ಪ್ರೊ. ಪೀಟರ್ ಜೆ.ಕ್ಲಾಸ್, ಆಲನ್ ಡಂಡಸ್ ರವರುಗಳ ಕೊಡುಗೆ ಮಹತ್ವಪೂರ್ಣ ವಾದುದು ಎಂದು ಹೇಳಬಹುದು.

ಕನ್ನಡ ವಿಶ್ವವಿದ್ಯಾಲಯ ಜನಪದ ಮಹಾಕಾವ್ಯಗಳ ಬಗ್ಗೆ ಒಂದು ಅಧ್ಯಯನ ಯೋಜನೆಯನ್ನು ಹಾಕಿ ಕೊಂಡಿದ್ದು, ಬುಡಕಟ್ಟು ವಿಭಾಗದ ಮಹಾಕಾವ್ಯ ಮಾಲೆಯಡಿ, ಅನೇಕ ಜನಪದ ಕಾವ್ಯಗಳ ಸಂಗ್ರಹ-ಸಂಪಾದನ ಕಾರ್ಯವನ್ನು ಪ್ರಸಾರಾಂಗದ ಮೂಲಕ ಮಾಡುತ್ತಿದ್ದು ಇದುವರೆವಿಗೂ ಈ ಕೆಳಕಂಡವರು ಸಂಗ್ರಹಿಸಿ, ಸಂಪಾದಿಸಿದ ಕಾವ್ಯಗಳನ್ನು ಪ್ರಕಟಿಸಿದೆ.

ಪ್ರೊ.ಹಿ.ಚಿ.ಬೋರಲಿಂಗಯ್ಯರವರ 'ಮಂಟೇಸ್ವಾಮಿ' (೧೯೯೭), ಚಲುವರಾಜುರವರ 'ಜುಂಜಪ್ಪ' (೧೯೯೭), ಡಾ.ಕೇಶವನ್ ಪ್ರಸಾದ್‌ರವರ 'ಮಲೆಯಮಾದೇಶ್ವರ' (೧೯೯೭), ಡಾ.ಕೆ.ಎಂ.ಮೈತ್ರಿರವರ 'ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ' (೧೯೯೭) ರಲ್ಲಿ ಪ್ರಕಟವಾಗಿವೆ. ಇದೇ ಮಾಲೆಯಡಿ ೧೯೯೯ರಲ್ಲಿ ಪ್ರೊ.ಎ.ವಿ.ನಾವಡ ಅವರು ಸಂಗ್ರಹಿಸಿದ ಸಿರಿಪಾಡ್ದನ, ಪ್ರೊ.ಹಿ.ಚಿ.ಬೋರಲಿಂಗಯ್ಯರವರು ಸಂಗ್ರಹಿಸಿದ 'ಗೊಂಡರ ರಾಮಾಯಣ' (೧೯೯೯), ಎ.ಎಸ್.ಪ್ರಭಾಕರ್ ರವರು ಸಂಗ್ರಹಿಸಿದ 'ಮ್ಯಾಸಬೇಡರ ಕಥನಗಳು' (೧೯೯೯), ಗಂಗಾಧರ ದೈವಜ್ಞರವರು ಸಂಗ್ರಹಿಸಿದ 'ಮಾಳಿಂಗರಾಯನ ಕಾವ್ಯ' (೧೯೯೯), ಡಾ.ಕೆ.ಎಂ.ಮೈತ್ರಿ ಅವರಿಂದ ಸಂಪಾದಿತವಾದ 'ಕೃಷ್ಣಗೊಲ್ಲರ ಕಥನಗಳು' (೨೦೦೦) ಪ್ರಕಟಗೊಂಡಿವೆ. ಜಾನಪದ ವಿಭಾಗದಿಂದ ಡಾ.ಮಂಜುನಾಥ ಬೇವಿನಕಟ್ಟಿಯವರು ಸಂಪಾದಿಸಿದ 'ಮೈಲಾರಲಿಂಗನ ಕಾವ್ಯ' (೧೯೯೯), ಡಾ. ಸ.ಚಿ.ರಮೇಶ್ ರವರು ಸಂಗ್ರಹಿಸಿದ 'ಸ್ಯಾಸಿ ಚಿನ್ನಮ್ಮ' (೧೯೯೯) ಕಾವ್ಯಗಳು ಪ್ರಕಟಗೊಂಡಿವೆ. ಪ್ರೊ. ಅಮೃತ ಸೋಮೇಶ್ವರರವರು ಸಂಪಾದಿಸಿರುವ 'ತುಳು ಪಾಡ್ದನ ಸಂಪುಟ'(೧೯೯೭)ವನ್ನು ಪ್ರಸಾರಾಂಗ ಪ್ರಕಟಿಸಿದೆ. ಡಾ.ವೆಂಕಟೇಶ್ ಇಂದ್ವಾಡಿಯವರು ರಚಿಸಿದ 'ಮಂಟೇಸ್ವಾಮಿ ಪರಂಪರೆ' ಕೃತಿ ವಚನ ಪರಂಪರೆಗೆ ತನ್ನದೇ ಆದ ವಿಶಿಷ್ಟತೆಯನ್ನು ಸೃಷ್ಟಿಸುತ್ತದೆ. ವಚನ ಪರಂಪರೆ ಲಿಖಿತ ದಾಖಲೆಗಳನ್ನು ಆಕರ ಮಾಡಿಕೊಂಡು ತನ್ನ ತಾತ್ವಿಕತೆಯನ್ನು ಮಂಡಿಸಿದರೆ, ಅಲಿಖಿತ ಅಂಶಗಳನ್ನು ಆಕರ ಮಾಡಿಕೊಂಡು ತನ್ನ ವಿಶಿಷ್ಟ ಮೌಲ್ಯಗಳನ್ನು ಹಿಡಿದಿಟ್ಟುಕೊಂಡು ಭಿನ್ನವಾದ ವಿಚಾರಧಾರೆಯನ್ನು ಹೊರಸೂಸುತ್ತದೆ ಎನ್ನುತ್ತಾರೆ ಡಾ.ಹೆಚ್.ಕೆ.ನಾಗೇಶ್ ರವರು.

ಕನ್ನಡ ವಿಶ್ವವಿದ್ಯಾಲಯದ ಸಾಹಿತ್ಯ ವಿಭಾಗ ಜನಪದ ಮಹಾಕಾವ್ಯಗಳ ವಿಮರ್ಶಾಕಾರ್ಯವನ್ನು ಕೈಕೊಂಡಿದೆ. ಡಾ.ಸ.ಚಿ.ರಮೇಶ್‌ರವರು ಸಂಗ್ರಹಿಸಿರುವ 'ಮಾರ್ವಾಡಿಶೇಠ್', ಡಾ.ಮಂಜುನಾಥ ಬೇವಿನಕಟ್ಟಿ ಯವರು ಸಂಗ್ರಹಿಸಿರುವ 'ಬಲಿ ಚಕ್ರವರ್ತಿ', 'ಬಾಲನಾಗಮ್ಮ' ಕಾವ್ಯಗಳು ಹಾಗೂ ಈವರೆಗೆ ಮಹಾಕಾವ್ಯಗಳ ಬಗ್ಗೆ ನಡೆದ ಸಂಶೋಧನೆಗಳು ಪ್ರಕಟಗೊಂಡಾಗ ಕನ್ನಡದಲ್ಲಿ ಜನಪದ ಮಹಾಕಾವ್ಯಗಳ ಬಗ್ಗೆ ಒಂದು ಸ್ಪಷ್ಟವಾದ ಚಿತ್ರಣ ಮಾಡಲು ಸಾಧ್ಯವಾಗುತ್ತದೆ.

ಕರ್ನಾಟಕದ ಇತಿಹಾಸ ಪುನರ್‌ರಚನೆಗೆ ಉತ್ತಮ ಆಕರಗಳಾದ ಐತಿಹ್ಯಗಳು, ಐತಿಹಾಸಿಕ ಲಾವಣಿಗಳು, ಖಂಡಕಾವ್ಯಗಳು ಮತ್ತು ಜನಪದ ಮಹಾಕಾವ್ಯಗಳು ಇತ್ಯಾದಿಗಳನ್ನು ಬಳಸಿಕೊಂಡು ಅನೇಕ ಜನಪದ ವಿದ್ವಾಂಸರು ಕೆಲಸ ಮಾಡಿದ್ದಾರೆ ಹಾಗೂ ಮಾಡುತ್ತಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಕನ್ನಡದಲ್ಲಿ ಜಾನಪದ ಮಹಾಕಾವ್ಯಗಳ ಅಧ್ಯಯನಗಳು ಹೆಚ್ಚು ಹೆಚ್ಚು ಪ್ರಬುದ್ಧವಾದ ನೆಲೆಗಳಲ್ಲಿ ನಡೆಯುತ್ತಿದೆ ಎನ್ನುವುದು ಹೆಮ್ಮೆಯ ಸಂಗತಿ.

## ೨.೨. ಕನ್ನಡದ ಪ್ರಮುಖ ಜನಪದ ಮಹಾಕಾವ್ಯಗಳ ಸಮೀಕ್ಷೆ

### ೨.೨.೧. ಮಲೆಯಮಾದೇಶ್ವರ

ಮಲೆಯಮಾದೇಶ್ವರ ಕಾವ್ಯ ಸುಂದರ ಕಥೆಗಳ ಗುಚ್ಛ. ಕರ್ನಾಟಕದಲ್ಲಿ ಕಂಸಾಳೆಯವರು ಹಾಡುವ 'ಮಲೆಯಮಾದೇಶ್ವರ ಕಾವ್ಯ' ಹಾಗೂ ನೀಲಗಾರರು ಹಾಡುವ 'ಮಂಟೇಸ್ವಾಮಿ' ಕಾವ್ಯಗಳೆರಡೂ ಅದ್ಭುತ ಕಥಾಗುಚ್ಛಗಳ ಸುಂದರ ಸರಮಾಲೆಗಳು. ಮಾದೇಶ್ವರ ಕರ್ನಾಟಕದ ಜನಪದ ಮಹಾಕಾವ್ಯಗಳ ಸಾಲಿನಲ್ಲಿ ಅತ್ಯಂತ ಶ್ರೇಷ್ಠವಾದ ಜನಪದ ಮಹಾಕಾವ್ಯ. ಕಾವ್ಯದ ಬೃಹತ್ತಿನಲ್ಲಿ ಹಾಗೂ ವ್ಯಾಪಕತೆಯಿಂದ ಮಲೆಯ ಮಾದೇಶ್ವರ ಕಾವ್ಯ ಮಂಟೇಸ್ವಾಮಿ ಕಾವ್ಯಕ್ಕಿಂತ ದೊಡ್ಡದು.

'ಮಲೆಯಮಾದೇಶ್ವರ ಒಬ್ಬ ಸಾಂಸ್ಕೃತಿಕ ಯೋಧನಾಗಿದ್ದು, ದಕ್ಷಿಣ ಕರ್ನಾಟಕ ಪ್ರದೇಶದ ಸಾಂಸ್ಕೃತಿಕ ಸಾಮ್ರಾಜ್ಯದ ಅಧಿಪತಿ. ಉತ್ತರದೇಶದಲ್ಲೆಲ್ಲೋ ಹುಟ್ಟಿ ಕತ್ತಲ ರಾಜ್ಯದಲ್ಲಿ ಬೆಳೆದು, ಕರ್ನಾಟಕದ ಚಾಮರಾಜ ನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನಲ್ಲಿನ ಕಾವೇರಿನದಿ ಆಚೆಗಿನ ಕರ್ನಾಟಕ ಮತ್ತು ತಮಿಳುನಾಡು ಗಡಿಪ್ರದೇಶದ ವಿಸ್ತಾರ ಮಲೆಸಾಲುಗಳಲ್ಲಿನ ನಡುಮಲೆಯಲ್ಲಿ ನಿಂತ ಮಾದಯ್ಯನ ಧಾರ್ಮಿಕ ಕಥೆಯನ್ನು ಅವನ ಭಕ್ತರಾದ ದೇವರಗುಡ್ಡರು ಕಂಠಸ್ಥ ಮಾಡಿಕೊಂಡು ಹತ್ತಾರು ರಾತ್ರಿಗಳು ಸವಿಸ್ತಾರವಾಗಿ ಹಾಡುತ್ತಾ, ಕೇಳುಗರನ್ನು ಮೈಮರೆಸುತ್ತಾ ಪ್ರಸಾರ ಮಾಡುತ್ತಾರೆ.'

ಮಾದೇಶ್ವರ ಕರ್ನಾಟಕದಲ್ಲಿ ಬಹು ಜನಪ್ರಿಯವಾದ ಆರಾಧ್ಯ ವ್ಯಕ್ತಿ ಹಾಗೂ ಐತಿಹಾಸಿಕ ವ್ಯಕ್ತಿ. ಈತ ಹಿಂದುಳಿದ ಸಮಾಜದ ಧಾರ್ಮಿಕ ಪುರುಷ, ಮಹಾನ್ ಸಾಧಕ. ತನ್ನ ಬುದ್ಧಿವಂತಿಕೆ ಮತ್ತು ಮಹತ್ವಾಕಾಂಕ್ಷೆಯ ಸಾಹಸ ಪ್ರಿಯತೆಯಿಂದ ಅಸಾಧಾರಣ ಪವಾಡಗಳಿಂದ ಮೆರೆದು, ದುಷ್ಟರನ್ನೂ ಅಧರ್ಮಿಗಳನ್ನು ಶಿಕ್ಷಿಸಿ, ಭಕ್ತರನ್ನು ರಕ್ಷಿಸಿ, ದಾನಿಗಳನ್ನು-ಧರ್ಮಿಗಳನ್ನೂ ಉದ್ಧರಿಸುತ್ತಾ, ಅಧರ್ಮವನ್ನು ತುಳಿದು, ಧರ್ಮಸ್ಥಾಪನೆ ಮಾಡುತ್ತಾ ತನ್ನ ವಿವಿಧ ಬಗೆಯ ಮಹಿಮೆಗಳನ್ನು ತೋರುತ್ತಾ, ಒಕ್ಕಲನ್ನು ಸಂಪಾದಿಸುತ್ತಾ ಒಂದು ಪಂಗಡ ವನ್ನು ಹುಟ್ಟುಹಾಕಿದ ಮಹಿಮಾನ್ವಿತ. ಈ ಜನಸಮೂಹ 'ಮಾದೇಶ್ವರ ಒಕ್ಕಲುಗಳು'. ಹೀಗೆ ಒಂದು ಜನ ಸಮುದಾಯದ ಧಾರ್ಮಿಕ ವೀರನಾಗಿ ಬೆಳೆದುದ್ದನ್ನು ಕಾವ್ಯ ಅತಿ ಸೊಗಸಾಗಿ ಚಿತ್ರಿಸುತ್ತದೆ.

ಹನ್ನೆರಡನೆಯ ಶತಮಾನದಲ್ಲಿನ ಬಸವಯುಗದ ಶರಣರು, ವೃತ್ತಿ-ಜಾತಿಗಳ ನಡುವಿನ ಸಂಪ್ರದಾಯಿಕ ಸಂಬಂಧವನ್ನು ಕಳಚುವುದರ ಮೂಲಕ ವರ್ಣಾಶ್ರಮ ಪದ್ಧತಿಗೆ ಪೆಟ್ಟುಹಾಕಿ, ಮೇಲು-ಕೀಳು, ಬಡವ-ಬಲ್ಲಿದ ಎಂಬ ಭೇದವನ್ನು ತೊಡೆದುಹಾಕಿ ಕಾಯಕದಿಂದ ದಾಸೋಹ ಮಾಡಿದರೆ ಸಾಮಾಜಿಕ ಸಾಮರಸ್ಯ, ಸ್ವಾಸ್ಥ್ಯ ನೆಲೆಗೊಳ್ಳುವುದೆಂಬ ಅಂಶಗಳನ್ನು ಕಾಯಕ ತತ್ವದಲ್ಲಿ ಅಳವಡಿಸಿ, ಅತ್ಯದ್ಭುತ ರೀತಿಯಲ್ಲಿ ಸಾಮಾಜಿಕ ಮೌಲ್ಯಗಳನ್ನು ಎತ್ತಿಹಿಡಿದು, ಜನಸಾಮಾನ್ಯರ ಸ್ವಾಭಿಮಾನಕ್ಕೆ ಕೆಳವರ್ಗದ ಜನರ ಆತ್ಮವಿಶ್ವಾಸಕ್ಕೆ ಹೊಸ ಬೆಳಕನ್ನು ನೀಡಿ, ಉತ್ಕೃಷ್ಟ ಕಾವ್ಯ ರಚನೆಗೂ ಕಾರಣರಾದರು. ಲಕ್ಷಾಂತರ ಜನ ಆ ಕಡೆಗೆ ಆಕರ್ಷಿತರಾದರು. ಆದರೆ ಇದು ಇವರ ತಾತ್ಕಾಲಿಕ ಯಶಸ್ಸಾಯಿತು.

(ಹನ್ನೆರಡನೇ ಶತಮಾನದ ಶರಣರ ಚಳುವಳಿ ಅಲ್ಲಿ ನಡೆದ ವರ್ಣಸಂಕರ ಆ ಮೂಲಕ ಆಶಿಸಲಾಗಿದ್ದ ಕೆಳಜಾತಿಗಳ ಒಗ್ಗಟ್ಟು ಅನೇಕ ಆಂದೋಲನಗಳ ಕಾರಣ ವಿಫಲವಾದ ನಂತರ, ಕರ್ನಾಟಕ ಸಾಂಸ್ಕೃತಿಕ

ಇತಿಹಾಸದಲ್ಲಿ ಕದಡಿದ ವಾತಾವರಣ ತಲೆದೋರಿತು. ಬಸವಣ್ಣ, ಅಲ್ಲಮ, ಚನ್ನಬಸವಣ್ಣ, ಹರಳಯ್ಯ, ಕಕ್ಕಯ್ಯಾದಿಗಳ ನಂತರ ಮೇಲುವರ್ಗಗಳಿಗೆ ಸೇರಿದ ಶರಣರ ಗುಂಪು ಆ ಕಾಲಕ್ಕೆ ಅತ್ಯಂತ ಪ್ರಗತಿ ಪರವಾಗಿದ್ದು, ಕ್ರಮೇಣ ಒಂದು ಜಾತಿಯಾಗಿ ಮಾರ್ಪಟ್ಟು ಕೆಲವು ಕಟ್ಟುಪಾಡುಗಳನ್ನು ವಿಧಿಸಿಕೊಂಡು ತನ್ನ ಕಂದಕವನ್ನು ತಾನೇ ತೋಡಿಕೊಳ್ಳತೊಡಗಿದಾಗ ಇದರಿಂದ ಬೇಸತ್ತ ಕೆಳವರ್ಗದ ಕೆಲವು ನಾಯಕರು ಆ ಒಕ್ಕೂಟದಿಂದ ಹೊರಬಂದಿರಬಹುದು. ಹೀಗಾಗಿ ಕೆಳವರ್ಗದ ಜನ ನಿರಾಶರಾಗಿ ತಮ್ಮ ತಮ್ಮ ದಾರಿಗಳನ್ನು ಹಿಡಿದರೆನ್ನ ಬಹುದು. ಒಟ್ಟಿನಲ್ಲಿ ಈ ಮಹತ್ವದ ಧರ್ಮಕ್ರಾಂತಿಯ ವಿಫಲತೆಯ ನಂತರ ಕರ್ನಾಟಕದ ಸಾಂಸ್ಕೃತಿಕ ಲೋಕ ದಲ್ಲಿ ಹಲವು ಆಂದೋಲನಗಳು ಆದಂತಿವೆ. ಈ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ನಾಯಕರಾಗಿ ಬಂದವರೆನ್ನಬಹು ದಾದವರು ಮಾದೇಶ್ವರ ಮತ್ತು ಮಂಟೇಸ್ವಾಮಿಗಳು. ಇದಕ್ಕೆ ಆಧಾರವಾಗಿ ಇಬ್ಬರ ಕಾವ್ಯಗಳಲ್ಲೂ ಇವರು ಉತ್ತರ ದೇಶದಿಂದ ಬಂದವರೆನ್ನುವ ಮಾತು ಅನೇಕ ಕಡೆ ಪ್ರಸ್ತಾಪವಾಗುತ್ತದೆ. ಆದರೆ ಇವರು ಬಸವಣ್ಣ, ಅಲ್ಲಮಾದಿಗಳ ಕಾಲಕ್ಕೆ ಸೇರಿದವರೆನ್ನುವುದಕ್ಕೆ ಯಾವ ಸಮರ್ಥನೆಯೂ ಇಲ್ಲದಿದ್ದರೂ ಬಸವಣ್ಣ ನವರ ಜೊತೆಗೆ ಸಂಬಂಧ ಕಲ್ಪಿಸುವ ಕಥಾ ಭಾಗಗಳು ಕಾವ್ಯಗಳಲ್ಲಿ ದೊರೆಯುವುದಲ್ಲದೆ ಇವರು ಚಳುವಳಿಯ ನಂತರದ ಘಟ್ಟಗಳಲ್ಲಿ ಇದ್ದವರು ಎಂಬುದಕ್ಕೆ ಆಧಾರಗಳಿರುವುದರಿಂದ "ಇವರ ಕಾಲವನ್ನು ಸುಮಾರು ೧೨ನೇ ಶತಮಾನದಿಂದ ೧೫ನೇ ಶತಮಾನದ ಮಧ್ಯಭಾಗವಿರಬಹುದೆಂದು ಕೆಲವರು ಅಭಿಪ್ರಾಯಪಡು ತ್ತಾರೆ."[೧೨] ಮಾದೇಶ್ವರನ ಕಾಲನಿರ್ಣಯ ಅತ್ಯಂತ ತೊಡಕಿನ ಪ್ರಶ್ನೆಯಾಗಿದ್ದು ಇನ್ನೂ ಅನೇಕ ವಿದ್ವಾಂಸರು ಈ ಬಗ್ಗೆ ಚರ್ಚಿಸಿ ಮಾದೇಶ್ವರನ ಕಾಲವನ್ನು ೧೨ನೇ ಶತಮಾನದಿಂದ ೧೬ನೇ ಶತಮಾನದವರೆಗೆ ಇರಬಹು ದೆನ್ನುತ್ತಾರೆ.

ವೀರಶೈವ ಧರ್ಮದ ಸೈದ್ಧಾಂತಿಕ ಬಿಗಿತನ ಹಾಗೂ ಧರ್ಮದ ಸಾಂಸ್ಕೃತಿಕ ಪ್ರಭಾವದ ವಿರುದ್ಧ ಈ ಕೆಳವರ್ಗದ ನಾಯಕರು ಹೋರಾಡಲೇ ಬೇಕಾಗಿತ್ತು. ಕಲ್ಯಾಣದಲ್ಲಿ ಆದ ಚಳುವಳಿಗೂ ಇಲ್ಲಿನ ಈ ನಾಯಕರು ನಡೆಸಿದ ಚಳುವಳಿಗೂ ಸ್ಪಷ್ಟ ವ್ಯತ್ಯಾಸಗಳಿವೆ. "ಇಲ್ಲಿ ಕೆಳವರ್ಗದ ಜನ 'ಲಿಂಗ' ಧರಿಸಿ ಶರಣರಾದಾಗ ಮಾಂಸ, ಮದ್ಯ ಇತ್ಯಾದಿ ಜೀವಪ್ರಿಯ ವಿಚಾರಗಳನ್ನು ತೊರೆದವರು. ಹಲವು ಕಟ್ಟು ಪಾಡುಗಳನ್ನು ಹಾಕಿ ಕೊಳ್ಳುವ ಮೂಲಕ ತಮ್ಮನ್ನು ತಾವೇ ನಿಯಂತ್ರಿಸಿಕೊಂಡು ಒಂದು ಬಂಧನದ ಗೆರೆಗೆ ಒಳಪಟ್ಟವರು. ಇದು ತಾತ್ಕಾಲಿಕ ಕಟ್ಟುಪಾಡಾಗಿತ್ತೆಂಬುದನ್ನು ಅಂದಿನ ಇತಿಹಾಸದಿಂದ ತಿಳಿಯಬಹುದು. ಕೆಳವರ್ಗದ ಜನ ಎಂದೂ ಮದ್ಯ, ಮಾಂಸ, ಭಂಗಿ, ಮೈಥುನಗಳಿಂದ ಚೈತನ್ಯದಾಯಕ ವಿಚಾರಗಳನ್ನು ತ್ಯಜಿಸಿದವರಲ್ಲ. ಅಂಥ ಕಟ್ಟುಪಾಡು ಗಳಿಂದ ಸಿಡಿದು ಹೊರಬಂದ ಸಂಕೇತ ಮೂರ್ತಿಗಳೇ ಮಾದೇಶ್ವರ ಮತ್ತು ಮಂಟೇಸ್ವಾಮಿಗಳಿರಬಹುದೇನೊ? ಹೆಂಡ, ಮಾಂಸ, ಭಂಗಿಗಳನ್ನು ಸದಾ ಸೇವಿಸುತ್ತಾ ಬೈರಾಗಿಗಳಂತೆ ಕಾಡು ಮೇಡು ಸುತ್ತುತ್ತಾ ಎಲ್ಲೆಂದರಲ್ಲಿ ಇದ್ದು ಜಾಗ ಸಿಕ್ಕಲ್ಲಿ ಮಲಗಿ ಭಕ್ತರ ಮನೆಯಲ್ಲಿ ಉಂಡು-ತಿಂದು ಸಾಮಾನ್ಯ ಜನರ ಮನಗೆದ್ದ ನಾಯಕರಿ ವರು."[೧೩] ಕಲ್ಯಾಣದ ಶರಣರ ಚಳುವಳಿಯಲ್ಲಿ ಇದ್ದ ಕೊರತೆಗಳನ್ನು ಎತ್ತಿ ತೋರಿಸುತ್ತಾ ಪಟ್ಟಭದ್ರ ಸಂಸ್ಕೃತಿಗೆ ವಿರುದ್ಧವಾಗಿ ಕೆಳವರ್ಗದ ಅಸ್ತಿತ್ವವನ್ನು ಮರುಸ್ಥಾಪಿಸುತ್ತಾ ಸಮಾನ ಸಂಸ್ಕೃತಿಯೊಂದರ ನಿರ್ಮಾಣ ಮಾಡುವುದೇ ಇವರ ಉದ್ದೇಶವಾಗಿದ್ದಂತೆ ತೋರುತ್ತದೆ. ಈ ಉದ್ದೇಶದಿಂದಾಗಿ ಮಾದಪ್ಪ ಕತ್ತಲ ರಾಜ್ಯದಲ್ಲಿ

ನೆಲೆಗೊಳ್ಳುವ ಆಸಕ್ತಿ ತೋರಿ ನದಿ ಮತ್ತು ಬೆಟ್ಟಗಳಿಂದ ಸುತ್ತುವರೆದಿರುವ ಈಗಿನ ಕೊಳ್ಳೇಗಾಲ ತಾಲೂಕಿನ ಏಳು ಬೆಟ್ಟ ಸಾಲುಗಳ ಸುಂದರ ಮಲೆಯ 'ನಡುಮಲೆ' ಅಥವಾ 'ವಜ್ರಮಲೆ'ಯನ್ನು ತನ್ನ ನೆಲೆಮಾಡಿ ಕೊಳ್ಳುತ್ತಾನೆ. ಅಂದಿನ ದಟ್ಟಾರಣ್ಯದ ಹಲವು ಬುಡಕಟ್ಟುಗಳ ನಡುವೆ ಆರಂಭವಾದ ಈ ಸಾಂಸ್ಕೃತಿಕ ಮಂಥನ ಒಂದು ಕಥಾನಕವಾಗಿ ರೂಪುಗೊಂಡು ಆಯಾ ಜನಾಂಗಗಳ ಮೇಲೆ ಬೆಳಕು ಬೀರುವ ಮೂಲಕ ಆ ಸಂಸ್ಕೃತಿಯ ವಿಕಸನದ ಅಧ್ಯಯನಕ್ಕೆ ಕಾವ್ಯ ವಿಪುಲವಾದ ವಸ್ತುವನ್ನು ಒದಗಿಸುತ್ತದೆ. ಎಲ್ಲ ಬುಡಕಟ್ಟುಗಳ ಮನಗೆಲ್ಲುವ ಕಥಾನಕವೇ ಮಹದೇಶ್ವರ ಕಾವ್ಯ. ತನ್ನ ಸರಳತೆ, ಚಾಣಾಕ್ಷತನ, ಪವಾಡ ಮತ್ತು ಮಾಟಗಳ ಮೂಲಕ ಬುಡಕಟ್ಟುಗಳ ನಡುವಿನ ವೈಪರೀತ್ಯಗಳನ್ನು ಮೀರಿ ಅವುಗಳನ್ನು ಒಟ್ಟುಗೂಡಿಸುತ್ತಾ ಅನೇಕ ಜನಾಂಗಗಳನ್ನು ತನ್ನ ಒಕ್ಕಲುಗಳನ್ನಾಗಿ ಪಡೆದು ಒಂದು ನಿರ್ದಿಷ್ಟ ಆಚರಣಾ ಕ್ರಮಕ್ಕೆ ಅವರನ್ನು ಒಳಪಡಿಸುತ್ತಾರೆ. ಒಕ್ಕಲನ್ನು ಹಾಗೂ ಶಿಶುಮಕ್ಕಳನ್ನು ಪಡೆಯುವ ಕ್ರಿಯೆ ಒಟ್ಟೊಟ್ಟಿಗೆ ನಡೆಯುತ್ತದೆ. ಸಾಮಾನ್ಯವಾಗಿ ಮಾದಪ್ಪನ ವ್ಯವಹಾರಗಳು ಕೆಳವರ್ಗದ ಸ್ತ್ರೀ-ಪುರುಷರೊಡನೆಯೇ ಸಾಗುವುದನ್ನು ಕಾವ್ಯದಲ್ಲಿ ಕಾಣಬಹುದಾಗಿದೆ.

ಪುರಾಣ ಮತ್ತು ಐತಿಹ್ಯಗಳನ್ನೊಳಗೊಂಡ ಬುಡಕಟ್ಟುಗಳ ಮನಗೆಲ್ಲುವ 'ಮಲೆಯಮಾದೇಶ್ವರ' ಮಹಾಕಾವ್ಯದ ನಾಯಕನಾದ ಮಾದೇಶ್ವರ, ಚಾರಿತ್ರಿಕ ವ್ಯಕ್ತಿಯಾದರೂ ಅವನೊಬ್ಬ ಪುರಾಣ ಪುರುಷ. ಜನರನ್ನು ಕತ್ತಲಿನಿಂದ ಬೆಳಕಿನೆಡೆಗೆ ಕರೆದೊಯ್ಯಲು ಅವತರಿಸಿದವನು. ಸ್ವಯಂ ಪರಶಿವನ ಅಂಶ ಸಂಭೂತ ಎಂಬುದಾಗಿ ಅವನ ಭಕ್ತರು ವರ್ಣಿಸುತ್ತಾರೆ. ಅನೇಕ ಐತಿಹ್ಯಗಳ ವಿವರಣೆಗಳು ಮಲೆಯಮಹದೇಶ್ವರ ಕಾವ್ಯದಲ್ಲಿ ಬರುತ್ತದೆ. ಆದರೆ ಪುರಾಣದೊಳಗೆ ಬಂದಾಗ ಒಂದು ಬಿಡಿ ಐತಿಹ್ಯವಾಗಿ ನಿಲ್ಲದೆ ಪುರಾಣದ ಅಖಂಡ ರೂಪದೊಳಗೆ ಸೇರಿ ಒಂದಾಗುತ್ತದೆ. ಈ ಐತಿಹ್ಯಗಳು ಇತಿಹಾಸಕ್ಕೆ ಕೆಲವೇಳೆ ಆಧಾರವಾಗಲು ಅರ್ಹತೆ ಇದ್ದರೂ ಕೆಲವೇಳೆ ಊಹಾಪೋಹಗಳಾಗಿಯೇ ಉಳಿದುಬಿಡುತ್ತದೆ. ಬುಡಕಟ್ಟಿನ ಜನರುಗಳಲ್ಲಿ ಜನಪದ ಕತೆಗಳಿಗಿಂತ ಹೆಚ್ಚಿನ ಮಹತ್ವವನ್ನು ಅವರು ತಮ್ಮ ಪುರಾಣಗಳಿಗೆ, ಐತಿಹ್ಯಗಳಿಗೆ ನೀಡುತ್ತಾರೆ. "ನಿಜವಾದ ಐತಿಹಾಸಿಕ ರೂಪವನ್ನು ಮುಚ್ಚಿಹಾಕಿದ್ದಾರೆ"[೧೪] ಎನ್ನುತ್ತಾರೆ ಡಾ.ಚಂದ್ರು ಕಾಳೇನಹಳ್ಳಿಯವರು. ಮಾದಪ್ಪ ಚಾರಿತ್ರಿಕ ವ್ಯಕ್ತಿ ಎಂದು ತಿಳಿಸುವ ಯಾವ ಶಾಸನಗಳು ಇಲ್ಲ. ಮಾದಪ್ಪನ ನೆಲೆಗಳನ್ನು ಅರಿಯಲು ನಮಗಿರುವ ಆಕರ ದೇವರಗುಡ್ಡರು ಹಾಡುವ ಮೌಖಿಕ ಮಹಾಕಾವ್ಯಗಳು.

"ಒಂದು ಸಮುದಾಯದ ತನ್ನ ಸಾಂಸ್ಕೃತಿಕ ವೀರನನ್ನು ಒಂದು ಸಲ ಪುರಾಣ ವ್ಯಕ್ತಿಯನ್ನಾಗಿ ಅಥವಾ ದೈವವನ್ನಾಗಿ ಚಿತ್ರಿಸಿದ ಮೇಲೆ ಅಥವಾ ಒಪ್ಪಿದ ಮೇಲೆ ಅವನನ್ನು ಯಾವ ಕಾರಣಕ್ಕೂ ಮನುಷ್ಯ ಸಹಜ ರೂಪದಲ್ಲಿ ನೋಡುವುದಕ್ಕೆ ಆ ಸಮುದಾಯ ಒಪ್ಪುವುದಿಲ್ಲ. ಬೇರೊಂದು ಸಂಸ್ಕೃತಿ ಅವನನ್ನು ಮನುಷ್ಯ ಸಹಜ ರೂಪದಲ್ಲಿ ನೋಡಿದರೆ ಸಹಿಸುವುದಿಲ್ಲ. ಭಾರತೀಯ ಸಂಸ್ಕೃತಿಯಲ್ಲಿ ಪೌರಾಣಿಕ ವ್ಯಕ್ತಿಗಳನ್ನು ಚಾರಿತ್ರಿಕ ವ್ಯಕ್ತಿಗಳನ್ನಾಗಿ ರೂಪಿಸುವ ಮತ್ತು ಚಾರಿತ್ರಿಕ ವ್ಯಕ್ತಿಗಳನ್ನು ಪೌರಾಣಿಕ ವ್ಯಕ್ತಿಗಳನ್ನಾಗಿಸುವುದು ಕಂಡು ಬರುತ್ತದೆ."[೧೫]

ಉತ್ತರದಿಂದ ಬಂದ ಮಾದಪ್ಪ, ಗಾಯಕರು ಬಳಸುವ ರೂಪಕ, ಕತ್ತಲ ರಾಜ್ಯ ಅಂದರೆ ಮೈಸೂರು-ಮಂಡ್ಯ ಚಾಮರಾಜನಗರ ಜಿಲ್ಲೆಗಳ ತಮಿಳುನಾಡಿನ ಗಡಿಗೆ ಹೊಂದಿದಂತಹ ಕನ್ನಡನಾಡಿನ ಕಟ್ಟಕಡೆಯ

ಗಡಿಭಾಗದ ಪ್ರದೇಶಗಳು. ಇದು ಮಾದೇಶ್ವರ ನೆಲೆನಿಂತ ಕೊಳ್ಳೆಗಾಲ ತಾಲೂಕಿನ ಏಳು ಮಲೆಗಳ ಪ್ರದೇಶ. ಈ ಬೆಟ್ಟಗುಡ್ಡಗಳ ಸುತ್ತಲಿನಲ್ಲಿ ವಾಸಿಸುವ ಜನರೆಂದರೆ ಸೋಲಿಗರು, ಬೇಡಗಂಪಣರು. ಮಾದೇಶ್ವರ ಜೀವನ, ಪವಾಡ ಮುಂತಾದ ವಿಷಯಗಳ ಹುಟ್ಟಿಗೆ ಕಾರಣವಾದ ಎಲ್ಲ ಧಾರ್ಮಿಕ ಮತ್ತು ಸಾಮಾಜಿಕ ಪ್ರಭಾವಗಳಿಂದ ಮುಕ್ತವಾಗಿದ್ದ ಭೌಗೋಳಿಕ ಪ್ರದೇಶವಿದು. ಮಾದೇಶ್ವರರು ಆ ಬುಡಕಟ್ಟಿಗೆ ಸೇರಿದವರಲ್ಲವಾದರೂ ಸೋಲಿಗರ ಮೇಲೆ ದಟ್ಟವಾದ ಪ್ರಭಾವವನ್ನು ಬೀರಿ ಸೋಲಿಗರ ಜೀವನ ಇತಿಹಾಸದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ. ಈ ಬುಡಕಟ್ಟುಗಳ ನಡುವಿನ ವೈರುಧ್ಯಗಳನ್ನು ಮೀರಿ ಅವುಗಳನ್ನು ಒಟ್ಟುಗೂಡಿಸುವ ಕೆಲಸ ಮಾಡುತ್ತಾರೆ. ಯಾವ ಧರ್ಮವನ್ನು ಇವರು ಸ್ಥಾಪಿಸಲಿಲ್ಲ. ಈತ ಸತ್ಯಾಸತ್ಯಗಳ ಅನ್ವೇಷಕ ಹಠವಾದಿ ಸಾಧಕ. ಈ ಪ್ರದೇಶದಲ್ಲೂ ಆಗಲೇ ವ್ಯವಸ್ಥಿತವಾಗಿ ಒಂದು ದೈವಕ್ಕೆ ನಡೆದುಕೊಳ್ಳುವವರ ವಿರುದ್ಧ ಹೋರಾಡಿ ಒಕ್ಕಲು ಗಳನ್ನು ಮತ್ತು ಶಿಶುಮಕ್ಕಳನ್ನು ಪಡೆಯಬೇಕಾಗಿತ್ತು. ಅದು ಸುಗಮದ ಹಾದಿ ಆಗಿರಲಿಲ್ಲ. ಈ ಅಂಶ ಕಾವ್ಯ ದಲ್ಲಿ ಸ್ಪಷ್ಟವಾಗಿದೆ. ಪರ್ಯಾಯ ವ್ಯವಸ್ಥೆಗಾಗಿ ಮಾದೇಶ್ವರ ನಿರಂತರ ಶ್ರಮಿಸುತ್ತಾನೆ. ಅದಕ್ಕೆ ಅಗತ್ಯವಾದ ಸನ್ನಿವೇಶಗಳನ್ನು ನಿರ್ಮಿಸಿ ತನ್ನ ಪಂಥಕ್ಕೆ ಒಕ್ಕಲು ಪಡೆಯುವುದೇ ಅವನ ಮೂಲ ಉದ್ದೇಶ, ಗುರಿ. ಶೈವ, ವೈಷ್ಣವ ಮೇಲುವರ್ಗದವರ ಸಂಪ್ರದಾಯಗಳು ಕತ್ತಲ ರಾಜ್ಯದಲ್ಲಿದ್ದರೂ ಮೇಲುವರ್ಗದ ಸಂಸ್ಕೃತಿಯಿಂದ ನಿರಾಕರಣೆಗೆ ಒಳಗಾದ ಕೆಳವರ್ಗದವರನ್ನು ಮೇಲೆತ್ತಲು ಸಮರ್ಥ ಸಾಂಸ್ಕೃತಿಕ ನಾಯಕರು ಬೇಕಾಗಿದ್ದರು. ಮಾದೇಶ್ವರ ಕೆಳಸ್ತರದಿಂದ ಬಂದರೂ, ವೈಯಕ್ತಿಕ ಸಾಧನೆಯಿಂದ ಶ್ರೇಷ್ಠ ಆಧ್ಯಾತ್ಮ ಜೀವಿಯಾಗಿ ಸಾವಿರಾರು ವರ್ಷಗಳಿಂದ ಸಮಾಜದಲ್ಲಿ ವಂಚಿತರಾದ ಈ ಕೆಳವರ್ಗದ ಜನತೆಯಲ್ಲಿ ಎಚ್ಚರ ಮೂಡಿಸಿ ಆತ್ಮವಿಶ್ವಾಸ ತುಂಬಿದವರು. ಪ್ರಾರಂಭದಲ್ಲಿ ಯಾರು ಅವರಿಗೆ ಸುಲಭವಾಗಿ ಒಕ್ಕಲಾಗುವುದಿಲ್ಲ. ಆದರೂ ಇವರು ಒಕ್ಕಲಾಗು ವವರೆಗೂ ಬಿಡುವುದಿಲ್ಲ. ಒಕ್ಕಲುಗಳನ್ನು ಹೆಚ್ಚಿಸಿಕೊಂಡು ಒಂದು ಕಡೆ ನಿಲ್ಲಬೇಕೆಂಬ ಛಲ ಮತ್ತು ತವಕ ಅವನದು. ಈ ಆಸೆಯಿಂದ ಹಲವು ಜನವರ್ಗಗಳ ಪ್ರಮುಖರನ್ನು ಸೆಳೆಯುವ ಹುನ್ನಾರ ಹೂಡುತ್ತಾನೆ. ಫಲಿಸದಿದ್ದಾಗ ಮಾಟ-ಮಂತ್ರಗಳ ಕಡೆಗೆ ವಾಲುತ್ತಾನೆ. ಅಂತು ಹೇಗೋ ಗೆಲ್ಲಬೇಕು. ಅವರನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಅವರ ಜೀವನ ಹಸನುಗೊಳಿಸಬೇಕು ಎಂಬುದು ಅವನ ಉದ್ದೇಶ.

ಡಾ.ಪಿ.ಕೆ.ರಾಜಶೇಖರವರು ಮಾದೇಶ್ವರ ನಾಡಿನ ಬೇರೆ ಬೇರೆ ಭಾಗದ ಭಕ್ತರನ್ನು ಹೇಗೆ ಪಡೆದ ಎನ್ನುವ ಬಗ್ಗೆ ತಮ್ಮ ಮಲೆಯಮಾದೇಶ್ವರ ಕಾವ್ಯದ ಮುನ್ನುಡಿಯಲ್ಲಿ ಪ್ರಸ್ತಾಪಿಸುತ್ತಾ "ಯಾರೂ ಮಾದೇಶ್ವರ ಹೇಳಿದೊಡನೆ ಅವನ ಕೆಲಸಕ್ಕೆ ತಟ್ಟನೆ ಕೈ ಹಾಕಿದವರಲ್ಲ. ಮಾದೇಶ್ವರ ಅವರಿಗೆಲ್ಲ ಕೊಡಬಾರದ ಕಷ್ಟಗಳನ್ನು ಕೊಟ್ಟು ಮಾಡಬಾರದ ನಷ್ಟವನ್ನುಂಟು ಮಾಡಿ ಈ ಕಷ್ಟ ನಷ್ಟಗಳಿಗೆ ಮಾದೇಶ್ವರನೇ ಕಾರಣವೆಂದು ಮನದಟ್ಟು ಮಾಡಿಸಿ ಅನಂತರ ಅವರೇ ತಪ್ಪೊಪ್ಪಿಕೊಂಡು ಮಾದೇಶ್ವರನ ಸೇವೆಗೆ ಮುಂದಾಗುತ್ತಾರೆ"[೨] ಎನ್ನುತ್ತಾರೆ. ಈ ತಂತ್ರ ಕಾವ್ಯದುದ್ದಕ್ಕೂ ಹರಡಿದ್ದು ಆತನ ನೀತಿ ಫಲಿಸಿರುವುದನ್ನು ಕಾವ್ಯ ತಿಳಿಸುತ್ತದೆ.

ಮಾದೇಶ್ವರರ ಬಗ್ಗೆ ಇದುವರೆವಿಗೂ ಬಂದಿರುವ ಅಪಾರವಾದ ಕಾವ್ಯ ಸಂಸ್ಕರಣೆ ಸಂಪುಟಗಳು ಸುಪ್ರಭಾತಗಳು, ಕಾದಂಬರಿ, ನಾಟಕಗಳು, ಜನಪದ ಪದ್ಯ ಹಾಗೂ ಗದ್ಯ ಕೃತಿಗಳು, ವಚನಗಳು, ತಮಿಳು ಸಾಹಿತ್ಯ, ಪತ್ರಿಕೆಗಳಲ್ಲದೆ ತಾಮ್ರಶಾಸನ, ಶಿಲಾಶಾಸನಗಳು ಇವು ಮಾದೇಶ್ವರನ ಬಗೆಗೆ ತಿಳಿಯಲು

ಸಹಾಯವಾಗಿವೆ. ಜಾನಪದ ಸಾಹಿತ್ಯದಲ್ಲಿ ಮಾದೇಶ್ವರರ ಬಗೆಗೆ ಅನೇಕ ಬಗೆಯ ಬಿಡಿ ಬಿಡಿ ಪದ್ಯಗಳೂ, ಕಾವ್ಯಗಳೂ ಸಂಗ್ರಹವಾಗಿವೆ. ಜನಪದ ಮಹಾಕಾವ್ಯಗಳ ಬಗ್ಗೆ ಹೇಳುವುದಾದರೆ ಹಲವರು ಮಾದೇಶ್ವರ ಕಾವ್ಯದ ಬೇರೆ ಬೇರೆ ಸಾಲುಗಳನ್ನೇ ಖಂಡಕಾವ್ಯವಾಗಿ ಸಂಗ್ರಹಿಸಿ ಪ್ರಕಟಿಸಿದ್ದಾರೆ. ಜಾನಪದ ವಿದ್ವಾಂಸರಾದ ಪ್ರೊ.ಡಿ.ಲಿಂಗಯ್ಯನವರು, ಡಾ.ಪಿ.ಕೆ.ರಾಜಶೇಖರ, ಡಾ.ಚಕ್ಕೆರೆ ಶಿವಶಂಕರ್, ಡಾ.ಬಿ.ಎಸ್.ಸ್ವಾಮಿ, ಮೊಗಳ್ಳಿ ಗಣೇಶ್, ಡಾ.ಕೇಶವನ್ ಪ್ರಸಾದ್ ಇನ್ನೂ ಹಲವಾರು ಜಾನಪದ ವಿದ್ವಾಂಸರು ಮಲೆಯಮಾದೇಶ್ವರ ಕಾವ್ಯ ಸಂಗ್ರಹಣ ಕಾರ್ಯದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ.

ಪ್ರೊ.ಡಿ.ಲಿಂಗಯ್ಯನವರು ಶ್ರೀ ಹೆಬ್ಬಣಿ ಮಾದಯ್ಯನವರಿಂದ ಬೃಹತ್ ಕಾವ್ಯವನ್ನು ಬಹು ಹಿಂದೆಯೇ ಸಂಗ್ರಹಿಸಿದ್ದು ಇನ್ನೂ ಪ್ರಕಟವಾಗಿಲ್ಲ. ಡಾ.ಪಿ.ಕೆ.ರಾಜಶೇಖರ ಅವರು ೧೯೭೩ರಲ್ಲಿ ಸಂಪಾದಿಸಿ ಎರಡು ಸಂಪುಟಗಳಲ್ಲಿ ಪ್ರಕಟಿಸಿರುವ ಜನಪದ ಮಹಾಕಾವ್ಯ 'ಮಲೆಯಮಾದೇಶ್ವರ' ಅನೇಕ ಪಾಠಾಂತರಗಳನ್ನು ಉಪಯೋಗಿಸಿಕೊಂಡು ಶಾಸ್ತ್ರೀಯವಾಗಿ ಸಂಗ್ರಹಿಸಿ ಪರಿಷ್ಕರಿಸಿ ಹದಿನಾಲ್ಕು ಕವಲುಗಳಾಗಿ ವಿಂಗಡಿಸಿ, ಅವುಗಳ ಜೊತೆ ಹಲವಾರು ಬಿಡಿ ಪದ್ಯಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಸುಮಾರು ಮೂವತ್ತು ಸಾವಿರಕ್ಕೂ ಮಿಗಿಲಾದ ಸಾಲುಗಳಿವೆ. "ಈಗ ಪ್ರಕಟವಾಗಿರುವ ಕಾವ್ಯದ ೧೪ ಕಥಾಭಾಗಗಳನ್ನು ಯಾವೊಬ್ಬ ಕಲಾವಿದನೂ ಒಟ್ಟಾಗಿ ಹಾಡುವುದಿಲ್ಲ. ಕೆಲವು ಗಾಯಕರಿಗೆ ಕೆಲವು ಕಥಾಭಾಗಗಳು ತಿಳಿದಿಲ್ಲ ಎನ್ನುತ್ತಾರೆ"[೧೭] ಡಾ.ಪಿ.ಕೆ. ರಾಜಶೇಖರವರು. ಕಂಸಾಳೆ ಗುಡ್ಡರು ಸಾಮಾನ್ಯವಾಗಿ ಏಳು ಸಾಲುಗಳನ್ನೇ ಹಾಡುವವರು. ಈ ಏಳು ಸಾಲುಗಳ ಕಥೆಗಳು ಹೆಚ್ಚು ಜನಪ್ರಿಯವಾಗಿದ್ದು, ಜನಪದರಲ್ಲಿ ಅಚ್ಚಳಿಯದಂತೆ ಉಳಿದುಕೊಂಡು ಬಂದಿವೆ. ಅವೆಂದರೆ ಹುಟ್ಟಿಬೆಳೆದ ಸಾಲು, ಜುಂಜೇಗೌಡನ ಸಾಲು, ಶ್ರವಣನ ಸಾಲು, ಇಕ್ಕೇರಿ ದೇವಮ್ಮನ ಸಾಲು, ಸಂಕಮ್ಮನ ಸಾಲು, ಬೇವಿನಕಾಳಿ ಸಾಲು, ಸರಗೂರಯ್ಯನ ಸಾಲುಗಳು. ಈ ಒಂದೊಂದು ಸಾಲು ಒಂದೊಂದು ಖಂಡಕಾವ್ಯದ ವ್ಯಾಪ್ತಿಯನ್ನು ಹೊಂದಿದೆ.

೧೯೭೯ರಲ್ಲಿ ಪ್ರಕಟವಾದ ಡಾ.ಜೀ.ಶಂ.ಪ.ರವರ 'ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು' ಈ ಮಹಾಪ್ರಬಂಧ, ಕರ್ನಾಟಕದಲ್ಲಿ ಜಾನಪದ ಅಧ್ಯಯನಕ್ಕೆ ಶೈಕ್ಷಣಿಕ ಮಹತ್ವಿಕೆಯನ್ನು ತಂದುಕೊಟ್ಟಿದೆ. ಹಾಡಿನ ರೂಪದ ಎಲ್ಲಾ ಕಥನಾತ್ಮಕ ಸಾಹಿತ್ಯವನ್ನು ಜನಪದ ಕಾವ್ಯ ಎಂದೇ ಗುರುತಿಸಿಕೊಂಡು ಕ್ಷೇತ್ರಕಾರ್ಯ, ವರ್ಗೀಕರಣ ಮತ್ತು ವಿಶ್ಲೇಷಣೆ, ವಿಮರ್ಶೆ ಎಂಬುದಾಗಿ ತಮ್ಮ ಅಧ್ಯಯನವನ್ನು ಮೂರು ಹಂತದಲ್ಲಿ ನಡೆಸಿದ್ದಾರೆ. ಜೀ.ಶಂ.ಪ. ಅವರ ಮಹಾಪ್ರಬಂಧದಲ್ಲಿ ಒಟ್ಟು ೪ ಭಾಗಗಳಿವೆ. "ನಾಲ್ಕನೇ ಭಾಗದಲ್ಲಿ ಅವರು ಮಲೆಯಮಾದೇಶ್ವರ, ದೇವರಗುಡ್ಡದ ಸಂಪ್ರದಾಯವನ್ನು ವಿಸ್ತೃತವಾಗಿ ಪರಿಚಯಿಸಿದ್ದಾರೆ. ವಿಸ್ತಾರದ ದೃಷ್ಟಿಯಿಂದಲೂ ವೈವಿಧ್ಯದ ಸೊಗಸಿನಿಂದಲೂ ಮಾದೇಶ್ವರ ಕಾವ್ಯ ನಮ್ಮ ಜನಪದ ಕಾವ್ಯಗಳ ಒಂದು ಅನರ್ಘ್ಯ ಕೃತಿ ಎಂಬುದನ್ನು ಅವರು ಸೋದಾರಣವಾಗಿ ಸಾಬೀತು ಪಡಿಸಿದ್ದಾರೆ."[೧೮]

ಜೀ.ಶಂ.ಪ. ಅವರ "ಜನಪದ ಕಾವ್ಯ ಕಥೆಗಳು"[೧೯] ಮಹತ್ವದ ಲೇಖನಗಳ ಸಂಕಲನ. ಈ ಸಂಕಲನದಲ್ಲಿ ಒಟ್ಟು ೭ ಭಾಗಗಳಿದ್ದು, ಕಂಸಾಳೆ ಕಥೆಗಳು ಎಂಬ ಭಾಗದಲ್ಲಿ ಮಾದೇಶ್ವರ ಕಾವ್ಯದ ತಾಳಗತಿಯಿಂದ ಯಾವ ಭಾಗವೂ ಮುಕ್ಕಾಗದಂತೆ ರೂಪಿಸಲಾಗಿದೆ. ಮಾದೇಶ್ವರರ ಬಗೆಗೆ ಸಂಪೂರ್ಣವಾಗಿ ಏಳು ಕವಲುಗಳನ್ನು ಹಾಡುವ ಒಬ್ಬರೇ ಕಲಾವಿದರು ಬೆರಳೆಣಿಸುವಷ್ಟು ಮಂದಿ.

ಹೆಬ್ಬಣಿ ಮಾದಯ್ಯನವರು ಹಾಡಿದ 'ಮಲೆಯಮಾದೇಶ್ವರ ಕಾವ್ಯ' ಕನ್ನಡ ವಿಶ್ವವಿದ್ಯಾಲಯದಲ್ಲಿನ ಬುಡಕಟ್ಟು ಅಧ್ಯಯನ ವಿಭಾಗದ ಡಾ.ಕೇಶವನ್ ಪ್ರಸಾದ್ ರವರು ಸಂಪಾದಿಸಿದ್ದು, ಅದನ್ನು ೧೯೯೭ರಲ್ಲಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದೆ. ಈ ಏಕಗಾಯಕ ಪಠ್ಯದಲ್ಲಿ ಸುಮಾರು ಹದಿನಾರು ಸಾವಿರ ಸಾಲುಗಳಿವೆ. ಕಾವ್ಯದಲ್ಲಿ ಪ್ರಾರ್ಥನೆ, ಮಂಗಳಾರತಿ ಭಾಗಗಳನ್ನು ಹೊರತುಪಡಿಸಿ, ಆರು ಮುಖ್ಯ ಸಾಲುಗಳಿವೆ. ಮೊದಲ ಸಾಲು 'ಮಾದಪ್ಪ ಹುಟ್ಟಿ ಬೆಳೆದ ಸಾಲು', ಎರಡನೆಯ ಸಾಲು 'ಜುಂಜೇಗೌಡನ ಸಾಲು', 'ಶ್ರವಣದೊರೆಯ ಸಾಲು' ಮೂರನೆಯ ಸಾಲಾದರೆ, ನಾಲ್ಕು ಮತ್ತು ಐದನೆ ಸಾಲುಗಳು 'ಸಂಕಮ್ಮನ ಸಾಲು', 'ಬೇವಿನಹಟ್ಟಿ ಕಾಳಮ್ಮನ ಸಾಲುಗಳು', ಆರನೆಯ ಸಾಲು 'ಸರಗೂರಯ್ಯನ ಸಾಲು.'

'ಮಲೆಯಮಾದೇಶ್ವರ' ಜನಪದ ಮಹಾಕಾವ್ಯದಲ್ಲಿ ಬರುವ 'ಸತ್ಯಗುಣಿ ಸಂಕಮ್ಮನ ಸಾಲು' 'ಇಕ್ಕೇರಿ ದೇವಮ್ಮನ ಸಾಲು' ಹಾಗೂ 'ಬೇವಿನಹಟ್ಟಿ ಕಾಳಮ್ಮನ ಸಾಲು'ಗಳನ್ನು ಜೋಗಿ ನಿಂಗಯ್ಯನವರಿಂದ ಹಾಡಿಸಿ, ಸಂಗ್ರಹಿಸಿ, 'ಕೋರಣ್ಯ ನೀಡವ್ವ ಕೋಡುಗಲ್ಲಯ್ಯನಿಗೆ'[೨೦] ಎಂಬ ಸಂಕಲನವನ್ನು ಡಾ.ಚಕ್ಕೆರೆ ಶಿವಶಂಕರರವರು ಪ್ರಕಟಿಸಿದ್ದಾರೆ. ಮೂರು ಸಾಲುಗಳೂ ಜನಪದ ಚಂಪೂ ಶೈಲಿಯಲ್ಲಿದ್ದು, ಗದ್ಯವೂ ಪದ್ಯಗಂಧಿಯಾಗಿ ಹೃದ್ಯವಾಗಿದೆ. ಕಥಾ ನಿರೂಪಣೆಯು ಸರಳವಾಗಿದ್ದು, ನೇರವಾಗಿ ಕೇಳುಗರ ಮನಮುಟ್ಟುತ್ತದೆ.

ಡಾ. ಬಿ.ಎಸ್.ಸ್ವಾಮಿಯವರು "ಮಲೆಯಮಾದೇಶ್ವರ"[೨೧] ಎಂಬ ಜಾನಪದ ಮಹಾಕಾವ್ಯವನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಏಳು ಸಂಪಾದಿಸಿದ ಪಾಠಗಳನ್ನು ಎರಡು ಪ್ರಕಟಿತ ಕೃತಿಗಳನ್ನು[೨೨] ಇಟ್ಟುಕೊಂಡು ಕಾವ್ಯ ಸಂಕಲನ ಮಾಡಿರುವುದಾಗಿ ಸಂಗ್ರಹಕರು ಹೇಳುತ್ತಾರೆ. ಈ ಜನಪದ ಕಾವ್ಯ ಕೃತಿಯಲ್ಲಿ ಹುಟ್ಟಿ ಬೆಳೆದ ಸಾಲು, ಬೇವಿನಕಾಳಿ, ಶ್ರವಣ, ಸಂಕಮ್ಮ, ಸರಗೂರಯ್ಯ, ಇಕ್ಕೇರಿದೇವಮ್ಮ, ಜುಂಜೇಗೌಡನ ಸಾಲುಗಳೆಂದು ಏಳು ಸಾಲುಗಳಿದ್ದು, ಮಾದೇಶ್ವರರ ಹುಟ್ಟಿನಿಂದ ಹಿಡಿದು, ಬಾಲ್ಯ ವಿದ್ಯಾಭ್ಯಾಸ ಮೆರೆದ ಪವಾಡಗಳು, ಕೊನೆಗೆ ಲಿಂಗರೂಪ ತಾಳಿ ಶಿಷ್ಯ ಕೋಟಿಯನ್ನು ಪಡೆದುಕೊಳ್ಳುವವರೆಗೆ ಕಾವ್ಯ ಸಮಗ್ರವಾಗಿ ಚಿತ್ರಿಸುತ್ತದೆ. ಖಂಡಕಾವ್ಯವನ್ನು ತೆಗೆದುಕೊಂಡು ಅದರ ಜೊತೆಗೆ ಅನೇಕ ಪಾಠಗಳಲ್ಲಿ ಬರುವ ಹೊಸ ಹೊಸ ಘಟನೆಗಳನ್ನು, ಕಥೆಗಳಲ್ಲಿ ಅಳವಡಿಸಲಾಗಿದೆ.

ಮೌಖಿಕ ಮಹಾಕಾವ್ಯ "ಕಂಠಸ್ಥ ಪರಂಪರೆಯ ಸಂದರ್ಭದಲ್ಲಿ ಜನ್ಮ ತಳೆದು ವೃತ್ತಿಗಾಯಕ ಸಂಪ್ರದಾಯದಿಂದ ಜೀವಂತವಾಗಿರುವ ಒಂದು ಕಾವ್ಯ ಸಂಪ್ರದಾಯ"[೨೩] ಕಾವ್ಯದ ವಿಕಾಸಕ್ಕೆ ವೃತ್ತಿಗಾಯಕರ ಕೊಡುಗೆ ಅಪಾರವಾದುದು. "ಕಾವ್ಯದ ವಿಕಾಸಕ್ಕೆ ಅನೇಕ ಭಕ್ತರು, ಸಂತರು, ಗಾಯಕರು ಕಾರಣರಾಗಿದ್ದಾರೆ. ಬಹುಜನ ಹೃದಯಸ್ಪಂದನ ಇಲ್ಲಿ ಮಾರುಲಿದಿದೆ. ಆಸ್ತಿಕರ ಮನೋಧರ್ಮ ಮತ್ತು ಭಾವಾಲೋಚನೆಗಳು ಇಲ್ಲಿ ಹೊನಲಾಗಿ ಹರಿದಿದೆ."[೨೪]

ಮಲೆಯಮಾದೇಶ್ವರನ ಗುಡ್ಡರನ್ನು ಅಂದರೆ ಭಕ್ತರನ್ನು ಕಂಸಾಳೆಯವರೆಂದು ಕರೆಯುತ್ತಾರೆ. ಈ ಕಂಸಾಳೆಯವರು/ಗುಡ್ಡರು, ಕಂಸಾಳೆ ಎಂಬ ಹಿತ್ತಾಳೆ ಅಥವಾ ಕಂಚಿನ ಲೋಹದಿಂದ ವಿಶಿಷ್ಟ ಸ್ವರೂಪದಲ್ಲಿ ಮಾಡಿದ ಕಂಸಾಳೆ ಎಂಬ ಹೆಸರಿನ ತಾಳಗಳನ್ನು ಬಡಿಯುತ್ತಾ ಅನೇಕ ರಾತ್ರಿಗಳವರೆಗೆ ಹಾಡುತ್ತಾರೆ. ಮೈಸೂರು, ಮಂಡ್ಯ, ಚಾಮರಾಜನಗರ, ಬೆಂಗಳೂರು ಜಿಲ್ಲೆಗಳಲ್ಲಿ ಕಂಸಾಳೆಯವರು ಹರಡಿಕೊಂಡಿದ್ದಾರೆ. ಮಾದೇಶ್ವರ

ಗುಡ್ಡರ 'ಕಂಸಾಳೆ ಮೇಳ' ದಕ್ಷಿಣ ಕರ್ನಾಟಕದ ಜನಪದ ಮೇಳಗಳಲ್ಲಿ ಅತ್ಯಂತ ಗಮನಾರ್ಹವಾದ ಜನಪದ ಕಲೆಯಾಗಿದೆ. ಕಂಸಾಳೆಯವರ ಕಂಸಾಳೆಗೆ 'ಬಿರುದು' ಎಂದು ಕರೆಯುವುದುಂಟು. ಕಂಸಾಳೆ, ಕಂಚಿನಿಂದ ಅಥವಾ ಹಿತ್ತಾಳೆಯಿಂದ ತಯಾರಿಸಿದ ಒಂದು ವಿಶಿಷ್ಟ ಸ್ವರೂಪದ ತಾಳವಾದ್ಯ. ಸಾಧಾರಣ ತಾಳಗಳಿಗಿಂತ ಗಾತ್ರದಲ್ಲಿ ದೊಡ್ಡದಾಗಿರುತ್ತದೆ. ಇದರಲ್ಲಿ ಎರಡು ತಾಳಗಳಿದ್ದು ಎಡಕೈ ಬಲಕೈಗಳಲ್ಲಿ ಹಿಡಿದಿರುತ್ತಾರೆ. ಎಡಗೈಯಲ್ಲಿ ಹಿಡಿಯುವ ತಾಳ ಅರ್ದ ಅಂಗುಲ ಕಂಠವಿರುವ, ಅಗಲ ತಳವುಳ್ಳ ಬಟ್ಟಲಿನಂತಹುದು. ಬಲಗೈಯಲ್ಲಿ ಧರಿಸುವ ಮೇಲು ತಾಳ ಬಟ್ಟಲಿಗಿಂತ ಅಗಲವಾಗಿದ್ದು, ಚಿಬ್ಬಲಿನ ಆಕಾರದಲ್ಲಿರುತ್ತದೆ. ಮುಚ್ಚಳದ ಉಬ್ಬಿರುವ ನಡುಭಾಗದಲ್ಲಿರುವ ರಂಧ್ರಕ್ಕೆ ದಾರವೊಂದನ್ನು ಬಿಗಿದು ಅದನ್ನು ವಿವಿಧ ಗೊಂಡೆ, ಗಗ್ಗರಗಳಿಂದ ಅಲಂಕರಿಸಿ ಇಳಿಬಿಡುತ್ತಾರೆ. ಇದು ಸಾಮಾನ್ಯವಾಗಿ ಬಲಗೈ ಮೇಲಿಂದ ಇಳಿಬಿದ್ದಿರುತ್ತದೆ. ಎಡಗೈಯಲ್ಲಿ ಹಿಡಿದ ಬಟ್ಟಲನ್ನು ಮೇಲುಮುಖವಾಗಿ ಅಂಗೈ ಮೇಲಿರಿಸಿಕೊಂಡು ಬಲಗೈಯಲ್ಲಿ ಹಿಡಿದ ಮೇಲು ತಾಳವನ್ನು ಅದರ ಮೇಲೆ ಕುಟ್ಟಿದರೆ 'ಕಣಿ-ಕಣಿ' ಎಂಬ ನಾದ ಹೊರಹೊಮ್ಮುತ್ತದೆ. "ಒಂದು ಆರಾಧ್ಯ ದೈವದ ಪರಂಪರೆಗೆ ಈ ವಾದ್ಯ ಸೇರುವುದರಿಂದ ವಿಶಿಷ್ಟ ವರ್ಗದ ಭಕ್ತರು ಇದನ್ನು ಬಳಸುವುದರಿಂದ ಇದೊಂದು ಧಾರ್ಮಿಕ ವಾದ್ಯವೆನಿಸಿದೆ. ಜನಪದ ಕಲಾವಿದರು ಮಾತ್ರ ಇದನ್ನು ಬಳಸುವುದರಿಂದ ಇದೊಂದು ವಾದ್ಯವೂ ಹೌದು. ವೃತ್ತಿಗಾಯಕರು ಬಳಸುವ ವಾದ್ಯಗಳಲ್ಲೆಲ್ಲ ಭಿಕ್ಷಾಪಾತ್ರೆಯಾಗಿಯೂ ಬಳಸಲ್ಪಡುವ ಏಕಮಾತ್ರ ಸಾಧನವಿದು. ಗುಡ್ಡರು ಭಿಕ್ಷೆಯನ್ನು ಸ್ವೀಕರಿಸುವಾಗ ಕಂಸಾಳೆಯ ಬಟ್ಟಲನ್ನು ಮಾತ್ರ ಮುಂದೆ ಒಡ್ಡಿ ಅನಂತರ ಜೋಳಿಗೆಗೆ ಸುರಿದುಕೊಳ್ಳುತ್ತಾರೆ. ಇದೊಂದು ಪವಿತ್ರ ಸಾಧನವಾದುದರಿಂದ ಅರ್ಪಿಸುವ ಕಾಣಿಕೆ ಮಲೆಯ ಮಾದಯ್ಯನಿಗೆ ಸಮರ್ಪಿತವಾದಂತೆ ಎಂಬ ಭಾವನೆ ಗುಡ್ಡನಿಗೂ, ದಾನಿಗೂ ಇರುತ್ತದೆ."[೨೫] ಹಣೆಗೆ ವಿಭೂತಿ, ಶುಭ್ರವಾದ ಬಿಳಿಯ ಕಸೆ ಅಂಗಿ, ಬಿಳಿಯ ಧೋತರ ಕೊರಳಲ್ಲಿ ರುದ್ರಾಕ್ಷಿಸರ, ನಡುವಿಗೆ ಸುತ್ತಿದ ಒಂದು ವಸ್ತ್ರ, ಇದು ಕಂಸಾಳೆಯವರ/ಗುಡ್ಡರ ವೇಷಭೂಷಣಗಳು. 'ಬಿನ್ನ'ಕ್ಕೆ ಹೋಗುವಾಗ ಬೆಳ್ಳಿ ಬೆತ್ತವನ್ನು ಬಲಗೈಲ್ಲಿಹಿಡಿದು, ಮುತ್ತಿನ ಜೋಳಿಗೆ ಮುಂಗೈಗೆ ಧರಿಸಿ, ಕಂಸಾಳೆಯನ್ನು ಹಿಡಿದಿರುತ್ತಾರೆ. ಮಾದೇಶ್ವರರು ಭಕ್ತರ ಮನೆಗೆ ಬಿನ್ನಕ್ಕೆ ಈ ರೀತಿಯಲ್ಲಿ ಹೋಗುತ್ತಿದ್ದರೆಂದು ಅವರ ಭಕ್ತರ ಅನಿಸಿಕೆ.

ಗುಡ್ಡರು/ಕಂಸಾಳೆಯವರು, ಕಂಸಾಳೆಯ 'ಕಣಿಕಣಿ' ನಾದದ ಹಿನ್ನೆಲೆಯಲ್ಲಿ ಮಲೆಮಹದೇಶ್ವರನ ಧಾರ್ಮಿಕ ಕಾವ್ಯವನ್ನು ಅತ್ಯಂತ ಸುಶ್ರಾವ್ಯವಾಗಿ, ಶ್ರೋತೃಗಳು ಭಕ್ತಿಯ ಪ್ರವಾಹದಲ್ಲಿ ತೇಲಿ ಹೋಗುವಷ್ಟರ ಮಟ್ಟಿಗೆ ಹಾಡುತ್ತಾರೆ. ಗುಡ್ಡಿಯರು ಬಿಡಿ ಹಾಡುಗಳನ್ನು ಹಾಡುತ್ತಾರೆ. ಕಂಸಾಳೆ ಮೇಳಗಳಲ್ಲಿ ಮೂರರಿಂದ ಎಂಟು ಜನರು ಭಾಗವಹಿಸುತ್ತಾರೆ. ಹಾಡುವ ಸಂದರ್ಭದಲ್ಲಿ ಮೂವರು ನೃತ್ಯ ಸಂದರ್ಭದಲ್ಲಿ ಎಂಟರಿಂದ ಹನ್ನೆರಡು ಜನ ಕಲಾವಿದರಿರುತ್ತಾರೆ. ಈ ಮೇಳದಲ್ಲಿ "ಮುಖ್ಯ ಹಾಡುಗಾರ ಕಂಸಾಳೆಯನ್ನು ಹಿಡಿದಿರುತ್ತಾನೆ. ಹಿಮ್ಮೇಳದವರು ಕಂಸಾಳೆಯವರ ಸುತ್ತಾ ಏಕತಾರಿ, ದಮ್ಮಡಿ, ಚಿಟಕಿಗಳನ್ನು ಹಿಡಿದು ಕುಳಿತಿರುತ್ತಾರೆ. ಇದು ಕುಳಿತು ಹಾಡುವ ಕಂಸಾಳೆ. ಮುಮ್ಮೇಳದ ಹಾಡುಗಾರ ಅಂದರೆ ಪ್ರಧಾನ ಗಾಯಕ ಕಥೆಯನ್ನು ಮುಂದುವರಿಸಿ ಕೊಂಡು ಹೋಗುತ್ತಿರುವಾಗ ಹಿಮ್ಮೇಳದವರು ಸೊಲ್ಲು ಎತ್ತಿಕೊಡುತ್ತಾರೆ. ಕಂಸಾಳೆಯ ನಾದ ವೈಖರಿಗೆ ತಾಳದ ಗತ್ತಿಗೆ ತಕ್ಕಂತೆ ವಿವಿಧ ಮಟ್ಟುಗಳಲ್ಲಿ ಹಾಡುತ್ತಾ ಹೋಗುತ್ತಾರೆ. ಮಹಾಕಾವ್ಯವನ್ನು ಪೂರ್ಣ ಪದ್ಯದಲ್ಲಿ ಹಾಗೂ ಪದ್ಯ ಮತ್ತು ಪದ್ಯಗಂಧಿ, ಗದ್ಯಗಳೆರಡರಲ್ಲೂ ಹಾಡುವುದುಂಟು. ಮಹಾಕಾವ್ಯದುದ್ದಕ್ಕೂ

ಪಲ್ಲವಿಗಳನ್ನು ಸಾಧಾರಣವಾಗಿ ಬಳಸುತ್ತಾರೆ. ಬೀಸು ಕಂಸಾಳೆಯ ನೃತ್ಯ ಕರ್ನಾಟಕದ ಜನಪದ ನೃತ್ಯಗಳಲ್ಲಿ ಅತ್ಯಪೂರ್ವವಾದುದು."[೨೬] ಇದರ ಪ್ರವರ್ತಕ ಮಾದೇವನೆಂದು ನಂಬಲಾಗಿದೆ. ಇದರಲ್ಲಿ ಎರಡು ವಿಧಗಳಿವೆ. ಕಂಸಾಳೆಯನ್ನು ತಟ್ಟುತ್ತಾ ಕುಣಿಯುವುದೇ ತಟ್ ಬಟ್ಟು. ಇದರಲ್ಲಿ ಮೂವರಿಂದ ಎಂಟು ಜನ ಭಾಗವಹಿಸುತ್ತಾರೆ. ಕಂಸಾಳೆಯ ಮೇಲಿನ ಮುಸುಕಿಗೆ ದಾರ ಕಟ್ಟಲಾಗುತ್ತದೆ. ಅದಕ್ಕೆ ಬಣ್ಣದಗೊಂಡೆಗಳ ಅಲಂಕಾರವು ಇರುತ್ತದೆ. ಈ ದಾರದ ತುದಿಯನ್ನು ಹಿಡಿದು ಬೀಸಿತಾಳ ಹಾಕುವುದರಿಂದಲೇ ಇದನ್ನು ಬೀಸು ಕಂಸಾಳೆ ಎನ್ನಲಾಗುತ್ತದೆ. ಕಲಾವಿದ ದೇಹದ ಯಾವ ಕಡೆಗೆ ಬೇಕಾದರೂ ಬೀಸಿ ನಾದ ಹೊರಡಿಸಬಹುದು. ಬೀಸಿ ಹೊಡೆಯುವಾಗ ದೇಹದ ಯಾವುದೇ ಭಾಗಕ್ಕೆ ತಾಗದಿರುವುದು ಹಾಗೂ ಮಿಂಚಿನ ಸಿದ್ಧತೆಗೆ ಸಂಬಂಧಿಸಿದ ಏಕಾಗ್ರತೆ ಮತ್ತು ಸಾಧನೆ ಇದರ ವೈಶಿಷ್ಟ್ಯ. " 'ತಾರ್ ಬಟ್ಟು' ವಿಧಾನದಲ್ಲಿ ಕಂಸಾಳೆ ಕಲಾವಿದನೊಬ್ಬನೇ ಭಾಗವಹಿಸುತ್ತಾನೆ. ಎಡದ ಕೈಯಲ್ಲಿ ಕಂಸಾಳೆ ಬಟ್ಟಲನ್ನು ಹಿಡಿದು ಬಲಗೈಯಲ್ಲಿ ಉದ್ದದ ದಾರವಿರುವ ಗೊಂಡೆಯ ಕಂಸಾಳೆಯನ್ನು ಬೀಸಿ ಮೈಕೈ ಬಾಗಿ ಬಳುಕಿಸಿ ಕುಣಿಯುವುದೇ 'ತಾರ್ ಬಟ್ಟು' ಎಂದರೆ ಬಿರುಸಾಗಿ ಕಂಸಾಳೆಯ ಮೇಲ್ಮುಸುರನ್ನು ಬೀಸಿ ಆಡುವುದು."[೨೭] ಬೀಸು ಕಂಸಾಳೆಯಲ್ಲಿ ವೈವಿಧ್ಯವಿದೆ. ಕಂಸಾಳೆಯನ್ನು ಕಟ್ಟುತ್ತಾ ಕುಣಿಯುವ ವೈಖರಿ ಆಕರ್ಷಕವಾಗಿರುತ್ತದೆ.

ಮಲೆಯಮಾದೇಶ್ವರನ ಜಾತ್ರೆ ಅತ್ಯಂತ ವೈಶಿಷ್ಟಮಯವಾದುದು. ಮಾದೇವನಿಗೆ ಹಲವಾರು ಜಾತ್ರೆಗಳಾಗುವುದು ಒಂದು ವಿಶೇಷ. ಶಿವರಾತ್ರಿ, ಯುಗಾದಿ, ನವರಾತ್ರಿ, ದೀಪಾವಳಿಗಳಲ್ಲಿ ದೊಡ್ಡ ಪ್ರಮಾಣದ ಜಾತ್ರೆಯಾಗುತ್ತದೆ. ಶಿವರಾತ್ರಿ ಜಾತ್ರೆ ಪ್ರಸಿದ್ಧವಾದುದು. ಮಾದೇಶ್ವರನ ಬೆಟ್ಟದಲ್ಲಿ ಹಬ್ಬ, ಜಾತ್ರೆ, ಉತ್ಸವಗಳ ಸಂದರ್ಭದಲ್ಲಿ ಕಂಸಾಳೆ ಪ್ರದರ್ಶನವಾಗುತ್ತದೆ. ಕಂಸಾಳೆಯ ಸವಿಯನ್ನು ಇಲ್ಲಿ ಸವಿಯಬೇಕು. "ಕಂಸಾಳೆಯ ಬಡಿತ ಎಪ್ಪೊಂದು ಸೊಲ್ಲು ಸಡಗರಗಳಿಂದ ಕೂಡಿ ಕಲಾವಿದರ ಆವೇಶ ಭರಿತ ಕುಣಿತವು ಯುದ್ಧ ಕಲೆಯ ನೃತ್ಯದಂತೆ ಗೋಚರಿಸುತ್ತದೆ. ಗಂಡಸರು ಬೀಸು ಕಂಸಾಳೆ ಉಯ್ಯುತ್ತಿದ್ದರೆ, ಪ್ರಮುಖ ಹಾಡುಗಾರ ಮಾದೇಶ್ವರನ ಮಹಿಮೆಯನ್ನು ವಿಸ್ತಾರವಾಗಿ ಹಾಡುತ್ತಾ ಹೋಗುತ್ತಾನೆ. ಇನ್ನೊಂದೆಡೆಗೆ ಹೆಂಗಸರು ಮಾದೇವನ ಸ್ತುತಿ ಮಹಿಮೆಗಳ ಪದಗಳನ್ನು ನಿರಂತರವಾಗಿ ಹಾಡುತ್ತಿರುತ್ತಾರೆ. ಮಾದೇಶ್ವರನ ಜಾತ್ರೆಯೆಂದರೆ ಅದು ಆ ಕಾವ್ಯದ ಹಾಡುಗಾರರ ಮೇಳ."[೨೮]

"ಮಾದೇಶ್ವರನ ಪರಿಸರದಲ್ಲಿ ಮದ್ಯ, ಮಾಂಸ ಸೇವಿಸುವಂತಿಲ್ಲ. ಸ್ತ್ರೀ ಸಂಸರ್ಗ ಮಾಡುವಂತಿಲ್ಲ. ಮುಟ್ಟು, ತಟ್ಟು, ಮೈಲಿಗೆಯಾಗಿ ಹೋಗುವಂತಿಲ್ಲ. ನಮ್ರತೆಯಿಂದ, ವಿನಯದಿಂದ ನಡೆದುಕೊಳ್ಳುತ್ತಾ ಕಾಲುದಾರಿಯಲ್ಲಿ ಸರ್ಪನಹಾದಿ, ಬಸವನ ಹಾದಿಯಲ್ಲಿ ಸಾಗಿ ಹೋಗುತ್ತವೆ ಪರಸೆಗಳು."[೨೯]

'ಗುಡ್ಡರನ್ನು' ಬಿಡುವ ಪದ್ಧತಿ ವಂಶಪಾರಂಪರ್ಯವಾಗಿ ನಡೆದುಕೊಂಡು ಬರುವಂತಹುದು. ಹರಿಜನರು, ಒಕ್ಕಲಿಗರು, ಕುರುಬರು, ಗಂಗಮತಸ್ಥರು, ಉಪ್ಪಲಿಗರು, ಮಡಿವಾಳರು, ಪರಿವಾರದವರು ಮಾದೇಶ್ವರನ ಗುಡ್ಡರಾಗುತ್ತಾರೆ. ಗುಡ್ಡರಲ್ಲಿ ಸಿರಿಯ ದೇವರಗುಡ್ಡರು ಮತ್ತು ಅಲೆಮಾರಿಗುಡ್ಡರು ಎಂಬ ಎರಡು ಸಂಪ್ರದಾಯಗಳಿವೆ. ಗುಡ್ಡರ ಮುಖ್ಯಸ್ಥ 'ಪುರುಸಕಾರಿ' ಈತನು ಪೂಜಾ ವಿಧಿಗಳಲ್ಲಿ ಅರ್ಚಕನ ಪಾತ್ರವನ್ನು ವಹಿಸುತ್ತಾನೆ. ಸಿರಿದೇವರಗುಡ್ಡರು ಕಂಚಿನ ತಟ್ಟೆಯಲ್ಲಿ ಊಟ ಮಾಡುವುದಿಲ್ಲ. ಕಂಚು ಮಾದೇಶ್ವರನ ಶ್ರೇಷ್ಠ

ಕಂಸಾಳೆ. ಸೋಮವಾರ, ಶುಕ್ರವಾರ, ಅಮವಾಸ್ಯೆಯ ದಿನ 'ಕ್ಷಾರಣ್ಯ' ಮಾಡುತ್ತಾರೆ. ಇವರು ಮದುವೆ ಆಗಬಹುದು. ಯುಗಾದಿ, ಶಿವರಾತ್ರಿ, ನವರಾತ್ರಿ, ದೀಪಾವಳಿ ಹಬ್ಬಗಳಲ್ಲಿ ಮಾದೇಶ್ವರನ ದರ್ಶನಕ್ಕೆ ಗುಡ್ಡಕ್ಕೆ ಹೋಗುತ್ತಾರೆ. ಗುಡ್ಡರಾಗುವವರಿಗೆ, ದೀಕ್ಷೆ ನೀಡುವಾತ 'ಪುರಸೇಕಾರಿ'. ಮಾದೇಶ್ವರ ಭಕ್ತರ ಆಯಾ ಜಾತಿಗೆ ಸಂಬಂಧಿಸಿದಂತೆ ಒಂದೊಂದು ಪ್ರದೇಶಕ್ಕೊಬ್ಬ ಪುರಸೇಕಾರಿ ಇರುತ್ತಾನೆ. ದೀಕ್ಷೆ ಮಾದೇಶ್ವರನ ಗುಡ್ಡದಲ್ಲಿ ಅಥವಾ ಅವರವರ ಊರಿನಲ್ಲಿ ನಡೆಯಬಹುದು. ಆಷಾಡಮಾಸವನ್ನು ಬಿಟ್ಟು ಶಿವರಾತ್ರಿ, ದೀಪಾವಳಿ, ಯುಗಾದಿ, ಕಾರ್ತೀಕಮಾಸದಲ್ಲಿ ಗುಡ್ಡರನ್ನು ಬಿಡುತ್ತಾರೆ. ಸಾಮಾನ್ಯವಾಗಿ ಸೋಮವಾರ ಅಥವಾ ಶುಕ್ರವಾರ ಗಳಲ್ಲೊಂದನ್ನು ಮುಹೂರ್ತದ ದಿನವೆಂದು ಆಯ್ಕೆ ಮಾಡುತ್ತಾರೆ. ಗುಡ್ಡರಾಗುವವರು ಮೊದಲು ಆಯಾ ಊರಿನ ಗುಡ್ಡರನ್ನು, ಜೋಗಿಗಳನ್ನು, ದಾಸರನ್ನು ದರ್ಶನ ಮಾಡಿ ಹಿರಿಯರೊಂದಿಗೆ ಬಾವಿ ಅಥವಾ ನದಿಯ ಹತ್ತಿರ ಸೇರುತ್ತಾರೆ. ಮೊದಲಿಗೆ ಮಂಡೆ, ಉಗುರು, ಉಡುದಾರಗಳನ್ನು ತೆಗೆಸಿ, ಗುಡ್ಡರ ಕೈಲಿ ನೀರು ಹಾಕಿಸಿ ಹೊಸ ಉಡುದಾರ, ಕಚ್ಚೆ ಪಾವುಡ, ಭಸ್ಮ ಇತ್ಯಾದಿಗಳನ್ನು ಧರಿಸಿ ಕಂಸಾಳೆ ನಾದದೊಂದಿಗೆ ಆತನನ್ನು ಕರೆತರಲಾಗುವುದು. ಪುರುಸೇಕಾರಿಗೆ ಹುಡುಗನನ್ನು ಒಪ್ಪಿಸಿ, 'ಈತ ನಮ್ಮ ಮಗನಲ್ಲ, ಮಾದೇಶ್ವರನ ಮಗ' ಎನ್ನುತ್ತಾ 'ಮಾದೇವ ನಿನ್ನೊಕ್ಕಲಾಯ್ತಿರೋ ಕಂದನನ್ನು ಉದ್ಧಾರ ಮಾಡಪ್ಪ' ಎಂದು ಕೈ ಮುಗಿಯುತ್ತಾರೆ. ಗದ್ದುಗೆ ಮೇಲೆ ಕುಳ್ಳಿರಿಸಿ ಕಂಕಣಧಾರಣೆ ಮಾಡಿ, ಹಾಲನ್ನು ಎರೆವರು. ಪುರುಸೇಣ ಗುಡ್ಡನ ಕೈಗೆ ಎಲೆ ಅಡಿಕೆ, ಬೆಲ್ಲ, ಕಾಯಿ ಇಟ್ಟು ದೀಕ್ಷೆ ಮಾಡಿಸುವನು. "ಇಂದಿನವರೆಗೆ ತಂದೆ ತಾಯಿಯರ ಮಗನಾಗಿದ್ದೆ ಇನ್ನು ಮುಂದೆ ನೀನು ಮಾದಪ್ಪನ ಮಗ" ಎಂದು ಎಲ್ಲರು ಹೇಳಿದ ಮೇಲೆ ಲಿಂಗಧಾರಣೆಗೆ ಎಲ್ಲರ ಒಪ್ಪಿಗೆ ಪಡೆದ ಪುರುಸೇಕಾರಿ ಹುಡುಗನಿಗೆ ರುದ್ರಾಕ್ಷಿಧಾರಣೆ ಮಾಡುತ್ತಾ ಅಕ್ಷತೆ ಎರಚುವರು. ಸ್ವಾಮಿಗಳಿಗೆ ಕಾಣಿಕೆ ಇಟ್ಟು ಕೊಡುವನು. ಕಂಸಾಳೆ ನುಡಿಸಿಕೊಂಡು ಲಿಂಗಧಾರಣೆಗೆ ಶರಣಾರ್ಥಿ ಎನ್ನುವರು. ಶಿಷ್ಯನಿಗೆ ಜೋಳಿಗೆ ಬೆತ್ತಕೊಟ್ಟು ಸೋಮವಾರ, ಶುಕ್ರವಾರ ಕ್ಷಾರಣ್ಯ ಸಾರಿ ಬಂದದನ್ನು ನಾಲ್ಕು ಜನಕ್ಕೆ ಹಾಕಬೇಕು... ಎಂದು ಕ್ಷಾರಣ್ಯ ಮಾಡಿ ತಂದು ಹಿರಿಯರಿಗೆ ನಮಸ್ಕರಿಸುತ್ತಾನೆ. ಆತನ ಕಿವಿಗೆ ಪಂಚಾಕ್ಷರಿ ಮಂತ್ರೋಪದೇಶ ಮಾಡುತ್ತಾನೆ. ಗುಡ್ಡ ಪಾಲಿಸಬೇಕಾದ ನಿಯಮವನ್ನು ಹೇಳಲಾಗುತ್ತದೆ. ಅಂದು ಗುಡ್ಡರಿಗೆ ಊಟ ಹಾಕಿ ಹೊಸದಾಗಿ ದೀಕ್ಷೆ ಪಡೆದ ಗುಡ್ಡನಿಗೆ ಮುತ್ತುಗದ ಎಲೆಯಲ್ಲಿ ಎಲ್ಲರೂ ಒಂದೊಂದು ಹಿಡಿ ಅನ್ನ ಹಾಕುತ್ತಾರೆ. ಅದನ್ನು ಪಂಕ್ತಿಯಲ್ಲಿ ಕುಳಿತು ಉಣ್ಣುತ್ತಾನೆ. ಅಂದಿನಿಂದ ಆತ ಗುಡ್ಡರ ಗುಂಪಿಗೆ ಸೇರಿದವನು. ಒಳ್ಳೆಯ ಹಾಡುಗಾರನಾದರೆ ಅವನು ಮಾದೇಶ್ವರನ ಕಥೆಯನ್ನು ಅಭ್ಯಾಸ ಮಾಡುತ್ತಾನೆ. ಇಲ್ಲವಾದಲ್ಲಿ ಕಂಸಾಳೆ ನುಡಿಸುತ್ತಾ ಬಿಡಿ ಹಾಡುಗಳನ್ನು ಹಾಡಲು ಹೇಳಿ ಕೊಡಲಾಗುತ್ತದೆ.

ಮಾದೇಶ್ವರ ಕಾವ್ಯ ಸಮಷ್ಟಿಯ ಸೃಷ್ಟಿ. ಕಾಲದಿಂದ ಕಾಲಕ್ಕೆ ಬದಲಾವಣೆಗಳಾಗುತ್ತಾ ಬೆಳೆಯುತ್ತಾ ಪರಂಪರೆಯಿಂದ ವಿಸ್ತಾರವಾಗಿದೆ. ವಿಕಾಸಶೀಲ ಮಹಾಕಾವ್ಯ ಪ್ರಥಮತಃ ಸಣ್ಣ ಪ್ರಮಾಣದಲ್ಲಿ ರೂಪಧಾರಣೆ ಮಾಡಿದಾಗ ಒಬ್ಬ ನಿರ್ದಿಷ್ಟ ವ್ಯಕ್ತಿಯ ಚಿಂತನೆ ಮತ್ತು ಅಭಿವ್ಯಕ್ತಿಗಳು ಕೆಲಸ ಮಾಡಿರುತ್ತದೆ. ನಂತರ ಅನೇಕ ವ್ಯಕ್ತಿಗಳ ಪ್ರತಿಭೆಗೆ ತಕ್ಕಂತೆ ಮಾರ್ಪಾಡು ಹೊಂದಿ ಮಹಾಕಾವ್ಯವಾಗಿ ಬೆಳೆಯುತ್ತದೆ. ಹೀಗೆ ಬೆಳೆಯುವಾಗ ಇದಕ್ಕೆ ಕಾರಣರಾದ ವ್ಯಕ್ತಿಗಳು ಮಾತ್ರ ಅನಾಮದೇಯರಾಗಿಯೇ ಉಳಿಯುತ್ತಾರೆ. ಹೀಗೆ ಕಾವ್ಯ ಎಲ್ಲರ ಸಂಪತ್ತಾಗುತ್ತದೆ. ಮಾದೇಶ್ವರ ಕಾವ್ಯ ತಿಳಿಸಿಕೊಡುವಂತೆ ಮಾದೇಶ್ವರನ ಮೂಲ ಉದ್ದೇಶ ಶ್ರವಣದೊರೆಯ

ಸಂಹಾರ. ಈ ಉದ್ದೇಶದಿಂದ ಹುಟ್ಟಿಕೊಂಡಿರಬಹುದಾದ ಕಾವ್ಯ ನಂತರ ಒಬ್ಬ ದೇವತೆಯಾಗಿ ಪೂಜೆಗೊಂಡು ತನ್ನ ಪವಾಡಗಳಿಂದ ಮತ್ತು ವ್ಯಕ್ತಿತ್ವದಿಂದ ಒಕ್ಕಲನ್ನು, ಶಿಶುಮಕ್ಕಳನ್ನು ಪಡೆಯುತ್ತಾ ಲೋಕಕಲ್ಯಾಣ ಮಾಡುತ್ತಾ ಐತಿಹ್ಯಗಳನ್ನು ಸೇರಿಸಿಕೊಂಡು ಈ ಕಾವ್ಯ ಅನೇಕ ಪ್ರತಿಭಾನ್ವಿತ ಜನಪದ ಕಲಾವಿದರ ಪರಿಷ್ಕಾರಕ್ಕೆ ಒಳಪಟ್ಟು ವಿಕಾಸಗೊಂಡಿದೆ. ಮಾದೇಶ್ವರ ಕಾವ್ಯ ಮಂಟೇಸ್ವಾಮಿ ಕಾವ್ಯಕ್ಕಿಂತಲೂ ಹಿರಿದು. "ಮಂಟೇಸ್ವಾಮಿ ಕಾವ್ಯ" ಏಕಸೂತ್ರಕ್ಕೆ ಒಳಪಡುವ ಕಾವ್ಯವಾದರೆ, ಮಾದೇಶ್ವರ ಕಾವ್ಯ ತಾಳುಗತೆಯನ್ನು ಹೊರತುಪಡಿಸಿದರೆ ಹಲವು ದಿಕ್ಕುಗಳಲ್ಲಿ ಹರಿಯುವ ವಿಸ್ತಾರವಾದ ಕಾವ್ಯ. ಜನಪದ ಮಹಾಕಾವ್ಯದ ಎಲ್ಲಾ ಲಕ್ಷಣಗಳನ್ನು ಒಳಗೊಂಡಿದೆ. ನಾಯಕ ಪ್ರಧಾನವಾದ ಈ ಕಾವ್ಯದಲ್ಲಿ ಸಂದರ್ಭಾನುಸಾರ ಮೆರೆಯುವ ವಿವಿಧ ಪವಾಡಗಳು ಮಾಯ, ಮಾಟ, ಮಂತ್ರಗಳ ಮೂಲಕ ಹಾಗೂ ಸರಳತೆಯ ಮೂಲಕ ವಿವಿಧ ಜನಾಂಗಗಳನ್ನು ಒಕ್ಕಲಾಗಿ ಪಡೆಯುವಿಕೆ ರೋಚಕನೀಯವಾದುದು. ಕಾವ್ಯದ ಒಂದೊಂದು ಸಾಲು ಖಂಡಕಾವ್ಯದ ವ್ಯಾಪ್ತಿ ಹೊಂದಿದೆ.

ಜನಪದ ಕಾವ್ಯಗಳಲ್ಲೇ 'ಮಾದೇಶ್ವರ ಕಾವ್ಯ' ಫಿನ್ ಲೆಂಡಿನ 'ಕಲೆವಾಲ' ಜನಪದ ಮಹಾಕಾವ್ಯವನ್ನು ಬಿಟ್ಟರೆ ಜಗತ್ತಿನಲ್ಲಿನ ಅತಿ ವಿಸ್ತಾರವಾದ ದೊಡ್ಡ ಕಾವ್ಯ. ಮಾದೇಶ್ವರನ ಸುತ್ತ ಹಲವಾರು ಕಥೆಗಳು ಹೆಣೆದಿದ್ದು ಈ ಎಲ್ಲಾ ಕಥೆಗಳಿಗೂ ಮಾದೇವನೆ ನಾಯಕ. ಸೋಲೆಂಬುದೆ ಇಲ್ಲ. "ಮಹತ್ವಾಕಾಂಕ್ಷಿಯೂ, ಸಾಹಸ ಪ್ರಿಯನೂ ಆದ ಮಾದೇಶ್ವರ ಈ ಕಾವ್ಯದಲ್ಲಿ ಅತ್ಯಂತ ಕ್ರಿಯಾಶೀಲ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ. ಸುಮ್ಮನೆ ಕೂರುವ ಸ್ವಭಾವ ಅವನದಲ್ಲವೇ ಅಲ್ಲ. ಯಾವಾಗಲೂ ಏನಾದರೊಂದು ಚಟುವಟಿಕೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುವ ಹಂಬಲವುಳ್ಳವನು. ತಾನು ಕೈಗೊಂಡ ಯಾವುದಾದರೊಂದು ಕಾರ್ಯ ಮುಗಿದ ಮೇಲೆ ಏಳು ಬಾಯಿಯ ಹೊನ್ನುತ್ತದಲ್ಲಿ ನೆಲೆಗೊಂಡನೆಂಬ ಮಾತು ಬರುತ್ತದೆ. ಆದರೆ ಹೆಚ್ಚು ಕಾಲ ಅಲ್ಲಿರುವುದಿಲ್ಲ. ಗಕ್ಕನೆ ಎದ್ದು ಎಲ್ಲಿಗಾದರೂ ದೃಷ್ಟಿ ಇಡುತ್ತಾನೆ. ಶಿಷ್ಟ ರಕ್ಷಣೆ, ದುಷ್ಟ ಶಿಕ್ಷಣವೊ, ತಕ್ಕನಾದ ಒಕ್ಕಲು ಪಡೆಯುವುದೊ ಗುಡಿ ಕಟ್ಟಿಸಿಕೊಳ್ಳುವುದೋ, ಇನ್ನಾವುದೋ ಕಾರ್ಯ ಅವನಿಗೆ ಎದುರಾಗುತ್ತದೆ. ಅವನ ಈ ಕಾರ್ಯೋನ್ಮುಖತೆಯಿಂದಾಗಿ ಕಾವ್ಯವೂ ಕ್ರಿಯಾಶೀಲವಾಗಿಯೇ ಸಾಗುತ್ತದೆ."[೩೦] ಕಾವ್ಯದ ಕಥಾತಂತ್ರ ಕುತೂಹಲ, ಆಸಕ್ತಿಗಳನ್ನು ಕೆರಳಿಸುವುದು. ಕಂಸಾಳೆ ಗುಡ್ಡರು, ಮಾದೇಶ್ವರರ ಹುಟ್ಟು, ಬಾಲ್ಯಗಳಿಂದ ಹಿಡಿದು ದುಷ್ಟರನ್ನು ಸಂಹಾರ ಮಾಡಿ ಭಕ್ತರನ್ನು ರಕ್ಷಿಸಿ, ಹೇಗೆ ಮಾದೇಶ್ವರ ದೈವತ್ವಕ್ಕೇರಿದರೆಂಬುದನ್ನು ಹೇಳುವ ವೈಖರಿ ಬಲು ಸೊಗಸು. ಕಾವ್ಯ ಭಾಷಾ ದೃಷ್ಟಿಯಿಂದ ವೈವಿಧ್ಯಪೂರ್ಣವಾಗಿದ್ದು. ಕಾವ್ಯ ಕಥೆಯ ನಿರೂಪಣೆ ನೇರ ಸರಳ ಸಹಜತೆಯಿಂದ ಕೂಡಿ ಆಡಂಬರವಿಲ್ಲದೆ, ಆಡುಮಾತಿನ ಸೊಗಸಿನಲ್ಲಿ ವಿಶಿಷ್ಟ ಪಾತ್ರಗಳಿಂದ ಕೂಡಿ ಭಕ್ತ ಜನರ ಮನಮುಟ್ಟಿ, ತಟ್ಟಿ ರಂಜಿಸುತ್ತದೆ. ಕಾವ್ಯ ಚಂಪೂ ಶೈಲಿಯಲ್ಲಿದ್ದು, ಕಾವ್ಯದ ಭಾಷೆಯನ್ನು ಹಾಡು ಮತ್ತು ವಚನ ಎಂದು ಎರಡಾಗಿ ವಿಭಾಗಿಸಿಕೊಳ್ಳಬಹುದು. ಕಂಸಾಳೆಯನಾದದೊಂದಿಗೆ ಹಾಡಿಕೊಳ್ಳಲು ಅನುಕೂಲವಾಗುವಂತೆ ಹಾಡು ಲಯಬದ್ಧತೆಯನ್ನು ಹೊಂದಿದೆ. ವಚನ ಗದ್ಯಕ್ಕೆ ಸಮೀಪವಾಗಿದೆ. ಆದರೆ ಗದ್ಯವಲ್ಲ. ಕಾವ್ಯದ ಕೇಂದ್ರಬಿಂದು ಮಾದೇಶ್ವರ. ಕಾವ್ಯದ ಒಂದೊಂದು ಸಾಲುಗಳನ್ನು ರಾತ್ರಿ ಪೂರ್ತಿ ಹಾಡಬಹುದು. ಕಥೆಯ ಭಾಗಗಳನ್ನು ಸಾಮಾನ್ಯವಾಗಿ ದೇವರ ಗುಡ್ಡರು ಹಾಡುತ್ತಾರೆ. "ಮಂಡ್ಯ, ಬೆಂಗಳೂರು, ಮೈಸೂರು, (ಚಾಮರಾಜನಗರ) ಜಿಲ್ಲೆಯ ಅನೇಕ ಮಂದಿ ಕಲಾವಿದರ ಸಂದರ್ಶನದ ಅನಂತರ ಮಾದೇಶ್ವರ ಕಾವ್ಯ ಏಳು ಕವಲುಗಳಲ್ಲಿ ಉಳಿದು ಬಂದಿರುವುದನ್ನು"[೩೧] ಡಾ. ಜೀ. ಶಂ. ಪರಮಶಿವಯ್ಯನವರು ಗುರುತಿಸಿದ್ದಾರೆ.

ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಗೊಂಡಿರುವ ಮಲೆಯಮಾದೇಶ್ವರ ಜನಪದ ಮಹಾಕಾವ್ಯದಲ್ಲಿನ ಆರು ಮುಖ್ಯ ಸಾಲುಗಳಲ್ಲಿ ಅಥವಾ ಭಾಗಗಳಲ್ಲಿ ಕಾವ್ಯ ತನ್ನ ಹರವನ್ನು ಪಡೆದುಕೊಂಡಿವೆ. ಧರ್ಮಪ್ರಸಾರ ಕಾರ್ಯವನ್ನೂ, ಧರ್ಮಪ್ರಸಾರ ಕಾರ್ಯದಲ್ಲಿ ನಡೆಯುವ ಸಂಘರ್ಷವನ್ನು ಸವಿಸ್ತಾರವಾಗಿ ಹೇಳುತ್ತದೆ. ಪ್ರಾರ್ಥನೆ ಮತ್ತು ಮಂಗಳಾರತಿ ಭಾಗಗಳನ್ನು ಹೊರತುಪಡಿಸಿ, ಮೊದಲನೆಯ ಸಾಲಿನಲ್ಲಿ ಮಾದೇವ ಭೀಮನ ಕೊಲ್ಲಿಯಲ್ಲಿ ಕಾಣಿಸಿಕೊಂಡು ಹಲಗಪ್ಪ-ಮುದ್ದಮ್ಮ ದಂಪತಿಗಳನ್ನು ಹರಿಸಿ, ಉತ್ತರ ದೇಶಕ್ಕೆ ಹೋಗಿ ಶ್ರವಣಾಸುರನ ಸಂಹಾರಕ್ಕಾಗಿ ಶಿವನ ಅವತಾರವಾದ ಮಾದಪ್ಪ ಅಯೋನಿಜನಾಗಿ ಜನ್ಮತಳೆದು, ಉತ್ರಾಜಮ್ಮ, ಶಿವದಾಸ ದಂಪತಿಗಳಿಗೆ ಮಗನಾಗಿ ಬೆಳೆದು, ಶ್ರೀಶೈಲದಲ್ಲಿ ವ್ಯಾಘ್ರಾನಂದ ಸ್ವಾಮಿಗಳ ಶಿಷ್ಯನಾಗಿ, ಅನಂತರ ತಾನಿರಲು ಒಂದು ಯೋಗ್ಯ ತಪೋ ಭೂಮಿಯನ್ನು ಅರಸುತ್ತಾ ದಕ್ಷಿಣಾಭಿಮುಖವಾಗಿ ಹೊರಟು ಸುತ್ತೂರು ಮಠ, ಕುಂತೂರು ಮಠಗಳಲ್ಲಿ ಪವಾಡಗಳನ್ನು ಎಸಗಿ, ಅನೇಕ ಕಡೆಗಳಲ್ಲಿ ಸಂಚರಿಸುತ್ತಾ ಕೊನೆಗೆ ನಡುಮಲೆಯಲ್ಲಿ 'ಸೀಗೆ ಸಿರುಗಂಥ ಕೆಮ್ಮಬ್ಬೆ ಬಾಡು ಬಾಕುನ ಓತ್ತೆ ಒಳಗೆ' ನೆಲೆಯಾಗುವುದರ ಕಥೆಯಿದೆ. ಅವನಿಂದ ತನಗೊಂದು ಒಂದಂಕಣದ ಕಲ್ಲಿನ ದೇವಾಲಯವನ್ನು ಮಾದಪ್ಪ ಕಟ್ಟಿಸಿಕೊಳ್ಳುವುದನ್ನು ಎರಡನೆಯ ಸಾಲು ವಿವರಿಸಿದೆ, ಮೂರನೆ ಸಾಲಿನಲ್ಲಿ ದೇವಮಾನ ವಾದಿಗಳಿಗೆ ಪೀಡನಾಗಿದ್ದ ಶ್ರವಣಾಸುರನು ಹರಳಯ್ಯನ ಉರಿಚಮ್ಮಾಳಿಗೆಗಳನ್ನು ಮೆಟ್ಟುವಂತೆ ಮಾಡಿ ಆ ಮೂಲಕ ಅವನನ್ನು ಸಂಹರಿಸಿದ ಕಥೆಯನ್ನು ತಿಳಿಸುವ ದುಷ್ಟರ ದಮನದ ಕತೆ. ಮಲೆಯಮಾದೇಶ್ವರ ಕಾವ್ಯದಲ್ಲಿ ಅತ್ಯಂತ ಪ್ರಮುಖ ಮತ್ತು ಹೃದಯಸ್ಪರ್ಶಿ ಭಾಗಗಳೆಂದರೆ 'ಸಂಕಮ್ಮನ ಸಾಲು' ಹಾಗೂ 'ಬೇವಿನಹಟ್ಟಿ ಕಾಳಮ್ಮನ ಸಾಲುಗಳು'. ಪರಸ್ಪರ ವಿರುದ್ಧ ಆಶಯಗಳಿಂದ ರೂಪುಗೊಂಡಿರುವ ಮತ್ತು ಭಿನ್ನ ರಸಗಳನ್ನು ಪೋಷಿಸುವ ಇವೆರಡು ಕಥೆಗಳು ಮಾದೇಶ್ವರ ಕಾವ್ಯದ ಜೀವನಾಡಿಗಳು. ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವ ಕಥೆಗಳು. ಮೂಗಪ್ಪ-ರಾಮವ್ವ ಎಂಬ ಬಡ ದಂಪತಿಗಳನ್ನು ತನ್ನ ಎಣ್ಣೆ ಮಜ್ಜನಕ್ಕೆ ಶಿಷ್ಯರನ್ನಾಗಿ ಮಾದಪ್ಪ ಮಾಡುವ ಕಥೆ. ಈ ಎಲ್ಲಾ ಸಾಲುಗಳ ವಿಮರ್ಶೆಯನ್ನು ಮುಂದಿನ ಭಾಗಗಳಲ್ಲಿ ಮಾಡುವುದರಿಂದ ಇಲ್ಲಿ ಅವುಗಳ ವಿಮರ್ಶೆಗೆ ಒತ್ತು ನೀಡುತ್ತಿಲ್ಲ.

ಹಲವು ಬಿಡಿ ಕಥಾನಕಗಳನ್ನು ಹೊಂದಿರುವ ಈ ಕಾವ್ಯದ ಪ್ರತಿಯೊಂದು ಕಥಾಭಾಗವೂ ನಾಯಕ ಮಾದೇಶ್ವರನ ಮಹಿಮೆಯನ್ನು ಸಾರುತ್ತದೆ. ಒಂದೊಂದು ಸಾಲು ಒಂದೊಂದು ಸ್ವತಂತ್ರ ರೀತಿಯ ಖಂಡಕಾವ್ಯ ದಂತಿದ್ದು ಯಾವುದನ್ನು ಎಲ್ಲಿ ಬೇಕಾದರೂ ಹಿಂದೆ ಮುಂದೆ ಮಾಡಿಕೊಂಡು ಹಾಡಬಹುದಾಗಿದೆ.

''ಮಾದೇಶ್ವರನ ಕೆಲವು ಪ್ರಮುಖ ನಾಯಕತ್ವದ ಲಕ್ಷಣಗಳನ್ನು ಡಾ.ಹಿ.ಚಿ.ಬೋರಲಿಂಗಯ್ಯನವರು ಈ ರೀತಿ ಪಟ್ಟಿ ಮಾಡುತ್ತಾರೆ. ೧. ಮಾದಯ್ಯ ಅನ್ಯಾಯದ ವಿರುದ್ಧ ಇರುತ್ತಾನೆ. ೨. ಅಹಂಕಾರಿಗಳನ್ನು ವಿವೇಕಿಗಳನ್ನಾಗಿಸುತ್ತಾನೆ. ೩. ಹಿಂಸೆಯ ಬದಲು ತಂತ್ರಗಳನ್ನು ಮಾತ್ರ ಬಳಸುತ್ತಾನೆ. ೪. ಇವೆಲ್ಲದರ ಜೊತೆಗೆ ಮಾಟಕ್ಕೆ ಪ್ರತಿಮಾಟ, ತಂತ್ರಕ್ಕೆ ಪ್ರತಿತಂತ್ರ ಬಳಸಬಲ್ಲ ಮಹಾಮೋಡಿಕಾರನಾಗಿರುತ್ತಾನೆ.''[೩೨]

ಜನಪದ ಮಹಾಕಾವ್ಯಗಳಲ್ಲಿ ಪವಾಡಗಳು ದಟ್ಟವಾಗಿ ಹರಡಿದ್ದು, ಹೆಜ್ಜೆ ಹೆಜ್ಜೆಗೂ ಪವಾಡಗಳಿಂದಲೇ ತುಂಬಿಹೋಗಿದೆ. ಪವಾಡಗಳು ಒಂದು ಕಾಲದ ಜೀವನ ಕ್ರಮವನ್ನು ಬಿಂಬಿಸುತ್ತವೆ. ನಮ್ಮ ಜನಪದರಿಗೆ ಪವಾಡಗಳ ಬಗ್ಗೆ ಅಪಾರವಾದ ನಂಬಿಕೆ. ಅವುಗಳನ್ನು ಮೆರೆದವರನ್ನು ಪವಾಡ ಪುರುಷರೆಂದು ಭಾವಿಸಿ ಅಂಥ ವ್ಯಕ್ತಿಗಳನ್ನು ದೈವತ್ವ ಸ್ಥಾನದಲ್ಲಿಟ್ಟು ಪೂಜಿಸುವುದು ಸಾಮಾನ್ಯ ಸಂಗತಿ. ಸಂತರ ಜೀವನ ಚರಿತ್ರೆಯೆಂದರೆ

ಪವಾಡಗಳ ಮೆರವಣಿಗೆ ಎಂಬ ಭಾವನೆ. ಸಂಕಷ್ಟದಲ್ಲಿ ಮುಳುಗಿದವರನ್ನು ಪಾರುಮಾಡಲು ಧಾರ್ಮಿಕ ಮಹಾಪುರುಷರು ಪವಾಡಗಳನ್ನು ಮಾಡುತ್ತಾರೆಂಬ ನಂಬಿಕೆ. ಧಾರ್ಮಿಕ ಪುರುಷರೂ ಸಹ ಜನರಲ್ಲಿ ಭಕ್ತಿ ಶ್ರದ್ಧೆಗಳನ್ನು ಹೆಚ್ಚಿಸುತ್ತಾ ತಾವು ಹೇಳುವ ಉಪದೇಶಗಳ ಬಗ್ಗೆ ವಿಶ್ವಾಸವನ್ನು ತುಂಬುತ್ತಾ ಭಕ್ತ ಸಮೂಹವನ್ನು ಹೆಚ್ಚಿಸಿಕೊಳ್ಳುವಲ್ಲಿ ಪವಾಡಗಳನ್ನು ಉಪಯೋಗಿಸಿಕೊಂಡಿದ್ದಾರೆ.

''ಪವಾಡಗಳು ಬಹುಶಃ ಎರಡು ಕಾರಣಕ್ಕಾಗಿ ಕತೆಗಳಲ್ಲಿರುತ್ತದೆ. ಮೊದಲನೆಯದು, ಅವು ಆ ಕತೆ ಸೃಷ್ಟಿಗೊಂಡ ಸಮಾಜದ, ಜನವರ್ಗದ ಆಶಯಗಳನ್ನು ಸೂಚಿಸುತ್ತವೆ. ಎರಡನೆಯದು, ಕತೆ ಒಂದು ಪ್ರತ್ಯೇಕ ಸೃಷ್ಟಿಯಾಗಿ, ಕತೆ ಮುಂದುವರಿಯಲು ರಾಚನಿಕ ಅಗತ್ಯವಾಗಿ ಬಂದಿರುತ್ತದೆ.''[೩೩] ಮಲೆಯಮಾದೇಶ್ವರ ಜನಪದ ಕಾವ್ಯದಲ್ಲಿ ಪವಾಡಗಳನ್ನು ಹುಡುಕುವಂತಿಲ್ಲ. ಕಾವ್ಯದ ಪ್ರತಿ ಹೆಜ್ಜೆಯಲ್ಲಿಯೂ ಪವಾಡ ಸದೃಶ ಅಂಶಗಳು ತುಂಬಿರುವುದು ಕಾಣಬರುತ್ತದೆ.

ಮಾದೇಶ್ವರರು ಸಾಮಾನ್ಯರಲ್ಲ, ಅತಿಸಾಮಾನ್ಯರೊಡನೆ ಇದ್ದು, ಸಾಮಾನ್ಯರಾಗಿ ಬಾಳಿ ಸಾಮಾನ್ಯರ ಕಷ್ಟ ಸುಖಗಳಲ್ಲಿ ಸಮಭಾಗಿಗಳಾಗಿ ಅವರ ಬದುಕನ್ನು ಪವಾಡ ಶಕ್ತಿಯಿಂದ ಮೇಲೆತ್ತಿದವರು.

ಮಾದೇಶ್ವರರು ಪ್ರಾಣಿಗಳ ಜೊತೆಗೆ ಹೊಂದಿದ ಸಂಬಂಧ ಹೃದಯಸ್ಪರ್ಶಿಯಾದುದು. ಶಿಷ್ಟ ಸಂಸ್ಕೃತಿಯಲ್ಲಿ ಸಿಂಹ ಪ್ರಮುಖ ಪಾತ್ರವಹಿಸಿದರೆ, ಜನಪದ ಸಂಸ್ಕೃತಿಯಲ್ಲಿ ಅದರ ಸ್ಥಾನ ಹುಲಿಗೆ. ಮಾದೇಶ್ವರನ ವಾಹನ ಹುಲಿ ಎಂಬುದು ಇದಕ್ಕೆ ಉದಾಹರಣೆ. ಇದು ಒಂದು ಸಮುದಾಯ ಅಥವಾ ವ್ಯಕ್ತಿಯ ಗುಣ, ಶೌರ್ಯ, ಆತ್ಮಬಲ ಇಂತಹದನ್ನೆಲ್ಲ ಅಳೆಯುವ ಸಾಧನವಾಗಿ ಕಂಡುಬರುತ್ತದೆ.

ಮಾದೇಶ್ವರನ ಮಾನವೀಯ ಕಳಕಳಿ, ಪ್ರೇಮ ಅಪಾರವಾದುದೆಂಬುದನ್ನು ಕಾವ್ಯದಲ್ಲಿ ಕಾಣಬಹುದು. ಒಬ್ಬರ ಸೊಕ್ಕನ್ನು ಮುರಿಯುವ ಮೊದಲು ಅವನಿಗೆ ಎಲ್ಲ ಸಿರಿ ಸಂಪತ್ತುಗಳನ್ನು ಕೊಟ್ಟು ತದನಂತರ ತನ್ನ ಕನಿಷ್ಟ ಕೋರಿಕೆಗಳನ್ನು ನೆರವೇರಿಸಲು ಕೇಳಿಕೊಂಡಾಗಲೂ ಅದನ್ನು ನೆರವೇರಿಸದಿದ್ದರೆ ಹಾಗೂ ತನ್ನ ಸ್ವಭಾವಕ್ಕೆ ಪೆಟ್ಟು ಬಿದ್ದಾಗ, ನಾಶದ ಪ್ರತಿರೂಪವಾಗಿ ವರ್ತಿಸುತ್ತಾನೆಂಬುದನ್ನು ಕಾವ್ಯ ಸ್ಪಷ್ಟವಾಗಿ ವಿವರಿಸುತ್ತದೆ. ಉದಾಹರಣೆಗೆ ತನ್ನನ್ನು 'ಮಾದಿಗ' ಎಂದು ಕರೆದ ಶ್ರವಣ ದೊರೆಯನ್ನು ಮಾದಿಗರ ಕೈಯಿಂದಲೇ ಮಾಡಿಸಿದ ಉರಿ ಚಮ್ಮಾಳಿಗೆಯಿಂದ ನಾಶ ಮಾಡುತ್ತಾನೆ. ರಾಕ್ಷಸೀ ಗುಣಗಳ ಬೇವಿನಕಾಳಮ್ಮ ಮಾದೇವನ ಎಣ್ಣೆ ಮಜ್ಜನಕ್ಕಾಗಿ ಎಳ್ಳು ಕೊಡಲು ಪರಿಪರಿಯಾಗಿ ಬೇಡಿಕೊಂಡಾಗಲೂ ಬಲು ಕೆಟ್ಟದ್ದಾಗಿ ನಿರಾಕರಿಸಿದಾಗ ಇಡೀ ಕುಟುಂಬವನ್ನು ನಾಶಮಾಡಿ ಸೊಕ್ಕಿನಿಂದ ವರ್ತಿಸಿ ಆಕೆಯನ್ನು ಗೋಗಲ್ಲು ಮಾಡಿ ನಿಲ್ಲಿಸುತ್ತಾನೆ. ಆದಿಶಕ್ತಿಯಿಂದಲೇ ಹುಟ್ಟಿದ ಮಾದೇವ ಕಾಮಪೀಡಿತಳಾದ ಆಕೆಯನ್ನು ಮದುವೆಯಾಗಲು ನಿರಾಕರಿಸಿ ತನ್ನ ಮಾಯದ ಶಕ್ತಿಯಿಂದ ಆದಿಶಕ್ತಿಯನ್ನು ಸುಟ್ಟು ಭಸ್ಮ ಮಾಡುತ್ತಾನೆ. ಮಾದೇಶ್ವರ ತನಗೆ ಒಲಿದವರನ್ನು ರಕ್ಷಿಸಿ ಸಕಲೈಶ್ವರ್ಯಗಳನ್ನು ಕರುಣಿಸಿ ರಕ್ಷಣೆ ನೀಡಿ ತನ್ನ ಒಕ್ಕಲನ್ನಾಗಿಸಿಕೊಳ್ಳುತ್ತಾನೆ. ಉದಾಹರಣೆಗೆ ಸೋಲಿಗ ನೀಲೇಗೌಡನ ಹೆಂಡತಿ ಸಂಕಮ್ಮನಿಗೆ ಅವಳ ಗಂಡ ನೀಲಯ್ಯನಿತ್ತ ಕಷ್ಟ ಕೋಟಲೆಗಳಿಂದ ಅವಳನ್ನು ಪಾರು ಮಾಡಿ, ಅವಳಿಗೆ ಸಕಲೈಶ್ವರ್ಯಗಳನ್ನು ಮಕ್ಕಳ ಫಲವನ್ನು ನೀಡಿದ. ನಂತರ ನೀಲಯ್ಯ, ಸಂಕಮ್ಮನ ಪಾತಿವ್ರತ್ಯವನ್ನು ಶಂಕಿಸಿ ಆಕೆಗೆ ಒಡ್ಡುವ ಒಂದೊಂದು ಪರೀಕ್ಷೆಯನ್ನೂ ಮಾದೇಶ್ವರನ ಕೃಪೆಯಿಂದ ಸಂಕಮ್ಮ ಗೆಲ್ಲುತ್ತಾಳೆ. ಇಲ್ಲಿ ನೀಲಯ್ಯನ ಕಣ್ಣು ತೆರೆಸಲು ಮಾದೇವ ಮಾಡುವ ಪವಾಡಗಳು ಒಂದೊಂದು ಜನಪದ

ಆಶಯವಾಗಿ ಮೂಡಿವೆ. ಅವನ ಅನುಮಾನಗಳನ್ನು ಪರಿಹರಿಸಿ ಅವನ ಮಕ್ಕಳಾದ ಕಾರಯ್ಯ-ಬಿಲ್ಲಯ್ಯರನ್ನು ಶಿಶುಮಕ್ಕಳನ್ನಾಗಿ ಪಡೆಯುತ್ತಾರೆ. ಎಲ್ಲ ದೇವತೆಗಳು ಮಾರಿ ಮಸಣಿಯರೂ ಮಾದೇವನ ಕಣ್ಸನ್ನೆಗೆ ಹೆದರುತ್ತಾರೆ. ''ಕಾವ್ಯದಲ್ಲಿನ ಪವಾಡಗಳು ಹಾಗೂ ಆಶಯಗಳ ನಡುವೆ ಗೆರೆ ಎಳೆಯುವುದು ಮಾತ್ರ ಅತ್ಯಂತ ಸೂಕ್ಷ್ಮವೂ ಕಷ್ಟ ಸಾಧ್ಯವೂ ಆದ ಕೆಲಸ.''[೨೪]

ಜನಪದ ಮಹಾಕಾವ್ಯಕ್ಕೆ ಕಥೆಯ ಜೊತೆಗೆ ಗೀತೆ, ಐತಿಹ್ಯ, ಪುರಾಣ, ಪವಾಡ, ಗಾದೆ, ನಂಬಿಕೆ, ಆರಾಧನಾ ಸಂಪ್ರದಾಯ ಮುಂತಾದ ಸಾಂಸ್ಕೃತಿಕ ಅಂಶಗಳು ಸೇರಿದಾಗಲೇ ಕಾವ್ಯ ಶರೀರದ ಬೆಳವಣಿಗೆ ಸಾಧ್ಯ. ಈ ಎಲ್ಲ ಅಂಶಗಳೂ ಕಾವ್ಯದಲ್ಲಿ ಮೇಳೈಸಿರುವುದನ್ನು ಕಾಣಬಹುದಾಗಿದೆ.

ಈ ಮಹಾಕಾವ್ಯದ ಶರೀರದಲ್ಲಿ ಒಡೆದು ಕಾಣುವ ರಾಚನಿಕ ವಿನ್ಯಾಸಗಳೆಂದರೆ ಕಾವ್ಯದ ಎಲ್ಲಾ ಸಾಲುಗಳ ಪ್ರಮುಖ ಘಟ್ಟಗಳಲ್ಲೂ ಸ್ತುತಿ ಸ್ತವನಗಳು ಆರಂಭದಲ್ಲಿ ಬರುವುದು ಕ್ರಮ. ಈ ಕಥಾನಕದ ಪ್ರತಿಯೊಂದು ನಿಲುಗಡೆಯ ಸಂದರ್ಭದಲ್ಲೂ ಮಂಗಳ ಹಾಡುವುದು ಪದ್ಧತಿ. ಪುನರಾವರ್ತನೆ ಈ ಕಾವ್ಯದ ಎಲ್ಲ ಸಾಲುಗಳ ಪ್ರಸಂಗಗಳಲ್ಲೂ ಕಾಣಬರುತ್ತದೆ. ಹಾಡಿನ ಲಯ ವಿನ್ಯಾಸಗಳನ್ನು ಬದಲಿಸಿಕೊಳ್ಳುವುದಕ್ಕಾಗಿ ಕಥೆಗೆ ಹೊಸ ಆಯಾಮವನ್ನು ಕೊಡುವುದಕ್ಕಾಗಿ ''ಏಕತಾನತೆಯನ್ನು ನಿವಾರಿಸಿಕೊಳ್ಳುವುದಕ್ಕಾಗಿ ಹೇಳಬೇಕಾದುದನ್ನು ಕೇಳುಗರ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುವಂತೆ ಮಾಡುವುದಕ್ಕಾಗಿ ಈ ಪುನರಾವರ್ತನ ತಂತ್ರ ಬಳಕೆಯಾಗುತ್ತದೆ.''[೨೫] ಕಾವ್ಯದ ಪಠ್ಯದಲ್ಲಿರುವ ವ್ಯತ್ಯಾಸಗಳು ಬೇರೆ ಬೇರೆ ಹಾಡುಗಾರರು ಹಾಡುವ ಸಂದರ್ಭದಲ್ಲಿ ಗುರುತಿಸಬಹುದು. ನಾಯಕ ಪ್ರಧಾನವಾದ ಮಾದೇಶ್ವರ ಜನಪದ ಮಹಾಕಾವ್ಯದಲ್ಲಿ ಅನೇಕ ಪಠ್ಯಗಳು ಇರುವುದನ್ನು ಗುರುತಿಸಲಾಗಿದೆ. ಇಂಥ ಕಾವ್ಯಗಳಲ್ಲಿ ನಾಯಕನು ಸನ್ನಿವೇಶ ಸಂದರ್ಭಗಳಿಗನುಗುಣವಾಗಿ ರೂಪಾಂತರಕ್ಕೀಡಾಗುವ ಬಗೆ ಬಗೆಯ ಪವಾಡಗಳನ್ನು ಮೆರೆಯುವ ಸಂದರ್ಭಗಳು ಸರ್ವೇಸಾಮಾನ್ಯ. ಜನಪದ ಮಹಾಕಾವ್ಯದ ಸಹಜ ಸರಣಿ ಇದು. ಪರ್ಯಾಯ ಪಂಥವನ್ನು ಹುಟ್ಟುಹಾಕುವುದು ಸುಲಭದ ಕೆಲಸವಲ್ಲ. ಅದಕ್ಕೆ ಬೇಕಾದ ಸನ್ನಿವೇಶ ನಿರ್ಮಿಸಿ ಒಕ್ಕಲನ್ನು ಸಂಪಾದಿಸುವುದು ಬಲು ಮಹತ್ವದ ಚಟುವಟಿಕೆ. ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸಿ, ಭಕ್ತರ ಮನವೊಲಿಸುವ ಒಂದು ತಂತ್ರ ಮಾದೇಶ್ವರ ಕಾವ್ಯದಲ್ಲಿ ಫಲಿಸಿದೆ.

ಜನಪದ ಮಹಾಕಾವ್ಯಗಳು ಪ್ರಧಾನವಾಗಿ ಸ್ಥಳೀಯ ವೀರರ ಕಥನಗಳಾದುದರಿಂದ ಇಲ್ಲಿ ನಾಯಕರ ಶಕ್ತಿ ಪ್ರದರ್ಶನ ಮತ್ತು ಸಾಹಸ ಶೌರ್ಯ ಪರಾಕ್ರಮಗಳ ಚಟುವಟಿಕೆಗಳಿಗೆ ಹೆಚ್ಚು ಒತ್ತು ಇರುತ್ತದೆ. ಇದು ಜನಪದ ಕಥೆಗಳಿಗೆ ಸಹಜವಾದ ಕಥನ ತಂತ್ರ. ಮೌಖಿಕ ಮಹಾಕಾವ್ಯಗಳು ಮೂಲತಃ ಜನಪದ ಕಥೆಗಳೇ ಆದುದರಿಂದ ಕಥಾಂಶಗಳು ದೊಡ್ಡ ಪ್ರಮಾಣದಲ್ಲಿ ಅಳವಟ್ಟಿರುತ್ತವೆ. ಜನಪದ ಮಹಾಕಾವ್ಯ ಪರಂಪರೆಯನ್ನು ಒಂದು ಗೊತ್ತಾದ ಪ್ರದೇಶಕ್ಕೆ ರಾಜಕೀಯ ನಡಿಗೆಗೆ ಸೀಮಿತಗೊಳಿಸಲಾಗುವುದಿಲ್ಲ. ವ್ಯಾಪಕ ಸಂಸ್ಕೃತಿಗಳ ಜನಪದ ಮಹಾಕಾವ್ಯಗಳನ್ನು ಪ್ರಾರಂಭದಲ್ಲಿ ಒಂದು ಪ್ರಾದೇಶಿಕ ವ್ಯಾಪ್ತಿಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ನೋಡುವ ಯತ್ನ ಮಾಡಬೇಕಾಗುತ್ತದೆ. ಮುಂದುವರಿದ ಘಟ್ಟದಲ್ಲಿ ಅದನ್ನು ರಾಷ್ಟ್ರೀಯ ಸಂಸ್ಕೃತಿಯ ದೃಷ್ಟಿಕೋನದಲ್ಲಿ ಪರಿಭಾವಿಸಬೇಕಾಗುತ್ತದೆ.

ಮಲೆಯಮಾದೇಶ್ವರ ಜನಪದ ಮಹಾಕಾವ್ಯಕ್ಕೆ ಸರಿಸಾಟಿಯಾದ ಜನಪದ ಮಹಾಕಾವ್ಯಗಳು ಮೌಖಿಕ ಪರಂಪರೆಯಲ್ಲಿ ಭಾರತದ ಬೇರೆ ಬೇರೆ ಪ್ರದೇಶಗಳಲ್ಲಿ ಪ್ರಚಲಿತದಲ್ಲಿವೆ. ಇವುಗಳೆಲ್ಲ ರಾಷ್ಟ್ರೀಯ ಗುಣಗಳನ್ನು ಒಳಗೊಂಡಿದ್ದರೂ ಅವುಗಳನ್ನು ರಾಷ್ಟ್ರೀಯ ಮಹಾಕಾವ್ಯ ಎನ್ನಲಾಗುವುದಿಲ್ಲ. ಇಡೀ ದೇಶದ ಜನತೆಗೆ ಅಂಗೀಕಾರಾರ್ಹವಾದುದು ರಾಷ್ಟ್ರೀಯ ಮಹಾಕಾವ್ಯ. ಮಲೆಯ ಮಹದೇಶ್ವರದಂತಹ ಮಹಾಕಾವ್ಯಗಳು ಅಂತರ್ಯದಲ್ಲಿ (Spirit) ರಾಷ್ಟ್ರೀಯವಾಗಿದ್ದರೂ ವಿವರಗಳಲ್ಲಿ ಸ್ಥಳೀಯವಾಗಿರುತ್ತವೆ. ಜನಪದ ಮಹಾಕಾವ್ಯಗಳ ಅಧ್ಯಯನ ನಮ್ಮ ಜನರ ಜೀವನಕ್ರಮವನ್ನು ಅರ್ಥೈಸಲು ಅಲ್ಲದೆ, ಸಾಂಸ್ಕೃತಿಕ ಬಹುತ್ವದ ವಿಕಾಸ ಪ್ರಕ್ರಿಯೆಯ ಮೇಲೆ ಕೂಡ ಬೆಳಕು ಚೆಲ್ಲುತ್ತದೆ. ಮಲೆಯಮಾದೇಶ್ವರ ಮೌಖಿಕ ಕಾವ್ಯ, ಮಹಾಕಾವ್ಯ ಪರಂಪರೆಯ ಎಲ್ಲಾ ಲಕ್ಷಣ ಹಾಗೂ ಸ್ವರೂಪವನ್ನು ಹೊಂದಿದ್ದು, ಜನಪದ ಮಹಾಕಾವ್ಯವಾಗಿ, ಮೌಖಿಕ ಕಥಾನಕ ಪರಂಪರಾ ಜಗತ್ತಿನಲ್ಲಿ ರಾರಾಜಿಸುತ್ತಿದ್ದು ಜನಪದ ಮಹಾಕಾವ್ಯಗಳ ಅನರ್ಘ್ಯ ರತ್ನವಾಗಿದೆ.

### ೨.೨.೨. ಮಂಟೇಸ್ವಾಮಿ

ಮಂಟೇಸ್ವಾಮಿ ಕಾವ್ಯ ಅದ್ಭುತ ಕಥೆಗಳ ಒಂದು ಚಿತ್ರಶಾಲೆ. ಇದನ್ನು ಧರೆಗೆ ದೊಡ್ಡವರ ಕಾವ್ಯ ಎಂದು ಕರೆಯುತ್ತಾರೆ. ಇದೊಂದು ಅದ್ಭುತ ಘಟನೆಗಳಿಂದ ಕೂಡಿದ ವೀರರಸ ಪ್ರಧಾನ್ಯತೆಯುಳ್ಳ ಧಾರ್ಮಿಕ ಮೌಖಿಕ ಮಹಾಕಾವ್ಯ. ಇದರ ಮೂಲಪುರುಷ ಮಂಟೇಸ್ವಾಮಿ. ಮಂಟೇಸ್ವಾಮಿಯವರಿಗೆ ನಡೆದುಕೊಳ್ಳುವ ಜನಸಮೂಹವೇ 'ಮಂಟೇಸ್ವಾಮಿ ಒಕ್ಕಲುಗಳು'. ಕನ್ನಡನಾಡಿನ ದಕ್ಷಿಣಭಾಗದಲ್ಲಿರುವ ವೃತ್ತಿಗಾಯಕ ವರ್ಗಕ್ಕೆ ಸೇರಿದ ಒಂದು ಜನಾಂಗ ಅಂದರೆ ನೀಲಗಾರರು. ಮಾನವತ್ವದಿಂದ ದೇವಸ್ವರೂಪರಾದ ಮಂಟೇಸ್ವಾಮಿಯ ಮಹಿಮೆಯನ್ನು ಹಾಡುತ್ತಾ ಪ್ರಚಾರ ಮಾಡುವರು. ಇವರ ಮೇಲೆ ಮೌಖಿಕವಾಗಿ ರಚಿತವಾದ ಕಾವ್ಯವೇ ಮಂಟೇಸ್ವಾಮಿ ಕಾವ್ಯ. ಶೈವಸಂಪ್ರದಾಯದ ಮೂಲಕ್ಕೆ ಸೇರಿದ ಕನ್ನಡ ಜನಪದ ಸಾಹಿತ್ಯದ ಒಂದು ಮಹಾಕಾವ್ಯ.

ಕನ್ನಡ ನಾಡಿನಲ್ಲಿ ಹನ್ನೆರಡನೆಯ ಶತಮಾನದ ಶಿವಶರಣರು ಕುಲ ಏಳು ಹದಿನೆಂಟು ಜಾತಿಗಳು ಒಂದೇ ಎಂದು ಸಾರಿ ಮಾಡಿದ್ದ ಕಾಯಕತತ್ವ ಜಾತ್ಯಾತೀತ ಸಮಾಜ, ಆರ್ಥಿಕ, ಧಾರ್ಮಿಕಕ್ರಾಂತಿ, ಸಮಾನತೆಯಂತಹ ಆಶಯಗಳು ಜನಸಾಮಾನ್ಯರ ಸ್ವಾಭಿಮಾನಕ್ಕೆ ಕೆಳವರ್ಗದ ಜನರ ಆತ್ಮವಿಶ್ವಾಸಕ್ಕೆ ಹೊಸ ಬೆಳಕೊಂದು ದೊರೆತು ಲಕ್ಷಾಂತರ ಜನರು ಇತ್ತ ಆಕರ್ಷಿತರಾದರು. ಆದರೆ ನಂತರದ ಶತಮಾನಗಳಲ್ಲಿ ವೀರಶೈವ ಧರ್ಮ ಸಾಂಸ್ಥಿಕ ಪ್ರಕ್ರಿಯೆಯಿಂದ ಒಡೆದುಹೋಯಿತು. ಆಗ ಅನೇಕ ಸಮುದಾಯಗಳು ಹೊರಗುಳಿದವು. ಇಂತಹ ಸಂದರ್ಭದಲ್ಲಿ ಬಸವಣ್ಣ ಮತ್ತು ಅಲ್ಲಮಪ್ರಭುಗಳ ತತ್ವಾದರ್ಶನಗಳನ್ನು ಶೂದ್ರರ, ಪಂಚಮಕಾರರ ಆಸಕ್ತಿಯನ್ನು ಒಂದುಗೂಡಿಸಿ ಕೆಳವರ್ಗದ ಸಮುದಾಯಗಳನ್ನು ಒಂದು ಪಂಥದ ಅಡಿಯಲ್ಲಿ ತಂದವರು ಮಂಟೇಸ್ವಾಮಿಗಳು ಮತ್ತು ಮಲೆಯಮಾದೇಶ್ವರರು. ಕಲ್ಯಾಣದಲ್ಲಿನ ಶರಣರು ಮಾಂಸ, ಮಧ್ಯ, ಭಂಗಿ, ಮೈಥುನಗಳಂಥ ಚೈತನ್ಯದಾಯಕ ಜೀವನ ಪ್ರೀತಿಯ ವಿಚಾರಗಳನ್ನು ತೊರೆದು ತಮ್ಮನ್ನು ನಿಯಂತ್ರಿಸಿಕೊಳ್ಳಲು ಹಲವು ಕಟ್ಟುಪಾಡುಗಳನ್ನು ಹಾಕಿಕೊಂಡರೂ, ಕೆಳವರ್ಗದ ಜನ ತಮ್ಮ ಈ ಪ್ರೀತಿಯ ವಿಚಾರಗಳನ್ನು ಎಂದೂ ತೊರೆದವರಲ್ಲ. ಬಲವಂತಕ್ಕೆ ತೊರೆದರೂ ಅದು ತಾತ್ಕಾಲಿಕವಾಗಿದ್ದು, ಯಾವುದೇ ನಿಯಂತ್ರಣಕ್ಕೆ ಒಳಗಾದ ವರಲ್ಲ. ಇಂತಹ ಕೆಳವರ್ಗದ ಜನರ ಆತ್ಮವಿಶ್ವಾಸಕ್ಕೆ, ಜನಸಾಮಾನ್ಯರ ಸ್ವಾಭಿಮಾನಕ್ಕೆ ಬೆಳಕನ್ನು ನೀಡಿದವರು

ಮಂಟೇಸ್ವಾಮಿಗಳು. ವಚನಕಾರರಗಿಂತ ವಿಭಿನ್ನವಾದ ಆಂದೋಲವನ್ನು ಹುಟ್ಟುಹಾಕಿ, ಶಿಷ್ಟರ ಒಣ ಸಂಪ್ರದಾಯದ ಕತೆಯನ್ನು ಕಿತ್ತೊಗೆದು, ಹೆಂಡ, ಮಾಂಸ, ಭಂಗಿ ಮುಂತಾದವುಗಳ ಜೊತೆಗೆ ಜನಸಾಮಾನ್ಯರ ಬದುಕಿದೆಯೆಂದು ಗೌರವಿಸಿ, ಶಿಷ್ಟಸಂಸ್ಕೃತಿ ಯಾವುದನ್ನು ತುಚ್ಛವೆಂದು ನಿರಾಕರಿಸಿತ್ತೋ ಅಂತಹ ವಸ್ತುಗಳೇ ತಮ್ಮ ಪರಂಪರೆಯ ಧಾರ್ಮಿಕ ಸಂಕೇತಗಳಾಗಿ ಮಂಟೇಸ್ವಾಮಿಗಳು ಮಾರ್ಪಡಿಸಿಕೊಳ್ಳುತ್ತಾರೆ. ಆ ಮೂಲಕ ಒಂದು ಪ್ರತಿ ಸಂಸ್ಕೃತಿ ನಿರ್ಮಾಣಕ್ಕೆ ಕಾರಣರಾದರು. ಉದಾಹರಣೆಗೆ ಕಲ್ಯಾಣ ದಲ್ಲಿನ ದಾಸೋಹದ ಮನೆಯ ಎಂಜಲು ಎಲೆಗಳನ್ನೇ ತಮ್ಮ ಪರಂಪರೆಯ ಮಟ್ಟಿಕಪ್ಪು(ತಿಲಕ)ನ್ನಾಗಿ ಪಡೆದರು. ಸಾಂಸ್ಕೃತಿಕ ಶೂನ್ಯತೆಯನ್ನು ತುಂಬಿದರು. ಈ ನಾಯಕರನ್ನು ಅನುಸರಿಸಿದ ಸಮುದಾಯಗಳು ಮುಂದೆ ಪಂಥಗಳಾದವು. ಅಪವಿತ್ರವೆಂದ ವಸ್ತುಗಳಿಂದಲೇ ಪವಿತ್ರತೆಯನ್ನು ಹುಟ್ಟುಹಾಕಿ, ಶಿಷ್ಟಪರಂಪರೆ ಸೃಷ್ಟಿಸಿದ್ದ ನಾಯಕ ಕಲ್ಪನೆಯನ್ನು ಪುಡಿಮಾಡಿ ವಿಭಿನ್ನ ನಾಯಕನನ್ನು ತಮ್ಮ ನಾಯಕನನ್ನಾಗಿಸುವುದನ್ನು ಹೇಳುವುದೇ ಜನಪದ ಮಹಾಕಾವ್ಯಗಳ ಮುಖ್ಯ ಉದ್ದೇಶ.

ಈ ಹಿನ್ನೆಲೆಯಲ್ಲಿ ಮಂಟೇಸ್ವಾಮಿ ಮತ್ತು ಮಾದೇಶ್ವರರು ಹುಟ್ಟಿನಿಂದ ಯಾವುದೇ ಜಾತಿಯವರಾಗಲಿ, ಕೆಳವರ್ಗದ ವೀರಪುರುಷರಾಗಿ, ಆರಾಧ್ಯದೈವಗಳಾಗಿ ಪೂಜಿಸಲ್ಪಟ್ಟವರು. ಮೂಲತಹ ಅಲೆಮಾರಿಗಳು, ವೈರಾಗಿಗಳು ಆದ ಇವರು ಒಂದು ಕಡೆ ನೆಲೆಗೊಳ್ಳುವ ತವಕದಲ್ಲಿರುವವರು. ಅವರ ಮಹಾಕಾವ್ಯಗಳಲ್ಲಿನ ವಸ್ತುವೇ ಒಂದು ಕಡೆ ನೆಲೆಗೊಳ್ಳುವ ಪೂರ್ವದ ಸ್ಥಿತಿಯನ್ನು ಮತ್ತು ಆ ಸಂದರ್ಭದ ಘರ್ಷಣೆಗಳನ್ನು ಚಿತ್ರಿಸುವಂತಹವು. ಜನಪದ ಮಹಾಕಾವ್ಯಗಳು ಜೀವನ ಸತ್ಯಕ್ಕೆ ಹೆಚ್ಚು ಒತ್ತು ಕೊಟ್ಟಿವೆ. ಈ ಮಹಾನುಭಾವರು ತಮ್ಮ ಪವಾಡ ಸಾಧನೆಯ ಮೂಲಕ ಹಾಗೂ ತಮ್ಮ ಸರಳತೆಯ ಮೂಲಕ ಅನೇಕ ಜನಾಂಗಗಳನ್ನು ಒಕ್ಕಲಾಗಿ ಪಡೆದು ಒಂದು ನಿರ್ದಿಷ್ಟ ಆಚರಣಾಕ್ರಮಕ್ಕೆ ಒಳಪಡಿಸಿ ಸಮಾನತೆಯನ್ನು ಸಾಧಿಸಲು ಶ್ರಮಿಸಿದವರು.

ಪಟ್ಟಭದ್ರ ಸಂಸ್ಕೃತಿಗೆ ವಿರುದ್ಧವಾದ ಕೆಳವರ್ಗದವರ ಅಸ್ಥಿತ್ವವನ್ನು ಪುನರ್‌ಸ್ಥಾಪಿಸಿ, ಪ್ರತಿಸಂಸ್ಕೃತಿಯ ನಿರ್ಮಾಣದ ಉದ್ದೇಶವೆಂಬಂತೆ ಉತ್ತರದ ವೀರಶೈವ ಧರ್ಮದ ಪ್ರಭಾವವನ್ನು ದಾಟಿಕೊಂಡು ದಕ್ಷಿಣಕ್ಕೆ ಬಂದವರು ಮಂಟೇಸ್ವಾಮಿಗಳು ಮತ್ತು ಮಹದೇಶ್ವರರು. ಮಾದೇಶ್ವರರು ಬೆಟ್ಟದ ಸಾಲುಗಳ ಮೂಲಕ ಸಂಚರಿಸಿ ಕೊಳ್ಳೇಗಾಲ ತಾಲೂಕಿನಲ್ಲಿರುವ ಏಳುಬೆಟ್ಟದ ಸಾಲುಗಳ ಸುಂದರ ಮಲೆಯನ್ನು ತಾಣ ಮಾಡಿ ಕೊಂಡರೆ, ಮಂಟೇಸ್ವಾಮಿಗಳ ಸಾಂಸ್ಕೃತಿಕ ದಾರಿ, ನದಿಯ ಮಾರ್ಗವನ್ನು ಅವಲಂಬಿಸಿ ಕೊನೆಗೆ ಈಗಿನ ಮಳವಳ್ಳಿ, ತಾಲೂಕಿನ ಬೊಪ್ಪಗೌಡನಪುರದಲ್ಲಿ ಬಂದು ನೆಲೆನಿಂತರು.

ಮಂಟೇಸ್ವಾಮಿಗಳು ಕ್ರಮಿಸಿದ ತಮ್ಮ ಈ ಸುದೀರ್ಘ ಸಿದ್ಧಪಥದಲ್ಲಿ ಅನೇಕ ಶಿಶುಮಕ್ಕಳನ್ನು, ಭಕ್ತರನ್ನೂ ಸಂಪಾದಿಸಿದರು. ಮಂಟೇಸ್ವಾಮಿಗಳ ಮೃದು ಮಾತುಗಾರಿಕೆ, ನಯವಾದ ಮಾತುಗಳಿಂದ ತಮಗೆ ಒಪ್ಪಿತವಾದ ಶಿಷ್ಯರನ್ನು ಪಡೆಯುವ ಸಂದರ್ಭದಲ್ಲಿ ''ಅವರನ್ನು ತಮ್ಮ ಶಿಷ್ಯರ ಮಾಡಿರಯ್ಯ, ಬಂಟರ ಮಾಡಿರಯ್ಯ'' ಎನ್ನುವ ಅವರ ವಿನೀತ ನಮ್ರತೆಯನ್ನೂ ಅವರ ಮಾತಿಗೆ ಬೆಲೆ ಇಲ್ಲದಾಗ ಅನಿವಾರ್ಯವಾಗಿ ಪವಾಡಗಳನ್ನು ಬಳಸಿ ಶಿಷ್ಯರನ್ನು ಪಡೆಯುವ ಛಲವನ್ನೂ ಕಾವ್ಯದುದ್ದಕ್ಕೂ ಕಾಣುತ್ತೇವೆ. ತನ್ನನ್ನು ತನ್ನ ಮಹಿಮೆಯನ್ನು

ಗುರುತಿಸಲಾರದವರಿಗೆ ಒಂದು ತರಹದ ಕೇಡನ್ನು ಕೊಟ್ಟು ತನ್ನನ್ನು ಒಪ್ಪಿಕೊಳ್ಳುವಂತೆ ಮಾಡುತ್ತಾರೆ. ಆದರೆ ಅದು ಎಲ್ಲಿಯೂ ಹಿಂಸೆಯ ರೂಪ ತಾಳುವುದಿಲ್ಲ.

ಹೆಂಡ, ಮಾಂಸ, ಭಂಗಿಗಳನ್ನು ಸದಾ ಸೇವಿಸುತ್ತಾ, ವೈರಾಗಿಗಳಂತೆ ಕಾಡು-ಮೇಡುಗಳಲ್ಲಿ ತಿರುಗುತ್ತಾ, ಎಲ್ಲೆಂದರಲ್ಲಿ ಇದ್ದು, ಜಾಗಸಿಕ್ಕಲ್ಲಿ ಮಲಗಿ, ಭಕ್ತರ ಮನೆಯಲ್ಲಿ ಉಂಡುತಿಂದು, ಸಾಮಾನ್ಯ ಜನರ ಮನಗಳನ್ನು ಗೆದ್ದ ನಾಯಕರಾದ ಮಂಟೇಸ್ವಾಮಿಗಳು ಜಗತ್ತನ್ನೇ ಸೃಷ್ಟಿಸಬಲ್ಲ ಒಬ್ಬ ಪವಾಡಕಾರ. ಒಟ್ಟಿನಲ್ಲಿ ಮಂಟೇಸ್ವಾಮಿಗಳು ಮಾಡಿದ ದೀರ್ಘ ಸಂಚಾರ, ಎದುರಿಸಿದ ವ್ಯಾಪಕ ವಿರೋಧ, ಸಾಮದಾನಾದಿಗಳನ್ನು ನಿಗ್ರಹಿಸಿದ ಬಗೆ ಇವೆಲ್ಲವನ್ನು ಕಾವ್ಯ ದಾಖಲಿಸುತ್ತದೆ.

ಮಂಟೇಸ್ವಾಮಿಕಾವ್ಯ ಮಾದೇಶ್ವರ ಕಾವ್ಯದಂತೆ ಹಲವು ದಿಕ್ಕುಗಳಲ್ಲಿ ಹರಿಯುವುದಿಲ್ಲ. ಕಾವ್ಯ ಡಿ.ಆರ್. ನಾಗರಾಜ್‌ರವರು ಹೇಳುವ ಹಾಗೆ ಪೂರ ಪ್ರತಿಮೆ ಮತ್ತು ಆಶಯಗಳು ಅತ್ಯಂತ ಮೋಹಕ ನಾಟ್ಯದಂತಿರುವ ಜಗತ್ತು ಸೃಷ್ಟಿಯ ಸಾಲಿನಿಂದ ಆರಂಭವಾಗಿ ಕಲ್ಯಾಣ ಪಟ್ಟಣದ ಸಾಲು, ರಾಚಪ್ಪಾಜಿ ಸಾಲು, ಬೊಪ್ಪಗೌಡನ ಪುರದ ಸಾಲು, ಕೆಂಪಾಚಾರಿ ಸಾಲು, ಫಲಾರದಯ್ಯನ ಸಾಲು, ಕಲಿಪುರುಷನ ಸಾಲು, ಸಿದ್ದಪ್ಪಾಜಿ ಸಾಲಿನಿಂದ ಮುಕ್ತಾಯವಾಗುವ ಅಖಂಡ ಕಾವ್ಯ, ಕ್ರಮಬದ್ಧವಾದ ಏಕಸೂತ್ರಕ್ಕೆ ಒಳಪಡುತ್ತದೆ. ಕಥೆಯನ್ನು ನೇರವಾಗಿ ಸರಳವಾಗಿ ಹೇಳಿ ಕಾವ್ಯ ಮಂಗಳಾರತಿಯೊಂದಿಗೆ ಮುಕ್ತಾಯವಾಗುತ್ತದೆ. ಇದೊಂದು ಧಾರ್ಮಿಕ ಮತ್ತು ಐತಿಹಾಸಿಕ ಎರಡು ದೃಷ್ಟಿಯಿಂದ ವಿಶಿಷ್ಟವಾಗಿದ್ದು, ಸುಸಂಬದ್ಧ ಜೋಡಣೆಯ ಅಖಂಡ ಕಥಾನಕ ಎನಿಸಿದೆ. "ಮಾದೇಶ್ವರ ಕಾವ್ಯದ ಹರವು, ಸ್ವಚ್ಛಂದತೆ, ವೈವಿಧ್ಯ ಇಲ್ಲಿಲ್ಲವಾದರೂ ಎರಡು ದಡಗಳ ನಡುವೆ ಪ್ರಕ್ಷುಬ್ಧತೆ ಇಲ್ಲದೆ ಸಾಗುವ ಬಯಲ ನದಿಯಿದು."[೬೬] ಕಥಾಸ್ವರೂಪದಲ್ಲಿ ಘಟನಾವಳಿಗಳಲ್ಲಿ, ಸ್ಥಳಗಳಲ್ಲಿ, ಪಾತ್ರಗಳ ಹೆಸರಿನಲ್ಲಿ ಹೆಚ್ಚು ಪಾಠ ಭೇದಗಳನ್ನೊಳಗೊಳ್ಳದ ಮಂಟೇಸ್ವಾಮಿ ಕಾವ್ಯ ಕಂಠಸ್ಥ ಸಂಪ್ರದಾಯದಲ್ಲಿದ್ದೂ, ಸುಸಂದಬದ್ಧತೆಯನ್ನು ಕಾಪಾಡಿಕೊಂಡಿರುತ್ತದೆ. ಮಂಟೇಸ್ವಾಮಿಗಳ ಕಾವ್ಯವನ್ನು ಮೊದಲ'ಬಾರಿಗೆ ಅನೇಕ ಗಾಯಕರಿಂದ ಸಂಪಾದಿಸಿ ಪ್ರಕಟಿಸಿದವರು ಜೀಶಂಪರವರು. ಇದರಲ್ಲಿ ೬,೪೧೦ ಸಾಲುಗಳಿವೆ. ನಾಲ್ಕು ಸಾಲುಗಳಲ್ಲಿ ಸಾಗುವ ಕಥೆಯಲ್ಲಿ ಸ್ವತಂತ್ರ ಕಥೆಯ ಚೌಕಟ್ಟನ್ನು ಪಡೆದ ರಚನೆಗಳು ಇವೆ. ಈ ನಾಲ್ಕು ಸಾಲುಗಳೆಂದರೆ ೧. ಧರೆಗೆ ದೊಡ್ಡವರ ಸಾಲು ೨. ಸಿದ್ದಪ್ಪಾಜಿ ಸಾಲು ೩. ರಾಚಪ್ಪಾಜಿ ಸಾಲು ೪. ಚಿಕ್ಕಲ್ಲೂರು ಸಾಲು

**೧. ಧರೆಗೆ ದೊಡ್ಡವರ ಸಾಲು :** ಮಂಟೇಸ್ವಾಮಿಗಳು ಕಲ್ಯಾಣದಿಂದ ದಕ್ಷಿಣಾಭಿಮುಖವಾಗಿ ಪಯಣಿಸಿ ಭಕ್ತರು, ಶಿಷ್ಯರನ್ನು ಸಂಪಾದಿಸಿ ಒಕ್ಕಲುಗಳನ್ನು ಗುರುತಿಸಿಕೊಂಡು ಗುರುಪರಂಪರೆಯ ಪ್ರಸಾರಕ್ಕಾಗಿ ಮಠಗಳನ್ನು ಸ್ಥಾಪಿಸಿದರು.

**೨. ಸಿದ್ದಪ್ಪಾಜಿ ಸಾಲು :** ಸಿದ್ದಪ್ಪಾಜಿಯನ್ನು ಶಿಷ್ಯನನ್ನಾಗಿ ಪಡೆದು ತನ್ನ ದಳವಾಯಿಯಾಗಿ ನೇಮಿಸಿಕೊಂಡು, ಕಲಿಪುರುಷನ ಸುಳಿವನ್ನು ಕಂಡಕೂಡಲೇ ತಾನು ಪಾತಾಳಬಾವಿಯಲ್ಲಿ ಪವಡಿಸಲು ಮಂಟೇಸ್ವಾಮಿ ಇಚ್ಛಿಸುವನು. ಅದಕ್ಕೆ ಅಗತ್ಯವಾದ ಅನುಕೂಲ ಕಲ್ಪಿಸಿಕೊಡಲು ಸಿದ್ದಪ್ಪಾಜಿಯಿಂದ ಹಲಗೂರಿನ ಪಾಂಚಾಲರನ್ನು ತನ್ನ ಒಕ್ಕಲನಾಗಿ ಮಾಡಿಸಿಕೊಳ್ಳುವರು.

**೩. ರಾಚಪ್ಪಾಜಿ ಸಾಲು :** ಗುರು ಮಂಟೇಸ್ವಾಮಿಯ ಸಲಹೆಯಂತೆ ರಾಚಪ್ಪಾಜಿ ಬೊಪ್ಪಗೌಡನಪುರದಿಂದ ಕಪ್ಪಡಿಗೆ ಹೋಗಿ ನೆಲೆಸುವರು. ಮಾರ್ಗ ಮಧ್ಯದಲ್ಲಿ ಮೈಸೂರು ದೊರೆಗೆ ಬೇಕಾದ ನೆರವನ್ನು ಒದಗಿಸುವುದಲ್ಲದೆ ಕಾರುಗಹಳ್ಳಿಯ ಪಾಳೇಗಾರನನ್ನು ಕೊಲ್ಲುವ ಉಪಾಯವನ್ನು ತಿಳಿಸುವರು.

**೪. ಚಿಕ್ಕಲ್ಲೂರು ಸಾಲು :** ಸಿದ್ದಪ್ಪಾಜಿಯು ಮಂಟೇಸ್ವಾಮಿಯನ್ನು ಬೀಳ್ಕೊಟ್ಟು ಪೂರ್ವಾಭಿಮುಖವಾಗಿ ಹೊರಟು ಚಿಕ್ಕಲ್ಲೂರು ಕ್ಷೇತ್ರಕ್ಕೆ ಬಂದು ಅಲ್ಲಿ ಅನೇಕ ಪವಾಡಗಳನ್ನು ಮೆರೆದು ಮುತ್ತತ್ತಿರಾಯನ ಕ್ಷೇತ್ರವನ್ನು ಸಂಪಾದಿಸಿ ಅಲ್ಲಿಯೇ ನೆಲೆಸುವರು.

ಇದುವರೆವಿಗೂ ಮಂಟೇಸ್ವಾಮಿಯವರ ಬಗ್ಗೆ ಐದು ಜನಪದ ಮಹಾಕಾವ್ಯಗಳು ಸಂಗ್ರಹವಾಗಿ ಪ್ರಕಟಗೊಂಡಿವೆ. ಅವುಗಳೆಂದರೆ,

೧. ಧರೆಗೆ ದೊಡ್ಡವರ ವಚನ (ಸಂ) ಬೀಚನಹಳ್ಳಿ ಚೌಡೇಗೌಡ

೨. ಶ್ರೀ ಮಂಟೇಸ್ವಾಮಿ (೧೯೭೩) (ಸಂ) ಡಾ.ಜೀ.ಶಂ.ಪರಮಶಿವಯ್ಯ

೩. ಧರೆಗೆ ದೊಡ್ಡವರ ಕಾವ್ಯ (೧೯೮೦) (ಸಂ) ತಲಕಾಡಿನ ಮಲ್ಲಯ್ಯ ಪರಮಶಿವಮೂರ್ತಿ

೪. ಮಂಟೇಸ್ವಾಮಿ (೧೯೯೭) (ಸಂ) ಡಾ.ಹಿ.ಚಿ.ಬೋರಲಿಂಗಯ್ಯ

೫. ಧರೆಗೆ ದೊಡ್ಡವರ ಕತೆ (೧೯೯೯) (ಸಂ) ಡಾ.ರಾ.ವೆಂಕಟೇಶ ಇಂದ್ವಾಡಿ

ಡಾ. ಹಿ.ಚಿ.ಬೋರಲಿಂಗಯ್ಯನವರು ಸಂಗ್ರಹಿಸಿರುವ ಕಾವ್ಯವನ್ನು ಮೈಸೂರಿನ ಹೆಚ್.ಮಹಾದೇವಯ್ಯ ಮತ್ತು ಸಂಗಡಿಗರು ಹಾಡಿದ್ದು, ಈ ಏಕಗಾಯಕ ಆವೃತ್ತಿಯಲ್ಲಿ ಸುಮಾರು ೨೭,೫೦೦ ಸಾಲುಗಳಿದ್ದು, ಈ ಕಾವ್ಯ ೨೪+೮೫೪ ಪುಟಗಳಷ್ಟು ಬೃಹತ್ ಆಗಿದ್ದು, ಇದನ್ನು ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದೆ.

ಇವಿಷ್ಟು ಪಠ್ಯಗಳು ಮಂಟೇಸ್ವಾಮಿ ಕತೆಯನ್ನೇ ಹೇಳಿದರೂ ಈ ಎಲ್ಲಾ ಐದು ಪಾಠಗಳು ಐದು ಸ್ವರೂಪಗಳನ್ನು ಒಳಗೊಂಡಿದೆ..ಪ್ರತಿಯೊಬ್ಬ ಕಲಾವಿದನೂ ತನ್ನದೇ ಆದ ಪ್ರತಿ ಪಠ್ಯಗಳನ್ನು ಸೃಷ್ಟಿಸಬಲ್ಲವೆಂಬುದಕ್ಕೂ ಜನಪದ ಕಾವ್ಯಗಳು ಶಿಷ್ಟ ಕಾವ್ಯಗಳಿಂದ ಭಿನ್ನ ಎಂಬುದಕ್ಕೂ ಇವು ನಿದರ್ಶನವಾಗಿವೆ.

ಈ ಐದು ಸಂಪಾದನ ಕಥನಗಳಲ್ಲದೆ, ಗದ್ಯ ಪಠ್ಯಗಳೂ ಇವೆ. ಡಾ.ಎಂ.ಎಸ್. ಮಂಜುಳಾದೇವಿ ಮತ್ತು ಎಂ.ಎಸ್.ರೂಪರಾಜ್‌ರವರ "ಧರೆಗೆ ದೊಡ್ಡವರು ಮಂಟೇಸ್ವಾಮಿ, ರಾಚಪ್ಪಾಜಿ, ಸಿದ್ದಪ್ಪಾಜಿ ಲೀಲಾ ಪವಾಡಗಳು"(೧೯೬೭). ರುದ್ರಪ್ಪನವರ 'ಮಂಟೇಸ್ವಾಮಿ', ಜೀ.ಶಂ.ಪರಮಶಿವಯ್ಯನವರು 'ಜನಪದ ಕಾವ್ಯ ಕಥೆಗಳು' ಎಂಬ ಕೃತಿಯಲ್ಲಿ ನೀಲಗಾರರು ಹಾಡುವ ಕಾವ್ಯವನ್ನು ಕೇಳಿಕೊಂಡು ಅದನ್ನು ಗದ್ಯಕ್ಕೆ ಅನುವಾದಿಸಿ ಕೊಟ್ಟಿದ್ದಾರೆ. ಡಾ.ವೆಂಕಟೇಶ ಇಂದ್ವಾಡಿಯವರು ರಚಿಸಿರುವ 'ಮಂಟೇಸ್ವಾಮಿ ಪರಂಪರೆ' (೧೯೯೯) ವಚನ ಪರಂಪರೆಗೆ ತನ್ನದೇ ಆದ ವಿಶಿಷ್ಟತೆಯನ್ನು ಸೃಷ್ಟಿಸುತ್ತದೆ. ವಚನ ಪರಂಪರೆ ಲಿಖಿತ ದಾಖಲೆಗಳನ್ನು ಆಕರ ಮಾಡಿಕೊಂಡು ತನ್ನ ತಾತ್ವಿಕತೆಯನ್ನು ಮಂಡಿಸಿದರೆ, ಅಲಿಖಿತ ಅಂಶಗಳನ್ನು ಆಕರ ಮಾಡಿಕೊಂಡು ತನ್ನ ವಿಶಿಷ್ಟ ಮೌಲ್ಯಗಳನ್ನು ಹಿಡಿದಿಟ್ಟುಕೊಂಡು ಭಿನ್ನವಾದ ವಿಚಾರಧಾರೆಯನ್ನು ಹೊರಸೂಸುತ್ತದೆ.

ಮಂಟೇಸ್ವಾಮಿ ಕಾವ್ಯವನ್ನು ಡಾ.ಹಿ.ಚಿ.ಬೋರಲಿಂಗಯ್ಯನವರು ಸಂಪಾದಿಸಿ 'ಮಂಟೇಸ್ವಾಮಿ' ಎಂಬ ಹೆಸರಿನಲ್ಲಿ ಪ್ರಕಟಿಸಿರುವ ಆವೃತ್ತಿಯಲ್ಲಿ ಪ್ರಾರಂಭದಲ್ಲಿ ಬರುವ ಪ್ರಾರ್ಥನೆ ಮತ್ತು ಕೊನೆಯ ಮಂಗಳಾರತಿ ಇವೆರಡನ್ನೂ ಹೊರತುಪಡಿಸಿದರೆ ಒಟ್ಟು ಎಂಟು ಸಾಲುಗಳಿವೆ. ಸುದೀರ್ಘವಾದ ಕಥೆಯನ್ನು ಈ ರೀತಿ ಸಂಕ್ಷಿಪ್ತವಾಗಿ ಸಂಗ್ರಹಿಸಬಹುದು.

ಸಕಲ ಸೃಷ್ಟಿಗೆ ಕಾರಣನಾದ ಸ್ವಯಂಭೂ ಧರೆಗೆ ದೊಡ್ಡವರಾದ ಮಂಟೇಸ್ವಾಮಿಗಳು ಕಲ್ಯಾಣದಲ್ಲಿ ಬಸವಣ್ಣ, ನೀಲಾಂಬಿಕೆಯರ ಮತ್ತು ಅಪಾರ ಸಂಖ್ಯೆಯ ಶರಣರ ದೃಢವನ್ನು ಪರೀಕ್ಷಿಸಲು ಕುಷ್ಟರೋಗಿಯಂತೆ ಅಲ್ಲಿಗೆ ಹೋಗಿ ನಾನಾ ಬಗೆಯ ಪರೀಕ್ಷೆಗೆ ಅವರನ್ನು ಒಳಪಡಿಸಿ ಅವರ ಹುಸಿಯನ್ನು ಬಯಲು ಮಾಡುತ್ತಾರೆ. ಮಂಟೇಸ್ವಾಮಿಗಳು, ರಾಚಪ್ಪಾಜಿ, ಫಲಹಾರದಯ್ಯ, ಚನ್ನಾಜಮ್ಮರನ್ನು ಶಿಷ್ಯರನ್ನಾಗಿ ಪಡೆದು, ಕಲ್ಯಾಣದಿಂದ ವಿಜಯನಗರದ ಕೊಡೆಗಲ್ಲಿಗೆ ನಂತರ ದೊಡ್ಡಮ್ಮತಾಯಿಯನ್ನು ಕಾಗಿನೆಲೆಯಲ್ಲಿ ಪಡೆದು, ಇಬ್ಬರು ರಾಜಕುಮಾರರನ್ನು ಸಖರಾಯಪಟ್ಟಣದಲ್ಲಿ ಪಡೆದು, ಆದಿನಾಯಕನ ಹಳ್ಳಿಯ ಬಳೆಯ ಮುದ್ದಮ್ಮನಿಂದ 'ಮಂಟೇದ ಒಡೆಯ' ಎಂದು ನಾಮಕರಣ ಮಾಡಿಸಿಕೊಂಡು, ಅನೇಕ ಕಡೆಗಳಲ್ಲಿ ಸಂಚರಿಸುತ್ತಾ ಮಳವಳ್ಳಿಯ ಮೂಲಕ ಬೊಪ್ಪಗೌಡನಪುರಕ್ಕೆ ಬಂದು ಅಲ್ಲಿ ನೆಲೆನಿಲ್ಲುವರು. ತಮ್ಮ ಮಾರ್ಗದುದ್ದಕ್ಕೂ ಶಿಷ್ಯರನ್ನು ಪಡೆಯುತ್ತಾರೆ. ಕೆಂಪಾಚಾರಿಯನ್ನು ಸಿದ್ದಪ್ಪಾಜಿಯಾಗಿ ಮಾಡುತ್ತಾರೆ. ದುಷ್ಟರನ್ನು ಶಿಕ್ಷಿಸಿ ಭಕ್ತರನ್ನು ಅನುಗ್ರಹಿಸುತ್ತಾ ತನ್ನ ಪಂಥವನ್ನು ತೀವ್ರವಾಗಿ ವಿರೋಧಿಸುತ್ತಿದ್ದ ಪ್ರಬಲರಾದ ಪಾಂಚಾಳರನ್ನು ಸಿದ್ದಪ್ಪಾಜಿಯ ಮೂಲಕ ಗೆದ್ದು, ಅವರಿಂದ ಕಬ್ಬಿಣದ ಭಿಕ್ಷೆಯನ್ನು ಪಡೆಯುತ್ತಾರೆ. ಅಂದರೆ ಅವರನ್ನು ತನ್ನ ಪಂಥಕ್ಕೆ ಸೇರಿಸಿಕೊಳ್ಳುತ್ತಾರೆ. ಕೊನೆಗೆ ಬರಲಿರುವ ಕಲಿಯ ಪ್ರಾಬಲ್ಯವನ್ನು ನೋಡಲಿಚ್ಛಿಸದೇ ತನ್ನ ಸಕಲ ಬಿರುದು ಗಳನ್ನು ಪಟ್ಟಶಿಷ್ಯನಾದ ಸಿದ್ದಪ್ಪಾಜಿಗೆ ನೀಡಿ ಎಲ್ಲ ಶಿಷ್ಯರಿಗೂ ಸೂಕ್ತವಾದ ಸ್ಥಳಗಳನ್ನು ಸೂಚಿಸಿ, ತಾವು ಪಾತಾಳಬಾವಿಯನ್ನು ಪ್ರವೇಶಿಸುತ್ತಾರೆ.

"ಈ ದೀರ್ಘಕಥಾನಕದ ಮುಖ್ಯ ಘಟನೆಗಳನ್ನು 'ಪರೀಕ್ಷೆ ಮತ್ತು ಪ್ರತಿರೋಧ' ಎಂಬ ಎರಡು ವರ್ಗಗಳಲ್ಲಿ ವಿಂಗಡಿಸಬಹುದು. ಕಥನದ ಒಂದು ಸ್ತರ ಮಂಟೇಸ್ವಾಮಿಯಿಂದ ಪರೀಕ್ಷೆಗೊಳಗಾಗುವ ವ್ಯವಸ್ಥೆ-ವ್ಯಕ್ತಿಗಳಾದರೆ, ಮತ್ತೊಂದು ಸ್ತರ ತನ್ನನ್ನು/ತನ್ನ ತತ್ವಗಳನ್ನು ಒಪ್ಪದೆ ತನಗೆ ಪ್ರತಿರೋಧವನ್ನು ಒಡ್ಡುವ ವ್ಯಕ್ತಿಗಳನ್ನು/ಸಮುದಾಯಗಳನ್ನು ಮಂಟೇಸ್ವಾಮಿ ನಿಗ್ರಹಿಸುವುದು ಇವೆರಡೂ ಸ್ತರಗಳನ್ನೂ ಒಂದುಗೂಡಿಸುವುದು ಕೆಂಪಾಚಾರಿ/ಸಿದ್ದಪ್ಪಾಜಿಯ ಪಾತ್ರ. ಮೊದಲ ಸ್ತರದ ಮುಖ್ಯಭಾಗ ಕಲ್ಯಾಣಪಟ್ಟಣದ ಸಾಲು."[೩೭] ನೀಲಗಾರರು ಮಂಟೇಸ್ವಾಮಿಗಳನ್ನು ಧರೆಗೆದೊಡ್ಡವರು ಎಂದು ಕರೆಯುವುದರಲ್ಲಿ ಒಂದು ತರ್ಕ ಅಡಗಿದೆ. ಕಾವ್ಯ ಮಂಟೇಸ್ವಾಮಿಯನ್ನು ಸ್ವಯಂಭು ಎನ್ನುತ್ತದೆ. ತಾನೇ ಜಗತ್ತಿನ ಸೃಷ್ಟಿಕರ್ತ ಎಂಬ ನಂಬಿಕೆ.

ಮಂಟೇಸ್ವಾಮಿಯ ಕತೆ ಭೂಮಿಯಲ್ಲಿ ಆರಂಭವಾಗುವುದೇ ಕಲ್ಯಾಣದಿಂದ. ಅವರು ಮಾಡುವ ಪವಾಡಗಳಿಂದ ಮಂಟೇಸ್ವಾಮಿಗಳು ಕಲ್ಯಾಣದಲ್ಲಿ ಬಸವಣ್ಣ, ನೀಲಮ್ಮನವರ ದೃಢವನ್ನು ಪರೀಕ್ಷಿಸಲು ನೇರವಾಗಿ ಕೈಲಾಸದಿಂದ ಬರುತ್ತಾರೆ. ಆ ಪರೀಕ್ಷೆಯ ಮೂಲಕ ಅವರ ಹೆಚ್ಚಳವನ್ನು ಲೋಕಕ್ಕೆ ತೋರುವುದೇ ಆಗಿದೆ. ಕಲ್ಯಾಣಪಟ್ಟಣದ ಬಾಗಿಲಿನಲ್ಲಿ ಅವರನ್ನು ತಡೆದಾಗ ವಿಲಕ್ಷಣ ರೂಪಧರಿಸುವರು. ಮಂಟೇಸ್ವಾಮಿಗಳು ಹರಳಯ್ಯನ ಬೂದಿಗುಂಡಿಯ ಮೇಲೆ ಪವಡಿಸುತ್ತಾರೆ. ಕೀವು, ರಕ್ತ, ನೊಣ ತುಂಬಿದ ಕೊಳೆತುನಾರುವ ಅಸಹ್ಯ ಜಂಗಮನಾಗಿ ಕಾಣಿಸಿಕೊಳ್ಳುತ್ತಾರೆ. "ಇದು ಅಸ್ಪೃಶ್ಯತೆಯ ಮಧ್ಯದಲ್ಲಿದ್ದ ಅತ್ಯಂತ ಶ್ರೇಷ್ಠವಾದುದನ್ನು ನಿಗೂಢವಾದ ರೀತಿಯಲ್ಲಿ ನಿವೇದಿಸುವ ತಂತ್ರಕ್ಕೆ ಅನುಗುಣವಾಗಿದೆ"[೩೮] ಎನ್ನುತ್ತಾರೆ ಎಸ್.ಎಸ್.ಹಿರೇಮಠರವರು. ಬಸವಣ್ಣ ಮತ್ತು ನೀಲಮ್ಮನವರು ಮಂಟೇಸ್ವಾಮಿಗಳನ್ನು ಗುರುತಿಸುತ್ತಾರೆ. ಜಂಗಮರ ಪರೀಕ್ಷೆ

ಆಗುತ್ತದೆ. ರುಂಡಪುಂಡ ಜಂಗಮ ಲಿಂಗಗಳನ್ನು ಮಾಯ ಮಾಡಿ, ಶೂದ್ರಾತಿ ಶೂದ್ರ ಜಾತಿಯ ಒಂಭತ್ತು ಮಂದಿ ಕಾಯಕ ಜೀವಿಗಳಿಗೆ, ಕೆಳವರ್ಗದ ಒಂಭತ್ತು ಮಂದಿ ಎಂದರೆ, ಹೊಲೆಯರ ಹೊನ್ನಪ್ಪ, ಮಾದಿಗರ ಚನ್ನಯ್ಯ, ಮಡಿವಾಳ ಮಾಚಯ್ಯ, ಗಾಣಿಗರ ದಾಸಪ್ಪ, ಅಂಬಿಗರ ಚೌಡಯ್ಯ, ಈಡಿಗರ ಕ್ಯಾತಪ್ಪ, ಕುರುಬರ ಬೀರಯ್ಯ ಮುಂತಾದವರನ್ನು ಮಾತ್ರ ಲಿಂಗವಂತರಾಗಿ ಮಾಡುವ ಅಂಶ ಅನೇಕ ರೀತಿಯ ಸಾಂಸ್ಕೃತಿಕ ಚರ್ಚೆಗಳಿಗೆ ಒಳಪಡಿಸುತ್ತದೆ. ಈ ಬಗ್ಗೆ ಎರಡು ಆಶಯಗಳನ್ನು ಡಾ.ಹಿ.ಚಿ.ಬೋರಲಿಂಗಯ್ಯನವರು ಪ್ರಸ್ತಾಪಿಸುತ್ತಾರೆ. ಒಂದು "ಆತ್ಮದಲ್ಲಿ ಶುದ್ಧಿ ಇಲ್ಲದ ಕೆಲವರು ಕಟ್ಟಿದ ಲಿಂಗದ ಕಲ್ಪನೆಯನ್ನು ಹುಸಿಗೊಳಿಸುವ ಆಶಯ ಒಂದನೆಯದಾದರೆ, ಕಲ್ಯಾಣದಲ್ಲಿ ಉಳಿಯಲು ಯೋಗ್ಯರಾದ ಶರಣರೆಂದರೆ ಕೇವಲ ಕೆಳವರ್ಗದವರು ಮಾತ್ರ ಎಂಬ ಆಶಯ ಎರಡನೆಯದು."[೩೯] ಜನಪದ ಐತಿಹಾಸಿಕ ವ್ಯಕ್ತಿಯಾದ ಅನುಭಾವಿ ಮಂಟೇಸ್ವಾಮಿಗಳನ್ನು ಶಿಷ್ಟಕಾವ್ಯಗಳಲ್ಲಿ ಐತಿಹಾಸಿಕ ವ್ಯಕ್ತಿಗಳನ್ನು ಪುರಾಣ ಪುರುಷರೊಂದಿಗೆ ಹೋಲಿಸುವಂತೆ ಅನುಭಾವಿ ಅಲ್ಲಮಪ್ರಭುವಿಗೆ ಹೋಲಿಸಿರುವುದನ್ನು ಗಮನಿಸಿದರೆ, ಕೆಳಜಾತಿಯವರೂ ಸಹ ಬಸವಣ್ಣನಂತವರಿಗೆ ಗುರುವಾಗಬಲ್ಲರು ಎನ್ನುವ ಆಶಯ. ನೀಲಗಾರರು ತಮ್ಮ ತಾತ್ವಿಕ ಚಿಂತನೆಗಳಿಗೆ ಕಲ್ಯಾಣವನ್ನು ಕೇಂದ್ರ ಮಾಡಿಕೊಂಡಿದ್ದಾರೆ. ಕಾಲದ ಪ್ರಜ್ಞೆಯಿಂದ ಹಿಂದೆ ಸರಿಯುತ್ತಾರೆ. ವಚನಕಾರರು ಸಾರಿದ್ದ ಕಾಯಕತತ್ವ, ಜಾತ್ಯಾತೀತ ಸಮಾಜ, ಆರ್ಥಿಕ ಸಮಾನತೆ ಮೊದಲಾದ ತತ್ವಗಳನ್ನು ೧೯ನೇ ಶತಮಾನದಲ್ಲಿ ಪುನ: ತರಲು ಪ್ರಯತ್ನಿಸಿದ್ದಾರೆ. ಜಾನಪದ ಕವಿಗಳು ೧೨ನೇ ಶತಮಾನದ ಕಲ್ಯಾಣವನ್ನು ಕೈಲಾಸದೊಟ್ಟಿಗೆ ಪುರಾಣೀಕರಿಸಿಕೊಂಡು ಜೀವಂತವಾಗಿಸಿದ್ದಾರೆ. ಇದು ನೀಲಗಾರರ ಅಮರಕಲ್ಪನೆ, ಇವರ ಕಲ್ಪನೆಯಲ್ಲಿ ಮಂಟೇಸ್ವಾಮಿಗಳು ೧೨ನೇ ಶತಮಾನದ ಅಲ್ಲಮನ ಪ್ರತಿನಿಧಿಯಾಗಿ ಮತ್ತೆ ಕಾಣಿಸಿಕೊಳ್ಳುತ್ತಾರೆ. ಮಂಟೇಸ್ವಾಮಿಗಳನ್ನು ಇಲ್ಲಿ ಏಕಕಾಲಕ್ಕೆ ಪುರಾಣ-ಚರಿತ್ರೆಗಳ ಅವಿನಾಭಾವ ಸಂಬಂಧದಿಂದ ಬಂಧಿಸಿರುವುದನ್ನು ಕಾವ್ಯ ತಿಳಿಸುತ್ತದೆ. ಅಲ್ಲಮನೇ ಮಂಟೇಸ್ವಾಮಿ ಎಂದು ನೀಲಗಾರರ ನಂಬಿಕೆ. ಶಿಷ್ಟ ಕವಿಗಳ ಕಥೆಗಳ ಆರಂಭ ಕೈಲಾಸದಿಂದಾದರೆ, ಜನಪದರ ಕಥೆಗಳ ಪ್ರಾರಂಭ ೧೨ನೇ ಶತಮಾನದ ಕಲ್ಯಾಣದಿಂದ. ಇದು ಜನಪದರು ಲೌಕಿಕತೆಗೆ ತೋರುವ ಒಲವು. ನೀಲಗಾರರು ಶಿಷ್ಟದ ಶೂನ್ಯ ಸಂಪಾದನೆಯ ಆಂತರಿಕ ಆಶಯಗಳ ಜೊತೆಗೆ ಮಂಟೇಸ್ವಾಮಿ ಕಾವ್ಯದ ಕಲ್ಯಾಣಪಟ್ಟಣದ ಸಾಲನ್ನು ತೂಗಿಸಿ, ಇದು ಅದರ ಜಾನಪದೀಯ ಪುನರ್‌ರಚನೆ ಎಂದು ಭಾವಿಸುತ್ತಾರೆ. "ಶೂನ್ಯಸಂಪಾದನೆಯಾವುದನ್ನು ವಿಸರ್ಜಿಸಿತ್ತೋ ಆ ವಿಸರ್ಜಿತ ಲೋಕಗಳಿಂದ ಮೂಡಿಬಂದ ಶೈವಕಥನ ಮಂಟೇಸ್ವಾಮಿ." ಒಟ್ಟಿನಲ್ಲಿ ಕಲ್ಯಾಣಪಟ್ಟಣದ ಸಾಲು "ಪರಿಕಲ್ಪನಾತ್ಮಕವಾದದ್ದು."[೪೦] "ಚಳುವಳಿಯ ನಂತರದ ಕಲ್ಯಾಣಪಟ್ಟಣದ ವ್ಯವಸ್ಥೆಗೆ ಹಿಡಿದ ಕನ್ನಡಿಯಾಗಿದೆ. ಅಲ್ಲಿನ ಅಜ್ಞಾನಕ್ಕೆ, ತಾರತಮ್ಯಕ್ಕೆ ಭಾಷ್ಯವಾಗಿ ಕಾಣಿಸುತ್ತದೆ."[೪೧]

ಮತ್ತೊಂದು ಪರೀಕ್ಷೆಯೆಂದರೆ 'ಫಲಾರದಯ್ಯನ ಕಥೆ.' ಇಲ್ಲಿ ಮಗನ ಬಲಿದಾನದ ಆಶಯ ಸಾರ್ವತ್ರಿಕವಾಗಿದ್ದು, ಪ್ರಪಂಚದ ಅನೇಕ ಶಿಷ್ಟ ಹಾಗೂ ಜಾನಪದ ಕಥಾನಕಗಳಲ್ಲಿ ಕಂಡುಬರುತ್ತದೆ. ಪ್ರತಿರೋಧದ ನೆಲೆಯಲ್ಲಿ ಬೊಪ್ಪೇಗೌಡ, ಬಸವಾಚಾರಿ, ಮುದ್ದಮ್ಮ ಮತ್ತು ಪಾಂಚಾಳರು ಪ್ರಮುಖವಾಗಿ ಕಾಣಬರುತ್ತಾರೆ. ಬೊಪ್ಪೇಗೌಡ ಮಂಟೇಸ್ವಾಮಿಗಳಿಗೆ ರಾತ್ರಿ ತಂಗಲು ದನದ ಕೊಟ್ಟಿಗೆಯಲ್ಲಿ ಜಾಗ ಕೊಟ್ಟು ಅನೇಕ ಕಷ್ಟ-ನಷ್ಟಗಳನ್ನು ಅನುಭವಿಸಿ, ಕೊನೆಗೆ ಮಂಟೇಸ್ವಾಮಿಗಳ ಅನುಯಾಯಿ ಆಗುತ್ತಾನೆ. ಮಂಟೇಸ್ವಾಮಿಗಳು

ಅವರಿಬ್ಬರಿಗೂ ಶಾಪಕೊಟ್ಟು, ಕೆಂಪಾಚಾರಿಗೆ ಹುಚ್ಚು-ಬೆಪ್ಪು ಹಿಡಿಸಿ ೧೨ ವರ್ಷಗಳ ಕಾಲ ಗುಹೆಯಲ್ಲಿ ಬಂಧಿಸುತ್ತಾರೆ. ಪ್ರತಿರೋಧದ ನೆಲೆಯಲ್ಲಿ ಅತ್ಯಂತ ತೀವ್ರ ಪ್ರತಿರೋಧ ಪಾಂಚಾಳರದ್ದು, ಈ ಕಥೆಯನ್ನು ಸುದೀರ್ಘವಾಗಿ ಹೇಳುವ 'ಸಿದ್ದಪ್ಪಾಜಿಯ ಸಾಲು', ಮಂಟೇಸ್ವಾಮಿಗಳಿಗೆ 'ಕಬ್ಬಿಣದ ಭಿಕ್ಷೆ ಕೊಡಲು' ಎಂದರೆ ಅವನ ಪಂಥಕ್ಕೆ ಸೇರಲು ಒಪ್ಪದೆ, ಹುಚ್ಚು-ಬೆಪ್ಪು ಹಿಡಿದು ೧೨ ವರ್ಷ ಗುಹೆಯಲ್ಲಿ ಬಂಧಿತನಾಗಿದ್ದ ಕೆಂಪಾಚಾರಿಯನ್ನು ತಮ್ಮ ಪಟ್ಟಶಿಷ್ಯ ಸಿದ್ದಪ್ಪಾಜಿಯಾಗಿಸಿಕೊಂಡು, ಅವನ ಮೂಲಕ ಪಾಂಚಾಳರಿಂದ ಕಬ್ಬಿಣದ ಭಿಕ್ಷೆಯನ್ನೂ ಅವರು ಒಡ್ಡುವ ಎಲ್ಲಾ ದಿವ್ಯಗಳನ್ನು ಗೆಲ್ಲುವುದರ ಮೂಲಕ ಪಡೆಯುತ್ತಾರೆ. ಅಂದರೆ ಪಾಂಚಾಳರನ್ನು ತಮ್ಮ ಶಿಷ್ಯರನ್ನಾಗಿ ಸಿದ್ದಪ್ಪಾಜಿಯ ಮೂಲಕ ಪಡೆಯುತ್ತಾರೆ.

''ಧರೆಗೆದೊಡ್ಡವರಾದ ಮಂಟೇಸ್ವಾಮಿಗಳ ಕಥೆ, ಕೈಲಾಸ-ಕಲ್ಯಾಣ-ಕಲಿಗಾಲ ಎಂಬ ಮೂರು ಕಾಲಘಟ್ಟಗಳಲ್ಲಿ ನಡೆಯುವ ಕತೆ.''[೪೨]

''ಕೊಡೇಕಲ್ಲ ಚರಿತ್ರಕಾವ್ಯ ನಂದಿ ಆಗಮಲೀಲೆಯಲ್ಲಿ ಮಂಟೇಲಿಂಗ ಹೆಸರಿನ ಈ ಮಂಟೇಸ್ವಾಮಿ ದ್ರಾವಿಡ ದೇಶದಿಂದ (ತಮಿಳುನಾಡು?) ಕಾಯಸಿದ್ದಿಗಳಿಸಲು ಕೊಡೇಕಲ್ಲ ಬಸವಣ್ಣನನ್ನು ಹುಡುಕಿಕೊಂಡು, ಕೊಡೇಕಲ್ಲಿಗೆ ಬಂದು ಅವರಲ್ಲಿ ಸಾಧನೆಗೈದು, ಕೊಡೇಕಲ್ಲ ಬಸವನ ಆದೇಶದಂತೆ ದಕ್ಷಿಣದತ್ತ ಹೊರಡುತ್ತಾರೆ. ಕೊಡೇಕಲ್ ಬಸವನಿಗೆ ಇಬ್ಬರು ಪತ್ನಿಯರು. ಮೊದಲನೆ ಹೆಂಡತಿ ಮಡಿದ ಮೇಲೆ ನೀಲಮ್ಮ ಎಂಬಾಕೆಯನ್ನು ಮದುವೆಯಾದನೆಂದು ನಂದಿ ಆಗಮಲೀಲೆ ತಿಳಿಸುತ್ತದೆ. ಈ ದಂಪತಿಗಳಿಗೆ ಮೂರು ಗಂಡುಮಕ್ಕಳು. ಹಿರಿಯ ಮಗನೇ ರಾಚಪ್ಪಯ್ಯ. ರಾಚಪ್ಪಯ್ಯನ ಹೆಂಡತಿ ವಿಜಾಪುರದ ಸರಸೆಟ್ಟಿಯ ಮನೆತನದ ಹೆಣ್ಣುಮಗಳು ಎಂದು ಕೊಡೇಕಲ್ ಪೀಠಸ್ಥರು ಹೇಳುತ್ತಾರೆ. ರಾಚಪ್ಪಯ್ಯ 'ರಾಚ' ಅಂಕಿತದಲ್ಲಿ ಹಾಡುಗಳನ್ನೂ ಹತ್ತು ಪ್ರೌಢ ಕಾವ್ಯಗಳನ್ನು ರಚಿಸಿದ ಪ್ರತಿಭಾವಂತ. ರಾಚಪ್ಪಯ್ಯನ ಮಗ ಕುಮಾರಸ್ವಾಮಿ, ಎಳೆವಯಸ್ಸಿನಲ್ಲಿ ಅಕಾಲ ಮರಣಕ್ಕೀಡಾದನು. ಕೊಡೇಕಲ್ಲಿನವರು ಆ ಮಗುವಿನ ಸಮಾಧಿ ಸ್ಥಾನವನ್ನು ಈಗಲೂ ಅಲ್ಲಿ ತೋರಿಸುತ್ತಾರೆ. ಜೀವನದ ಒಂದು ಹಂತದಲ್ಲಿ ವೈರಾಗ್ಯ ತಾಳಿದವನಾಗಿ ರಾಚಪ್ಪಯ್ಯ ಕೊಡೇಕಲ್ಲು ಬಿಟ್ಟು ಕಾವೇರಿ ತೀರದತ್ತ ನಡೆದನೆಂದು ಕೊಡೇಕಲ್ಲ ಸ್ಥಳಪುರಾಣ ಹೇಳುತ್ತದೆ. ಮಂಟೇಸ್ವಾಮಿಯೊಂದಿಗೆ ಬಂದನೆಂದು ಮಂಟೇಸ್ವಾಮಿ ಸಾಹಿತ್ಯ-ಸಂಪ್ರದಾಯಗಳು ಹೇಳುತ್ತವೆ. ಏನೇ ಇದ್ದರೂ ರಾಚಪ್ಪಯ್ಯ ಕೊಡೇಕಲ್ಲನ್ನು ಬಿಟ್ಟಿದ್ದು ನಿಜ.''[೪೩] ಮಂಟೇಸ್ವಾಮಿಯ ಬಗ್ಗೆ ಬೆಳೆದಿರುವ ಜನಪದ ಕಾವ್ಯಗಳಲ್ಲಿ ಈತ ಕಲ್ಯಾಣದ ಬಸವಣ್ಣನಿಂದ ಬೀಳ್ಕೊಂಡ ಅಲ್ಲಮಪ್ರಭು ಎಂಬ ವರ್ಣನೆ ಬರುವುದರಿಂದ ಈತ ಕಲ್ಯಾಣದ ಪ್ರಭುದೇವರೆಂಬ ಭಾವನೆ ಬೆಳೆದು ಬರುವಂತಾಗಿದೆ. ಸಿದ್ದಪ್ಪಾಜಿಯರ ಜೊತೆ ಮಂಟೇಸ್ವಾಮಿಗಳು ಕರೆದೊಯ್ದ ವ್ಯಕ್ತಿಗಳಲ್ಲಿರುವ ಫಲಾರದಯ್ಯ, ರಾಯಚೂರ ಜಿಲ್ಲಾ ದೇವದುರ್ಗ ತಾಲೂಕಿಗೆ ಸೇರಿದ ಗಲಗ ಗ್ರಾಮದವನಿರಬೇಕೆಂದು ಡಾ.ಬಸವಲಿಂಗ ಸೊಪ್ಪಿಮಠ ಅಭಿಪ್ರಾಯಪಡುತ್ತಾರೆ. ''ಅಲ್ಲದೆ ಮಂಟೇಸ್ವಾಮಿಯ ಮೂಲನೆಲೆಯೆಂದು ಹೇಳಲಾದ ಕಲ್ಯಾಣವು ಕಡೇ ಕಲ್ಯಾಣವೆಂಬ ಕೊಡೇಕಲ್ ಎಂದೂ, ಕೊಡೇಕಲ್ ಬಸವನಿಂದ ಕಾಲಜ್ಞಾನ, ಖಂಡಜ್ಞಾನ, ಲಿಪಿ ಇತ್ಯಾದಿಗಳನ್ನು ಪಡೆದು ಕೊಡೇಕಲ್ ಬಸವನ ಪುತ್ರ ರಾಚಪ್ಪಾಜಿ ಮುಂತಾದವರೊಂದಿಗೆ ಕನ್ನಡನಾಡಿನ ದಕ್ಷಿಣಕ್ಕೆ ತೆರಳಿದರು. ಕೊಡೇಕಲ್ಲಿನ ಸಾಹಿತ್ಯ, ಕೊಡೇಕಲ್ಲು ಬಸವಣ್ಣನವರನ್ನು ಕಲ್ಯಾಣದ ಬಸವಣ್ಣನ

ಪುನರವತಾರವೆಂದೇ ಹೇಳುತ್ತದೆ. ನಂದಿ ಆಗಮಲೀಲೆಯಂತೆ ಕೊಡೇಕಲ್ ಬಸವನ ಮನೆತನ ತಂಬೂರಿ ಗಾಯಕರ ಮನೆತನ."[೪೪]

ಉತ್ತರ ಕರ್ನಾಟಕದಲ್ಲಿ ನೀಲಗಾರ ಸಂಪ್ರದಾಯವಿಲ್ಲ ಆದರೆ ಮಂಟೇಸ್ವಾಮಿಗೆ ನಡೆದುಕೊಳ್ಳುವ ಭಕ್ತರ ತೋರುಗದ್ದುಗೆಗಳು ಇವೆ.

ಕೊಡೇಕಲ್ಲು ಪರಂಪರೆ ಮತ್ತು ನೀಲಗಾರರ ಪರಂಪರೆಗಳೆರಡೂ "ವಿಭಿನ್ನಪಂಥಗಳಾಗಿ ಉತ್ತರ-ದಕ್ಷಿಣ (ಲಿಖಿತ ಪರಂಪರೆ-ಅಲಿಖಿತ ಮೌಖಿಕ ಪರಂಪರೆ) ಕನ್ನಡನಾಡಿನಲ್ಲಿ ಏಕಕಾಲದಲ್ಲಿ ಹರಡಿಕೊಂಡಿವೆ. ಇವೆರಡೂ ೧೫ನೇ ಶತಮಾನದಲ್ಲಿ ಹುಟ್ಟಿಕೊಂಡವು."[೪೫] ಮಂಟೇಸ್ವಾಮಿಯ ನಿರ್ದಿಷ್ಟ ಕಾಲನಿರ್ಣಯ ತೊಡಕಿನ ಪ್ರಶ್ನೆಯಾಗಿದ್ದು, ೧೨ನೇ ಶತಮಾನದಿಂದ ೧೬ನೇ ಶತಮಾನದವರೆಗೂ ಎಳೆಯುತ್ತದೆ.

ಮಂಟೇಸ್ವಾಮಿಗಳ ಚರಿತ್ರೆಯನ್ನು ಪುರಾಣೀಕರಿಸಿಕೊಂಡು ಅವರು ಮಾಡಿದ ದೀರ್ಘಸಂಚಾರ, ಎದುರಿಸಿದ ವ್ಯಾಪಕ ವಿರೋಧ, ಸಾಮದಾನಾದಿ ಚತುರೋಪಾಯದಿಂದ ತನ್ನನ್ನು ವಿರೋಧಿಸಿದವರನ್ನು ನಿಗ್ರಹಿಸಿದ ಬಗೆ, ಒಕ್ಕಲಿನ ಇಂದಿನ ಆಚರಣೆಗಳು ಇವೆಲ್ಲವನ್ನು ವಿವರವಾಗಿ ಮಂಟೇಸ್ವಾಮಿ ಕಾವ್ಯ ದಾಖಲಿಸುತ್ತದೆ. ಈ ಕಾವ್ಯವನ್ನು ಹಾಡುವ ಗಾಯಕರು ನೀಲಗಾರರು, ಧರೆಗೆ ದೊಡ್ಡವರ ಲೀಲೆಯನ್ನು ಕೀರ್ತಿಸುತ್ತಾ ಪ್ರಚಾರ ಮಾಡುತ್ತಾರೆ.

ಮಂಟೇಸ್ವಾಮಿಯ ಭಕ್ತರಾದ ಈ ನೀಲಗಾರರು, ಕಂಸಾಳೆಯವರಷ್ಟೇ ಪ್ರಸಿದ್ಧರಾದ ಇನ್ನೊಂದು ರೀತಿಯ ವೃತ್ತಿಗಾಯಕರು. ಇವರನ್ನು ಮಂಟೇಸ್ವಾಮಿ, ಮಂಟೇದಯ್ಯ, ಮಂಟೇದೇವರು ಎಂಬ ಹೆಸರುಗಳಲ್ಲಿ ಕರೆಯುತ್ತಾರೆ. ಮೈಸೂರು, ಚಾಮರಾಜನಗರ, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ನೀಲಗಾರರಿದ್ದಾರೆ. ಮಂಟೇಸ್ವಾಮಿಗಳು ಇವರಿಗೆ 'ಧರೆಗೆದೊಡ್ಡವರು' ಆಗಿದ್ದು, ಇವರ ಮತ್ತು ಇವರ ಶಿಷ್ಯರಾದ ಸಿದ್ದಪ್ಪಾಜಿ ಹಾಗೂ ರಾಚಪ್ಪಾಜಿಯವರ 'ಲೀಲೆ'ಗಳನ್ನು ಹಾಡುತ್ತಾರೆ. ಲೀಲೆಗಾರರು ಎಂಬ ಪದವೇ ನೀಲಗಾರರು ಎಂದಾಗಿದೆ. ಲೀಲೆಗಾರರೆಂದರೆ ಗುರುವಿನ ಲೀಲೆಯನ್ನು ಹಾಡುವವರು. ತಂಬೂರಿ ಇವರ ಮುಖ್ಯ ವಾದ್ಯ. ಮಳವಳ್ಳಿ, ಬೊಪ್ಪಗೌಡನಪುರ ಮತ್ತು ಚಿಕ್ಕಲ್ಲೂರಿನಲ್ಲಿ ಇವರ ಮಠಗಳಿವೆ. ನೀಲಗಾರ ಸಮುದಾಯದಲ್ಲಿ ಹಲವಾರು ಒಕ್ಕಲುಗಳಿದ್ದು, ಅವರು ಹೆಚ್ಚಾಗಿ ಕೆಳವರ್ಗದವರು. ನೀಲಗಾರರಲ್ಲಿ ಪ್ರಧಾನವಾಗಿ ಹರಿಜನರೇ ಕಂಡುಬರುತ್ತಾರೆ. ಉಳಿದಂತೆ ಕುರುಬರು, ಉಪ್ಪಲಿಗಶೆಟ್ಟರು, ಮಡಿವಾಳರು, ಅಕ್ಕಸಾಲಿಗರು, ಉಪ್ಪಾರರು, ಪರಿವಾರದವರು, ಕುಂಬಾರರೂ ನೀಲಗಾರರಾಗಿರುವುದುಂಟು. ಇವರು ತಮ್ಮನ್ನು ಸಿದ್ದಪ್ಪಾಜಿಯ ಗುಡ್ಡರು ಎಂದು ಕರೆದುಕೊಳ್ಳುತ್ತಾರೆ.

ಮಂಟೇಸ್ವಾಮಿಗೆ ನಡೆದುಕೊಳ್ಳುವ ಜನಸಮೂಹವೇ ಮಂಟೇಸ್ವಾಮಿ ಒಕ್ಕಲುಗಳು. ಮಂಟೇಸ್ವಾಮಿಯ ಕಥೆಗಳನ್ನು ಕೆಲವೇ ಒಕ್ಕಲಿನ ನೀಲಗಾರರು ಹರಿಜನರು, ಕುರುಬರು, ಉಪ್ಪಾರರು ಮಾತ್ರ ಹಾಡುತ್ತಾರೆ.

ನೀಲಗಾರರಲ್ಲಿ 'ಸಾಧಾರಣ ನೀಲಗಾರರು' ಮತ್ತು 'ತಂಬೂರಿ ನೀಲಗಾರರು' ಎಂದು ಎರಡು ವಿಧ. ಸಾಧಾರಣ ನೀಲಗಾರರು ದೀಕ್ಷೆಯಲ್ಲಿ ಒಂದು ರುದ್ರಾಕ್ಷಿ ಕಟ್ಟಿಕೊಂಡಿರುವ ಗುಡ್ಡರಾಗಿದ್ದು, ಇವರು

ಪದಗಳನ್ನಾಗಲಿ ಅಥವಾ ಕಾವ್ಯಗಳನ್ನಾಗಲಿ ಹಾಡುವುದಿಲ್ಲ. ಮೂರು ರುದ್ರಾಕ್ಷಿ ಮಣಿಗಳನ್ನು ಕಟ್ಟಿಕೊಂಡಿರುವ ತಂಬೂರಿ ನೀಲಗಾರರು ಧಾರ್ಮಿಕ ವಿಧಿಗಳಲ್ಲಿ ಭಾಗವಹಿಸುತ್ತಾ ದೇವರ ಕತೆಗಳನ್ನು ಹಾಡುತ್ತಾರೆ. ಊರಾಡಲು ಹೋಗುವಾಗ ಮತ್ತೊಂದು ಮಣಿಗಳ ರುದ್ರಾಕ್ಷಿ ಮಾಲೆ ಧರಿಸುತ್ತಾರೆ. ತಲೆಗೆ ಕೆಂಪು ರುಮಾಲು, ಮೈಮೇಲೆ ಕರಿಯ ನಿಲುವಂಗಿ, ಕಚ್ಚೆ ಪಂಚೆ, ಬಗಲಿಗೆ ಜೋಳಿಗೆ, ಕೈಯಲ್ಲಿ ಕೋಲು, ಕೊರಳಲ್ಲಿ ಇಳಿಬಿಟ್ಟ ಶಲ್ಯ ನಡುವಿಗೆ ಧಾರಣೆ ಮಾಡಿಕೊಂಡಿರುತ್ತಾರೆ. ಹಣೆಯಲ್ಲಿ ವಿಭೂತಿ, ಗಂಧಗಳೆರಡೂ ಇರುತ್ತವೆ. ಶುಭ್ರವಾದ ಇವು ಇವರ ವಿಶಿಷ್ಟ ಉಡುಗೆ ತೊಡುಗೆಗಳಾದರೆ, ಹಾಡಿನ ಹೆಡೆ ಅಥವಾ ಸಿಂಹ ಮುಖದ ಮಟ್ಟಸವಾದ ನಾಲ್ಕು ತಂತಿಯ ತಂಬೂರಿ ಇವರ ವಾದ್ಯ ವಿಶೇಷ. ಇದರೊಂದಿಗೆ ತಾಳ, ಗಗ್ಗರ, ಢಕ್ಕೆಗಳೂ ಇರುವುದುಂಟು. ಸಾಮಾನ್ಯವಾಗಿ ಮೂವರು, ಇಲ್ಲವೇ ಗುಂಪಾಗಿ ಇವರು ಸಂಚಾರ ಹೊರಡುತ್ತಾರೆ. ಕೆಲವರು ಮಾತ್ರ ವಂಶ ಪಾರಂಪರ್ಯವಾಗಿ ದೀಕ್ಷೆಯನ್ನು ಪಡೆಯುತ್ತಾರೆ. ಒಂದು ಕುಟುಂಬದಲ್ಲಿ ಹುಟ್ಟಿದವರೆಲ್ಲಾ ನೀಲಗಾರರಾಗ ಬೇಕಾಗಿಲ್ಲ. ಒಬ್ಬ ಮಗನಿಗೆ ದೀಕ್ಷೆ ಕೊಡಿಸಿದರೆ ಸಾಕು. ಆತ ಸಂಸಾರಿಯಾಗಿದ್ದು, ಧರ್ಮ, ಭಕ್ತಿಗಳ ಪ್ರಸಾರಕ್ಕೆ ಗುರುವಿನ ಪ್ರತಿನಿಧಿಯಾಗಿ ನಿಯೋಜಿತನಾಗುತ್ತಾನೆ. ನೀಲಗಾರರಿಗೆ ಊರೂರು ಗುತ್ತಿಗೆ ಯುಂಟು. ಗಂಡುಮಕ್ಕಳಿಗೆ ದೀಕ್ಷೆ ನೀಡಿ ಉಪದೇಶ ಮಾಡಲಾಗುತ್ತದೆ. ಇವರಿಗೆ ದಾಳ ಕಾಣಿಕೆ ಕೊಡುವರು ಬಟ್ಟೆಗೆ ಕಾವಿ ಹಚ್ಚಿ ಅರಳೀಮರಕ್ಕೆ ಕಟ್ಟುವರು. ಈ ಬಾವುಟವನ್ನು ಕಟ್ಟಿದರೆ, ರೋಗರುಜಿನ ಬರುವುದಿಲ್ಲ. ಪ್ಲೇಗು, ವಾಂತಿ ಭೇದಿ ತಟಕ್ಕನೆ ನಿಲ್ಲುತ್ತದೆ. ಸಿದ್ದಪ್ಪಾಜಿಯವರಿಗೆ ಅದಕ್ಕಾಗಿಯೇ 'ಮಾರೀರ ಮಸಣೀರ ಗಂಡ-ದುರ್ಗಿ ಚೌಡೀರ ಮಿಂಡ' ಎಂದು ಕರೆಯಲಾಗಿದೆ. ವರ್ಷಕ್ಕೊಮ್ಮೆ ಊರಿಗೆಲ್ಲ ಊಟ ಹಾಕುವುದನ್ನು ಸಿದ್ದಯ್ಯನ ಸೇವೆ ಎಂದು ಮಾಡುವರು.

ನೀಲಗಾರರು ಸಿದ್ದಪ್ಪಾಜಿಯವರನ್ನು ಹೆಜ್ಜೆ ಹೆಜ್ಜೆಗೂ ನೆನೆಯುತ್ತಾರೆ. 'ಸಿದ್ದಾಪ್ಪಾಜಿ' ನೀಲಗಾರರ ಪರಂಪರೆಯ ಆದ್ಯ ಪುರುಷ. ಧರೆಗೆದೊಡ್ಡವರ ಲೀಲೆಗಳನ್ನು ಲೋಕದ ಮೇಲೆ ಮೆರೆದ ಲೀಲೆಗಾರ. ನೀಲಗಾರರ ಸಂಪ್ರದಾಯಕ್ಕೆ ಸಿದ್ದಪ್ಪಾಜಿ ಪ್ರೇರಕಶಕ್ತಿಯಾದುದರಿಂದ ಮಂಟೇಸ್ವಾಮಿ ಕಾವ್ಯಕ್ಕೆ 'ಸಿದ್ದಪ್ಪಾಜಿ ವಚನ' ಎಂದೂ ಇದನ್ನು ಹಾಡುವ ನೀಲಗಾರರನ್ನು ವಚನಕಾರರು ಎಂದೂ ಕರೆಯುವುದುಂಟು. ಇವರ ತಂಬೂರಿ ವೈಷ್ಣವ ಸಂಪ್ರದಾಯಕ್ಕೆ ಸೇರಿದ್ದು. ಶೈವ-ವೈಷ್ಣವಗಳ ಸಂಗಮವನ್ನು ಮಂಟೇಸ್ವಾಮಿ ಪರಂಪರೆಯಲ್ಲಿ ಕಾಣುತ್ತೇವೆ. ದಾಸ ಪರಂಪರೆಯ ಈ ತಂಬೂರಿಯನ್ನು ಮುತ್ತತ್ತಿರಾಯ (ರಾಮನ ಪರಮಭಕ್ತನಾದ ಆಂಜನೇಯ) ಸಿದ್ದಪ್ಪಾಜಿ ಯವರಿಗೆ ತನ್ನ ನೆನಪಾಗಿ ಪಾಂಚಾಳರಿಂದ ಕಬ್ಬಿಣದ ಭಿಕ್ಷೆಯನ್ನು ಪಡೆಯುವ ಸಂದರ್ಭದಲ್ಲಿ ಬಳುವಳಿಯಾಗಿ ಕೊಟ್ಟಿದ್ದು. ಸಿದ್ದಪ್ಪಾಜಿ ತನ್ನ ಗುರು ಮಹಿಮೆಯನ್ನು ತಂಬೂರಿಯನ್ನು ನುಡಿಸುತ್ತಾ ಪ್ರಸಾರ ಮಾಡಿದರು. ಮಂಟೇಸ್ವಾಮಿಗಳು ಸಿದ್ದಪ್ಪಾಜಿಯವರಿಗೆ ದೀಕ್ಷೆ ನೀಡಿದಾಗ ಅವರ ಕೊರಳಿಗೆ ಪಂಚಮೊಕದ ರುದ್ರಾಕ್ಷಿ ಕಟ್ಟಿದರು ಎನ್ನುವುದು ಕಾವ್ಯದಲ್ಲಿ ದಾಖಲಾಗಿದೆ. ''ಮಂಟೇಸ್ವಾಮಿ ಸಿದ್ದಪ್ಪಾಜಿಗಳ ನೀಲಗಾರರಿಗೆ ಮೇಲ್ಮುಖ-ವಾಗಿ ರುದ್ರಾಕ್ಷಿಯ ತೂತು ಬರುವಂತೆ ಕಟ್ಟಿದರೆ ಮಾದೇಶ್ವರ ಗುಡ್ಡರಲ್ಲಿ ಅಡ್ಡವಾಗಿ ಬರುತ್ತದೆ.''[೪೬] ಸಿದ್ದಪ್ಪಾಜಿಗೆ ಮಂಟೇಸ್ವಾಮಿ ದೀಕ್ಷೆ ನೀಡಿ ಡಮರುಗ, ತ್ರಿಶೂಲ, ರುದ್ರಾಕ್ಷಿ ಜಾಗಟೆಗಳನ್ನು ನೀಡಿದರು. ಸಿದ್ದಪ್ಪಾಜಿಗೆ ಮಂಟೇಸ್ವಾಮಿಗಳು ನೀಡುವ ದೀಕ್ಷೆ ನೀಲಗಾರರ ಸಂಪ್ರದಾಯ ದೀಕ್ಷೆಯ ಪೂರ್ಣ ಚಿತ್ರವನ್ನು ಕಾವ್ಯ ನೀಡುತ್ತದೆ. ಅದರಂತೆ ಈ ಒಕ್ಕಲಿನವರು ತಮ್ಮ ಮಕ್ಕಳಿಗೆ ದೀಕ್ಷೆ ಕೊಡುವಾಗ ಅನುಸರಿಸುತ್ತಾರೆ.

ಇವರ ಪರಂಪರೆಯ ನೀಲಗಾರರು ತಂಬೂರಿಯ ಮೇಲೆ ನಾಮದ ಗುರುತನ್ನು ಹಾಕುತ್ತಾರೆ. ನೀಲಗಾರರ ತಂಬೂರಿ ಕಥನಶೈಲಿ ವಿಶಿಷ್ಟವಾದುದು. ಹಲಸಿನ ಮರದಿಂದ ಮಾಡಿರುವ ಸುಮಾರು ಎರಡು ಮೊಳ ಉದ್ದವಿರುವ ತಂಬೂರಿಯ ಮೇಲು ತುದಿಯಲ್ಲಿ ನಾಗರಹೆಡೆ ಅಥವಾ ಸಿಂಹದ ಮುಖವನ್ನು ರಚನಾತ್ಮಕವಾಗಿ ಬಿಡಿಸಿರುತ್ತಾರೆ. ನೀಲಗಾರರು ತಮ್ಮ ಸಾಧನೆಯಲ್ಲಿ ಪಡೆದ ಪದಕ ಮತ್ತಿತರ ತಗಡಿನ ಸಾಧನಗಳನ್ನು ಅದರಲ್ಲಿ ನೇತು ಹಾಕಿರುತ್ತಾರೆ. ಇದು ಇವರ ಪಾಲಿನ ಸರಸ್ವತಿ. ನೀಲಗಾರರು ಹೊರಗೆ ಹೊರಟರೆ ತಂಬೂರಿಯನ್ನು ಹೆಗಲಿಗೆ ನೇತುಹಾಕಿಕೊಂಡು ಹೋಗುತ್ತಾರೆ. ಇವರು ಮನೆಯಲ್ಲಿದ್ದರೆ ದೇವರ ಗದ್ದುಗೆಯ ಮೇಲಿಟ್ಟು ಪೂಜೆ ಮಾಡುತ್ತಾರೆ. ಇದು ತಮ್ಮ ಆದಿಗುರು ಸಿದ್ದಪ್ಪಾಜಿಯಿಂದ ಬಂದದ್ದು ಪವಿತ್ರವಾದುದು ಎಂದು ನಂಬುತ್ತಾರೆ.

ಇವರ ಸಂಪ್ರದಾಯದ ಮಠಗಳಾದ ಬೊಪ್ಪಗೌಡನಪುರ ಮತ್ತು ಮಳವಳ್ಳಿಗಳಲ್ಲಿ ದೀಕ್ಷೆ ಮಾಡುತ್ತಾರೆ. ನೀಲಗಾರರು ಇಲ್ಲಿನ ಈ ಇಬ್ಬರು ಮಠಾಧಿಪತಿಗಳಲ್ಲಿ ಯಾರಿಂದಲಾದರೂ ದೀಕ್ಷೆಯನ್ನು ಪಡೆಯಬಹುದು. ದೀಕ್ಷೆ ಪಡೆಯುವಾಗ ಮಂಡೆಚವರ ಮಾಡುತ್ತಾರೆ. ನೀಲಗಾರರ ಬುಡಕ್ಕೆ ಸೇರಿದ ಒಬ್ಬ ಯಜಮಾನನ (ಪುರಸಾನಿ) ಮೂಲಕ ದೀಕ್ಷೆ. ಸ್ವಾಮಿಗಳ ಸಮ್ಮುಖದಲ್ಲಿ ಐದು ರೂಪಾಯಿ ಕಾಣಿಕೆ, ಅಕ್ಕಿ, ಮೇಲೆ ಒಂದು ತೆಂಗಿನಕಾಯಿ, ಎಲೆ, ಅಡಿಕೆ, ಹಣ್ಣುಕಾಯಿ, ಅರಿಶಿಣ, ಕುಂಕುಮ, ಅಣಿಗೊಳಿಸಿಕೊಂಡು, ಸಾಂಬ್ರಾಣಿ ಹಾಕಿ ಸ್ತೋತ್ರ ಮಾಡುತ್ತಾರೆ. ಮಠಗಳಲ್ಲಿ ದೀಕ್ಷೆ ಪಡೆಯಲು ಸಾಧ್ಯವಾಗದಿದ್ದರೆ, ಜಾತ್ರೆಗಳಲ್ಲಿ ಪಡೆಯಬಹುದು. ಸಿದ್ದಪ್ಪಾಜಿ ಕ್ಷೇತ್ರವಾದ ಚಿಕ್ಕಲ್ಲೂರು ಮತ್ತು ರಾಚಪ್ಪಾಜಿ ಕ್ಷೇತ್ರವಾದ ಕಪ್ಪಡಿ ಈ ಸ್ಥಳಗಳಲ್ಲಿ ದೀಕ್ಷಾ ವಿಧಿಗಳು ನಡೆಯುತ್ತವೆ. ದೀಕ್ಷೆಯಾದ ವಟುವನ್ನು ಗುರುವು ಹರಸುತ್ತಾರೆ. ಕೊರಳಿಗೆ ಮಣಿಯನ್ನು ಹಾಕಿ ಅವನ ಕಿವಿಯಲ್ಲಿ ಕೆಲವು ಮಾತುಗಳನ್ನು ಉಚ್ಚರಿಸುತ್ತಾರೆ.

'ಜಗಳ ಆಡೋತಾಕೆ ಹೋಗಬೇಡ
ಕೆಟ್ಟ ಬೈಗುಳ ಬೈಬೇಡ
ನೀನು ಭಿಕ್ಷೆ ಮಾಡಿದರಲ್ಲಿ
ಒಬ್ಬನಿಗೆ ಅನ್ನಹಾಕು'

ಈ ಮಾತುಗಳನ್ನು ಹೇಳಿ ಮುಂಗೈಗೆ ಜೋಳಿಗೆ ಕೊಡುತ್ತಾರೆ. ಕಂಕುಳಿಗೆ ಬೆತ್ತ ಕೊಡುತ್ತಾರೆ. ನಾಲ್ಕುಕಡೆ ಭಿಕ್ಷೆ ಮಾಡಿಸುತ್ತಾರೆ. ದೀಕ್ಷೆಯಾದ ಮೇಲೆ ಗುರುವು ವಟುವಿನ ತಂದೆತಾಯಿಗಳಿಗೆ ಒಂದು ಪ್ರಶ್ನೆ ಹಾಕುತ್ತಾರೆ. 'ಇವನು ಯಾರ ಮಗ? ತಂದೆತಾಯಿಗಳು ಭಕ್ತಿ ಗೌರವದಿಂದ ಹೇಳುತ್ತಾರೆ. ಇದುವರೆಗಿಗೂ ನಮ್ಮ ಮಗ, ಇನ್ನು ಮೇಲೆ ಸ್ವಾಮಿಯ ಮಗ.' ಆಗಿನಿಂದ ಸ್ವಾಮಿಯ ಸೇವೆಗೆ ಆತ ಮೀಸಲು. ಆತನು ಅವನ ಊರಲ್ಲಿ ನಾಲ್ಕುಜನ ನೀಲಗಾರ ಜೊತೆ ಭಿಕ್ಷಾಟನೆ ಮಾಡಿದ ಮೇಲೆ ನೀಲಗಾರರಿಗೆ ದೀಕ್ಷೆ ಪಡೆದವನ ಮನೆಯಲ್ಲಿ ಆ ದಿನ ಅನ್ನದಾನ. ನೀಲಗಾರ ದೀಕ್ಷೆ ಪಡೆದ ವಟುವಿಗೆ ಭಂಗಿ, ಮಾಂಸದ ಊಟವನ್ನು ಕೊಡುತ್ತಾರೆ. ಮುಂದೆ ಈ ನೀಲಗಾರ ಗುರುವನ್ನು ಅರಸಿಕೊಂಡು ಅವರ ಜೊತೆ ಭಿಕ್ಷಾಟನೆ ಮಾಡುವಾಗ ತಾನೂ ಜೊತೆ ಹಾಡುತ್ತಾ, ಗುರುಸೇವೆಯನ್ನು ಮಾಡುತ್ತಾ ಕೆಲವು ವರ್ಷಗಳಲ್ಲಿಯೇ ಹಾಡುಗಾರಿಕೆಯನ್ನು ಕಲಿತುಕೊಳ್ಳುತ್ತಾನೆ. "ತುಂಬ್ದ ಸೋಮವಾರ ಈ ಪರಂಪರೆಗೆ ಪವಿತ್ರವಾದ ದಿನ. ಮಂಟೇಸ್ವಾಮಿಗಳು ತುಂಬಿದ ಸೋಮವಾರದ ದಿನ

ಬೊಪ್ಪೇಗೌಡನ ಕುರಿದೊಡ್ಡಿಯನ್ನು ಉರಿಗದ್ದುಗೆಯಾಗಿ ಪಡೆದರು ಎಂದು ಕತೆ ಹೇಳುತ್ತದೆ. ದೀಕ್ಷಾ-ಪೂಜೆ ಇತ್ಯಾದಿಗಳಿಗೆ ಪವಿತ್ರವಾದ ದಿನ."[೪೭] ಸೋಮವಾರ, ಶುಕ್ರವಾರ, ಇವರಿಗೆ ಪವಿತ್ರ ದಿನಗಳು. 'ವಾರ' ಆಚರಿಸುವುದು ಕಡ್ಡಾಯ. ಹೆಣ್ಣುಮಗು ಮೊದಲು ಜನಿಸಿದರೆ ಅವಳು 'ನೀಲಗಾತಿ'. ಗಂಡು ಮಕ್ಕಳಲ್ಲಿ ಮೊದಲನೆಯವನೇ ನೀಲಗಾರ. ಓದಿದ್ದರೂ 'ಲಾಂಚಾಣ' ಕುತ್ತಿಗೆಗೆ ಬೀಳಬೇಕು. ನೀಲಗಾರರು ತಮ್ಮ ಕಲಾ ಪ್ರದರ್ಶನದ ಸಂದರ್ಭದಲ್ಲಿ ಚಕ್ರಾಕಾರದ ಗಗ್ಗರ ಮತ್ತು ಢಕ್ಕೆ ಎಂಬ ಚರ್ಮವಾದ್ಯಗಳನ್ನು ನುಡಿಸುತ್ತಾರೆ. ಹಾಡುವವನು ಒಬ್ಬನೇ ನೀಲಗಾರ. ಚಿಟಿಕೆ, ಚಕ್ರಾಕಾರದ ಗಗ್ಗರಗಳನ್ನು ಎಡಗೈ ಹೆಬ್ಬೆರಳಿಗೆ ಸಿಕ್ಕಿಸಿಕೊಂಡು, ತಂಬೂರಿಯ ಮೇಲೆ ಬಡಿಯುತ್ತಾ, ಬಲಗೈಯಲ್ಲಿ ತಂಬೂರಿಯ ತಂತಿಯನ್ನು ಮೀಟುತ್ತಾ ಹಾಡುತ್ತಾನೆ. ಇದು ಏಕಕಾಲದಲ್ಲಿ ನಡೆಯುವ ಕ್ರಿಯೆ. ಮೂವರು ನೀಲಗಾರರು ಹಾಡುವಾಗ ಮುಖ್ಯ ಗಾಯಕ ತಂಬೂರಿ, ಗಗ್ಗರಗಳನ್ನು ಹಿಡಿದು ಹಾಡಿದರೆ ಹಿಮ್ಮೇಳವಾಗಿ ಅವನ ಅಕ್ಕಪಕ್ಕದಲ್ಲಿನ ಇಬ್ಬರಲ್ಲಿ ಒಬ್ಬ ಡಕ್ಕೆಯನ್ನು ಮತ್ತೊಬ್ಬ ತಾಳ ನುಡಿಸುತ್ತಾನೆ. ನೀಲಗಾರರಲ್ಲಿ ನೃತ್ಯವಿಲ್ಲ. ಮಾದೇಶ್ವರನ ಗುಡ್ಡರು ಕಂಸಾಳೆ ನೃತ್ಯ ಮಾಡುತ್ತಾರೆ. ನೀಲಗಾರರು ಬೇರೆ ವೃತ್ತಿಗಾಯಕರಿಗಿಂತ ವಿಭಿನ್ನವಾಗಿ ಹಾಡುತ್ತಾರೆ. ಅಬ್ಬರವಿಲ್ಲದ ಆದರೆ ಸುಕೋಮಲವಾದ, ಈ ಹಾಡುಗಳು ಕೇಳುಗರನ್ನು ಬೇರೊಂದು ಜಗತ್ತಿಗೆ ಕರೆದೊಯ್ಯುವ ಶಕ್ತಿ ಪಡೆದಿದೆ. ಆರಂಭದ ಪಲ್ಲವಿಗಳು, ಕಥೆಯ ನಿರೂಪಣೆಯ ಸಂದರ್ಭದಲ್ಲಿ ಪಾತ್ರ ಮತ್ತು ಸನ್ನಿವೇಶಗಳಿಗೆ ಅನುಗುಣವಾಗಿ ಬಳಸುವ ವಿವಿಧ ರಾಗಗಳು, ಆ ಸಂದರ್ಭದಲ್ಲಿ, ಏರಿಳಿತ ಪಡೆಯುವ ಹಲವು ಗತಿಗಳು ಮಹತ್ವದ ಸಂಗೀತ ಗಾರರನ್ನು ನೆನಪಿಸುತ್ತವೆ. ನೀಲಗಾರರಿಗೆ ಇರುವ ಇಂಪಾದ ಕಂಠ ಮತ್ತು ಆ ಕಂಠದ ಸಿರಿಯನ್ನು ಅವರು ಕಾಪಾಡಿಕೊಂಡಿರುವ ರೀತಿ ಅತ್ಯಾಶ್ಚರ್ಯಕರ. ಇವರು ಹಾಡುವ ಕಾವ್ಯ ಹಾಡಿನ ರೂಪದಲ್ಲಿದ್ದರೂ, ಮಧ್ಯೆ ಮಧ್ಯೆ ಗದ್ಯವೂ ಮತ್ತೆ ಕೆಲವೊಮ್ಮೆ ವಚನವನ್ನು ಸೇರಿಸಿಕೊಳ್ಳುತ್ತಾರೆ. ನೃತ್ಯವಿಲ್ಲದಿರುವುದರಿಂದ, ಇವರ ಮೇಳಕ್ಕೆ ನಿರ್ದಿಷ್ಟ ಪ್ರದರ್ಶನ ಸ್ಥಳಬೇಕಿಲ್ಲ. ದೀರ್ಘವಾದ ಕಥೆಗಳು ಇರುವುದರಿಂದ, ಮಧ್ಯೆ ಮಧ್ಯೆ ಉಪಕಥೆ ಗಳನ್ನು ಸೇರಿಸಿಕೊಳ್ಳುತ್ತಾರೆ. ಮಂಟೇಸ್ವಾಮಿಗಳ ಅದ್ಭುತ ಮಹಿಮೆಯ ಜೊತೆಯಲ್ಲಿ ಅವರ ಶಿಷ್ಯರ ಮಹಿಮೆ ಯನ್ನೂ ಶ್ರುತಪಡಿಸುತ್ತಾರೆ. ನೀಲಗಾರರು ಕಲ್ಯಾಣದ ಕತೆ ಹಾಡುವಾಗ ಕಾಲದ ಪ್ರಜ್ಞೆಯಿಂದ ಹಿಂದೆ ಸರಿ ಯುತ್ತಾರೆ. ಕಲ್ಯಾಣದ ಭಾಗ ಪರಿಕಲ್ಪನಾತ್ಮಕವಾದದ್ದು, ಕಲ್ಯಾಣದ ಜಂಗಮರ 'ಇಷ್ಟಲಿಂಗ' ಕಲ್ಪನೆಯನ್ನು ಹೊಡೆದು ಆತ್ಮಲಿಂಗದ ಕಲ್ಪನೆಯನ್ನು ತರುತ್ತಾರೆ. ತಮ್ಮ ಧಾರ್ಮಿಕ ಗುರುವಿನ ಕತೆಯ ಜೊತೆಗೆ ಬಾಲ ನಾಗಮ್ಮ, ಬಿಳಿಗಿರಿರಂಗ, ಹರಳಯ್ಯನ ಕತೆ, ಲವ-ಕುಶರ ಕತೆ ಇತ್ಯಾದಿ ಸುಮಾರು ೨೦ ಸುದೀರ್ಘ ಲೌಕಿಕ ಕಾವ್ಯಗಳನ್ನು ಹಾಡುತ್ತಾರೆ. ಇವರ ಮೇಳಗಳಿಗೆ ಸಾಕಷ್ಟು ಉಡುಗೊರೆಗಳು ಲಭ್ಯವಾಗುತ್ತದೆ. ಮಂಟೇಸ್ವಾಮಿ ಕಾವ್ಯವನ್ನು ಜಾತ್ರೆ, ಉತ್ಸವ, ಹಬ್ಬಗಳಲ್ಲಿ ಹುಟ್ಟು ಹಬ್ಬಗಳಲ್ಲಿ ಹಾಗೂ ಸತ್ತವರ ಮನೆಯಲ್ಲಿ ಹಾಡುತ್ತಾರೆ. ಸಿಡುಬು, ಪ್ಲೇಗ್, ಕಾಲರ ಮುಂತಾದ ಅಂಟು ಜಾಡ್ಯಗಳು ಬಂದಾಗ ಸಿದ್ದಪ್ಪಾಜಿ ದಾಳ ಹಾಕಿದರೆ ಪರಿಹಾರ ವಾಗುತ್ತದೆ ಎಂಬ ನಂಬಿಕೆ. ಆಗ ಕಥೆಗಳಾಗುತ್ತವೆ. ಕೆಲವು ನೀಲಗಾರರು ಸಿದ್ದಪ್ಪಾಜಿ ಕತೆಯೊಂದನ್ನೇ ಹಾಡಿದರೆ ಇನ್ನು ಕೆಲವರು ಪೂರ್ಣವಾಗಿ ಅಖಂಡ ಕಾವ್ಯವನ್ನೂ ಹಾಡುತ್ತಾರೆ. ನೀಲಗಾರರು ಮಾದೇಶ್ವರರ ಕಾವ್ಯವನ್ನು ಕಂಸಾಳೆಯವರೂ ಮಂಟೇಸ್ವಾಮಿ ಕಾವ್ಯವನ್ನು ಪರಸ್ಪರ ಬದಲಾಯಿಸಿ ಹಾಡುತ್ತಾರೆ. ಎರಡೂ ಕಾವ್ಯಗಳೂ ಪರಸ್ಪರ ಪೂರಕ, ಪರಸ್ಪರ ಸಹಾಯಕವಾಗಿ ಬೆಳೆದು ಬಂದಿದೆ. ನೀಲಗಾರರು ಹಾಡುವ ಕಾವ್ಯಗಳನ್ನು ಧಾರ್ಮಿಕ

ಹಾಗೂ ಲೌಕಿಕ ಕಾವ್ಯಗಳೆಂದು ವಿಭಾಗಿಸಲಾಗಿದೆ. ಮಂಟೇಸ್ವಾಮಿ ಕಾವ್ಯ ಧಾರ್ಮಿಕ ಕಾವ್ಯ. ಧಾರ್ಮಿಕ ಕಾವ್ಯಗಳು ಒಂದು ಪರಿಮಿತಿಗೆ ಒಳಪಟ್ಟರೆ, ಲೌಕಿಕ ಕಾವ್ಯಗಳಿಗೆ ಯಾವ ಪರಿಮಿತಿಯಾಗಲಿ, ಚೌಕಟ್ಟಾಗಲಿ ಇಲ್ಲ. ''ಮಂಟೇಸ್ವಾಮಿ ಸಂಪ್ರದಾಯಕ್ಕೆ ಹಾಗೂ ಅವರ ಮಠಗಳಿಗೆ ಸಂಬಂಧಪಟ್ಟಂತೆ ಲಿಖಿತ ಆಧಾರ ದೊರೆತಿಲ್ಲ. ಇದ್ದ ಆಧಾರಗಳೆಲ್ಲ 'ಪಂಜಿನ ಕಳ್ಳ'ರ ಧಾಳಿಯಲ್ಲಿ ಸುಟ್ಟುಹೋದವು ಎನ್ನಲಾಗಿದೆ.''[೪೮] ನೀಲಗಾರ ಸಮುದಾಯ ಈ ಸಂಪ್ರದಾಯವನ್ನು ಜೀವಂತವಾಗಿ ಉಳಿಸಿಕೊಂಡಿದೆ. ಮೌಖಿಕ ಕಾವ್ಯ ಸಂಪ್ರದಾಯದ ಪ್ರಕಾರ ಮಂಟೇಸ್ವಾಮಿಯವರಿಗೆ ಧರೆಗೆ ದೊಡ್ಡವರು, ಪ್ರಭುಸ್ವಾಮಿ, ಪ್ರಭುದೇವರು, ಅಲ್ಲಮಪ್ರಭುಗಳು ಪರಂಜ್ಯೋತಿ ಎಂಬ ಹಲವಾರು ಹೆಸರುಗಳು ಕಂಡುಬರುತ್ತವೆ. ಧರೆಗೆ ದೊಡ್ಡವರು ತನ್ನ ಪರ್ಯಾಟನೆಯಲ್ಲಿ ಆದಿ ಹೊನ್ನನಾಯಕನ ಹಳ್ಳಿಯ ''ಬಳೆ ಮುದ್ದಮ್ಮ ಹಾಲು ಕರೆಯುವಾಗ ಅವಳ ಮನೆಯ ಬಾಗಿಲಿಗೆ 'ಕ್ವಾರಣ್ಯ'ಕ್ಕಾಗಿ ಬಂದಾಗ, ಅವರ ಜಾಗಟೆಯ, ಜಂಗಿನ ಶಬ್ದಕ್ಕೆ ಹಸು ಬೆದರಿದಾಗ ಹಾಲು ಚಲ್ಲಿತು. ಮುದ್ದಮ್ಮ ಸಿಟ್ಟಿನಿಂದ 'ಹಾಳಾದ ಮಂಟೇದಯ್ಯ' ಎಂದಳು, ಬೀಳು, ಒರಗು ಎಂಬ ಅರ್ಥದಲ್ಲಿ 'ಮಂಟುಕೊ' ಎಂಬ ಶಬ್ದ ಬಳಕೆಯಲ್ಲಿದೆ. ಹಸು ಬೆದರಲು ಕಾರಣವಾದ ಜಂಗಮನಿಗೆ 'ಒರಗಿಹೋಗ' ಎಂಬ ಮಾತನ್ನು ಮುದ್ದಮ್ಮ ಹಾಡಿದುದೇ ಹೊಸ ನಾಮಕರಣಕ್ಕೆ ಕಾರಣವಾಯಿತು. ಧರೆಗೆದೊಡ್ಡವರು ನಗುತ್ತಾ 'ಮಂಟೇಸ್ವಾಮಿ' ಎಂಬ ಹೆಸರನ್ನೇ ಸ್ವೀಕರಿಸಿದರು. 'ಬಳೆಮುದ್ದಮ್ಮ'ನ ವಂಶಸ್ಥರು ಆದಿ ಹೊನ್ನಾಯಕನ ಹಳ್ಳಿಯಲ್ಲಿ ಇನ್ನೂ ಇದ್ದಾರೆ.''[೪೯] ಮಂಟೇಸ್ವಾಮಿಗಳಿಗೆ ಹುಟ್ಟಿದಾಗ ನಾಮಕರಣವೇ ಆಗಿರಲಿಲ್ಲ. ಜಾನಪದ ಪರಂಪರೆಯಲ್ಲಿ ನಿಂದಾತ್ಮಕ ಹೆಸರುಗಳನ್ನಿಟ್ಟುಕೊಳ್ಳುವ ಒಂದು ಸಂಪ್ರದಾಯವಿದೆ.

ಆದರೆ ಎಂ.ಎಂ.ಕಲಬುರ್ಗಿ ಅವರು ''ಮಂಟೆ' ಎಂದರೆ ಮಣ್ಣಿನ ಗಡಿಗೆ, ಮಟ್ಟಿ ಎಂಬ ಅರ್ಥ ಸ್ಫುರಿಸುತ್ತದೆಂದೂ, 'ಒರಗಿಹೋಗ' ಎಂಬ ಅರ್ಥವನ್ನು ಒಪ್ಪಿಕೊಳ್ಳಲಾಗದೆಂದೂ ಅಭಿಪ್ರಾಯಪಡುತ್ತಾರೆ.''[೫೦]

''ತಮಂಪ ಮೂರ್ತಿಯವರ ಧರೆಗೆ ದೊಡ್ಡವರ ಕಾವ್ಯದಲ್ಲಿ ಧರೆಗೆ ದೊಡ್ಡವರು ಜ್ಯೋತಿ ಸ್ವರೂಪವಾಗಿ ಆಕಾಶ ಅಂತ ನೋಡಿದ್ರೆ ಕೆಳಗೆ ಭೂಮಿಯೇ ತಲ್ಲಣಿಸಿ ಬಾಯಿ ಬುಟ್ಟುಬುಡ್ತು, ಆ ಹೋಳಾದಂತ ಭೂಮಿ ತೂಕದ ಲಿಂಗವನ್ನೇ ಎದೆಗೆ ಧರ್‍ಸಗಂಡು ಸಟಗೂ ಅಳ್ಳಾಡದೆ ನಿಂತಗಂಡರು. ಅದೇ ಅವ್ರಿಗೆ ಮಂಟೇಸ್ವಾಮಿ ಅಂತ ನಾಮಕರಣವಾಯ್ತು''[೫೧] ಎನ್ನುವ ಮಾತು ಬರುತ್ತದೆ.

ಮಂಟೇಸ್ವಾಮಿಗಳ ಪಯಣ ಕಲ್ಯಾಣದಿಂದ ಹೊರಟು ವಿಜಯನಗರದ ಮಾರ್ಗವಾಗಿ, ಕಾಗಿನೆಲೆ, ಸಖರಾಯಪಟ್ಟಣ, ಚನ್ನಪಟ್ಟಣ, ಮಳವಳ್ಳಿ ಕಾಡುಗನಹಳ್ಳಿಗಳನ್ನು ಹಾದು ಬೊಪ್ಪಗೌಡನ ಪುರಕ್ಕೆ ಬಂದು ನೆಲೆ ನಿಲ್ಲುತ್ತದೆ. ಮಡಿವಾಳ ಮಾಚನ ದುಡವನ್ನು ಪರೀಕ್ಷಿಸುತ್ತಾರೆ. ಅವನ ಮನೆಗೆ ಹೋಗಿ ಏಳು ವರ್ಷದ ಮೇಲಿನ ಒಂಬತ್ತು ವರ್ಷದ ಕೆಳಗಿನ ಮಗುವಿನ ಮಾಂಸವನ್ನು ಅಡಿಗೆ ಮಾಡಿ ತನಗೆ ನೀಡಬೇಕೆನ್ನುತ್ತಾನೆ. ಮಾಚಯ್ಯ ಮಲ್ಲಿಗೆ ಮಾದೇವಮ್ಮ ದಂಪತಿಗಳು ಅವರ ಒಬ್ಬನೇ ಮಗ ವೀರಣ್ಣನನ್ನು ಕೊಂದು ಅವನ ಮಾಂಸದಿಂದ ಅಡುಗೆಮಾಡಿ ಮಂಟೇಸ್ವಾಮಿಗೆ ಒಪ್ಪಿಸುತ್ತಾರೆ. ಈ ಭಕ್ತ ಶಿರೋಮಣಿಗಳ ಭಕ್ತಿಯನ್ನು ಮೆಚ್ಚಿದ ಮಂಟೇಸ್ವಾಮಿ ಸತ್ತಮಗನಿಗೆ ಮತ್ತೆ ಜೀವ ತುಂಬಿ ಅವನಿಗೆ 'ಫಲಾರದಯ್ಯ' ಎಂದು ನಾಮಕರಣ ಮಾಡಿ ಎಲ್ಲರನ್ನೂ ಅನುಗ್ರಹಿಸುತ್ತಾರೆ. ಫಲಾರದಯ್ಯನ ಕಥೆ ಪರೀಕ್ಷೆಯ ನೆಲೆಯಲ್ಲಿ ವರ್ಗೀಕರಿಸುವ ಕತೆ. ಮಡಿವಾಳ

ಮಾಚಯ್ಯನ ಅಮೃತಮಣ್ಣು ಮಂಟೇಸ್ವಾಮಿಗಳಿಗೆ ಒಪ್ಪಿಗೆಯಾಗಿ ಉಬ್ಬೆ ಒಲೆಯನ್ನು ಗುರುಮಠ ಮಾಡಿಕೊಂಡು ಅವನ ಕತ್ತೆ ಕಟ್ಟೋ ಕೊಟ್ಟಿಗೆಯನ್ನು ಚಂದ್ರಶಾಲೆಯಾಗಿ ಮಾಡಿಕೊಂಡು ನೆಲೆ ನಿಂತ ನಂತರ, ಕಾವ್ಯದಲ್ಲಿ ಮಂಟೇಸ್ವಾಮಿಯವರ ವ್ಯಕ್ತಿತ್ವಕ್ಕೆ ಯಾವುದೇ ಧಕ್ಕೆ ಉಂಟಾಗುವ ರೀತಿಯಲ್ಲಿ ಮೂಲ ಕಾವ್ಯದಿಂದ ಕಳಚಿಕೊಂಡು ಸಿದ್ದಪ್ಪಾಜಿ ಪ್ರಧಾನಕಾವ್ಯವಾಗಿ ಹರಿಯಲಾರಂಭಿಸುತ್ತಾರೆ. ಮುಂದೆ ಕಾವ್ಯದ ಪಲ್ಲವಿಯ ಮೂಲಕವಾಗಿಯೇ ಅನಾವರಣಗೊಂಡು ಬಿಡುತ್ತಾರೆ. 'ಸಿದ್ದ ಸಿದ್ದರಿಗೆಲ್ಲ ಅತಿ ಮುದ್ದು ಘನನೀಲಿ ಸಿದ್ದಯ್ಯ ಸ್ವಾಮಿ ಬನ್ನಿ' ಮಂಟೇಸ್ವಾಮಿ ಕಾವ್ಯದ ಉತ್ಕೃಷ್ಟ ಸ್ಥಿತಿ ಇರುವುದೇ ಸಿದ್ದಪ್ಪಾಜಿಯ ಪ್ರವೇಶದಿಂದ, ಕಾವ್ಯದ ಕೇಂದ್ರ ವ್ಯಕ್ತಿಯೇ ಸಿದ್ದಪ್ಪಾಜಿ. ಹೆಜ್ಜೆ-ಹೆಜ್ಜೆಗೂ ಸಿದ್ದಪ್ಪಾಜಿಯವರನ್ನು ನೆನೆಯುವ ನೀಲಗಾರರಲ್ಲಿ ಕೆಲವು ನೀಲಗಾರರು ಸಿದ್ದಪ್ಪಾಜಿ ಕಥೆಯೊಂದನ್ನೇ ಹಾಡುತ್ತಾರೆ. ಕಾವ್ಯವನ್ನು ಸಿದ್ದಪ್ಪಾಜಿಯವರ ವಚನ ಎಂದೂ ಕರೆಯುತ್ತಾರೆ. ಇಲ್ಲಿ ಸಿದ್ದಪ್ಪಾಜಿ ಏಕಮೇವ ಶಕ್ತಿಯಾಗಿ ವಿರಾಜಿಸುತ್ತಾರೆ. ''ಗುರು ಶಿಷ್ಯರ ಸಂಘರ್ಷದ ಭಾಗ, ಹಲಗೂರಿನ ಪವಾಡ ಪ್ರಸಂಗಗಳು, ಈ ಕಾವ್ಯದ ಸರ್ವೋತ್ಕೃಷ್ಟ ಭಾಗಗಳಾಗಿವೆ. ರಮ್ಯಾದ್ಭುತಗಳ ವರ್ಣನೆ, ಪಾತ್ರಗಳ ಔನ್ನತ್ಯ, ಸಾಹಸಗಳಿಂದಾಗಿ ಮಂಟೇಸ್ವಾಮಿ ಕಾವ್ಯ ಜನಪದ ಸಾರಸ್ವತ ಭಂಡಾರದ ಅನರ್ಘ್ಯ ರತ್ನವಾಗಿವೆ.''[೫೨] ಪವಾಡ ಮಹಿಮೆಗಳ ಪ್ರದರ್ಶನ ಇಲ್ಲಿ ಅಪಾರವಾಗಿದೆ. ಈ ಭಾಗದ ಕತೆಯನ್ನು ಈ ರೀತಿ ಸಂಗ್ರಹಿಸಬಹುದು.



ಬಡತನದಲ್ಲಿದ್ದ ನೀಲಘಟ್ಟದ ಬಸವಾಚಾರಿ, ಮುದ್ದಮ್ಮ ದಂಪತಿಗಳಿಗೆ ಮಂಟೇಸ್ವಾಮಿಗಳು ಅನುಗ್ರಹಿಸಿ, ಮಕ್ಕಳ ಫಲಕೊಟ್ಟು ಸಿರಿವಂತರನ್ನಾಗಿ ಮಾಡುತ್ತಾರೆ. ಈ ಸಂದರ್ಭದಲ್ಲಿ ಈ ದಂಪತಿಗಳ ದುಡವನ್ನು ಪರೀಕ್ಷಿಸಲು ಸ್ವಾಮಿಗಳು ಅವರಲ್ಲಿಗೆ ಹೋಗುತ್ತಾರೆ. ಹಿಂದೆ ಕಲ್ಯಾಣದ ಕಡೆ ಬಾಗಿಲನ್ನು ಕಾಯುತ್ತಿದ್ದ ಓಜಿ ಬಸಪ್ಪಾಜಿಯೇ ಈ ದಂಪತಿಗಳ ಆರುಜನ ಗಂಡು ಮಕ್ಕಳಲ್ಲಿ ಕಡೆಯವನಾದ ಕೆಂಪಚಾರಿಯಾಗಿ ಜನಿಸಿರುತ್ತಾನೆ. ಇವನನ್ನು ಮಂಟೇಸ್ವಾಮಿಗಳಿಗೆ ಕ್ಯಾರಣ್ಯವಾಗಿ ನೀಡಲು ಈ ದಂಪತಿಗಳು ನಿರಾಕರಿಸಿದಾಗ, ಕೆಂಪಣ್ಣನ ದೃಢವನ್ನು ಪರೀಕ್ಷಿಸಲು ಅವನಲ್ಲಿ ಹೋಗಿ 'ನನ್ನ ಶಿಷ್ಯನಾಗು' ಎನ್ನುತ್ತಾರೆ. ಅವನು ನಿರಾಕರಿಸುತ್ತಾನೆ. ಅವನಿಗೆ ಅವನ ಹೆತ್ತವರಿಗೆ ವಿವಿಧ ರೀತಿಯಿಂದ ತಿಳಿಹೇಳಿ ಒಲಿಸಿಕೊಳ್ಳಲು ಮಾಡಿದ ಪ್ರಯತ್ನ ವಿಫಲವಾದಾಗ, ಮಂಟೇಸ್ವಾಮಿಗಳು ಅವರಿಗೆ ಶಾಪಕೊಟ್ಟು, ನಾಶಮಾಡಿ, ಕೆಂಪಾಚಾರಿಗೆ 'ಹುಚ್ಚು ಬೆಪ್ಪಿನಗ್ಯಾನ' ಕೊಟ್ಟು ಕಾಳಿಂಗ ಗವಿಯಲ್ಲಿ ೧೨ ವರ್ಷಗಳ ಕಾಲ ಬಂಧಿಸುತ್ತಾರೆ. ಇದು ಪರೀಕ್ಷೆಯ ನೆಲೆ. ಈ ಅವಧಿಯಲ್ಲಿ ಕೆಂಪಾಚಾರಿಗೆ ನರರ ಗ್ಯಾನ ತಪ್ಪಿ, ಗುರುಗ್ಯಾನ ಉಂಟಾಗುತ್ತದೆ. ೧೨ ವರ್ಷಗಳ ನಂತರ ಕೆಂಪಾಚಾರಿಯನ್ನು ಮಂಟೇಸ್ವಾಮಿಗಳು ''ಧರೆಗೆದೊಡ್ಡವರ ಮಠದ ಘನನೀಲಿ ಸಿದ್ದಯ್ಯಸ್ವಾಮಿ ಬನ್ನಿ'' ಎಂದು ಕರೆದಾಗ ನೆತ್ತಿಯ ಮೇಲಿನ ಹನ್ನೆರಡು ಆಳುದ್ದದ ಮೂಗುತ್ತ ಹೊಡೆದು, ಗವಿಯ ಬಾಗಿಲ ಬಂಡೆ ಒಡೆದು, ಗುರುವಿನ ಬಳಿಗೆ ಬರುತ್ತಾನೆ. ಮಂಟೇಸ್ವಾಮಿಗಳಿಂದ ದೀಕ್ಷೆ ಸ್ವೀಕರಿಸಿ 'ಸಿದ್ದಪ್ಪಾಜಿ' ಎಂಬ ಹೊಸ ನಾಮಕರಣ ಮಾಡಿಸಿಕೊಂಡು, ದಳವಾಯಿ ಪಟ್ಟವನ್ನು, ಬಿರುದು ಭಾವಾವಳಿಗಳನ್ನು ಅವರಿಂದ ಸ್ವೀಕರಿಸುತ್ತಾನೆ. ಮಂಟೇಸ್ವಾಮಿಗಳು ಸಿದ್ದಪ್ಪಾಜಿಯವರನ್ನು ಮಾರಿ ಮಸಣಿಯರಿಗೆ 'ಮೊದಲ ಗಂಡ'ನ ಮಾಡಿ ನಿಲ್ಲಿಸುತ್ತಾರೆ. ಗುರು ಶಿಷ್ಯರ ಸಂಘರ್ಷ, ಹಲಗೂರು ಪವಾಡದ ವೈಖರಿ- ಇವು ಕಾವ್ಯದ ಉತ್ತುಂಗ ಶಿಖರಗಳೆನ್ನಬಹುದು.

'ಕಲಿ' ಅವತಾರವಾದ ಮೇಲೆ ಅದನ್ನು ಕಣ್ಣಿಂದ ನೋಡಲಾರೆನೆಂದು ಪಾತಾಳಬಾವಿಯಲ್ಲಿ ಪವಡಿಸಲು ಮಂಟೇಸ್ವಾಮಿಗಳು ನಿರ್ಧರಿಸುತ್ತಾರೆ. ನೀಲಗಾರರು ಕಲಿಯ ಭಾಗದಲ್ಲಿ ಆಧುನಿಕತೆ ಉಂಟುಮಾಡುವ ವಿನಾಶಗಳ ಬಗ್ಗೆ ಹೇಳುತ್ತಾರೆ. ಒಂಬತ್ತು 'ಲಗ'ಗಳನ್ನು ಹಲಗೂರಿನ ಪಾಂಚಾಳರಿಂದ ತರಲು ಸಿದ್ದಪ್ಪಾಜಿಯರಿಗೆ ಸೂಚಿಸುತ್ತಾರೆ. ಹಲಗೂರಿನಲ್ಲಿ ಸಿದ್ದಪ್ಪಾಜಿ ಇಂದ ಪವಾಡವನ್ನು ಮಾಡಿಸಿ, 'ನಗ'ಗಳನ್ನು ಪಡೆದದ್ದು, ಈ ಕಾವ್ಯದ ಅತ್ಯಂತ ಉಜ್ವಲವಾದ ಭಾಗ. ಮಂಟೇಸ್ವಾಮಿಗಳು ಮತ್ತು ಸಿದ್ದಪ್ಪಾಜಿ ಹಲಗೂರು ಪಾಂಚಾಳರ ಸಂಪತ್ತಿನ ವಿರುದ್ಧ ದಂಗೆ ಏಳುತ್ತಾರೆ. ಕಬ್ಬಿಣದ ಉತ್ಪಾದನೆಯಿಂದಾಗಿ, ಸಂಪತ್ತಿನ ಅಸಮಾನತೆ ಉಂಟಾಗಿ, ಅದರಿಂದ ಸಮಾಜದ ಮೇಲಾಗುವ ಕೆಟ್ಟ ಪರಿಣಾಮಗಳ ಬಗ್ಗೆ ಚಿಂತಿಸಿ, ಅದರ ವಿರುದ್ಧ ನಡೆಸುವ ದಂಗೆಯಿದು. ಹಲಗೂರಿನಲ್ಲಿ, ಪಾಂಚಾಳರು ಕಬ್ಬಿಣಭಿಕ್ಷೆ ನೀಡಲು ಒಡ್ಡುವ ಎಲ್ಲ ದಿವ್ಯಗಳನ್ನೂ, ಮಾರಿಯರನ್ನು ಬಳಸಿಕೊಂಡು ಗೆಲ್ಲುತ್ತಾರಲ್ಲದೆ ಕಬ್ಬಿಣದ ಭಿಕ್ಷೆಯನ್ನು ಪಡೆಯುತ್ತಾರೆ. ಇಲ್ಲಿ ಕಬ್ಬಿಣದ ಭಿಕ್ಷೆ ಪಡೆಯುವು ದೆಂದರೆ, ಪಾಂಚಾಳರ ಸಮೂಹವನ್ನು ಮಂಟೇಸ್ವಾಮಿ ಪಂಥಕ್ಕೆ ಸೇರಿಸಿಕೊಳ್ಳುವುದು. ಇದೊಂದು ಪ್ರತಿರೋಧದ ಹಂತ.

ಮಂಟೇಸ್ವಾಮಿಗಳು ಪಾತಾಳಬಾವಿಯಲ್ಲಿ ಪವಡಿಸುವ ಮೊದಲು ತಮ್ಮ ಶಿಷ್ಯರಾದ ರಾಚಪ್ಪಾಜಿಯವರಿಗೆ ದೊಡ್ಡಮ್ಮತಾಯಿ ಜೊತೆ ಮದುವೆ ಮಾಡಿಸುತ್ತಾರೆ. ರಾಚಪ್ಪಾಜಿಯವರನ್ನು ಕಪ್ಪಡಿಯಲ್ಲಿ, ಸಿದ್ದಪ್ಪಾಜಿ ಯವರನ್ನು ಚಿಕ್ಕಲ್ಲೂರಿನಲ್ಲಿ ಫಲಹಾರದಯ್ಯ ಮುಟ್ಟನಹಳ್ಳಿ ತೋಪಿನಲ್ಲಿ ನೆಲೆ ನಿಲ್ಲುವಂತೆ ಹಾಗೂ ಪರ್ಯಟನೆ ವೇಳೆ ಸಖರಾಯಪಟ್ಟಣದಿಂದ ಕರೆತಂದಿದ್ದ ಇಬ್ಬರು ರಾಜಕುಮಾರರಲ್ಲಿ ಒಬ್ಬರನ್ನು ಬೊಪ್ಪನ ಗೌಡಪುರದ ಮಠದಲ್ಲಿ ಮತ್ತೊಬ್ಬರನ್ನು ಮಳವಳ್ಳಿ ಮಠದಲ್ಲಿ ಪಟ್ಟದ ಅಧಿಕಾರಿಗಳಾಗಿರುವಂತೆ ಸೂಚಿಸುತ್ತಾರೆ. ದೊಡ್ಡಮ್ಮತಾಯಿ ರಾಚಪ್ಪಾಜಿಯವರೊಂದಿಗೆ ಕಪ್ಪಡಿಯಲ್ಲಿ ನೆಲೆಸಲು ಹೋಗುತ್ತಿರುವಾಗ ಮಧ್ಯೆ ಮುಟ್ಟನ ಹಳ್ಳಿಯಲ್ಲಿ ಮುಟ್ಟಾಗಿ, ಅಲ್ಲೆನೆಲೆ ನಿಂತು, ಅಲ್ಲೇ ಕಾಲವಾಗುತ್ತಾರೆ. ರಾಚಪ್ಪಾಜಿಯವರು ಕಪ್ಪಡಿಗೆ ಹೋಗುವ ಮಾರ್ಗದಲ್ಲಿ ಮೈಸೂರಿನಲ್ಲಿ ಅರಸರಿಗೆ ಅಷ್ಟೈಶ್ವರ್ಯ ನೀಡಿ, ಕಾರುಗನಳ್ಳಿಯ ಪಾಳೆಯಗಾರನನ್ನು ಕೊಲ್ಲುವ ಉಪಾಯ ಹೇಳುತ್ತಾರೆ. ಕೊನೆಗೆ ಕಪ್ಪಡಿಯಲ್ಲಿ ನೆಲೆ ನಿಲ್ಲುತ್ತಾರೆ. ಇದು ಕಾವ್ಯದ ಚೌಕಟ್ಟು.

ಈ ಕಾವ್ಯದ ಶರಣರೆಲ್ಲರೂ 'ಪಾತಾಳಬಾವಿ'ಯನ್ನು ತಮ್ಮ ತಪಸ್ಸಿಗಾಗಿ ತೋಡಿಸಿ ತಪೋರೂಢರಾಗುವುದು ಕೆಂಪಾಚಾರಿ, ಸಿದ್ದಪ್ಪಾಜಿಯಾಗಿ ಪರಿವರ್ತಿತವಾಗುವ ಕತೆ ಮಂಟೇಸ್ವಾಮಿ ಕಾವ್ಯದಲ್ಲಿ ಅತ್ಯಂತ ಪ್ರಮುಖವಾದ ಘಟನೆಯಾದರೆ, ಪಾಂಚಾಳರಿಂದ ಕಬ್ಬಿಣದ ಭಿಕ್ಷೆ ಪಡೆಯುವ ಪ್ರಸಂಗ ಸಿದ್ದಪ್ಪಾಜಿಯವರಿಗೆ ಮಂಟೇಸ್ವಾಮಿಗಳು ತನ್ನ ಕುಲದವರ ಆರ್ಥಿಕ ಚಟುವಟಿಕೆಯ ಮೇಲೆ ದಂಗೆ ಏಳುವಂತೆ ಮಾಡಿ ಅವರನ್ನು ಮಣಿಸಿ ತನ್ನ ಪಂಥಕ್ಕೆ ಸೇರಿಸಿಕೊಳ್ಳುವದು, "ಹಲಗೂರು ಪವಾಡ ಪ್ರಸಂಗದಲ್ಲಿ ನಿರ್ಮಿಸಲಾಗುವ ವಿವಿಧ ಬಗೆಯ ಉಕ್ಕಿನ ಪದಾರ್ಥಗಳು ಆಗಿನ ಕಬ್ಬಿಣ ತಯಾರಿಕೆಯ ವಿವಿಧ ಹಂತಗಳನ್ನು ಸಾಂಕೇತಿಕವಾಗಿ ಚಿತ್ರಿಸುತ್ತವೆ."[೫] ಕಪ್ಪುಧೂಳ್ತ ಮಂಟೇಸ್ವಾಮಿಗಳ ಮತ್ತು ಮಲೆಯಮಾದೇಶ್ವರರಿಬ್ಬರ ಪವಾಡಕ್ಕೆ ಒದಗಿ ಬರುವ ಪವಿತ್ರ ವಸ್ತು.

ಮಂಟೇಸ್ವಾಮಿ ಕಾವ್ಯದಲ್ಲಿ ಮಂಟೇಸ್ವಾಮಿ ಒಬ್ಬ ಆಧ್ಯಾತ್ಮಿಕ ಗುರುವಾಗಿ ಕಾಣಿಸಿಕೊಳ್ಳುತ್ತಾರೆ. ಸದಾ ಭಂಗಿ, ಹೆಂಡ ಸೇವಿಸುತ್ತಾ ಸುತ್ತುವ ಒಬ್ಬ ಮಹಾನ್ ಪವಾಡಕಾರ. ಅವರು, ತನಗೆ ಬೇಕಾದ ಎಲ್ಲವನ್ನೂ,

ಎಲ್ಲರನ್ನೂ  ಅಧೀನಕ್ಕೆ ತೆಗೆದುಕೊಳ್ಳುವ ಆತ್ಮಬಲ ಪಡೆದವರು. ಎಲ್ಲಿಯೂ ಅವರ ಕ್ರಿಯೆ ಹಿಂಸೆಯ ರೂಪ ತಳೆಯುವುದಿಲ್ಲ. ಇದು ಸಾಧ್ಯವಾಗದಿದ್ದಾಗ, ಮೌನಿಯಾಗಿ, ಕುಂತೂರು ಬೆಟ್ಟದ ತುತ್ತತುದಿಯಲ್ಲಿ ಕುಳಿತು ತನ್ನ ಭಂಗಿ ಚಿಲುಮೆ ತೆಗೆಯುತ್ತಾರೆ. ಭಂಗಿ ಸೇವನೆ ಕೇವಲ ಹೊಗೆ ಬಿಡುವ ಕ್ರಿಯೆ ಅಲ್ಲ. ಸಮಸ್ತ ವ್ಯವಹಾರಗಳೂ ಅಲ್ಲಿ ಅಡಗಿದೆ. ಖಂಡುಗ ಗಟ್ಟಲೆ ಭಂಗಿಯನ್ನು ಸೇದುತ್ತಾ, ಅದರ ಮತ್ತಿನಲ್ಲಿ ತೇಲುತ್ತಾ ಇರುವಾಗ ಸಮಸ್ಯೆಗಳಿಗೆ ಮುಂದಿನ ದಾರಿಗೆ ಪರಿಹಾರಗಳು ತಟ್ಟನೆ ಮಿಂಚಿ, ತೆಗೆದುಕೊಳ್ಳುವ ತೀರ್ಮಾನಗಳು ಫಲಿಸುತ್ತವೆ. ಭಂಗಿಸೇವನೆ ಕಾವ್ಯದ ದೃಷ್ಟಿಯಿಂದ ಬಹುಮುಖ್ಯ. ಭಂಗಿಸೇವನೆ ಅನೇಕ ಸಂದರ್ಭಗಳಲ್ಲಿ ರೋಚಕತೆಗೆ ಎಳೆದೊಯ್ಯುತ್ತದೆ. ಕಾವ್ಯದುದ್ದಕ್ಕೂ ಭಂಗಿ ಫಲಹಾರ ಮಾಡುವುದನ್ನು ಕಾಣುತ್ತೇವೆ. ಮಂಟೇಸ್ವಾಮಿಯ ಶಿಷ್ಯನಾಗಿ ಬರಲು ನಿರಾಕರಿಸುವ ಕೆಂಪಾಚಾರಿಯ ಮೇಲೆ ಭಂಗಿ ಹೊಗೆಯನ್ನು ಬಿಟ್ಟು, ಬೆಪ್ಪು ನೀಲಿ ಮುಂತಾದ ನೀಲಿಗಳು ಆವರಿಸುವಂತೆ ಮಾಡುತ್ತಾರೆ. ಇದನ್ನು ಕಾವ್ಯ ನಾಟಕೀಯವಾಗಿ ವರ್ಣಿಸುತ್ತದೆ.

ಮಂಟೇಸ್ವಾಮಿಗಳು ಮಾದೇಶ್ವರನಂತೆ ಅನೇಕ ಪವಾಡಗಳನ್ನು ಮಾಡುತ್ತಾರೆ. ಪವಾಡ ಅನ್ನೋದು ವಿಶ್ವವ್ಯಾಪ್ತಿ. ಪವಾಡಗಳಿಲ್ಲದ ಮಹಾಕಾವ್ಯಗಳೇ ಇಲ್ಲ. ಮಂಟೇಸ್ವಾಮಿನೇ ಒಂದು ಪವಾಡ. ಜಗತ್ತನ್ನೇ ಸೃಷ್ಟಿಸಿದ ಒಬ್ಬ ಪವಾಡಕಾರ. ಕಲ್ಯಾಣದಲ್ಲಿ ಅವನು ಮಾಡುವ ಪವಾಡಗಳು ಕಾವ್ಯದಲ್ಲಿ ಪವಾಡ ಸಾದೃಶ್ಯವಾಗಿ ಚಿತ್ರಿತವಾಗಿದೆ. ಬಸವಣ್ಣ, ನೀಲಾಂಬಿಕೆಯರ ಧೃಡ ಭಕ್ತಿಯನ್ನು ಪರೀಕ್ಷಿಸುವ ಪರಿ, ಅದ್ಭುತವಾಗಿ ಚಿತ್ರಿತವಾಗಿದೆ. ಕಲ್ಯಾಣ ಪಟ್ಟಣದ ಕಡೆಯ ಬಾಗಿಲಿಗೆ ಬಂದಾಗ, ನಾಲಿಗೆ ಇಲ್ಲದ ಗಂಟೆ ನಾದಸಪ್ತ ಮಾಡಿ ಬಸವಣ್ಣ ನೀಲಾಂಬಿಕೆಯರಿಗೆ ಗುರುವಿನ ಆಗಮನ ಸೂಚಿಸುತ್ತದೆ. ಮಂಟೇಸ್ವಾಮಿ ಆಕಾರ ನೋಡುವವರಿಗೆ ಅಸಹ್ಯ ಹುಟ್ಟಿಸುವಂತಿದ್ದು, ಕೈಕಾಲು ಮುರಿದುಕೊಂಡು, ಮೈ ಕೈ ಎಲ್ಲ ಗಾಯದವನಾಗಿ, ಎತ್ತಿನ ಚರ್ಮ ಹೊದ್ದು ಕೊಂಡು, ಸತ್ತಕರು ಹೊತ್ತುಕೊಂಡು ಬಂದರೆ ಬಾಗಿಲು ಕಾಯುವವ, ಅವರನ್ನು ಒಳಗೆ ಬಿಡುವುದಿಲ್ಲ. ಆಗ ಮಂಟೇಸ್ವಾಮಿಗಳು ಹರಳಯ್ಯನವರ ಬೂದಿಗುಡ್ಡೆಯ ಮೇಲೆ ಪವಡಿಸಿ, ಭಂಗಿ ಫಲಾರ ಮಾಡುತ್ತಿರುತ್ತಾರೆ. ಅಲ್ಲಿಗೆ ಬಂದ ಬಸವಣ್ಣ ನೀಲಾಂಬಿಕೆಯವರು ಅವರ ಪಾದವನ್ನು ಹಿಡಿದು ಗುರುಮಠಕ್ಕೆ ಆಹ್ವಾನಿಸುತ್ತಾರೆ. ಮಂಟೇಸ್ವಾಮಿಗಳು ಒಪ್ಪದಿದ್ದಾಗ ಬಸವಣ್ಣ ದಂಪತಿಗಳು ಪಾದ ಹಿಡಿದರೆ ಪಾದಕಿತ್ತು ಬರುತ್ತದೆ. ರಟ್ಟೆ ಹಿಡಿದು ಎತ್ತಿದರೆ ರೆಟ್ಟೆಗಳು ಈಜಿ ಬರ್ತವೆ. ಮುಂಡಾಸ ಹಿಡಿದರೆ ಮುಂಡಾಸವೇ ಎದ್ದು ಬರ್ತದೆ. ಇದೆಲ್ಲ ನೋಡಿದ ದಂಪತಿಗಳಿಗೆ "ನಮ್ಮ ಗುರುಸ್ವಾಮಿ ರೂಪಕಾರ" ಎಂದು ತಿಳಿದು ವಸ್ತ್ರಹಾಸಿ ಸ್ವಾಮಿಯ ಮಾಂಸವನ್ನೆಲ್ಲಾ ಗಂಟುಕಟ್ಟಿ ಜಂಗಮರಿಗೆ ಎಡೆ ಮಾಡುತ್ತಿದ್ದ ಪಂಕ್ತಿಯ ಮಧ್ಯದಲ್ಲಿ ತರುತ್ತಾರೆ. ಒಂದು ಲಕ್ಷದ ತೊಂಭತ್ತಾರು ಸಾವಿರ ಜಂಗಮರು ಕೋಪದಿಂದ ಎಡೆಬಿಟ್ಟು ಎದ್ದು ಕಲ್ಯಾಣ ಪಟ್ಟಣದ ಕೊಳಕ್ಕೆ ಮಡಿಗೆ ಹೋಗುತ್ತಾರೆ. ''ನಂದಿ ಮಂಚದ ಮೇಲೆ ಕಾವಿ ಬಟ್ಟೆ ಗಂಟು ಬಿಚ್ಚಿ ನಿಮ್ಮ ನಿಜರೂಪ ತೋರಬೇಕು ಧರ್ಮಗುರುವೆ' ಎಂಬ ಬಸವಣ್ಣನವರ ಕೋರಿಕೆಯನ್ನು ಮನ್ನಿಸಿ ''ಪರಂಜ್ಯೋತಿ'' ರೂಪದಲ್ಲಿ ದರ್ಶನ ನೀಡುತ್ತಾರೆ.''[೫೪] 'ಮಂಟೇಸ್ವಾಮಿಯ ಈ ಬಗೆಯ ವ್ಯಕ್ತಿತ್ವವನ್ನು ನೋಡಿದರೆ ಆತನ ಸನ್ಯಾಸತ್ವದ ತುರ್ಯಾವಸ್ಥೆಯನ್ನು ತೋರುತ್ತದೆ' ಕಾವ್ಯದುದ್ದಕ್ಕೂ ಮಂಟೇಸ್ವಾಮಿ ಹಾಗೂ ಅವರ ಶಿಷ್ಯರಾದ ರಾಚಪ್ಪಾಜಿ,

ಸಿದ್ದಪ್ಪಾಜಿಯವರ ಪವಾಡಗಳ ಸರಮಾಲೆಯೇ ಹಾಸುಹೊಕ್ಕಾಗಿದೆ. ಅವು ಪ್ರತಿಮೆಗಳಾಗಿ ಇವರ ವ್ಯಕ್ತಿತ್ವದಲ್ಲಿ ಚಿತ್ರಿತವಾಗಿವೆ. ಮಾಯ, ಮಾಟ, ಮಂತ್ರ, ಮೋಡಿಯ ಸದೃಶ್ಯ ಅಂಶಗಳು ತುಂಬಿಕೊಂಡಿವೆ. ಅನಿವಾರ್ಯವಾಗಿ ಪವಾಡಗಳನ್ನು ಬಳಸುತ್ತಾರೆ. ತಮ್ಮ ಕಾರ್ಯ ಸಾಧನೆಗೆ ಎದುರಾದವರು ಬಯಸಿದ್ದನ್ನು ಪಡೆಯುವುದಕ್ಕೆ ಪವಾಡಗಳನ್ನು ಉಪಯೋಗಿಸಿ ತಮ್ಮ ಕಾರ್ಯಸಾಧನೆ ಮಾಡುತ್ತಿದ್ದರೆ, ಜನಪದ ಕಾವ್ಯಗಳ ಮಹಾಪುರುಷರು ಸೋಲೇ ಇಲ್ಲದ ದೇವ ಮಾನವರಾಗುವುದು ಪವಾಡಗಳ ಮೋಡಿಯಿಂದಲೇ. ಅವರ ಪವಾಡ ಮನೋಭಾವವನ್ನು ಅವರವರ ಪಾತ್ರಗಳಲ್ಲಿ ಕಾಣುತ್ತೇವೆ. ''ದೈವವನ್ನು ಆರಾಧಿಸುವ ಮೂಲಕ ಒಲಿಸಿಕೊಳ್ಳ ಬಹುದಾದರೆ, ದುಷ್ಟ ಶಕ್ತಿಗಳನ್ನು ಮೋಡಿಯಿಂದಲೇ ಒಲಿಸಿಕೊಳ್ಳಬೇಕೆಂಬ ಜನಪದರ ನಂಬಿಕೆಗೆ ಪೂರಕವಾಗಿ ಈ ಕಾವ್ಯದಲ್ಲಿ ಹತ್ತುಹಲವು ಉದಾಹರಣೆಗಳು ಕಾಣಸಿಗುತ್ತವೆ.''[೫೫]

೧. ಮಂಟೇಸ್ವಾಮಿ ಶಿಷ್ಯ ರಾಚಪ್ಪಾಜಿ ವಿಜಯನಗರದಲ್ಲಿ ಗಾರುಡಿಗರು ಹಾಕುವ ಮೋಡಿಯನ್ನು ಲೀಲಾಜಾಲವಾಗಿ ಗೆದ್ದು ಗಾರುಡಿಗರನ್ನು ಶರಣಾಗತಿಗೊಳಿಸಿಕೊಳ್ಳುವುದು.

೨. ಮಂಟೇಸ್ವಾಮಿಗಳು ಸತ್ತ ಹೆಣ್ಣು ಮಗುವೊಂದನ್ನು ಬದುಕಿಸಿ, ಶಿಷ್ಯಳನ್ನಾಗಿ ಪಡೆಯುವುದು.

೩. ಸಖರಾಯಪಟ್ಟಣದ ರಾಜರ ಮಕ್ಕಳು ವಿಷದ ಕಜ್ಜಾಯ ತಿಂದು ಅಸು ನೀಗಿದಾಗ ಮಕ್ಕಳನ್ನು ಬದುಕಿಸಿ ಮಕ್ಕಳನ್ನು ಶಿಶುಮಕ್ಕಳನ್ನಾಗಿಸಿಕೊಂಡು ರಾಜನನ್ನು ಶಿಷ್ಯರಾಗಿ ಪಡೆಯುವುದು.

೪. ಬೊಪ್ಪಗೌಡನ ಕುರಿಗಳ ಮೇಲೆ ಮಾಯದ ಬೂದಿಯನ್ನು ಎರಚಿ ಕೊನೆಗೆ ಆತನನ್ನು ತನ್ನ ಒಕ್ಕಲು ಮಾಡಿಕೊಳ್ಳುವುದು.

೫. ಧರೆಗೆ ದೊಡ್ಡವರ ಕಥೆಯ ಬಹಳ ಮುಖ್ಯವಾದ ಪವಾಡಗಳೆಂದರೆ ಕೆಂಪಾಚಾರಿಯನ್ನು ಸಿದ್ದಪ್ಪಾಜಿಯಾಗಿ ಪರಿವರ್ತಿಸುವ ಹಾಗೂ ಅವನಿಂದ ಹಲಗೂರಿನಲ್ಲಿ ನಡೆಸುವ ಪವಾಡಗಳ ವೈಖರಿ ಕಾವ್ಯದ ಉತ್ತುಂಗ ಶಿಖರಗಳೆನ್ನಬಹುದು.

ಇವುಗಳ ಪೂರ್ಣ ವಿವರಗಳು ಪ್ರಬಂಧದಲ್ಲಿ ಬರುವುದರಿಂದ ಅವುಗಳನ್ನು ಇಲ್ಲಿ ವಿವರಿಸಲು ಹೋಗಿಲ್ಲ. ಮಂಟೇಸ್ವಾಮಿಗಳು ಮಾರಿಯರಿಂದ ಕೆಲಸ ತೆಗೆಯುವ, ಮಾರಿಯರಿಗೆ ಬುದ್ಧಿ ಕಲಿಸುವ ರೀತಿ ರೋಚಕವಾಗಿ ಕಾವ್ಯದಲ್ಲಿ ಮೂಡಿದೆ. ಮಹಾಕಾವ್ಯದ ಕಥಾನಾಯಕ ಮಂಟೇಸ್ವಾಮಿಯ ಹಿರಿಮೆಯ ಹೆಚ್ಚುಗಾರಿಕೆಯನ್ನು ಮೆರೆಯುವುದೇ ಕಾವ್ಯದ ಪ್ರಧಾನ ಗುರಿ.

ಮಂಟೇಸ್ವಾಮಿ ಸಂಪ್ರದಾಯದಲ್ಲಿ 'ಭಂಗಿಸೇವೆ'ಯು ಮುಖ್ಯ ಆಚರಣೆಗಳಲ್ಲಿ ಒಂದು. ಮಂಟೇದೇವರ ಹಬ್ಬವನ್ನು ಭಂಗಿಸೇವೆ ಎನ್ನುತ್ತಾರೆ. ಈ ಹಬ್ಬವನ್ನು ಜುಲೈ ತಿಂಗಳಲ್ಲಿ ಆಚರಿಸುತ್ತಾರೆ. ಇದು ಸಿದ್ದಪ್ಪಾಜಿಯ ಹಬ್ಬ. ಈತ ಮಾರೀರ ಮಸಣೀರ ಗಂಡ-ಕಾಲರ, ಪ್ಲೇಗು ಮುಂತಾದವುಗಳನ್ನು ಗೆದ್ದುಕೊಳ್ಳುವ ಸ್ವಾಮಿ ಅಂದು ದೇವರ ದಾಳ ಕಾವಿ ಬಾವುಟವನ್ನು ಕಂಡಾಯ ಸಮೇತ (ವಿಶೇಷ ರೀತಿಯ ಆಯುಧ) ಊರಿನಲ್ಲಿ ಮೆರವಣಿಗೆ ಮಾಡಿ ದೇವಾಲಯದಲ್ಲಿ ಇರಿಸುವರು. ದಾಳದ ಬಟ್ಟೆಯನ್ನು ವರ್ಷಕ್ಕೊಮ್ಮೆ ಬದಲಿಸುವರು. ಸಿದ್ದಪ್ಪಾಜಿಯವರನ್ನು ''ಮಾರೀರ ಮಸಣೀರ ಗಂಡ, ದುರ್ಗಿ ಚೌಡೀರ ಮಿಂಡ''[೫೬] ಎನ್ನುತ್ತಾರೆ.

"ಮಂಟೇಸ್ವಾಮಿಗಳು, 'ಮಂಟೇಸ್ವಾಮಿ ಪರಂಪರೆ'ಯನ್ನು ತಮ್ಮ ಶಿಷ್ಯರಾದ ರಾಚಪ್ಪಾಜಿ ದೊಡ್ಡಮ್ಮ ತಾಯಿ, ಸಿದ್ದಪ್ಪಾಜಿ, ನೀಲಯ್ಯ, ಚೆನ್ನಯ್ಯ, ಫಲಹಾರದಯ್ಯ ಮುಂತಾದ ಶರಣರೊಂದಿಗೆ ಕಟ್ಟಿದ್ದಾರೆ. ಈ ಶರಣರು ತಮ್ಮ ತಾತ್ವಿಕ ಚಿಂತನೆಗಳಿಗೆ ಕಲ್ಯಾಣವನ್ನು ಕೇಂದ್ರಮಾಡಿಕೊಂಡು, ವಚನಕಾರರು ಸಾರಿದ ಕಾಯಕತತ್ವ, ಜಾತ್ಯಾತೀತ ಸಮಾಜ, ಆರ್ಥಿಕ ಸಮಾನತೆ ಮುಂತಾದ ತತ್ವಗಳನ್ನು ೧೫ನೇ ಶತಮಾನದಲ್ಲಿ ಮತ್ತೆ ತರಲು ಪ್ರಯತ್ನಿಸಿದ್ದಾರೆನ್ನಬಹುದು."[೫೭] ಮಂಟೇಸ್ವಾಮಿಗಳ ವ್ಯಕ್ತಿತ್ವದ ಬಹುಮುಖ್ಯ ಭಾಗ ದೊಡ್ಡಮ್ಮ ತಾಯಿ. "ಮಂಟೇಸ್ವಾಮಿಗಳ ಪಂಥದಲ್ಲಿ ಕ್ಷತ್ರಿಯ ಕುಲದವರು ಅಧಿಕಾರಿಗಳು, ಪೂಜಾಸೇವಾ ಕಾರ್ಯಗಳಿಗೆ ಶೈವ ಜಂಗಮರು, ಸಿದ್ದಪ್ಪಾಜಿ, ಆಚಾರಿ ಕುಲದವನಾದರೆ, ಚೆನ್ನಯ್ಯ, ನಿಂಗಯ್ಯ ಕುರುಬ ಮತದವರು. ರಾಚಪ್ಪಾಜಿ, ಚೆನ್ನಾಜಮ್ಮ ವೀರಶೈವರು. ಹೀಗೆ ಶರಣ ಶಿಷ್ಯರೆಲ್ಲಾ ನಾನಾ ಮತ, ಜಾತಿಗೆ ಸೇರಿದ್ದು ಕಲ್ಯಾಣದ ಕ್ರಾಂತಿಯ ಕಿಡಿಯನ್ನು ದಕ್ಷಿಣಕ್ಕೆ ತಂದು ಹೊತ್ತಿಸಿ ಬೆಳಗಿದ ಹಿರಿಮೆ ಮಂಟೇಸ್ವಾಮಿ ಯವರದು."[೫೮]

"ಮುಸಲ್ಮಾನರು ಮಂಟೇಸ್ವಾಮಿಗಳನ್ನು ತಮ್ಮವರೆಂದು ಹೇಳಿಕೊಳ್ಳುತ್ತಾರೆ. ಮಂಟೇಸ್ವಾಮಿಗೆ 'ಮಾಂಕ್ಷಾವಲಿ' ಎಂದು ಕರೆಯಲಾಗುತ್ತಿತ್ತು. ಶಿವನಸಮುದ್ರದ ಬಳಿಯ ದರ್ಗದ ಗುರುಗಳು ಮತ್ತು 'ಮಾಂಕ್ಷಾವಲಿ' ಎಂಬ ಹೆಸರಿನ ಮಂಟೇದಯ್ಯನವರು, ಇಬ್ಬರೂ ಉತ್ತರ ದೇಶದಿಂದ ಜೊತೆಯಲ್ಲಿ ಬಂದವ ರೆಂದು, ಮಾಂಕ್ಷಾವಲಿ ಹಿಂದುಗಳ ಜೊತೆ ಸೇರಿಕೊಂಡು, ಈ ಪರಿವರ್ತನೆ ಪಡೆದರೆಂದೂ ಅವರ ಹೇಳಿಕೆ."[೫೯] ಈಗಲೂ ಮುಸಲ್ಮಾನರು ಬೊಪ್ಪೇಗೌಡನಪುರದ ಮಂಟೇಸ್ವಾಮಿ ಗದ್ದುಗೆಗೆ ನಮಸ್ಕರಿಸಿ ಹೋಗುತ್ತಾರೆ. ಅಲ್ಲದೆ ಕೆಲವು ಸಂದರ್ಭಗಳಲ್ಲಿ ಗದ್ದುಗೆಗೆ ನಮಾಜು ಮಾಡುವುದುಂಟು. "ಒಂದು ಧರ್ಮದ ದೈವಕ್ಕೆ ಇನ್ನೊಂದು ಧರ್ಮದ ಭಕ್ತರು ನಡೆದು ಕೊಳ್ಳುತ್ತಿದ್ದರೆ ಸಾಕು. ಅದು ಧಾರ್ಮಿಕ ಸಾಮರಸ್ಯ ಆಗಿ ಬಿಡುತ್ತದೆ."[೬೦] ಕಲ್ಯಾಣದಲ್ಲಿ ಕೆಲವು ಕಪಟಿಗಳಾದ ಜಂಗಮರನ್ನು ಮಹಮದೀಯರಾಗುವಂತೆ ಮಂಟೇಸ್ವಾಮಿಗಳು ಶಪಿಸುತ್ತಾರೆ. ಇವೆಲ್ಲವನ್ನು ಗಮನಿಸಿದಾಗ ಮಂಟೇಸ್ವಾಮಿ ಸಂಪ್ರದಾಯ ಕುತೂಹಲವನ್ನು ಕೆರಳಿಸುತ್ತದೆ. ಮಂಟೇಸ್ವಾಮಿ ಕಾವ್ಯ ಶೈವ, ವೈಷ್ಣವ, ಮುಸ್ಲಿಮ್ ಪರಂಪರೆಯನ್ನು ಹೊಂದಿದೆ. ಕಾವ್ಯ ಹಿಂದೂ-ಮುಸ್ಲಿಮರ ಬಾಂಧವ್ಯಕ್ಕೆ ಹೊಸ ತಿರುವು ಕೊಡುತ್ತಗೆ.

ಮಂಟೇಸ್ವಾಮಿ ಕಾವ್ಯ ಜನಪದ ಮಹಾಕಾವ್ಯಗಳ ಎಲ್ಲ ಲಕ್ಷಣಗಳನ್ನೊಳಗೊಂಡು, ಕನ್ನಡ ಜನಪದ ಮಹಾಕಾವ್ಯಗಳ ಸಾಲಿನಲ್ಲಿ ಒಂದು ಅನರ್ಘ್ಯ ಕೃತಿಯಾಗಿ ಅಗ್ರಸ್ಥಾನವನ್ನು ಪಡೆದುಕೊಂಡಿದೆ.

### ೨.೨.೩. ಜುಂಜಪ್ಪ

ಜುಂಜಪ್ಪನ ಕತೆ, ಜನಪದ ಕಾವ್ಯಗಳ ಸಾಲಿನ ಒಂದು ಅನರ್ಘ್ಯ ರತ್ನ. ಜುಂಜಪ್ಪ ಕಾಡುಗೊಲ್ಲರ ಸಾಂಸ್ಕೃತಿಕ ವೀರ ಹಾಗೂ ಅವರ ಆರಾಧ್ಯ ದೈವ.

ಕರ್ನಾಟಕದ ಹಲವಾರು ಬುಡಕಟ್ಟುಗಳಲ್ಲಿ ಜನಪದ ಸಂಸ್ಕೃತಿಯನ್ನು ಉಳಿಸಿಕೊಂಡಿರುವ ಜನರಲ್ಲಿ ಕಾಡುಗೊಲ್ಲರು ಪ್ರಮುಖರು. ಕಾಡುಗೊಲ್ಲರು ಎಂಬ ಪದ ನಿಷ್ಪತ್ತಿಯು 'ಸಂಸ್ಕೃತ' 'ಗೋವಲ' ಶಬ್ದದಿಂದ ಕನ್ನಡದ 'ಗೊಲ್ಲ' ಶಬ್ದರೂಪಗೊಂಡಿದೆ. ಗೊಲ್ಲ ಎಂದರೆ ಗೋವುಗಳನ್ನು ಕಾಯುವವನು. ಕಾಡುಗೊಲ್ಲರ ಸಂಸ್ಕೃತಿ ಕಾಡುಗಳಿಂದ ರೂಪಿತವಾಗಿರುವುದರಿಂದ ಅವರನ್ನು ಕಾಡುಗೊಲ್ಲರೆಂದೇ ಕರೆಯುವ ವಾಡಿಕೆಯಿದೆ.

ಅಲೆಮಾರಿ ಜನಾಂಗವಾದ ಕಾಡುಗೊಲ್ಲರು ಹೆಚ್ಚಾಗಿ ಪಶುಪಾಲನೆಯನ್ನು ವೃತ್ತಿಯನ್ನಾಗಿ ಅಳವಡಿಸಿಕೊಂಡಿದ್ದು, ಹುಲ್ಲುಗಾವಲುಗಳು ಹೆಚ್ಚಾಗಿದ್ದ ಕಾಲದಲ್ಲಿ ನೂರಾರು ದನಗಳನ್ನು ಸಾಕಿಕೊಂಡು ಹಾಲು, ಬೆಣ್ಣೆ, ಮೊಸರು ಮಾರಾಟ ಮಾಡುತ್ತಿದ್ದರು. ಕಾಡುಗೊಲ್ಲರು ಒಂದು ಕಡೆ ಆದರೆ, ಈ ಗೊಲ್ಲರನ್ನು ಸಹಿಸದ ಬೇಟೆಗಾರ ಸಮೂಹ ಮತ್ತೊಂದು ಕಡೆ. ಇವರ ಹುಲ್ಲುಗಾವಲುಗಳನ್ನು ಕ್ರಮೇಣ ಬೇಸಾಯ ಭೂಮಿಯಾಗಿ ಪರಿವರ್ತಿಸುತ್ತಾ ಬಂದ ಕೃಷಿ ವರ್ಗಗಳು, ಇವರ ನಡುವೆ ಅಸ್ತಿತ್ವಕ್ಕಾಗಿ ಪರದಾಡುವಂತೆ ಕಂಡು ಬರುವುದು ಒಂದು ವಿಶಿಷ್ಟ ಅಂಶ.

ಕರ್ನಾಟಕದ ಮುಖ್ಯ ಬುಡಕಟ್ಟುಗಳಲ್ಲಿ ಒಂದಾದ ಕಾಡುಗೊಲ್ಲರು ಕರ್ನಾಟಕದಾದ್ಯಂತ ಚೆದುರಿದಂತೆ ನೆಲಸಿದ್ದರೂ ಮಧ್ಯಕರ್ನಾಟಕದ ಬಯಲುಸೀಮೆಗಳಾದ ಆಂಧ್ರಪ್ರದೇಶದ ಗಡಿಯುದ್ದಕ್ಕೂ ಹರಡಿರುವ ಚಿತ್ರದುರ್ಗ, ಬಳ್ಳಾರಿ, ತುಮಕೂರು, ಬೆಂಗಳೂರು ಜಿಲ್ಲೆಗಳ ಪೂರ್ವಭಾಗದಲ್ಲಿ, ಆಂಧ್ರಪ್ರದೇಶದ ಮಡಕಶಿರಾ, ರಾಯದುರ್ಗ ಮತ್ತು ಕಲ್ಯಾಣದುರ್ಗ ತಾಲೂಕುಗಳಲ್ಲಿ ದಟ್ಟವಾಗಿ ನೆಲೆಸಿದ್ದಾರೆ. ಇವರು ನೆಲೆಮಾಡಿಕೊಂಡಿರುವ ಭೂಭಾಗಗಳು ಸಾಮಾನ್ಯ ಗುಡ್ಡ-ಬೆಟ್ಟಗಳ ಕುರುಚಲು ಕಾಡುಗಳ ಹುಲ್ಲುಗಾವಲುಗಳೇ ಆಗಿವೆ. ಈ ಭೂಪ್ರದೇಶಗಳು ಇವರ ಪಶುಸಂಗೋಪನಾವೃತ್ತಿಗೆ ಪೂರಕವಾಗಿದ್ದು, ಊರುಗಳ ಸಂಸ್ಕೃತಿಗೆ ಪರ್ಯಾಯವಾಗಿ ತಮ್ಮದೇ `ಹಟ್ಟಿ'ಗಳ ಸಂಸ್ಕೃತಿಯನ್ನು ಪೋಷಿಸುತ್ತಾ ಯಾವ ಕಾರಣಕ್ಕೂ ಊರಿನ ಕಲಾಪಗಳ ಜೊತೆ ಒಂದಾಗದ ಇವರು ಊರ ಹೊರಗೆ ತಮ್ಮದೇ 'ಹಟ್ಟಿ'ಗಳನ್ನು ನಿರ್ಮಿಸಿಕೊಂಡು ಜೀವಿಸುವ ವಿಧಾನ ಮತ್ತು ಸಂಸ್ಕೃತಿ ಇಂದಿಗೂ ವಿಶಿಷ್ಟವಾದುದು.

ಕಾಡುಗೊಲ್ಲರು ಬದುಕುವ ಈ ನೆಲೆಗಳ ಉದ್ದಕ್ಕೂ ಆಂಧ್ರ ಮೂಲದ 'ಮ್ಯಾಸಬೇಡ' ಎಂಬ ಮತ್ತೊಂದು ಬುಡಕಟ್ಟಿನ ಜನರೂ ಹರಡಿದ್ದಾರೆ. ಕಾಡುಗೊಲ್ಲರ ಮಾತೃಭಾಷೆ ಕನ್ನಡವಾದರೆ, ಮ್ಯಾಸಬೇಡರದು ತೆಲುಗು. ''ಜನಪದರ ಐತಿಹ್ಯಗಳ ಪ್ರಕಾರ ಕಾಡುಗೊಲ್ಲರು, ಮ್ಯಾಸಬೇಡರು ಮೂಲತ: ಅಣ್ಣತಮ್ಮಂದಿರು. ಆದರೆ ಇವರಿಬ್ಬರೂ ಭಿನ್ನ ಸಂಸ್ಕೃತಿಗೆ ಸೇರಿದವರು. ಕಾಡುಗೊಲ್ಲರು ಪಶುಪಾಲಕ ಸಂಸ್ಕೃತಿಗೆ ಸೇರಿದರೆ ಮ್ಯಾಸಬೇಡರು ಬೇಟೆ ಸಂಸ್ಕೃತಿಗೆ ಸೇರಿದವರು.''[೬೧]

ಗೊಲ್ಲರಲ್ಲಿ ಎರಡು ಪ್ರಭೇದಗಳಿವೆ. ಊರುಗೊಲ್ಲರು, ಕಾಡುಗೊಲ್ಲರು ಎಂದು. ಊರುಗೊಲ್ಲರು ಆಂಧ್ರದ (ತೆಲುಗು) ಮೂಲದವರು, ಕಾಡುಗೊಲ್ಲರು ಕನ್ನಡ ಮೂಲದವರು. ಊರುಗೊಲ್ಲರು ಕಾಡುಗಳಿಂದ ದೂರವಾಗಿ ಊರುಗಳಲ್ಲಿ ವಾಸಿಸುತ್ತಾರೆ. ಕಾಡುಗೊಲ್ಲರು ಊರಿನಿಂದ ದೂರವಾಗಿ ಕಾಡುಗಳಲ್ಲಿ ವಾಸಿಸುತ್ತಾರೆ. ಯಾವುದೇ ಸಾಂಸ್ಕೃತಿಕ ಸಂಬಂಧ ಇವರಲ್ಲಿಲ್ಲ. ''ಕಾಡುಗೊಲ್ಲರಲ್ಲಿ ಮುಖ್ಯವಾಗಿ ಚಿತ್ತಮುತ್ತಿಯವರು, ಚಂದಮುತ್ತಿಯವರು ಮತ್ತು ರಾಮೇಗೌಡನ ಕುಲದವರೆಂಬ ಮೂರು ಒಳಪಂಗಡಗಳಿದ್ದು, ಅದರಲ್ಲಿ ಕೆಲವು ಉಪವಿಭಾಗಗಳಿವೆ. ಇದನ್ನು 'ಬೆಡಗು' ಎಂದು ಕರೆಯುತ್ತಾರೆ. ಚಿತ್ತಮುತ್ತಿಯವರು ಎಂಬ ಒಳಪಂಗಡದಲ್ಲಿ ತಾಳಿಕಟ್ಟುವವರಾದ 'ಕರಡಿಗೊಲ್ಲರು' ತಾಳಿಕಟ್ಟದವರಾದ 'ಮಾರನವರ ಗೊಲ್ಲರು' ಎಂದು ಎರಡು ಬೆಡಗುಗಳು. ಚಂದಮುತ್ತಿಯವರು ಎಂಬ ಒಳಪಂಗಡದಲ್ಲಿ ಸನ್ನರಗೊಲ್ಲರು, ಸೋಮನವರ ಗೊಲ್ಲರು, ಬೊಮ್ಮನವರ ಗೊಲ್ಲರು, ಕೋಣನವರ ಗೊಲ್ಲರು, ಪೋಲನವರ ಗೊಲ್ಲರು, ಎಗಡಿನವರ ಗೊಲ್ಲರು,

ಅಜ್ಜಿಯವರ ಗೊಲ್ಲರು ಮೊದಲಾದ ಬೆಡಗುಗಳಿವೆ. ರಾಮೇಗೌಡನ ಕುಲದವರು ಎಂಬ ಒಳಪಂಗಡಗಳಲ್ಲಿ ಅರೇನವರ ಗೊಲ್ಲರು, ಕಹಳೆಯವರ ಗೊಲ್ಲರು, ಒಡೆಯರ ಗೊಲ್ಲರು, ಒನಕೆಯ ಗೊಲ್ಲರು, ಚೀರನವರ ಗೊಲ್ಲರು, ಮಾಸಿನವರ ಗೊಲ್ಲರು ಮೊದಲಾದ ಮುಖ್ಯವಾದ ಬೆಡಗುಗಳಿವೆ."[೬೨]

ಆಧುನಿಕ ಜನ ತಮ್ಮನ್ನು 'ಕಾಡುಗೊಲ್ಲರು' ಎಂದು ಕರೆದುಕೊಳ್ಳಲು ಇಚ್ಛಿಸದೆ "ಕೃಷ್ಣಮೂಲಕ್ಕೆ ಆರೋಪಿಸಿಕೊಂಡು 'ಕೃಷ್ಣಗೊಲ್ಲರು' ಮತ್ತು 'ಯಾದವ'ರೆಂದು ಕರೆದುಕೊಳ್ಳುತ್ತಿದ್ದಾರೆ. ಆದರೆ ಸಾಂಸ್ಕೃತಿಕವಾಗಿ ಕೃಷ್ಣನಿಗೂ ಈ ಗೊಲ್ಲರಿಗೂ ಯಾವುದೇ ಸಂಬಂಧವಿದ್ದಂತಿಲ್ಲ."[೬೩] ಕಾಡುಗೊಲ್ಲರು ಮೂಲತ: ಶೈವರಾಗಿದ್ದು ಆಮೇಲೆ ವೈಷ್ಣವ ಪ್ರಭಾವಕ್ಕೆ ಒಳಗಾಗಿರಬಹುದೆಂದು ಜುಂಜಪ್ಪ ಹಾಗೂ ಗೊಲ್ಲರ ದೇವರುಗಳ ಪ್ರಕಾರದಿಂದ ತಿಳಿಯಬಹುದಾಗಿದೆ. ಜುಂಜಪ್ಪನ ಸಂಪ್ರದಾಯ ಶೈವ-ವೈಷ್ಣವ ಸಮನ್ವಯದಂತಿದೆ.

ಕಾಡುಗೊಲ್ಲರು ಸಾಮಾನ್ಯವಾಗಿ ಯಾವ ಜನಾಂಗಗಳ ಜೊತೆಯೂ ಬೆರೆಯದೆ ಹಳ್ಳಿಯಿಂದ ಸ್ವಲ್ಪ ದೂರದಲ್ಲಿ ತಮ್ಮದೇ ಆದ ಹಟ್ಟಿಗಳನ್ನು ಕಟ್ಟಿಕೊಂಡು ವಾಸಿಸುತ್ತಾರೆ. ಇದರ ಸುತ್ತಲೂ 'ಕಳ್ಳೆ'ಗಳನ್ನು ಕಟ್ಟಿಕೊಂಡು ಬಾಳುತ್ತಾರೆ. ಹಟ್ಟಿಯೊಳಕ್ಕೆ ಹೊಸಬರನ್ನು ಬಿಟ್ಟುಕೊಳ್ಳುವುದಿಲ್ಲ. ಹಟ್ಟಿಯ ಮಧ್ಯದಲ್ಲಿ ದೇವಸ್ಥಾನವಿರುತ್ತದೆ. "ಮುಳ್ಳು ಬೇಲಿಯೊಳಗೆ ವಾಸಿಸುವ ಗೊಲ್ಲರ ದೇವತೆಗಳು ಮತ್ತೊಂದು ಮುಳ್ಳು ಕಳ್ಳಿಯೊಳಗೆ ಇರುತ್ತವೆ."[೬೪] "ಈ ದೇವಸ್ಥಾನವನ್ನು ಬಿದಿರಿನಿಂದ ಮಾಡಿ ಅದಕ್ಕೆ ಆಪು, ಹಂಚಿಹುಲ್ಲು ಅಥವಾ ಬಾದೆ ಹುಲ್ಲನ್ನು ಹೊದಿಸಿರುತ್ತಾರೆ. ಈ ದೇವಸ್ಥಾನ ಗೋಳಾಕಾರವಾಗಿದ್ದು, ಬಾಗಿಲು ಚಿಕ್ಕದಾಗಿದ್ದು, ಪೂರ್ವಾಭಿಮುಖವಾಗಿರುತ್ತದೆ. ಒಳಗೆ ಇಟ್ಟಿರುವ ದೇವರನ್ನು ಬಿಟ್ಟರೆ ಪೂಜಾರಿ ಮಾತ್ರ ಹೋಗಲುಬಹುದಾದಷ್ಟೇ ಜಾಗ ಮಾತ್ರ ಒಳಗಡೆ ಇರುತ್ತದೆ. ಸ್ವಲ್ಪ ದೊಡ್ಡ ದೇವಸ್ಥಾನದಲ್ಲಿ ಪೂಜಾರಿಯೊಡನೆ ಇನ್ನಿಬ್ಬರು ಮಾತ್ರ ಕೂಡಬಹುದು. ಸಾಮಾನ್ಯವಾಗಿ ನಾಲ್ಕು ಅಡಿಗಿಂತ ಹೆಚ್ಚು ಎತ್ತರವಾದ ಬಾಗಿಲು ಇರುವುದಿಲ್ಲ. ಈ ದೇವಸ್ಥಾನವನ್ನು 'ಗುಬ್ಬ' ಎನ್ನುತ್ತಾರೆ. ಈಗ ಗುಬ್ಬ ಕಟ್ಟುವುದಕ್ಕಿಂತ ಹೆಂಚಿನ ಮನೆಗಳನ್ನು ಕಟ್ಟಿ ಅಲ್ಲಿ ದೇವರನ್ನು ಕೂರಿಸುತ್ತಾರೆ. ಮತ್ತೆ ಕೆಲವು ಕಡೆಗಳಲ್ಲಿ ಹೆಂಚಿನ ಅಥವಾ ತಾರಸಿಯ ಕಟ್ಟಡವನ್ನು ಕಟ್ಟಿ ಅದರೊಳಗೆ 'ಗುಬ್ಬ'ವನ್ನಿಟ್ಟು ಗುಬ್ಬದಲ್ಲಿ ದೇವರನ್ನು ಇಡುವ ಪದ್ಧತಿ ಹೊಸತು ಹಳೆದರ ಸಮ್ಮಿಶ್ರವಾದ ಬಗೆಯನ್ನು ತೋರಿಸುತ್ತದೆ."[೬೫] ಎತ್ತಪ್ಪ, ಜುಂಜಪ್ಪ, ಕಾಟುಮದೇವರು, ಚಿತ್ರದೇವರು, ಪಾತೇದೇವರು, ಕೇತೇದೇವರು, ನರಸಿಂಹ, ತಿಮ್ಮಪ್ಪ, ರಂಗಪ್ಪ ಇವರುಗಳು ಕಾಡುಗೊಲ್ಲರ ಪ್ರಮುಖ ದೇವತೆಗಳು. "ಕಾಡುಗೊಲ್ಲರ ಒಂದು ಹೆಣ್ಣು ದೇವತೆ, ಮಾಯೆಯ ಸ್ವರೂಪಳಾದ ಈ ದೇವತೆಯನ್ನು ಗೌರಸಂದ್ರದ ಮಾರಕ್ಕ, ಬೇವಿನಹಳ್ಳಿ ಕರಿಯಮ್ಮ, ಕರೇ ಓಬೇನಹಳ್ಳಿ ಮಾರಮ್ಮ, ಗೊಲ್ಲ ಹಳ್ಳಿಯಮ್ಮ ಎಂಬ ಬೇರೆ ಬೇರೆ ಹೆಸರುಗಳಿಂದ ಬೇರೆ ಬೇರೆ ಪ್ರದೇಶಗಳಲ್ಲಿ ಪೂಜೆ ಮಾಡುತ್ತಾರೆ."[೬೬] ಮೂರು ನಾಲ್ಕು ಹಟ್ಟಿಗಳಿಗೆ ಒಂದರಂತೆ ಕಟ್ಟೆಮನೆಗಳಿರುತ್ತವೆ. ಮೂರು ಮೂಲಕಟ್ಟೆ ಮನೆಗಳು ಪರಿಹಾರ ಕಾಣದ ವ್ಯಾಜ್ಯಗಳ ತೀರ್ಮಾನ ವನ್ನು ಮಾಡುತ್ತವೆ. ಮುಖ್ಯ ಕಟ್ಟೆಮನೆಗಳೆಂದರೆ ಕರಿಓಬೇನಹಳ್ಳಿಯರ ಬಳ್ಳಿ ಮತ್ತು ಮರಡಿಹಳ್ಳಿಗಳು.

ಕಾಡುಗೊಲ್ಲರ ದೇವರುಗಳಿಗೆ ಅಂಟುಮುಂಟು ಆಗುವುದಿಲ್ಲವಾದ್ದರಿಂದ ಹಟ್ಟಿಯ ಒಳಗೆ ಹಂದಿ, ಕೋಳಿಗಳನ್ನು ಹಾಗೂ ಹಟ್ಟಿ ದೇವಸ್ಥಾನಗಳ ಒಳಗೆ ಹರಿಜನರನ್ನು ಮುಸಲ್ಮಾನರನ್ನು ಸೇರಿಸುವುದಿಲ್ಲ.

ಕೆಲವು ಗೊಲ್ಲರ ಹಟ್ಟಿಗಳ ಒಳಕ್ಕೆ ಯಾರೂ ಚಪ್ಪಲಿ ಹಾಕಿಕೊಂಡು ಹೋಗುವಂತಿಲ್ಲ. "ತಮ್ಮ ದೇವರುಗಳಿಗೆ 'ಹಾಲು-ಮೀಸಲು' ಹೊತ್ತೊಯ್ಯುವ ಸಂದರ್ಭದಲ್ಲಿ ಯಾವುದೇ ಊರು ಪ್ರವೇಶಿಸದೆ, ಊರ ಹೊರವಲಯ ದಲ್ಲೇ ಹೋಗುವ ಸಂಪ್ರದಾಯ ಇಂದಿಗೂ ಇದೆ."[೬೭] ಗೋವಿನಕಾಯಕ ಮಾಡುತ್ತಿರುವ ನಮಗೆ, ಬೇರೆಯವ ರೊಂದಿಗೆ ಬೆರೆತರೆ ಎಲ್ಲಿ ತಮ್ಮ ಪಾವಿತ್ರ್ಯ ಹಾಳಾಗಿ ಬಿಡುತ್ತದೆಯೋ ಸೂತಕ ಸುತ್ತಿಕೊಳ್ಳುತ್ತದೆಯೋ ಎಂಬ ಹೆದರಿಕೆ ಸತ್ಯ ಶುದ್ಧಿಯನ್ನು ಕಾಪಾಡಿಕೊಂಡು ಬರಲು ಊರ ಹೊರಗೆ ಬದುಕುತ್ತಿದ್ದಾರೆ. ಕೋಳಿ, ಹಂದಿಗಳನ್ನು ಸಾಕುವುದಿಲ್ಲ ಹಾಗೂ ಅದರ ಮಾಂಸ ತಿನ್ನುವುದಿಲ್ಲ.

ಊರುಗೊಲ್ಲರ ನಡೆ-ನುಡಿ, ಆಚಾರ-ವಿಚಾರಗಳು ಕಾಡುಗೊಲ್ಲರಿಗಿಂತ ಭಿನ್ನವಾದವು. 'ಬೀಗಮುದ್ರೆ' ಎಂಬ ವರ್ಗಕ್ಕೆ ಸೇರಿದ ಊರುಗೊಲ್ಲರು ಭಂಡಾರದ ಸಂರಕ್ಷಕರಾಗಿದ್ದರು.

"ಕಾಡುಗೊಲ್ಲರಲ್ಲಿ ಬಹುಪಾಲು ಜನ ಕಂದುಮಿಶ್ರಿತ ಕಪ್ಪು ಬಣ್ಣದವರಾಗಿರುತ್ತಾರೆ. ಗಂಡಸರಲ್ಲಿ ಮುದುಕರು ಲಂಗೋಟಿಯನ್ನು ಕಟ್ಟಿ ಒಂದು ಕಂಬಳಿಯನ್ನು ಹೊದೆದಿರುತ್ತಾರೆ. ಕಾಲಿಗೆ ಚಪ್ಪಲಿ ಹಾಕುತ್ತಾರೆ. ಕಾಡುಗೊಲ್ಲರಲ್ಲಿ ಕೆಲವರು ತಲೆಗೆ ಎಣ್ಣೆ ಹಚ್ಚುವುದಿಲ್ಲ. ಬದಲಿಗೆ ತುಪ್ಪವನ್ನು ಹಚ್ಚುತ್ತಾರೆ. ಕೆಲವರು ಲಂಗೋಟಿಯ ಜೊತೆ ಅಂಗಿಯನ್ನು ಹಾಕಿರುತ್ತಾರೆ. ಕಾಡುಗೊಲ್ಲರ ಸ್ತ್ರೀಯರಲ್ಲಿ ಸಂಪ್ರದಾಯಸ್ಥ ಸ್ತ್ರೀಯರು ರವಿಕೆ ತೊಡುವುದಿಲ್ಲ. ಕೆಂಪು ಅಂಚಿನ ಬಿಳಿಯ ಸೀರೆ ಉಡುತ್ತಾರೆ. ಮದುವೆಗೆ ಮೊದಲು ಬೆಳ್ಳಿಯ ಕಡಗವನ್ನು ತೊಡುವರು. ಮದುವೆಯ ಸಂದರ್ಭ ಎಡಗೈಗೆ ಹಿತ್ತಾಳೆಯ 'ಗೊಲ್ಲ ಕಡಗ'(ಖುಳಿ)ವನ್ನು ತೊಡುತ್ತಾರೆ."[೬೮] ಕಾಲಿಗೆ ಮಿಂಚು (ಕಾಲುಂಗರ) ತೊಡುತ್ತಾರೆ. ಇದು ಮಹಿಳೆಯರಿಗೆ ಅಜೀವ ಮುತ್ತೈದೆ ತನದ ಸಂಕೇತ. ಹಾವಿನಾಕಾರದ ತೋಳಬಂದಿ ಇವರ ಇನ್ನೊಂದು ಮುಖ್ಯ ಆಭರಣ. ಗಾಜಿನ ಬಳೆಗಳನ್ನು ತೋಡುತ್ತಾರೆ. ಹಣೆಗೆ ಕುಂಕುಮವಿಡುವುದಿಲ್ಲ. ಇತ್ತೀಚೆಗೆ ಕುಂಕುಮ ಇಡುತ್ತಾರೆ.

"ಕಾಡುಗೊಲ್ಲರಲ್ಲಿನ ಮದುವೆ ಆಚರಣೆಯಲ್ಲಿ ಕನ್ಯೆಯನ್ನು ನೋಡಲು ಹೋಗುವುದರಿಂದ ಪ್ರಾರಂಭಿಸಿ ಧಾರೆ ಮುಗಿಯವವರೆಗೆ ಶುಭ, ಅಶುಭ, ಶಕುನಗಳನ್ನು ಗಮನಿಸುವುದು ಇವರಲ್ಲಿ ಹೆಚ್ಚಾಗಿದೆ."[೬೯] "ಕಾಡುಗೊಲ್ಲರಲ್ಲಿ ಮೊದಲಿಗೆ ಕದ್ದು ಮದುವೆಯಾಗುವ ಅಂದರೆ ಹೆಣ್ಣನ್ನು ಕದ್ದುಕೊಂಡು ಹೋಗಿ ಮದುವೆ ಯಾಗುವ ಪದ್ಧತಿ ಇದ್ದಿರಬೇಕು. ಆದರೆ ಈಗ ನಡೆಯುವ ಮದುವೆಗಳು ಸಾಂಪ್ರದಾಯಿಕವಾಗಿ ಮೂರು ದಿನಗಳ ಕಾಲ ನಡೆಯುತ್ತವೆ. ಗಂಡಿನ ಕಡೆಯವರು ಹೆಣ್ಣು ನೋಡಲು ಹೋಗುವಾಗ ಹಿರಿಯ ಹೆಣ್ಣು ಮಗಳೊಬ್ಬಳ ತಲೆಯ ಮೇಲೆ ಅಕ್ಕಿ, ವೀಳ್ಯದೆಲೆ, ಬಾಳೆಹಣ್ಣು ಹಾಕಿರುವ ಸುಣ್ಣದ ಬೊಟ್ಟು ಹಚ್ಚಿದ ಮಡಿಕೆ ಯನ್ನು ಹೊರಸಿಕೊಂಡು ಹೋಗುವರು. ಅವಳ ಜೊತೆ ಐದು ಜನ ಗಂಡಸರು ಒಂದಿಬ್ಬರು ಹೆಂಗಸರು ಇರುತ್ತಾರೆ. ಶಕುನಗಳನ್ನು ಗಮನಿಸುತ್ತಾರೆ. ಹೆಣ್ಣಿನ ಮನೆಯಲ್ಲಿ ಹಣತೆ ದೀಪ ಹಚ್ಚಿಟ್ಟಿರುತ್ತಾರೆ. ಗಂಡಿನವರು ಹೆಣ್ಣಿನ ಮನೆ ಪ್ರವೇಶಿಸಿದ ಕೂಡಲೇ ಈ ಹಣತೆ ದೀಪ ನೋಡುತ್ತಾರೆ. ಇದು ಶುಭದ ಸಂಕೇತ. ದೀಪ ರಾತ್ರಿಯೆಲ್ಲ ನಂದದೆ ಉರಿದರೆ ಗಂಡ ಹೆಂಡತಿಯ ಸುತ್ತ ನೆಂಟರ ಸಂಬಂಧಗಳು ಚೆನ್ನಾಗಿರುತ್ತವೆ ಎಂಬ ಭಾವನೆ. ದನಗಳ ಕೊಟ್ಟಿಗೆಯಲ್ಲಿ ದನಕರುಗಳು ಸಂತೋಷದಿಂದ ಕಿವಿ ನಿಮಿರಿಸಿಕೊಂಡು ಮೆಲುಕು ಹಾಕುತ್ತಿದ್ದರೆ ಶುಭ.

ಹೆಣ್ಣು-ಗಂಡಿನ ಕೊಡುಕೊಳ್ಳುವಿಕೆ ಸಂದರ್ಭದಲ್ಲಿಯೂ ಶಕುನಗಳನ್ನು ಗಮನಿಸುತ್ತಾರೆ. ಗಂಡಿನವರು ಸೂಕ್ಷ್ಮವಾಗಿ ಹೆಣ್ಣಿನ ಗುಣಲಕ್ಷಣಗಳನ್ನು ಪರೀಕ್ಷಿಸುವುದನ್ನು ಮರೆಯುವುದಿಲ್ಲ. ಮಾತುಕತೆಗಳನ್ನು ಸಾಯಂಕಾಲದಲ್ಲಿ ನಡೆಸುತ್ತಾರೆ. ಹಾವು ಬೆಕ್ಕು ಅಡ್ಡ ಬರುವುದು. ಮಡಿಕೆಗಳು ಬಿದ್ದು ಒಡೆಯುವುದು, ಬೆಕ್ಕು ಒಂದೇ ಸಮನೆ ಕುಂಯ್ ಗುಟ್ಟುವುದು, ಗಂಡಿನವರು ಮಲಗಿದಾಗ ಕೆಟ್ಟ ಕನಸುಗಳು ಬೀಳುವುದು ಇದೆಲ್ಲ ಅಶುಭ. ಮದುವೆ ಒಪ್ಪಿಗೆಯಾದರೆ ಎಲೆ ಅಡಿಕೆ ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾರೆ. ಹೆಣ್ಣಿನವರು ಮುತ್ತೈದೆಯ ತಲೆಯ ಮೇಲೆ ಸುಣ್ಣದ ಬೊಟ್ಟು ಹಚ್ಚಿರುವ ಕರಗ ಹೊರೆಸಿಕೊಂಡು ಐದು ಜನ ಗಂಡಸರು ಗಂಡಿನ ಮನೆಗೆ ಹೋಗುತ್ತಾರೆ. ಈ ಸಂದರ್ಭದಲ್ಲಿ ಹೆಣ್ಣಿನವರು ಶಕುನಗಳನ್ನು ಗಮನಿಸುತ್ತಾರೆ. ಮದುವೆಯ ಸಂದರ್ಭದಲ್ಲಿ ಚಪ್ಪರ ಹಾಕುತ್ತಾರೆ. ಚಪ್ಪರದಲ್ಲಿ ಐದು ಕಳ್ಳಿ ಗೂಟಗಳನ್ನು ನೆಡುತ್ತಾರೆ. ಗಂಡು ಹೆಣ್ಣಿನ ಮನೆಗೆ ಬರುತ್ತಾನೆ. ಧಾರೆ ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ. ಗಂಡನ್ನು ಹೆಣ್ಣಿನ ಹಟ್ಟಿಯ ಗುಡಿಯ ಕಡೆಗೆ ಕರೆದುಕೊಂಡು ಹೋಗಿ, ಪೂಜಾರಿ ನಂತರ ಹಟ್ಟಿಯ ಯಜಮಾನ ವರನ ತಲೆಗೆ ಹಾಲಿನ ಹನಿ ಒತ್ತುತ್ತಾರೆ. ಹೆಣ್ಣಿಗೂ ಇದೇ ರೀತಿ ಮಾಡುತ್ತಾರೆ. ಕರಿಕಂಬಳಿ ಹಾಸಿ ಅದರ ಮೇಲೆ ಅಕ್ಕಿ ಹಾಕಿ ಬೆರಳಿನಿಂದ ಹಸೆ ಬರೆಯುತ್ತಾರೆ. ಮದುವೆಗಳಲ್ಲಿ ಹಸೆಗೆ ವಿಶೇಷವಾದ ಮಾನ್ಯತೆ ಇದೆ. ಹೆಣ್ಣನ್ನು ಐದುಸಲ ಕುಳ್ಳಿರಿಸಿ ಎಬ್ಬಿಸುತ್ತಾರೆ. ಕಾಡುಗೊಲ್ಲರ ಸಮುದಾಯ ಸಂಪ್ರದಾಯ, ಆಚರಣೆಗಳ ವಿಷಯವನ್ನು ಹೊಂದಿರುವಂತಹ ಸೋಬಾನೆ ಪದಗಳನ್ನು ಪುರೋಹಿತರ ಪಾತ್ರವನ್ನು ಹಿರಿಯ ಹೆಂಗಸರು ಸೋಬಾನೆ ಪದಗಳನ್ನು ಹೇಳುವುದರ ಮೂಲಕ ನಿರ್ವಹಿಸುತ್ತಾರೆ. ಹಟ್ಟಿಯ ಹಿರಿಯರು ಮದುವೆ ನೆರವೇರಿಸುತ್ತಾರೆ. ಊರುಗೊಲ್ಲರು ಬ್ರಾಹ್ಮಣ ಪುರೋಹಿತರನ್ನು ಕರೆಸಿದರೆ, ಕಾಡುಗೊಲ್ಲರು ಯಾವ ಪುರೋಹಿತರ ಸಹಾಯವಿಲ್ಲದೆ ಎಲ್ಲ ಶಾಸ್ತ್ರಗಳನ್ನು ನೆರವೇರಿಸಿಕೊಳ್ಳುತ್ತಾರೆ.

ಧಾರೆಗಿಂತ ಮೊದಲು ಸುರಿಗೆ ನೀರನ್ನು ಹಾಕುವ ಸಂಪ್ರದಾಯವಿದೆ. ಕುಂಬಾರನ ಮನೆಯಿಂದ ಪಡೆದಿದ್ದ ಐದು ಅರಣಿಯ ನಾಲ್ಕು ದಿಕ್ಕಿಗೂ ಇಟ್ಟು ಇವಕ್ಕೆ ಚೌಕಾಕಾರದಲ್ಲಿ ಅಂಗುದಾರ ಸುತ್ತುತ್ತಾರೆ. ಮೊದಲು ವಧುವರರನ್ನು ಚಪ್ಪರದಲ್ಲಿ ನಿಲ್ಲಿಸಿ ಮುತ್ತೈದೆಯರು ಅರಿಷಿಣ ಎಣ್ಣೆ ಹಚ್ಚಿ ಸ್ನಾನ ಮಾಡಿಸುತ್ತಾರೆ. ಹೆಣ್ಣಿಗೆ ಮೂರು, ಗಂಡಿಗೆ ನಾಲ್ಕು ಹಸೆ ಬರೆಯುತ್ತಾರೆ. ಹೆಣ್ಣನ್ನು ಹಸೆಯ ಮೇಲೆ ಕುಳ್ಳಿರಿಸುತ್ತಾರೆ. ವಧುವಿನ ಸುತ್ತ ನಾಲ್ಕು ಮೂಲೆಗಳಿಗೂ ಇಟ್ಟಿರುವ ಗಡಿಗೆಗಳ ಮಧ್ಯ ಒಂದು ಗುಂಡಿ ತೆಗೆದು ಅದರಲ್ಲಿ ಕುರಿಗೊಬ್ಬರ ಹಾಕಿ ಅದರ ಮೇಲೆ ಅರುಣೆ ಇಡುತ್ತಾರೆ. ವರನನ್ನು ಚಪ್ಪರಕ್ಕೆ ಕರೆತಂದು ಕುಳ್ಳಿರಿಸಿ, ತಲೆಗೆ ಅಕ್ಷತೆ ಹಾಕುತ್ತಾರೆ. ನಂತರ ದೈವದ ಪೂಜಾರಿ ಮತ್ತು ಗೌಡ ಸೇರಿ ಧಾರೆಗೆ ಅನುಮತಿ ಕೊಡುತ್ತಾರೆ. ವರನನ್ನು ಪೂರ್ವಕ್ಕೆ ನಿಲ್ಲಿಸಿ ಕೈಗೆ ಹಾಲು ಹಾಕುತ್ತಾರೆ. ವರನ ಕೈಕೆಳಗೆ ವಧು ತನ್ನ ಕೈಯನ್ನು ಬೊಗಸೆ ಮಾಡಿ ಬಿದ್ದ ಹಾಲನ್ನು ಹಿಡಿದು ಮತ್ತೆ ವರನ ಕೈಗೆ ಹಾಕುತ್ತಾಳೆ. ನಂತರ ಇವರ ಮಧ್ಯ ತೆರೆ ಹಿಡಿಯುತ್ತಾರೆ. ಮೂವರು ಮುತ್ತೈದೆಯರು ಗಡಿಗೆಗಳಲ್ಲಿದ್ದ ನೀರನ್ನು ಸೋಬಾನೆ ಹಾಡುತ್ತಾ ಹೆಣ್ಣಿನ ತಲೆ ಮೇಲೆ ಹಿಡಿದ ತಟ್ಟೆಗೆ ಸುರುವುತ್ತಾರೆ. ತಟ್ಟೆಯ ಮೇಲೆ ಬಿದ್ದ ನೀರು ಹೆಣ್ಣಿನ ತಲೆಗೆ ಬೀಳುತ್ತದೆ. ಎಲ್ಲ ಹಿರಿಯರೂ ಹೀಗೆ ನೀರು ಹಣಿಸುತ್ತಾರೆ. ನಂತರ ಹೆಣ್ಣಿನಂತೆ ಗಂಡಿನ ತಲೆಗೆ ಹಾಲುಹಣಿಸುವ ಶಾಸ್ತ್ರ ಮಾಡಿ ಧಾರೆ ನೆರವೇರಿಸುತ್ತಾರೆ. ನಂತರ ಹರಿವಾಣದಲ್ಲಿಟ್ಟ ತಾಳಿಯನ್ನು ಎಲ್ಲರಿಂದಲೂ ಮುಟ್ಟಿಸಿ ಸೂರ್ಯ, ಚಂದ್ರರ, ಗುರು, ಹಿರಿಯರ, ತಂದೆ ತಾಯಿಗಳ ಸಮ್ಮುಖದಲ್ಲಿ ಹೆಣ್ಣಿಗೆ ತಾಳಿ ಕಟ್ಟಿಸುತ್ತಾರೆ. ನಂತರ ಅಕ್ಕಿ ಶಾಸ್ತ್ರ.

ಬೇರೆ ಜನಾಂಗಗಳಿಗೆ ಮದುವೆಗೆ ಆಷಾಡಮಾಸ ಅಶುಭವಾದರೆ, ಕಾಡುಗೊಲ್ಲರಿಗೆ ಇದು ಅತ್ಯಂತ ಪ್ರಶಸ್ತವಾದ ಕಾಲ. ಕಾಡುಗೊಲ್ಲರ ಮದುವೆ ಅಪರೂಪದ ಸಂಪ್ರದಾಯಗಳಿಂದ ಕೂಡಿದೆ. ಅವರ ಮದುವೆಯಲ್ಲಿಯ ''ಬೂವದ ಮುದ್ದೆ''[೨೦] ಸಂಪ್ರದಾಯ ಹುಬ್ಬೇರಿಸುವಂತಿದೆ. ಊಟದ ನಂತರ ಜಾಡಿ ತೀರಿಸುವ ಶಾಸ್ತ್ರವೆಂದು ಆಚರಿಸುತ್ತಾರೆ. ಎಲೆ ಅಡಿಕೆ ಈ ಶಾಸ್ತ್ರದಲ್ಲಿ ಪ್ರಧಾನವಾದುದು. ಈ ಕೆಲಸವನ್ನು ಕರಡಿ ವಂಶದ ಗೊಲ್ಲರು ಮಾತ್ರ ಮಾಡಲು ಅಧಿಕಾರ. ನಂತರ ಗಂಡು-ಹೆಣ್ಣುಗಳು ಗಂಗೆಪೂಜೆಗೆ ಹೋಗುವುದುಂಟು.

ಕಾಡುಗೊಲ್ಲರು ಮದುವೆ ಕಾರ್ಯಗಳುದ್ದಕ್ಕೂ ಹಾಡುವ ಸೋಬಾನೆ ಪದಗಳು ಕಾವ್ಯಮಯವಾಗಿರುತ್ತವೆ. ವಿಧವೆಯಾದರೂ ಬಳೆಗಳನ್ನು ತೆಗೆಯುವುದಿಲ್ಲ. ಕಾರಣ ನಾವು ಕೃಷ್ಣನ ಗೋಪಿಕ ಸ್ತ್ರೀಯರೆಂದು ಕೃಷ್ಣ ನಿಜವಾಗಿ ಇವರ ಗಂಡನೆಂದು ನಂಬಿರುತ್ತಾರೆ. ಆದ್ದರಿಂದ ವಿಧವೆಯಾದರೂ ತಾವು ಸುಮಂಗಲಿಯರಂತೆಯೇ ವರ್ತಿಸುತ್ತಾರೆ. ಅಂದರೆ ಗಂಡ ಸತ್ತರೂ ಕಾಲುಂಗುರ, ಬಳೆ, ಕುಂಕುಮ, ಗೊಲ್ಲಕಡಗ, ಹೂವು ತೆಗೆಯುವುದಿಲ್ಲ. ಅವರು ನಿತ್ಯ ಮುತ್ತೈದೆ. ಇಂದಿನ ಪ್ರಗತಿಪರ ಆಧುನಿಕ ಸಮಾಜಕ್ಕೆ ಕಾಡುಗೊಲ್ಲರ ಸಂಪ್ರದಾಯ ಮೇಲ್ ಪಂಕ್ತಿಯಾಗಿದ್ದು, ''ಮಹಿಳೆಯ ಮುಕ್ತತೆಯ ಮುಕ್ತ ಚಿಂತನೆಗೆ ಅವಕಾಶ ಮಾಡಿಕೊಟ್ಟಿದೆ. ಗೊಲ್ಲರಲ್ಲಿ ಬಸವಿ ಬಿಡುವ ಪದ್ಧತಿಯಿಲ್ಲ, ಕೂಡಿಕೆ ಅಥವಾ ವಿಧವಾ ವಿವಾಹವಿಲ್ಲ.''[೨೧]

ಬುಡಕಟ್ಟುಗಳು ಸೂತಕ, ಮುಟ್ಟು ಅಥವಾ ಮೈಲಿಗೆಯನ್ನು ಅತ್ಯಂತ ಕಟ್ಟುನಿಟ್ಟಿನಿಂದ ಪಾಲಿಸುತ್ತಾರೆ. ಕಾಡುಗೊಲ್ಲರಲ್ಲಿ ಹುಟ್ಟಿನ ಬಗೆಗೆ ಅವರದೇ ಆದ ಆಚರಣೆಗಳಿವೆ. ಹೆಣ್ಣು ಗರ್ಭಿಣಿಯಾದ ಮೇಲೆ ಅವಳು ತನ್ನ ಹಟ್ಟಿಯೊಳಗೆ ಒಂಭತ್ತು ತಿಂಗಳು ಇರುತ್ತಾಳೆ. ಒಂಭತ್ತು ತಿಂಗಳು ತುಂಬಿದಮೇಲೆ ಅವಳಿಗಾಗಿಯೇ ಅವರ ಹಟ್ಟಿಯಾಚೆ ವೃತ್ತಾಕಾರವಾಗಿ ನಿರ್ಮಿಸಿರುವ ಗುಡಿಸಿಲಿಗೆ ನಾಲ್ಕಾರು ಜನ ಹೆಂಗಸರು ಕರೆದುಕೊಂಡು ಹೋಗಿ ಬಿಟ್ಟುಬರುತ್ತಾರೆ. ಆ ಗುಡಿಸಲೊಳಗೆ ತೆವಳಿಕೊಂಡು ಹೋಗಲು ಒಂದು ಚಿಕ್ಕದ್ವಾರ ಮಾತ್ರ ಬಿಟ್ಟಿರುತ್ತಾರೆ. ಗುಡಿಸಲೊಳಗೆ ಒಬ್ಬರು ಮಲಗುವಷ್ಟು ಮತ್ತೊಬ್ಬಳು ಕುಳಿತುಕೊಳ್ಳುವಷ್ಟು ಮಾತ್ರ ಸ್ಥಳವಿರುತ್ತದೆ. ಕೆಳಗೆ ಹುಲ್ಲು ಹಾಸಿರುತ್ತಾರೆ. ಅಲ್ಲಿಯೇ ಸೂಲಗಿತ್ತಿ ಹೆರಿಗೆ ಮಾಡಿಸಿ ಹೋಗುತ್ತಾಳೆ. ಬಾಣಂತಿಯರು ಒಂದು ತಿಂಗಳಿಂದ ಮೂರು ತಿಂಗಳವರೆಗೆ ಅಲ್ಲಿದ್ದು, ''ಚೆನ್ನಿಗೆಕುರಿ''[೨೨]ಯ ಹಾಲನ್ನು ಕೊಡುವುದರ ಮೂಲಕ ಸೂತಕ ಕಳೆದುಕೊಂಡು ಹಟ್ಟಿಗೆ ಬರುತ್ತಾರೆ. ಜನ್ನಿಗೆ ಕುರಿಹಾಲು ಅವರಿಗೆ ಪವಿತ್ರವಾದ ವಸ್ತು ಎಂಬ ನಂಬಿಕೆ. ಚೆನ್ನಿಗೆ ಕುರಿಯನ್ನು ಕಾಡುಗೊಲ್ಲರ ಬುಡಕಟ್ಟುಗಳಲ್ಲಿ ಮಾತ್ರ ಕಾಣಬಹುದು. ಚೆನ್ನಿಗೆ ಕುರಿಯನ್ನು ಹೀಗೆ ಕಾಣಬಹುದು. ''ಒಂದು ಹೆಣ್ಣು ಕುರಿಯನ್ನು ಆರಿಸಿ, ಅದರ ಬಲಗಿವಿಯನ್ನು ಮೂರು ಕಡೆ ಉದ್ದುದ್ದವಾಗಿ ನಾಮದ ಆಕಾರದಲ್ಲಿ ಸೀಳುತ್ತಾರೆ. ಅದನ್ನು ದೇವರ ಎದುರಿಗೆ ಪೂಜೆಮಾಡಿ ಮೀಸಲು ಕುರಿಯೆಂದು ಪರಿಗಣಿಸುತ್ತಾರೆ.'' ಮೂರುತಿಂಗಳ ಸೂತಕ ಕಳೆದ ಮೇಲೆ ಮಗು ಮತ್ತು ತಾಯಿಗೆ ಹಟ್ಟಿಯ ಪೂಜಾರಿ ಹಾಲನ್ನು ಕುಡಿಸುತ್ತಾರೆ. ಇದನ್ನು 'ಒಳಚೆನ್ನಿಗೆ' ಎಂದು ಕರೆಯುತ್ತಾರೆ. ಚೆನ್ನಿಗೆ ಮುಟ್ಟಿ ಪೂಜಾರಿ ಹೆಸರು ಕರೆದರೆ ಮಗುವಿನ ನಾಮಕರಣ ಶಾಸ್ತ್ರವಾದಂತೆ. ''ಜುಂಜಪ್ಪನ ಕಾಲದಲ್ಲಿ 'ಗೋಜನಿಗೆ'ಯೇ ಚಾಲ್ತಿಯಲ್ಲಿತ್ತು. ಬಹುಶಃ ಕಾಡುಗೊಲ್ಲರು ಪಶುಪಾಲನೆಯನ್ನು ಕೈಬಿಟ್ಟು ಕುರಿಸಾಕಾಣಿಕೆಯನ್ನು ಪ್ರಾರಂಭಿಸಿದಾಗ, ತಮ್ಮ ಕುರುಬರ ಸಂಬಂಧ ಮಧುರವಾಗಿರಲೆಂಬ ಕಾರಣಕ್ಕೋ ಅಥವಾ ಆ ಸಂಬಂಧವನ್ನು ಗೌರವಿಸುವ

ಕಾರಣಕ್ಕೊ ಗೋಜನಿಗೆಯನ್ನು ಬಿಟ್ಟು, ಕುರಿಜನಿಗೆಯನ್ನು ಪ್ರಾರಂಭಿಸಿರಬೇಕು.''[೬೩] ಎಂಬುದಾಗಿ ಡಾ.ಮೀರಾಸಾಬಿಹಳ್ಳಿ ಶಿವಣ್ಣನವರ ಅಭಿಪ್ರಾಯ ಸಹಜವಾದುದು. ಜೆನ್ನಿಗೆ ಕುರಿ ಸತ್ತಾಗ ಇದರ ಮಾಂಸವನ್ನು ಕಾಡುಗೊಲ್ಲರು ತಿನ್ನುತ್ತಾರೆ. ಆದರೆ ಇದರ ಯಾವ ಭಾಗವೂ ಕೂಡ ನಾಯಿ, ನರಿಗಳ ಪಾಲಾಗದಂತೆ ಎಚ್ಚರಿಕೆ ವಹಿಸುತ್ತಾರೆ.

''ದೇವರ ಹೆಸರಲ್ಲಿ ಕೆಲವು ಪಟ್ಲ(ಟಗರು)ಗಳನ್ನು ಬಿಟ್ಟು ಚೆನ್ನಾಗಿ ಸಾಕುತ್ತಾರೆ. ಕೆಲವು ಸಲ ಒಂದು ಮಂದೆಯ ಕುರಿಯು ಆಕಸ್ಮಿಕವಾಗಿ ಬೇರೊಂದು ಗುಂಪಿನ ಕುರಿ ಮಂದೆಯಲ್ಲಿ ಸೇರಿ ಅಲ್ಲಿಯೇ ಬೆಳೆಯುವುದುಂಟು. ಅಂಥ ಕುರಿಯನ್ನು 'ಕೂಡುಗುರಿ' ಎಂದು ಕರೆಯಲಾಗುವುದು. ಹೊರಗಿನವರಿಗೆ ನೋಡಲು ಒಂದೇ ಬಗೆಯಲ್ಲಿ ಕಾಣಲ್ಪಡುವ ಸಾವಿರ ಕುರಿಗಳ ಮಂದೆಯಲ್ಲಿ ಕಾವಲಿನವರು ಪ್ರತಿ ಕುರಿಯನ್ನೂ ಥಟ್ಟನೆ ಗುರುತಿಸಬಲ್ಲರು. ತಮ್ಮ ಪ್ರೀತಿಯ ಕುರಿಗಳ ಅಡ್ಡಹೆಸರುಗಳನ್ನು ಸಾಮಾನ್ಯವಾಗಿ ಅವುಗಳ ಬಣ್ಣ ಮತ್ತು ಬಗೆಬಗೆಯ ಮಚ್ಚೆಗಳ ಆಧಾರದಿಂದ ಕುರಿಗಳನ್ನು ಪತ್ತೆ ಹಚ್ಚುತ್ತಾರೆ.''[೬೪] ಕೆಲವು ಸಲ ಕುರಿಮರಿಗಳು ಹುಟ್ಟುವಾಗಲೇ ಅವುಗಳ ಕಿವಿಗಳನ್ನು ವಿವಿಧ ಆಕಾರದಲ್ಲಿ ಕೊಯ್ದಿರುವುದರಿಂದ ಆ ಗುರುತುಗಳ ಆಧಾರ ದಿಂದಲೂ ಕುರಿಗಳನ್ನು ಪತ್ತೆಹಚ್ಚುತ್ತಾರೆ.

ಜನಿಗೆ ಕುರಿಗೆ ಇರುವ ಧಾರ್ಮಿಕ ಪ್ರಾಮುಖ್ಯತೆ ಪಟ್ಟದ ಬಸವನಿಗೂ ಇದೆ. ಜುಂಜಪ್ಪನ ಬಸವ, ಜುಂಜಪ್ಪನ ಪ್ರತಿನಿಧಿ. ಕಾಡುಗೊಲ್ಲರಲ್ಲಿ ''ಜುಂಜಪ್ಪ ಯಾರ ಕನಸಿನಲ್ಲಿ ಕಾಣಿಸಿಕೊಂಡು ತನಗೆ ಬಸವನನ್ನು ಬಿಡಬೇಕೆಂದು ಆಪೇಕ್ಷಿಸುತ್ತಾನೋ ಅವರು ಮಾತ್ರ ಬಸವನನ್ನು ಬಿಡಬೇಕು. ಹೋರಿ ಕರುವನ್ನು ಜುಂಜಪ್ಪನ ದೇವಸ್ಥಾನದಲ್ಲಿ ಅದರ ಮೈತೊಳೆದು, ಹಾಲು, ಮೊಸರಿನ ಅಭಿಷೇಕ ಮಾಡಿ ಮೂರು ಬಗೆಯ ಎಣ್ಣೆಯನ್ನು ಅದರ ಕೊಂಬಿಗೆ ಮತ್ತು ಕಾಲಿಗೆ ಸವರಿ ಅನಂತರ ದೇವರ ಬಾವಿಯ ನೀರಿನಿಂದ ತೊಳೆದು ಅದಕ್ಕೆ ದೇವರ ಮೇಲಿನ ಹಾರವನ್ನು ಹಾಕುತ್ತಾರೆ. ಅಂದಿನಿಂದ ಆ ಹೋರಿಕರು ಜುಂಜಪ್ಪನ ಬಸವನಾಗುತ್ತದೆ. ಎಲ್ಲಿ ಬೇಕಾದರೂ ಅದು ಮೇಯ ಬಹುದು. ಕಾಡುಗೊಲ್ಲರು ಜುಂಜಪ್ಪನ ಬಸವನನ್ನು ಶಾಸ್ತ್ರ ಕೇಳುತ್ತಾರೆ. ಜುಂಜಪ್ಪನ ಬಸವನಿಗೆ ಬೀಜ ಹೊಡೆಯುವುದಿಲ್ಲ. ಸತ್ತಾಗ ಅದನ್ನು ಹೂಳಿ ಸಮಾಧಿ ಮಾಡಿದ ಜಾಗ ಪವಿತ್ರವೆಂದು ಪೂಜಿಸುತ್ತಾರೆ. ಜುಂಜಪ್ಪನ ಪುರಾಣದಲ್ಲಿ ಬರುವ 'ಬಡಮ್ಮೈಲ' ಎಂಬ ಹೋರಿಯ ಪ್ರತೀಕ ಜುಂಜಪ್ಪನ ಬಸವ.''[೬೫]

ಋತುಮತಿಯಾದ ಹುಡುಗಿ ಇಪ್ಪತ್ತೊಂದು ದಿನಗಳ ಕಾಲ ಹಟ್ಟಿಯಿಂದ ಹೊರಗೆ ಇರಬೇಕು. ಅವಳಿಗಾಗಿಯೇ ಹಾಕಿದ ಹೊಂಗೆ ಮತ್ತು ಬೇವಿನಸೊಪ್ಪಿನಿಂದ ನಿರ್ಮಿಸಿದ ಹಸಿರು ಚಪ್ಪರದಲ್ಲಿ ಏಳು ದಿನಗಳು ಇರಬೇಕು. ಅನಂತರ ಮುಟ್ಟಾದ ಹೆಂಗಸರೊಡನೆ ಐದು ದಿನಗಳು, ಮತ್ತೆ ಹಸಿರು ಚಪ್ಪರದಲ್ಲಿ ಒಂಭತ್ತು ದಿನಗಳು ಇರಬೇಕಾಗುತ್ತದೆ. ಈ ಅವಧಿಯಲ್ಲಿ ಹುಡಿಗಿಗೆ ಖರ್ಜೂರ, ದ್ರಾಕ್ಷಿ, ಕೊಬ್ಬರಿ, ಕಡಲೆ ಮೊದ ಲಾದವನ್ನು ತಿನ್ನಲು ಕೊಡುತ್ತಾರೆ. ಒಸಗೆಯ ಹಾಡುಗಳನ್ನು ಹಾಡಿ ಆರತಿ ಮಾಡುತ್ತಾರೆ. ತಿಂಗಳ ಮುಟ್ಟಿನವರೂ ಮೂರುದಿನ ಹಟ್ಟಿಯ ಹೊರಗೆ ಇರಬೇಕು.

ಸೂತಕದಲ್ಲಿದ್ದವಳು ತೀರಿಕೊಂಡರೆ ಆಕೆಯನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋದ ವ್ಯಕ್ತಿ ಮೂರು ತಿಂಗಳು ಹಟ್ಟಿಯಿಂದ ಹೊರಗಿದ್ದು, ಮೈಲಿಗೆ ಆಚರಿಸಬೇಕು. ಅನಂತರ ಜನಿಗೆಯ ಕುರಿಹಾಲು, ದೇವರೆತ್ತಿನ ಗಂಜಲ, ಹಟ್ಟಿ ದೇವರ ತೀರ್ಥ ತೆಗೆದುಕೊಂಡು ಹಟ್ಟಿಗೆ ಪ್ರವೇಶಿಸುತ್ತಾರೆ.

ಕಾಡುಗೊಲ್ಲರ ಶವಸಂಸ್ಕಾರ ಇತರ ಬುಡಕಟ್ಟುಗಳ ಪದ್ಧತಿಗಿಂತ ಭಿನ್ನವಾಗಿದೆ. ವಿಧವೆಯಾದ ಹೆಂಗಸು, ಅಗಸನ ಮನೆಯಿಂದ ತಂದ ಹೊಸ ಮಡಿಕೆಯಲ್ಲಿ ಆರುಹಿಡಿ ಅಕ್ಕಿ ಹಾಕಿ ಅನ್ನಮಾಡಿ ಅದನ್ನು ಒಂದು ಮುಚ್ಚಳಕ್ಕೆ ಹಾಕಿ ಹೆಣದ ಎದೆಯ ಮೇಲೆ ಕಟ್ಟುತ್ತಾರೆ. ಚಟ್ಟವನ್ನು ಇಬ್ಬರು ಹೊತ್ತುಕೊಂಡು ಹೋಗುತ್ತಾರೆ. ಶವದ ತಲೆ ಪೂರ್ವಕ್ಕೂ ಕಾಲುಗಳು ಪಶ್ಚಿಮಕ್ಕೂ ಬರುವಂತೆ ಮಾಡಿ ಗುಂಡಿಯಲ್ಲಿ ಮಲಗಿಸಿ, ಮಣ್ಣು ಮಾಡುತ್ತಾರೆ. ಮಣ್ಣು ಮಾಡಲು ಬಂದ ಸಂಬಂಧಿಗಳಿಗೆ ಸತ್ತಮನೆಯವರು ಎಲೆ ಅಡಿಕೆಯನ್ನು ಕೊಡುತ್ತಾರೆ. ಅದನ್ನು ತಿಂದು, ಸಗಣಿ ಉಂಡೆಗೆ ಕಳ್ಳಿಯ ಎಸಳನ್ನು ಸಿಕ್ಕಿಸಿಕೊಂಡು ಹಟ್ಟಿಗೆ ಬರುತ್ತಾರೆ. ಶವ ಇಟ್ಟ ಜಾಗವನ್ನು ಸಗಣಿಯಿಂದ ಸಾರಿಸುತ್ತಾರೆ. ದೀಪ ಹಚ್ಚಿ ಇಡುತ್ತಾರೆ. ಸಮಾಧಿಗೆ ಬಂದವರು ದೀಪವನ್ನು ನೋಡಿ ಮನೆಗೆ ಹಿಂತಿರುಗುತ್ತಾರೆ. ಮೂರನೆ ದಿನ ಸಮಾಧಿಗೆ ಪೂಜೆ ಸಲ್ಲಿಸಿ ಅನ್ನವನ್ನು ಕಾಗೆಗೆ ಹಾಕುತ್ತಾರೆ.

ಹೆಣ ಹೊತ್ತವರನ್ನು ಹಟ್ಟಿಯೊಳಕ್ಕೆ ಸೇರಿಸಿಕೊಳ್ಳುವ ಮೊದಲು 'ಹೆಗಲು ಇಳಿಸಿಕೊಂಡೆ' ಎಂಬ ಒಂದು ಸಂಪ್ರದಾಯವನ್ನು ಆಚರಿಸುತ್ತಾರೆ. ಮೂರು ದಿನದ ಸೂತಕ ಕಳೆದ ಮೇಲೆ ಹಟ್ಟಿಯೊಳಕ್ಕೆ ಬರುತ್ತಾರೆ. ಒಂದು ತಿಂಗಳಾದ ಮೇಲೆ ಸತ್ತ ವ್ಯಕ್ತಿಯ ಸಮಾಧಿಯ ಮೇಲೆ, ಪೂಜೆ ಮಾಡಿ ಒಂದೊಂದು ಹೂವನ್ನು ಒಂದೊಂದು ತೊಟ್ಟು ಹಾಲನ್ನೂ ಸಮಾಧಿಯ ಮೇಲೆ ಹಾಕುತ್ತಾರೆ. ಎರಡು ಚಿಕ್ಕ ಮಡಕೆಗಳಲ್ಲಿ ಸಮಾಧಿಯ ಮಣ್ಣನ್ನು ತುಂಬಿ ಒಂದು ಮಡಕೆಯ ಮಣ್ಣನ್ನು ನೀರಿಗೆ ಕದಡುತ್ತಾರೆ. ಕಾಡುಗೊಲ್ಲರು ಪ್ರತಿವರ್ಷ ಹಿರಿಯರ ಪೂಜೆ ಮಾಡಲು ಒಬ್ಬ ಪೂಜಾರಿಯನ್ನು ನೇಮಿಸುತ್ತಾರೆ. ಇವನನ್ನು 'ಅಮಾವಾಸ್ಯೆ ಪೂಜಾರಿ' ಎಂದು ಕರೆಯುತ್ತಾರೆ. ಹಟ್ಟಿಗೆಲ್ಲಾ ಇವನೊಬ್ಬನೇ ಈ ಕೆಲಸಕ್ಕೆ ಪೂಜಾರಿ.

ಕಾಡುಗೊಲ್ಲರು ಹುಲ್ಲುಗಾವಲು ಹೆಚ್ಚಾಗಿ ಇದ್ದಾಗ ಪಶುಪಾಲನೆಯನ್ನು ಮಾಡುತ್ತಿದ್ದರು. ಅನಂತರ ಹುಲ್ಲುಗಾವಲುಗಳನ್ನು ವ್ಯವಸಾಯಕ್ಕೆ ಬಳಸಿಕೊಳ್ಳಲು ಆರಂಭಿಸಿದ್ದಾಗ ಕಾಡುಗಳನ್ನು ನಾಶ ಮಾಡಲು ಪ್ರಾರಂಭಿಸಿದ್ದರಿಂದ, ಇವರು ದನಗಳ ಸಾಗುವಳಿಯನ್ನು ಕಡಿಮೆ ಮಾಡಿದ್ದಾರೆ. ಈಗ ಕಾಡುಗೊಲ್ಲರ ಪ್ರಧಾನವಾದ ಕಸುಬು ಕುರಿಕಾಯುವುದು.

ಕಾಡುಗೊಲ್ಲರ ಆಹಾರ ಪದ್ಧತಿ ಸರಳವಾಗಿದ್ದು, ಇವರು ಹೆಸರು, ಮುದ್ದೆಯನ್ನು ದಿನ ಬಳಸುತ್ತಾರೆ. ಜೋಳ, ಸೊಪ್ಪು, ನವಣೆಯ ಅನ್ನ, ಕುರಿಯ, ಮೇಕೆಯ ಮಾಂಸವನ್ನು ಮತ್ತು ಹುರುಳಿಯ ಹೆಸರನ್ನು ಇವರು ಬಳಸುತ್ತಾರೆ. ಆದರೆ 'ಹುರುಳಿಯ ಗೊಲ್ಲರು' ಎಂಬ ಬೆಡಗಿನವರು ಹುರುಳಿಯ ಕಾಳನ್ನು ಬಳಸು ವುದಿಲ್ಲ.

ಕಾಡುಗೊಲ್ಲರು ಯುಗಾದಿ, ದೀಪಾವಳಿ, ಬಸವನ ಹಬ್ಬ, ಶಿವರಾತ್ರಿ ಮತ್ತು ನಾಗರ ಹಬ್ಬವನ್ನು ಆಚರಿ ಸುತ್ತಾರೆ. "ಗುಗ್ಗರಿ ಹಬ್ಬ"[೭೬] ಕಾಡುಗೊಲ್ಲರ ಒಂದು ವಿಶಿಷ್ಟ ಆಚರಣೆ. ತುಮಕೂರು ಜಿಲ್ಲೆಯಲ್ಲಿ ಜುಂಜಪ್ಪನ ಆರಾಧನೆ ಹೆಚ್ಚು. ಜುಂಜಪ್ಪ ಸಮಾಧಿಯಾಗಿರುವ ಕಳುವೋರಹಳ್ಳಿಯೂ ಸೇರಿದಂತೆ ಬಹುಮುಖ್ಯವಾದ ಬೇವಿನಹಳ್ಳಿ, ಹಾಗಲವಾಡಿ ಇವರ ಸಾಂಸ್ಕೃತಿಕ ಕೇಂದ್ರಗಳು. ಈ ಕೇಂದ್ರಗಳಲ್ಲಿ, 'ದೀಪ ಏರಿಸುವುದು' ಬಹಳ ಮುಖ್ಯವಾದ ಹಬ್ಬ.

ಕಾಡುಗೊಲ್ಲರ ಜುಂಜಪ್ಪ, ಎತ್ತಪ್ಪ, ಚಿತ್ರದೇವರುಗಳ ಜಾತ್ರೆಗಳು ದೀಪಾವಳಿಯ ಸಂದರ್ಭದಲ್ಲಿ ನಡೆಯುತ್ತದೆ. ಜಾತ್ರೆಯ ಆರಂಭದ ದಿನ ಕಾವಿ ಬಣ್ಣದ ಬಾವುಟವನ್ನು ಎತ್ತರದಲ್ಲಿ ಹಾರಿಸುತ್ತಾರೆ. ದೇವರನ್ನು ಹಳ್ಳದ ಬಳಿಗೆ ಕರೆದುಕೊಂಡು ಹೋಗಿ ಗಂಗಾಸ್ನಾನ ಮಾಡಿಸಿಕೊಂಡು ಬರುತ್ತಾರೆ. ಒಂದು ವಾರದಿಂದ ಮೀಸಲು ಇಟ್ಟ ತುಪ್ಪವನ್ನು ದೇವಸ್ಥಾನದ ಮುಂಭಾಗದಲ್ಲಿ ನಿಲ್ಲಿಸಿರುವ ಆರೇಳು ಅಡಿ ಎತ್ತರದ ಕಂಬಕ್ಕೆ ಹಾಕುತ್ತಾರೆ. ಭಕ್ತಾದಿಗಳು ಯಾರಾದರೂ ಹರಕೆ ಹೊತ್ತುಕೊಂಡಿದ್ದರೆ ಬೆಳ್ಳಿಯ ಅಥವಾ ಚಿನ್ನದ ಹಾವು, ಚೇಳನ್ನು, ಹರಕೆಯ ಹುಂಡಿಗೆ ಹಾಕಿ ಹರಕೆ ತೀರಿಸುತ್ತಾರೆ. ಬಾವುಟವನ್ನು ಇಳಿಸುವುದರ ಮೂಲಕ ಜಾತ್ರೆ ಮುಕ್ತಾಯಗೊಳ್ಳುತ್ತದೆ. ಜುಂಜಪ್ಪನ ಜಾತ್ರೆ ಗುಬ್ಬಿ ತಾಲ್ಲೂಕಿನ ಹಾಗಲವಾಡಿಯ ಬಳಿ ಇರುವ ಜುಂಜಪ್ಪನ ಹಟ್ಟಿಯಲ್ಲಿ ಮಾತ್ರವಲ್ಲದೆ, ಕಳುವಾರಹಳ್ಳಿಯ ಬಳಿ ಇರುವ ಜುಂಜಪ್ಪನ ಸಮಾಧಿಯ ಬಳಿಯಲ್ಲಿಯೂ ನಡೆಯುತ್ತದೆ. ಚಿತ್ರದೇವರ ಜಾತ್ರೆ ಮಡಕ ಸಿರಾ ತಾಲ್ಲೂಕಿನ ಪಾಲೇನ ಹಳ್ಳಿಯಲ್ಲಿ ನಡೆಯುತ್ತದೆ. ಎತ್ತಪ್ಪನ ಜಾತ್ರೆ ಹಿರಿಯೂರಿನ ಮೇಣ್‌ಕಲ್ ಗುಡ್ಡದಲ್ಲಿ ನಡೆಯುತ್ತದೆ.

ಕಾಟಮದೇವರ ಜಾತ್ರೆ ಹಿರಿಯೂರು ತಾಲ್ಲೂಕಿನ ಯರಬಳ್ಳಿಯ ಗೊಲ್ಲರ ಹಟ್ಟಿಯಲ್ಲಿ ಶಿವರಾತ್ರಿಗೆ ಒಂದುವಾರ ಮುಂಚೆ ನಡೆಯುತ್ತದೆ. ಪಾತೇದೇವರ ಜಾತ್ರೆ ಐದು ಅಥವಾ ಹತ್ತು ವರ್ಷಕ್ಕೊಮ್ಮೆ ಭಕ್ತಾದಿಗಳ ಪ್ರಯತ್ನದಿಂದ ಹಿರಿಯೂರು ತಾಲ್ಲೂಕಿನ ಕೂಡಲ ಹಳ್ಳಿಯಲ್ಲಿ ನಡೆಯುತ್ತದೆ. ''ಈ ಜಾತ್ರೆಯಲ್ಲಿ ಒಂದು ಅಚ್ಚಕರಿಯ ಹೋತದ ಗಂಟಲಿನ ಚರ್ಮವನ್ನು ಹಲ್ಲಿನಿಂದ ಸೀಳಿ ಅದರ ಪ್ರಾಣ ಕಳೆಯುತ್ತಾರೆ. ಇದನ್ನು ಗಾಬುಸಿಗಿಯುವುದು''[೨೭] ಎಂದು ಕರೆಯುತ್ತಾರೆ.

ಕೇತೇದೇವರ ಜಾತ್ರೆ ಚಳ್ಳಕೆರೆ ತಾಲ್ಲೂಕಿನಲ್ಲಿ ಚನ್ನಮ್ಮನಾಗತಿ ಹಳ್ಳಿಯ ಬಳಿ ವಸತಿ ದಿಬ್ಬದಲ್ಲಿ ಇಪ್ಪತ್ತೆಂಟು ದಿನಗಳ ಕಾಲ ನಡೆಯುತ್ತದೆ. ದೇವರನ್ನು ಎರದ ಮುಳ್ಳಿನಿಂದ ಮಾಡಿದ ಗುಡಿಸಲಿನಲ್ಲಿ ಇಟ್ಟು ಪೂಜೆ ಸಲ್ಲಿಸುತ್ತಾರೆ. ವೀರರಾದವರು ಮುಳ್ಳಿನ ಗುಡಿಸಿಲಿನ ಮೇಲೆ ಇರುವ ಕಳಸವನ್ನು ತರಲು ಹೋಗುತ್ತಾರೆ. ಯಾರಿಗೂ ಗಾಯವಾಗುವುದಿಲ್ಲ. ಇದು ದೇವರ ಮೇಲಿನ ಭಕ್ತಿ ಎಂದು ನಂಬಿದ್ದಾರೆ. ಗೌರಸಂದ್ರದ ಮಾರಕ್ಕನ ಜಾತ್ರೆಯಲ್ಲಿ ಅನೇಕ ಕೊರಚರ ಹೆಂಗಸರು ಕಣೆ ಹೇಳಲು ಸೇರುತ್ತಾರೆ.

''ಕಾಡುಗೊಲ್ಲರು, ಜಾತ್ರೆಗಳಲ್ಲಿ ಗಂಡಸರ ಕಗ್ಗದ ಪದಗಳು ಎಂಬ ಜುಂಜಪ್ಪನನ್ನು ಹೊಗಳುವ (ವೀರಗಾಸೆಯ ಪದಗಳ ರೀತಿಯವು) ಪದಗಳನ್ನು ಹೇಳುತ್ತಾರೆ. ಆಗ ಪಕ್ಕವಾದ್ಯದಲ್ಲಿ ಉರುಮೆಯನ್ನು ಬಳಸುತ್ತಾರೆ. ಆಶ್ಚರ್ಯವೆಂದರೆ ತುಂಬಾ ಎಚ್ಚರಿಕೆಯಿಂದ ಮಡಿ ಮೈಲಿಗೆ ಆಚರಿಸುವ ಕಾಡುಗೊಲ್ಲರ ಜಾತ್ರೆಯಲ್ಲಿ ಉರುಮೆ ಬಾರಿಸುವವರು ಹರಿಜನರು. ಉಳಿದಂತೆ ಅವರಿಗೆ ಹಟ್ಟಿಯೊಳಗೆ ಪ್ರವೇಶವಿಲ್ಲ. ಆದರೆ ಜಾತ್ರೆಯ ದಿನ ಅವರು ವಿಶೇಷ ಆಹ್ವಾನಿತರು. ಕೆಲವು ಗಂಡಸರು 'ಜುಂಜಪ್ಪನ ಬಸವ' ಎಂಬ ಎತ್ತನ್ನು ಹಿಂಬಾಲಿಸಿಕೊಂಡು ಹೋಗುತ್ತಾರೆ. ಅವರಿಗೆ 'ಕಾಣಿಕೆಯವರು' ಎನ್ನುತ್ತಾರೆ.''[೨೮]

ಕಾಡುಗೊಲ್ಲರ ಆರಾಧ್ಯ ದೈವ ಜುಂಜಪ್ಪನ ಸ್ವರೂಪ ಬಹಳ ಕುತೂಹಲದ ವಿಚಾರ. ''ಜುಂಜಪ್ಪನ ಮೂಲ ಮೂರ್ತಿ ಕೇವಲ ಒಂದು ಬಿದಿರು ಕಡ್ಡಿಯೇ ಆಗಿರುತ್ತದೆ. ಆದರೆ ಉತ್ಸವ ಮೂರ್ತಿಯಲ್ಲಿ ಅವನು ಕುದುರೆಯ ಮೇಲೆ ಕೂತಿರುವಂತೆ ಹಾವು, ಚೇಳು, ಮಂಡರಗಪ್ಪೆಗಳಿಂದ ಅಲಂಕರಿಸಲ್ಪಟ್ಟಿದ್ದಾನೆ.

ಉತ್ಸವಮೂರ್ತಿಯನ್ನು ಅಡ್ಡಣಿಗೆಯ ಮೇಲೆ ತೆಗೆದುಕೊಂಡು ನಾಲ್ಕು ಜನ ಹೊತ್ತುಕೊಂಡು ಹೋಗುತ್ತಾರೆ. ಗಣೆಗೆ ಸರ್ಪದ ಹೆಡೆಯಾಕಾರದ ತಗಡನ್ನು ಸಿಕ್ಕಿಸಿಕೊಂಡು, ನವಿಲುಗರಿಯನ್ನು ಜೋಡಿಸಿರುವುದೂ, ಜುಂಜಪ್ಪ ದೇವರಾಗಬಹುದು.''[೨೯]

ಜುಂಜಪ್ಪ ದೇವರ ಆರಾಧನೆ ಕೇವಲ ದಕ್ಷಿಣ ಕರ್ನಾಟಕಕ್ಕೆ ಸೀಮಿತವಾಗಿಲ್ಲ. ''ಉತ್ತರ ಕರ್ನಾಟಕದ ಹಲವು ಕಡೆಗಳಲ್ಲಿ ಪ್ರಚಲಿತವಾಗಿವೆ. ಹಿರೇಮೈಲಾರದಲ್ಲಿ ಜುಂಜಪ್ಪನಿಗೆ ಹಳೆಯ ಮತ್ತು ಹೊಸದು ಎಂದು ಕರೆಯಲಾಗುವ ಎರಡು ಚಿಕ್ಕ ಪ್ರಮಾಣದ ಪ್ರತ್ಯೇಕ ಗುಡಿಗಳಿವೆ. ದೇವರಗುಡ್ಡ ರಾಣಿಬೆನ್ನೂರು ತಾಲ್ಲೂಕುಗಳಲ್ಲಿ ಜುಂಜಪ್ಪನ ಪ್ರತ್ಯೇಕ ಮೂರ್ತಿಗಳಿವೆ. ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾ. ಶೀಗೆಹಳ್ಳಿ ಗ್ರಾಮದಲ್ಲಿ ಜುಂಜಪ್ಪನ ಒಂದು ದೇವಾಲಯವಿದೆ. ಮೈಲಾರ ದೇವರ ಸಂಪ್ರದಾಯದಲ್ಲಿ ಜುಂಜಪ್ಪ ಒಬ್ಬ ಉಪದೇವತೆ. ಜುಂಜಪ್ಪ ಮೈಲಾರಲಿಂಗ ಮತ್ತು ಗಂಗಿಮಾಳಮ್ಮ ಇವರ ಹಿರಿಯ ಮಗ ಎಂದು ಮೈಲಾರದೇವರ ಸಂಪ್ರದಾಯದ ನಂಬಿಕೆಯಾಗಿದೆ. ಜುಂಜಪ್ಪನನ್ನು ಕೆಲವೊಮ್ಮೆ ದೊಡ್ಡಯ್ಯನೆಂದೂ ಕರೆಯಲಾಗುತ್ತದೆ. ಆತನ ಪ್ರತೀಕ ಹಾವು ಮಾತ್ರವಾಗಿರದೆ ಹುತ್ತದಲ್ಲಿನ ಲಿಂಗವೂ ಅವನನ್ನು ಪ್ರತಿನಿಧಿಸುತ್ತದೆ''[೩೦] ಎಂಬುದಾಗಿ ನೇಗಿನಹಾರರವರ ಸಂಶೋಧನಾ ಲೇಖನಗಳು ತಿಳಿಸುತ್ತವೆ.

ಕಾಡುಗೊಲ್ಲರಲ್ಲಿ ಸಮೃದ್ಧ ಸಾಹಿತ್ಯ ದೊರೆಯುತ್ತದೆ. ಧಾರ್ಮಿಕ ಸಾಹಿತ್ಯ ಪುರಾಣಗಳ ರೂಪದಲ್ಲಿ ಲಭ್ಯವಾಗುತ್ತದೆ. ಜುಂಜಪ್ಪ, ಎತ್ತಪ್ಪ, ಚಿತ್ರದೇವರು, ಕೇತೇದೇವರು, ಪಾತೇದೇವರು- ಈ ಪ್ರಮುಖ ದೇವತೆಗಳ ಬಗ್ಗೆಯೇ ನೂರಾರು ಪುಟಗಳ ಸಾಹಿತ್ಯ ಲಭ್ಯವಾಗುತ್ತದೆ. ಇವುಗಳಲ್ಲಿ ಅತ್ಯಂತ ದೀರ್ಘವಾದುದು ಮತ್ತು ವೈಭವಯುತವಾದುದು ಜುಂಜಪ್ಪನ ಪುರಾಣ. ಮೌಖಿಕ ಕಾವ್ಯಗಳಲ್ಲಿ ಜುಂಜಪ್ಪನ ಕಾವ್ಯ ಪವಿತ್ರವಾದ ಕೃತಿ. ''ಇತರ ಜನ ವರ್ಗಗಳಿಂದ ತಮ್ಮನ್ನು ಪ್ರತ್ಯೇಕಿಸಿಕೊಂಡ ಜನಾಂಗವೊಂದರ ಕತೆಯಿದು. ಅವರ ಸಾಂಸ್ಕೃತಿಕ ಸ್ವರೂಪವನ್ನು ಈ ಕಾವ್ಯ ಸೂಕ್ಷ್ಮವಾಗಿ ಸಾದರಪಡಿಸುತ್ತದಲ್ಲದೆ ಒಂದೇ ಜನಾಂಗದ ಒಳಗಡೆಯೇ ವ್ಯಕ್ತಿತ್ವ ವಿಕಸನ ಹಾಗೂ ಸಮೂಹಿಕ ಏಳಿಗೆಯನ್ನು ಸಹಿಸದೆ ದಬ್ಬಾಳಿಕೆ ಮತ್ತು ದೌರ್ಜನ್ಯದ ದಾರಿಯ ಚಿತ್ರ ಇದೆ. ಹಿಡಿದ ವ್ಯಕ್ತಿಗಳ, ಆ ಶಕ್ತಿಗಳ ವಿರುದ್ಧ ಬಾಲಕನೊಬ್ಬ ಸಿಡಿದೇಳುವ ಕಥೆಯನ್ನು ಒಳಗೊಂಡಿರುವ ಕಾವ್ಯ''[೩೧] ಇದಾಗಿದೆ ಎನ್ನುತ್ತಾರೆ ಡಾ.ಕಾಳೇಗೌಡ ನಾಗವಾರರವರು. ಕಾಡುಗೊಲ್ಲರಲ್ಲಿ ಕೋಲಾಟ, ಅದರಲ್ಲಿಯೂ ಗೆಜ್ಜೆ ಕೋಲಾಟ ಜನಪ್ರಿಯ ಆಟ. ಗಣೆ ಊದುವುದು, ಪಿಳ್ಳಂಗೋವೆ ಊದುವುದು ಇವರ ಬಹುಮುಖ್ಯವಾದ ಕಲೆ.

ಗಣೆ ಜುಂಜಪ್ಪ ಕಾವ್ಯದ ಒಂದು ಮುಖ್ಯವಾದ ವಾದ್ಯ. 'ಗಳೆ' ಪದವು ವರ್ಣ ಪಲ್ಲಟದಿಂದ 'ಗಣೆ'ಯಾಗಿದೆ. 'ಗಳೆ' ಎಂದರೆ ಬಿದಿರಕೋಲು ಎಂದರ್ಥ. ''ಗಣೆಯು ಮೂರಡಿ ಉದ್ದವಿರುವ ಬಿದಿರಿನ ಕೋಲು. ಅದಕ್ಕೆ ಮಧ್ಯೆ ಮೂರು ಗೆಣ್ಣುಗಳಿರುತ್ತದೆ. ಮಧ್ಯದ ಗೆಣ್ಣನ್ನು ತೆಗೆದು ಮೇಲ್ಭಾಗವನ್ನು ಮೇಣದಿಂದ ಮುಚ್ಚಲಾಗುತ್ತದೆ. ಈ ಮೂಲಕ ಗೆಣೆಯೊಳಗಡೆ ಗಾಳಿಯಾಡುತ್ತದೆ. ಆಗ ಉಳಿದ ಎರಡೂ ತುದಿಗಳ ಗೆಣ್ಣುಗಳು ಹಾಗೆಯೇ ಉಳಿಯುತ್ತದೆ. ದುಂಡಾಗಿ ಕೊರೆವ ಐದು ರಂಧ್ರಗಳಲ್ಲಿ ಬೆರಳುಗಳಿಂದ ತಡೆದು ಉಸಿರನ್ನು ಲಯ ಬದ್ಧವಾಗಿ ಬಿಡುವ ಮೂಲಕ ನುಡಿಯಲಾಗುತ್ತದೆ''[೩೨] 'ಗಣೆ'ಗೆ ಹಿತ್ತಾಳೆಯ ನಾಗರಹೆಡೆಯನ್ನು ಕಟ್ಟಿ, ನವಿಲು ಗೊಂಡೆಯೇರಿಸಿ ಹೆಗಲಲ್ಲಿ ಹೊತ್ತು ಬರುವ ವೃತ್ತಿಗಾಯಕರನ್ನು ಜುಂಜಪ್ಪನೆಂದೇ ಕರೆಯುತ್ತಾರೆ.

‘ಗಣೆ’ಯ ಕಲಾವಿದರು ಸಾಮಾನ್ಯವಾಗಿ ಇಬ್ಬರಿರುತ್ತಾರೆ. ಉದ್ದನೆಯ ಚಡ್ಡಿ ಅಥವಾ ಪಂಚೆ, ಬನಿಯನ್, ತಲೆಗೆ ರುಮಾಲು, ಹೆಗಲ ಮೇಲೆ ಕರಿಯ ಕಂಬಳಿ ಇವು ಇವರ ಸಾಮಾನ್ಯ ಉಡುಗೆ ತೊಡುಗೆಗಳು. ಒಬ್ಬನು ಹಾಡುಗಳನ್ನು ಹಾಡಿದಾಗ ಗಣೆಯ ಮೂಲಕ ಮತ್ತೊಬ್ಬನು ಅದನ್ನು ನುಡಿಸುತ್ತಾನೆ. ಕೆಲವೆಡೆ ಜೋಡಿ ಗಣೆಯನ್ನು ಬಳಸುವುದಿದೆ. ಗಂಡಸರ ಹಾಡು ವೀರರಸ ಪ್ರಧಾನವಾಗಿದ್ದರೆ, ಹೆಂಗಸರ ಹಾಡುಗಳಲ್ಲಿ ಕರುಣರಸ ಪ್ರಧಾನವಾಗಿರುತ್ತದೆ. ಹೆಂಗಸರು ಮಾತ್ರ ಹಾಡುವ ತ್ರಿಪದಿಯ ಗದ್ಯ ಕಾವ್ಯದಷ್ಟು ದೀರ್ಘವಾಗಿರುವುದಿಲ್ಲ. ಗೌರಸಂದ್ರದ ಮಾರಮ್ಮ, ಬೇವಿನಹಳ್ಳಿ ಕರಿಯಮ್ಮ, ಕೆರೆ ಓಬೇರಹಳ್ಳಿ ಮಾರಮ್ಮ ಮೊದಲಾದ ಸ್ತ್ರೀ ದೇವತೆಗಳ ಹಾಡುಗಳನ್ನು ಹೆಂಗಸರು ಹಾಡುವುದೇ ಹೆಚ್ಚು. ಜುಂಜಪ್ಪನ ಹೆಸರಿನ ಮೇಲೆ ಊರಾಡಲು ಹೋಗುವವರು ಕಾಣಿಕೆಯನ್ನು ಸಂಗ್ರಹಿಸಿಕೊಂಡು ಬರುತ್ತಾರೆ. ಇವರಿಗೆ ‘ಕಾಣಿಕೆಯವರು’ ಎಂದು ಕರೆಯುತ್ತಾರೆ. ಗಣೆಯನ್ನು ಕಾಡುಗೊಲ್ಲರ ಎಲ್ಲಾ ದೇವಾಲಯಗಳಲ್ಲಿಟ್ಟು ಅದನ್ನು ದೈವವೆಂದು ಪೂಜಿಸುತ್ತಾರೆ.

ಮಲೆಯಮಾದೇಶ್ವರನಿಗೆ ಗುಡ್ಡರಿದ್ದಂತೆ, ಮೈಲಾರಪ್ಪನಿಗೆ ಗೊರವಯ್ಯಗಳಿದ್ದಂತೆ, ಜುಂಜಪ್ಪನಿಗೆ ಗಣೆಯವರು. “ಕಾಡುಗೊಲ್ಲರಲ್ಲಿ ಕೆಲವರು ಜುಂಜಪ್ಪನ ದೀಕ್ಷೆಯನ್ನು ಪಡೆದು ಅವನ ಗಣೆಯನ್ನು ಹೊತ್ತು ಊರ ಮೇಲೆ ಅವನ ಮಹಿಮೆಯನ್ನು ಪ್ರಸಾರ ಮಾಡುತ್ತಾರೆ. ಗಣೆಯವರು ಅಥವಾ ಕಾಣಿಕೆಯವರ ಬಳಿ ಶಂಖ ಜಾಗಟೆಗಳು ಹಾಗೂ ನಾಗಬೆತ್ತ ಇರುತ್ತದೆ. ಗೊಂಡೇವುಗಳಿಂದ, ಲೋಹದ ನಾಗರ ಹೆಡೆಯಿಂದ, ನವಿಲುಗರಿಗಳಿಂದ ಅಲಂಕರಿಸಿದ ದೊಡ್ಡ ಬಿದಿರ ಕೋಲೇ ಗಣೆ. ಇದರ ತುದಿಯಲ್ಲೊಂದು ಗಂಟೆ. ಗಣೆಯವನ ಕೊರಳಲ್ಲಿ ಒಂಟಿ ರುದ್ರಾಕ್ಷಿ ಹಣೆಯಲ್ಲಿ ನಾಮ, ಊರೂರ ಮೇಲೆ ಇವನು ಹೋಗುತ್ತಾನೆ. ಹಾವು, ಚೇಳು, ತಮ್ಮ ಮಕ್ಕಳು ಮರಿಗಳಿಗೆ ಕಾಣಿಸಿಕೊಳ್ಳದಂತೆ ಜನ ಹರಕೆ ಕಟ್ಟಿಕೊಂಡು ಎಣ್ಣೆಯ ಗಡಿಗೆಗೆ ಕಾಸನ್ನು ಹಾಕಿರುತ್ತಾರೆ. ಗಣೆಯವನು ಬೀದಿಯಲ್ಲಿ ‘ಜುಂಜಪ್ಪನ ಕಾಣಿಕೇ..’ ಎಂದು ಬಂದಾಗ ಸಾರುತ್ತಾನೆ. ಆ ಕಾಸನ್ನು ಆಗ ಅರ್ಪಿಸುತ್ತಾರೆ. ಅದು ಹಾಗಲವಾಡಿಯ ಜುಂಜಪ್ಪನ ಪಾದಕ್ಕೆ ಸಲ್ಲಲೆಂದು ಎಲ್ಲ ಜನಾಂಗದವರೂ ಈ ಕಾಣಿಕೆಯನ್ನು ಅರ್ಪಿಸುತ್ತಾರೆ.”[೮೩]

ಗಣೆ ಊದಿ ಶಾಸ್ತ್ರ ಹೇಳುವ ಸಂಪ್ರದಾಯ ಕಾಡುಗೊಲ್ಲರಲ್ಲಿ ಮಾತ್ರ ಪ್ರಚಲಿತವಾಗಿದೆ. ಇದಕ್ಕೆ ಪ್ರಸಿದ್ಧವಾದ ಕೇಂದ್ರ ಹಿರಿಯೂರು ತಾಲ್ಲೂಕಿನ ಇಕ್ಕನೂರು. ದೇವತೆಗಳ ಪುರಾಣಗಳನ್ನು ಹಾಡುಗಳ ರೂಪದಲ್ಲಿ ಗಣೆ ಎಂಬ ಬಿದಿರಿನ ಕೊಳಲಿನ ನಾದದ ಹಿನ್ನೆಲೆಯಲ್ಲಿ ಹಾಡುತ್ತಾರೆ.

“ಗಣೆ ಗೊಲ್ಲರಿಗೆ ಬಹು ಉಪಯೋಗಿಯಾಗಿ ಕಂಡು ಬರುತ್ತದೆ. ಊರಿ ನಡೆಯಲು ಊರುಗೋಲು, ನುಡಿಸಲು ಗಣೆ, ದನಕುರಿ ಹೊಡೆಯಲು ಕೋಲು ಹಾಗೂ ಬೀಸುವ ದೊಣ್ಣೆಯಾಗಿ ಬುತ್ತಿ ಗೊಡೆಕಟ್ಟಿ ಹೆಗಲ ಮೇಲೆ ಇರಿಸಿ ಹೊರುವ ಸಾಧನವಾಗಿ ಉಪಯೋಗಗೊಳ್ಳುತ್ತದೆ. ಇದೇ ಜಾನಪದ ಜಾಯಮಾನ ಹಾಗೂ ಅದರ ಬಹುಮುಖತೆ.”[೮೪] ಗಣೆ ವಾದ್ಯಕ್ಕೆ ಕಾರಣವಾದ ‘ಬಿದಿರಮ್ಮ’ನನ್ನು ಕುರಿತು ಗುಣಗಾನ ಮಾಡುತ್ತಾರೆ. ಗಣೆಗೆ ಕಾರಣವಾದ ಬಿದಿರನ್ನೂ ನಮ್ಮ ಜನಪದರು ದೈವವೆಂದು ಭಾವಿಸುತ್ತಾರೆ. ಜುಂಜಪ್ಪನ ಕತೆ ಹಾಡುವ ಗಣೆಯವರನ್ನು ಧಾರ್ಮಿಕ ಕಥೋಪಜೀವಿಗಳೆಂದು ಡಾ.ಜೀ.ಶಂ.ಪರಮಶಿವಯ್ಯನವರು ಗುರುತಿಸುತ್ತಾರೆ.

ಕಾಡುಗೊಲ್ಲರ ಆರಾಧ್ಯ ದೈವವಾದ 'ಜುಂಜಪ್ಪ'ನ ಬಗ್ಗೆ ಹಲವು ವಿದ್ವಾಂಸರು ಅಧ್ಯಯನ ನಡೆಸಿದ್ದಾರೆ.

ಇ.ಥರ್ಸ್‌ಟನ್, ಎಲ್.ಕೆ.ಅನಂತಕೃಷ್ಣ ಅಯ್ಯರ್ ಮತ್ತು ಹೆಚ್.ವಿ.ನಂಜುಂಡಯ್ಯ ಅವರ ನಾಲ್ಕು ಸಂಪುಟಗಳ "The Mysore Tribes and Castes' ಎಂಬ ಕೃತಿ ಮಾನವ ವಿಜ್ಞಾನ ಕ್ಷೇತ್ರದ ಆಧಾರ ಗ್ರಂಥವಾಗಿದೆ. ದಿವಂಗತ ಎ.ಎ.ಡಿ.ಲೂಯಿಜ್ ಅವರ Tribes of Mysore ಕೃತಿಯಲ್ಲಿ ಹಳೆ ಮೈಸೂರಿನ ಇಪ್ಪತ್ತೇಳು ಬುಡಕಟ್ಟುಗಳ ವಿವರಗಳಲ್ಲಿ 'ಕಾಡುಗೊಲ್ಲರು' ಒಂದು ಬುಡಕಟ್ಟು ಎಂದು ಗುರುತಿಸಿದ್ದಾರೆ. ಎಫ್.ಬುಕ್ಯಾನನ್ ಎಂಬುವರು ಕಳೆದ ಶತಮಾನದ ಕೊನೆಯಲ್ಲಿ, ಕಾಡುಗೊಲ್ಲರ ಜೀವನದ ವಿವರಗಳನ್ನು ಕೊಟ್ಟಿದ್ದಾರೆ. ಅವರು ಕೊಡುವ ವಿವರಗಳಿಗೂ ಜುಂಜಪ್ಪನ ಕಾವ್ಯದಲ್ಲಿರುವ ಜನಜೀವನದ ವಿವರಗಳಿಗೂ ಅನೇಕ ಸಾಮ್ಯಗಳಿವೆ.

ದಿವಂಗತ ಡಾ.ಜೀ.ಶಂ.ಪರಮಶಿವಯ್ಯನವರು ೧೯೭೩ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪ್ರಸ್ತುತ ಪಡಿಸಿದ ತಮ್ಮ 'ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು' ಎಂಬ ಮಹಾಪ್ರಬಂಧ ಕನ್ನಡ ಜಾನಪದ ಕ್ಷೇತ್ರದ ಅತ್ಯಂತ ಮಹತ್ವದ ಕೃತಿಯಾಗಿದೆ. ಇದು ಜಾನಪದಕ್ಕೆ ಸಂಬಂಧಿಸಿದ ಮೈಸೂರು ವಿಶ್ವವಿದ್ಯಾನಿಲಯದ ಮೊದಲನೆಯ ಪಿಎಚ್.ಡಿ ಮಹಾಪ್ರಬಂಧದಲ್ಲಿ ಒಟ್ಟು ೧೪ ಭಾಗಗಳಿದ್ದು, ಏಳನೆಯ ಭಾಗದಲ್ಲಿ ಕಾಡು ಗೊಲ್ಲರ ಜುಂಜಪ್ಪನ ಸಂಪ್ರದಾಯವನ್ನು ಅತ್ಯಂತ ಜಾಗರೂಕತೆಯಿಂದ ಪರಿಶೀಲಿಸಿ, ಈ ಸಂಪ್ರದಾಯವನ್ನು ಅಭ್ಯಸಿಸುವವರಿಗೆ ಭದ್ರಬುನಾದಿ ಹಾಕಿಕೊಟ್ಟಿದ್ದಾರೆ.

ಜಾನಪದ ವಿಜ್ಞಾನದ ದೃಷ್ಟಿಯಿಂದ ಕಾಡುಗೊಲ್ಲ ಬುಡಕಟ್ಟನ್ನು ಅಧ್ಯಯನ ಮಾಡಿದ ಡಾ.ತೀ.ನಂ. ಶಂಕರನಾರಾಯಣ ಅವರು ೧೯೭೮ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ "ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು" ಎಂಬ ವಿಷಯದ ಬಗ್ಗೆ ಮಹಾಪ್ರಬಂಧವನ್ನು ಪ್ರಸ್ತುತ ಪಡಿಸಿದರು. ಇದೇ ಕನ್ನಡದಲ್ಲಿ ಪ್ರಕಟವಾಗಿರುವ ಮೊಟ್ಟ ಮೊದಲ ಬುಡಕಟ್ಟು ಅಧ್ಯಯನವಾಗಿದ್ದು ಈ ಸಂಬಂಧಿ ಅಧ್ಯಯನಗಳಿಗೆ ಮಾದರಿಯಾಗಿದೆ. ಅದು ಎಂಟು ಅಧ್ಯಾಯಗಳನ್ನು ಒಳಗೊಂಡಿದೆ. ಇವರ ಮಹಾಪ್ರಬಂಧದಲ್ಲಿನ ಅಂಶ ಗಳೆಂದರೆ, ಕಾಡುಗೊಲ್ಲರ ಐತಿಹ್ಯಗಳು, ಪುರಾಣಗಳು, ಸಂಪ್ರದಾಯಗಳು, ಸಾಹಿತ್ಯ, ಕಲೆ ಅವರ ಜನಪದ ವೈದ್ಯ ಹಾಗೂ ಸಾಮಾಜಿಕ ಅಂಶಗಳು. ಇವೆಲ್ಲವುಗಳ ಬಗ್ಗೆ ವೈಜ್ಞಾನಿಕ ರೀತಿಯಲ್ಲಿ ಅಪಾರವಾದ ವಿಷಯವನ್ನು ಸಂಗ್ರಹಿಸಿ ಸುದೀರ್ಘ ಚರ್ಚೆಗೆ ಒಳಪಡಿಸಿ, ವಿಮರ್ಶಾತ್ಮಕವಾಗಿ ಪರಿಶೀಲಿಸಿ, ಈ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಇದು ಕರ್ನಾಟಕದ ಕಾಡುಗೊಲ್ಲ ಜನಾಂಗದ ಮೇಲೆ ವಿಶೇಷ ಬೆಳಕನ್ನು ಚೆಲ್ಲುತ್ತದೆ. ಇವರ ಉತ್ತರ ಸಂಪ್ರದಾಯದ ಪಾಠವನ್ನು ಅಧಿಕೃತ ಪಾಠವೆಂದು Institute of Asian studies, Thiruvanniyur ರವರು ಪರಿಗಣಿಸಿದ್ದಾರೆ. ಕಾಡುಗೊಲ್ಲರ ಸಾಂಸ್ಕೃತಿಕ ಮೌಲ್ಯಗಳ ಬಗ್ಗೆ ಹಲವಾರು ವಿದ್ವತ್ ಪೂರ್ಣ ಬಿಡಿ ಲೇಖನಗಳು ಪ್ರಕಟಗೊಂಡಿವೆ.

೧೯೯೫ ರಲ್ಲಿ ಕನ್ನಡ ವಿಶ್ವವಿದ್ಯಾಲಯದ ವತಿಯಿಂದ 'ಜುಂಜಪ್ಪ' ಮಹಾಕಾವ್ಯವನ್ನು ಶ್ರೀ ದಾಸಪ್ಪ ಮತ್ತವರ ಸಂಗಡಿಗರಿಂದ ಚಲುವರಾಜುರವರು ಸಂಗ್ರಹಿಸಿ, ಸಂಪಾದಿಸಿಕೊಂಡಿದ್ದಾರೆ. ೧೯೯೭ ರಲ್ಲಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದೆ. ಈ ಪಠ್ಯ ೨೩,೬೦೦ ಸಾಲುಗಳಷ್ಟು ದೀರ್ಘವಾಗಿದೆ. ಗದ್ಯ-ಪದ್ಯ ಮಿಶ್ರಿತ

ಚಂಪೂ ಶೈಲಿಯಲ್ಲಿರುವ ಈ ಕಾವ್ಯದಲ್ಲಿ, ಹದಿಮೂರು ಸಂದುಗಳು ಇದ್ದು, ಸುದೀರ್ಘ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗಿ ಮಂಗಳಾರತಿಯಿಂದ ಮುಕ್ತಾಯವಾಗುತ್ತದೆ. ಸಿತ್ತಯ್ಯ ಕಾಟುಮುಲಿಂಗರ ಹುಟ್ಟಿನ ಸಂದಿನಿಂದ, ಜುಂಜಪ್ಪ ತನ್ನ ಸೋದರ ಮಾವಂದಿರನ್ನು ಕೊಂದ ಸಂದಿನವರೆಗೆ, ಸವಿಸ್ತಾರವಾಗಿ, ಮೌಲ್ಯಯುತ ವಸ್ತು ವಿಷಯ ಘಟನೆಗಳೊಂದಿಗೆ ಕಾವ್ಯ ಬೆಳೆದಿದೆ. ಸುಮಾರು ಏಳು ತಲೆಮಾರುಗಳಷ್ಟು ಹಳೆಯದಾದ ಗೊಲ್ಲರ ಸಮಗ್ರ ಸಂಸ್ಕೃತಿ ಅಂಶಗಳನ್ನು ಅರಗಿಸಿಕೊಂಡಿರುವ ಈ ಮಹಾಕಾವ್ಯ ನೋವು-ನಲಿವುಗಳೆರಡನ್ನು ಬಿಂಬಿಸುವ ಕಾಡಿನ ಮಕ್ಕಳ ಹಾಡಿನ ಜೀವದನಿ.

ಡಾ.ಕಾಳೇಗೌಡ ನಾಗವಾರರ 'ಕಾಡುಗೊಲ್ಲರು-ಒಂದು ಹಟ್ಟಿಯ ಅಧ್ಯಯನ ಮಹಾಪ್ರಬಂಧ' (ಅಪ್ರಕಟಿತ) ಹಾಗೂ ಡಾ.ಮೀರಾಸಾಬಿಹಳ್ಳಿ ಶಿವಣ್ಣರವರ 'ಕಾಡುಗೊಲ್ಲರ ಇಬ್ಬರು (ಎತ್ತಪ್ಪ-ಜುಂಜಪ್ಪ) ಸಾಂಸ್ಕೃತಿಕ ವೀರರು'- ಒಂದು ಅಧ್ಯಯನ ಎಂಬ ಮಹಾಪ್ರಬಂಧ (ಅಪ್ರಕಟಿತ) ಕಾಡುಗೊಲ್ಲರ ಸಾಂಸ್ಕೃತಿಕ ಲೋಕವನ್ನು ಕನ್ನಡಿಗರಿಗೆ ಪರಿಚಯಿಸುವ ಮಹಾಪ್ರಂಬಂಧಗಳಾಗಿದ್ದು, ಈ ಸಂಪ್ರದಾಯಗಳ ಅಧ್ಯಯನಕ್ಕೆ ಆಕರ ಗ್ರಂಥ ಗಳೆನ್ನಬಹುದು.

'ಸಿದ್ದಲಿಂಗಯ್ಯ ಕಂಬಾಳು'ರವರು ದಕ್ಷಿಣ ಸಂಪ್ರದಾಯದ ಗಣೆಕತೆಯನ್ನು 'ಮಾತಾಡು ಮಲ್ಲಿಗೆ' ಸಂಪ್ರದಾಯದಲ್ಲಿ ೧೯೭೩ರ ಹಿಂದೆಯೇ ಪ್ರಕಟಿಸಿದ್ದರೂ ಅದು ಆಸಕ್ತರ ಗಮನ ಸೆಳೆಯಲಿಲ್ಲ ಎನ್ನುತ್ತಾರೆ ಡಾ.ಮೀರಸಾಬಿಹಳ್ಳಿ ಶಿವಣ್ಣನವರು. ವಯಸ್ಕರ ಶಿಕ್ಷಣಕ್ಕಾಗಿ ದಕ್ಷಿಣ ಸಂಪ್ರದಾಯದ ಪಾಠವನ್ನು ಆಧರಿಸಿ 'ಜುಂಜಪ್ಪ' ಎಂಬ ಹೆಸರಿನ ಕಿರು ಹೊತ್ತಿಗೆಯೊಂದನ್ನು ಡಾ.ಕಾಳೇಗೌಡ ನಾಗವಾರರವರಿಂದ ಸಿದ್ಧಪಡಿಸಿ ೧೯೯೦ರಲ್ಲಿ ರಾಜ್ಯಸಂಪನ್ಮೂಲ ಕೇಂದ್ರ, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಪ್ರಕಟಿಸಿದೆ.

೧೯೯೯ರಲ್ಲಿ ಸಿ.ವಿ.ಜಿ. ಪಬ್ಲಿಕೇಷನ್ಸ್‌ರವರು ಡಾ. ಮೀರಾಸಾಬಿಹಳ್ಳಿ ಶಿವಣ್ಣನವರ, ಚಿತ್ರದುರ್ಗ ಸೀಮೆಯ ಬುಡಕಟ್ಟು ಜನಾಂಗ ಕುರಿತ ಜಾನಪದೀಯ ಲೇಖನಗಳ ಬಗೆಗಿನ ಕೃತಿಯಾದ 'ಗೊಲ್ಲಕಡಗ'ದಲ್ಲಿರುವ ಲೇಖನಗಳು ಕಾಡುಗೊಲ್ಲ ಜನಾಂಗವನ್ನು ಒಳಗೊಂಡು, ಮ್ಯಾಸಬೇಡ, ಉಪ್ಪಾರ ಮೊದಲಾದ ಜನಾಂಗದವರ ಸಾಂಸ್ಕೃತಿಕ ವಿವರಗಳನ್ನು ದಾಖಲಿಸುತ್ತವೆ.

ಡಾ.ಎಂ.ಬಿ.ನೇಗಿನಹಾಳರವರ 'ನೇಗಿನಹಾಳ ಪ್ರಬಂಧಗಳು' ಎಂಬ ಸಂಶೋಧನ ಲೇಖನಗಳ ಸಂಗ್ರಹವನ್ನು ೧೯೯೯ರಲ್ಲಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದ್ದು, ಈ ಪ್ರಬಂಧಗಳ ಸಂಗ್ರಹದಲ್ಲಿ 'ಜಾನಪದ ದೇವರು ಜುಂಜಪ್ಪ'ನ ಬಗ್ಗೆ ದಕ್ಷಿಣ ಮತ್ತು ಉತ್ತರದ ಸಂಪ್ರದಾಯಗಳ ಬಗೆಗೆ ಕೆಲವು ವಿವರಗಳಿವೆ.

ತ್ರಿಪದಿರೂಪದ ಕಥನ ಕಾವ್ಯವಾದ ಹೆಂಗಸರ ಹಾಡ್ಗತೆಗಳನ್ನು ೧೯೭೨ ರಲ್ಲಿ ಕ.ರಾ.ಕೃ. 'ಹಾಗಲವಾಡಿ ಚಿನ್ನಮ್ಮ' ಎಂದು ಪ್ರಕಟಿಸಿದ್ದಾರೆ. ೧೯೭೮ರಲ್ಲಿ ಡಾ.ಅಂಬಳಿಕೆ ಹಿರಿಯಣ್ಣ, ೧೯೮೭ರಲ್ಲಿ ಡಾ.ಕೃಷ್ಣಮೂರ್ತಿ ಹನೂರು ಅವರು ಜುಂಜಪ್ಪನ ಕತೆಯನ್ನು ಪ್ರಕಟಿಸಿದ್ದಾರೆ. ೧೯೭೬ರಲ್ಲಿ ಬಿ.ಸಿದ್ಧಗಂಗಯ್ಯ ಕಂಬಾಳು ಅವರು 'ಜುಂಜಪ್ಪನ ಕಾವ್ಯ'ವನ್ನು ಸಂಗ್ರಹಿಸಿ, ನಿರೂಪಣೆ ಮಾಡಿರುವುದನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿದೆ.

ತೀ.ನಂ ಶಂಕರನಾರಾಯಣರವರ 'ಕಾಡುಗೊಲ್ಲರು' (೧೯೮೭) ಎಂಬ ಸಣ್ಣ ಹೊತ್ತಿಗೆಯನ್ನು ಐ.ಬಿ.ಎಚ್. ಪ್ರಕಾಶನದವರು ಪ್ರಕಟಿಸಿದ್ದು ಇದರಲ್ಲಿ ಕಾಡುಗೊಲ್ಲರ ಸಂಪ್ರದಾಯ, ಆಚರಣೆ, ನಂಬಿಕೆಗಳ ಬಗ್ಗೆ ವಿವರಣೆಗಳಿವೆ.

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯು ೧೯೯೮ರಲ್ಲಿ ಪ್ರಕಟಿಸಿದ 'ಕರ್ನಾಟಕ ಬುಡಕಟ್ಟುಗಳು ಸಂಪುಟ ೧'ರಲ್ಲಿ ಕೃಷ್ಣಮೂರ್ತಿ ಹನೂರು ಅವರ 'ಕಾಡುಗೊಲ್ಲರು' ಎಂಬ ವಿದ್ವತ್‌ಪೂರ್ಣ ಲೇಖನ ಪ್ರಕಟಗೊಂಡಿದೆ. ಅವರ 'ಜನಪದ ಮತ್ತು ಬುಡಕಟ್ಟು ಗೀತೆಗಳು' ಎಂಬ ಪುಸ್ತಕವನ್ನು ೧೯೯೮ ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಕಟಿಸಿದೆ. ಅದರಲ್ಲಿ ಅವರು ಸುದೀರ್ಘವಾಗಿ ಕಾಡುಗೊಲ್ಲರ ಗೀತೆಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಮೇಲಿನ ಕೃತಿಗಳಲ್ಲಿನ  ಪಾಠಗಳು ವಿಭಿನ್ನ ಪಾಠಗಳಾಗಿವೆ. ಕಾವ್ಯದ ಉದ್ದೇಶ ಒಂದೇ ಆದರೂ ಕಲಾವಿದರಿಂದ ಕಲಾವಿದರಿಗೆ ಪಠ್ಯಗಳು ವ್ಯತ್ಯಾಸ ಹೊಂದುವುದು ಮೌಖಿಕ ಕಾವ್ಯಗಳಲ್ಲಿ ಸಾಮಾನ್ಯ ಸಂಗತಿ.

'ಜುಂಜಪ್ಪ ಕಾವ್ಯ'ದ ಬಗ್ಗೆ ಡಾ.ಮೀರಾಸಾಬಿಹಳ್ಳಿ ಶಿವಣ್ಣನವರ ಲೇಖನವನ್ನು ಡಾ.ತೀ.ನಂ. ಶಂಕರ ನಾರಾಯಣ ರ ಸಂಪಾದಕತ್ವದಲ್ಲಿ 'ಕರ್ನಾಟಕ ಜನಪದ ಮಹಾಕಾವ್ಯ'ಗಳು (೧೯೯೮) ಎಂಬ ಗ್ರಂಥದಲ್ಲಿ ಪ್ರಕಟಿಸಲಾಗಿದ್ದು, ಈ ಪ್ರಕಟಣೆಯನ್ನು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಕಟಿಸಿದೆ.

'ಅರಿವು' ವಿಸ್ತರಣೋಪನ್ಯಾಸ ಮಾಲಿಕೆ-೬ ರಲ್ಲಿ ಡಾ.ಸಣ್ಣರಾಮರವರ 'ಬುಡಕಟ್ಟು ಸಂಸ್ಕೃತಿ' ಗ್ರಂಥವನ್ನು ೨೦೦೧ರಲ್ಲಿ ಕುವೆಂಪು ವಿಶ್ವವಿದ್ಯಾಲಯ ಪ್ರಕಟಿಸಿದೆ. ಬುಡಕಟ್ಟು ಜನಾಂಗ ಮತ್ತು ಕಾಡುಗೊಲ್ಲರ ಆಚರಣೆಗಳ ಬಗ್ಗೆ ಲೇಖನ ಒಳಗೊಂಡಿದೆ.

'ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ'ಯವರ 'ಗಂಧರ್ವ ಲೋಕದ ಗೆಣೆಕಾರರು' ಎಂಬ ಪುಸ್ತಕದಲ್ಲಿ ಜುಂಜಪ್ಪನ ಬಗ್ಗೆ ಜಿ.ವಿ.ಆನಂದಮೂರ್ತಿಯವರ 'ಮಹಾಕಾವ್ಯದ ಪ್ರತಿಭೆ' ಹಾಗೂ ಡಾ.ಮೀರಾಸಾಬಿಹಳ್ಳಿ ಶಿವಣ್ಣನವರ 'ಜುಂಜಪ್ಪನ ಪದಗಳ ಗಿಡ್ಡಜ್ಜ' ಎಂಬ ಎರಡು ಲೇಖನಗಳಿವೆ.

ಪ್ರಜಾವಾಣಿಯ ದಿನಾಂಕ ೩-೨-೨೦೦೩ರ ಸಾಪ್ತಾಹಿಕ ಪುರವಣಿಯಲ್ಲಿ 'ಹೊಸ ಮುಡಿಯ ಮೇಲೆ ಚದುರಂಗ' ಎಂಬ, ಡಾ.ಸಿ.ಎನ್.ರಾಮಚಂದ್ರನ್‌ರವರ ಲೇಖನ 'ಅಂತರ್ ಪಠ್ಯತೆಯ ನೆಲೆಯ ದರ್ಶನದಲ್ಲಿ ಜುಂಜಪ್ಪ' ಪ್ರಕಟಗೊಂಡಿದ್ದು ಇದು ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ 'ಜುಂಜಪ್ಪ ಕಾವ್ಯ'ದ ಬಗೆಗಿನ ವಿಮರ್ಶಾತ್ಮಕ ಲೇಖನವಾಗಿದೆ.

ಇನ್ನು ಹಲವಾರು ಲೇಖನಗಳು "ಕಾಡುಗೊಲ್ಲರ ಜುಂಜಪ್ಪನ" ಬಗ್ಗೆ ಪ್ರಕಟಗೊಂಡಿವೆ.

ಕಾಡುಗೊಲ್ಲರ ಜೀವನದಲ್ಲಿ ಹಾಸುಹೊಕ್ಕಾಗಿರುವ ಜುಂಜಪ್ಪ ದೇವತೆಯ ಮಹಾಕಾವ್ಯ ಕಂಠಸ್ಥ ಸಂಪ್ರದಾಯದಲ್ಲಿಯೇ ಉಳಿದಿದೆ. ಮೂರು ತಲೆಮಾರುಗಳ ಕಥೆಯನ್ನು ಒಳಗೊಂಡಿರುವ ಸುದೀರ್ಘವಾದ ಈ ಮಹಾಕಾವ್ಯ ಕನ್ನಡದ ಅತ್ಯಂತ ವೈಶಿಷ್ಟ್ಯಪೂರ್ಣವಾದ ಜನಪದ ಮಹಾಕಾವ್ಯಗಳಲ್ಲೊಂದು.

ಸಮಗ್ರ ಗೊಲ್ಲ ಜನಾಂಗದ ದಟ್ಟ ಸಾಂಸ್ಕೃತಿಕ ಚರಿತ್ರೆ ಈ ಕಾವ್ಯದಲ್ಲಿ ಲಭ್ಯವಾಗುತ್ತದೆ. ದಕ್ಷಿಣ ಕರ್ನಾಟಕದ ಜನ-ಮನದಲ್ಲಿ ಮಲೆಮಹದೇಶ್ವರನಿಗೆ ಇರುವ ಸ್ಥಾನ, ಉತ್ತರ ಕರ್ನಾಟಕದಲ್ಲಿ ಮೈಲಾರಲಿಂಗನಿಗೆ ಇರುವ ಸ್ಥಾನವನ್ನು ಮಧ್ಯ ಕರ್ನಾಟಕದಲ್ಲಿ ಜುಂಜಪ್ಪ ಪಡೆದಿದ್ದಾನೆ. ಜುಂಜಪ್ಪನ ಕಾವ್ಯ ಮಂಟೇಸ್ವಾಮಿ ಕಾವ್ಯಕ್ಕಿಂತ ಅಚ್ಚು ಕಟ್ಟಾದ ಸುಸಂಬದ್ಧ ಕಾವ್ಯ. ಇದರಲ್ಲಿ ಕಲಿವೀರ ಜುಂಜಪ್ಪನೇ ಪ್ರಕಾಶಮಾನ ವಾಗಿ ಬೆಳಗುತ್ತಾನೆ.

ಹೆಚ್ಚು ಮಾನವೀಯ ಸಂವೇದನೆಗಳಿಂದ ಕೂಡಿದ ಈ ಕಾವ್ಯದಲ್ಲಿ ಜುಂಜಪ್ಪ ಕೊನೆಯ ಘಟ್ಟದವರೆಗೆ ತನ್ನ ಸೋದರಮಾವಂದಿರ ಜೊತೆಯಲ್ಲಿ ಹೋರಾಟವನ್ನು ನಡೆಸುತ್ತಲೇ ಸಾಗುತ್ತಾನೆ. ಕೊನೆಯಲ್ಲಿ ಅವರ ವಿಷ ಜಾಲಕ್ಕೆ ಬಲಿಯಾಗಿ ಅಸು ನೀಗಿ, ಕೊನೆಗೆ ಸತ್ತ ಏಳು ದಿನಕ್ಕೆ ಮತ್ತೆ ಎದ್ದು ಸೋದರ ಮಾವಂದಿರನ್ನು ನಾಶ ಮಾಡುತ್ತಾನೆ.

ಈ ಕಥಾವೃತ್ತಾಂತವನ್ನು ಹೀಗೆ ಸಂಗ್ರಹಿಸಬಹುದು. (ಕನ್ನಡ ವಿ.ವಿ)

ಕೊಂಕಿ ಜರಮಲೆ ಸೀಮೆಯ ಚಿಕ್ಕದ್ಯಾವರ ಹಟ್ಟಿಯಲ್ಲಿ ಏಳು ಜನ ಅಣ್ಣತಮ್ಮಂದಿರಿಗೆ, 'ಬಡಚಿತ್ತಮ್ಮ' ಒಬ್ಬಳೇ ತಂಗಿ. ಕೊನೆಯವನಾದ ದೇವರ ದಯಮಾರನನ್ನು ಬಿಟ್ಟು ಎಲ್ಲರಿಗೂ ಮದುವೆಯಾಗಿದ್ದು, ಮಕ್ಕಳಾಗಿ ರುವುದಿಲ್ಲ. ಏಳು ಕರುಗಳನ್ನು ಮೇಯಿಸಲು ಹೋಗಿದ್ದ ದೇವರ ದಯಮಾರನನ್ನು ಕರೆತಂದು, ಕಂಬಕ್ಕ ಎಂಬ ಹೆಣ್ಣು ಮಗಳೊಂದಿಗೆ ಮದುವೆ ಮಾಡುತ್ತಾರೆ. ಆದರೆ ದನಗಳ ಮೇಲಿನ ಗೀಳು ಹೆಚ್ಚಾಗಿ, ದನಗಳ ಜೊತೆಗೆ ಕಾಡಿನಲ್ಲಿಯೇ ಇರುತ್ತಾನೆ. ಓರಗಿತ್ತಿಯರ ಕಿರುಕುಳ ತಾಳಲಾರದೆ ದೇವರದಯಮಾರನನ್ನು ಸೇರಿದ ಕಂಬಕ್ಕ ಒಂದು ಗಂಡು ಮಗುವಿಗೆ ಜನ್ಮಕೊಟ್ಟು, ಗಂಡ ಹೆಂಡತಿಯರು ಹಸಿವಿನಿಂದ ತೀರಿಕೊಳ್ಳುತ್ತಾರೆ. ಶಿವಪಾರ್ವತಿಯರು ಆ ಮಗುವನ್ನು ರಕ್ಷಿಸಿದರು. ಕೊನೆಗೆ ಮಗುವನ್ನು ಬಡಚಿತ್ತಮ್ಮ ರಕ್ಷಿಸಿ ಬೆಳೆಸಿ, ಮಗುವಿಗೆ ಕೆಂಗುರಿ ಮಲ್ಲಪ್ಪ ಎಂದು ಹೆಸರಿಟ್ಟರು. ದೊಡ್ಡಮ್ಮಂದಿರಿಗೆ ಮಕ್ಕಳಾದ ಮೇಲೆ, ಕೆಂಗುರಿ ಮಲ್ಲಪ್ಪನಿಗೆ ಕಾಟ ಕೊಡಲು ಪ್ರಾರಂಭಿಸಿದರು. ಕಾಟ ತಾಳಲಾರದೆ ಕೆಂಗುರಿ ಮಲ್ಲಪ್ಪ, ಹೊನ್ನಟ್ಟಿ ಆಲೇಗೌಡನ ಬಳಿಗೆ ಬಂದು, ಅವನ ನೆರವಿನಿಂದ ಅಭಿವೃದ್ಧಿ ಹೊಂದುತ್ತಾನೆ. ಏಳುಗೂಡಿನ ದನಗಳ ಜೊತೆಯೆ ಇರುತ್ತಾನೆ. ಅವುಗಳ ದೊಡ್ಡಿಯಲ್ಲಿಯೇ ಮಲಗುತ್ತಾನೆ. ಆಲೇಗೌಡನ ಐಶ್ವರ್ಯ ದಿನ ದಿನಕ್ಕೂ ಹೆಚ್ಚಾಗುತ್ತದೆ. ಕಂಬೇರ ಹಟ್ಟಿಯ ಏಳು ಜನ ಅಣ್ಣಂದಿರ ಒಬ್ಬಳೇ ತಂಗಿ ಚಿನ್ನಮ್ಮನನ್ನು ತಂದು ಕೆಂಗುರಿ ಮಲ್ಲಪ್ಪನೊಡನೆ ಮದುವೆ ಮಾಡುತ್ತಾರೆ. ಇವನು ಒಂದು ದಿನವೂ ಅವಳ ಜೊತೆ ಸಂಸಾರ ಮಾಡದೆ, ಏಳುಗೂಡಿನ ದನಗಳ ಜೊತೆ ಹೊರಟು ಹೋಗುತ್ತಾನೆ. ಬಂಜೆ ಎಂಬ ಹೀಯಾಳಿಕೆಗೆ ಗುರಿಯಾದ ಸಿನ್ನಮ್ಮ, ತನ್ನ ವಂಶದ ಮನೆದೇವರಾದ ಗೌರಸಂದ್ರದ ಮಾರಮ್ಮನನ್ನು ಪ್ರಾರ್ಥಿಸಿದಳು. ಗೌರಸಂದ್ರದ ಮಾರಮ್ಮ ಈಶ್ವರನನ್ನು ಪ್ರಾರ್ಥಿಸಿದಳು. ಈಶ್ವರ ಮುಂದೆ ಸಿನ್ನಮ್ಮ ಪಡಬಹುದಾದ ಕಷ್ಟವನ್ನು ತಿಳಿಸಿದ. ಆದರೂ ಮಕ್ಕಳ ಫಲಬೇಕೆಂದು ಸಿನ್ನಮ್ಮ ಹಠ ಹಿಡಿದಾಗ ಈಶ್ವರ, ಮಗ ವೀರಭದ್ರನು ಸಿನ್ನಮ್ಮನ ನಡುಬೆನ್ನಿನಲ್ಲಿ ಹುಟ್ಟಿ ಜುಂಜಪ್ಪ ಎಂಬ ಹೆಸರಿನಿಂದ ಭೂಲೋಕದಲ್ಲಿ ಹದಿನಾರು ವರ್ಷ ಮಹಾಮಹಿಮನಾಗಿ ಬಾಳಿ, ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸುವಂತೆ ಹೇಳಿ ಕಳುಹಿಸಿದನು. ಈ ವೀರಭದ್ರನೇ ಕಾಡುಗೊಲ್ಲರ ಆರಾಧ್ಯ ದೈವವಾದ ಜುಂಜಪ್ಪ. ಜುಂಜಪ್ಪ, ಮಾರಣ್ಣ, ಮೈಲಣ್ಣ ಮತ್ತು ತಂಗಿ ಮಾರಕ್ಕ ಎಂಬ ನಾಲ್ಕು ಜನ ಮಕ್ಕಳಾದರು ಸಿನ್ನಮ್ಮನಿಗೆ. ಮೂರು ಗಂಡು ಮಕ್ಕಳ ನಂತರ ಒಂದು ಹೆಣ್ಣು ಮಗು ಹುಟ್ಟಿದರೆ ಕಷ್ಟ ಬರುತ್ತದೆ ಎಂಬಂತೆಯೇ ಮಾರಿ ಹಬ್ಬದ ವಿಶಿಷ್ಟ ಸಂಪ್ರದಾಯದ ಸಂದರ್ಭದಲ್ಲಿ ತಂದೆ ಕೆಂಗುರಿ ಮಲ್ಲಪ್ಪ ಬಲಿಯಾಗಬೇಕಾದ ಪರಿಸ್ಥಿತಿ ಬರುತ್ತದೆ.

ಕೆಂಗುರಿ ಮಲ್ಲಪ್ಪ ಮರಣ ಹೊಂದಿದ ಮೇಲೆ ಐಶ್ವರ್ಯ, ಏಳುಗೂಡಿನ ಹಸುಗಳು, ಎತ್ತುಗಳು ನಾಶ ವಾದವು. ಸಿನ್ನಮ್ಮ ಕೂಲಿ ಮಾಡಬೇಕಾಗಿ ಬರುತ್ತದೆ. ಹಾಗು ಅನೇಕ ಕಷ್ಟಗಳಿಗೆ ಒಳಗಾಗುತ್ತಾಳೆ. ಜುಂಜಪ್ಪ

ತನ್ನ ತಾಯಿಯ ಶೀಲವನ್ನು ಪರೀಕ್ಷೆಗೆ ಒಳಪಡಿಸುತ್ತಾನೆ. ಎಂಟು ದಿವ್ಯಗಳಿಗೆ ಗುರಿಯಾಗಿ ಅದರಿಂದ ಅವಳು ಪರಿಶುದ್ಧಳೆಂದು ಖಚಿತವಾದ ಮೇಲೆ ಜುಂಜಪ್ಪ ತನ್ನ ಮನೆಯಲ್ಲಿಯೆ ಇರಿಸಿಕೊಳ್ಳುತ್ತಾನೆ. ತಂಗಿಯನ್ನು ಸೋದರ ಮಾವಂದಿರ ಕೊನೆಯ ಕಟ್ಟಾಣಿಗೆ ಕೊಟ್ಟು ಮದುವೆ ಮಾಡುತ್ತಾನೆ ಜುಂಜಪ್ಪ. ಮದುವೆಯ ನಂತರ ಬಡತನ ಮಾಯವಾಗಿ ಐಶ್ವರ್ಯ ಹೆಚ್ಚಾಯಿತು. ಸೋದರ ಮಾವಂದಿರು ಕೊಟ್ಟಿದ್ದ ಏಳುಕರುಗಳನ್ನು ಚೆನ್ನಾಗಿ ಬೆಳೆಸಿ ಏಳುಗೂಡು ಹಸು, ಏಳುಗೂಡು ಎತ್ತುಗಳ ಒಡೆಯನಾದ.

ಜುಂಜಪ್ಪನ ಏಳಿಗೆಯನ್ನು ಸಹಿಸದ ಸೋದರ ಮಾವಂದಿರು ನಾನಾ ಕಷ್ಟಗಳನ್ನು ತಂದೊಡ್ಡುತ್ತಾರೆ. ದೊಡ್ಡ ಹುಲಿಗಂಟೆ ಕೆರೆಯ ನೀರಿಗೆ ಮಾಟ ಮಾಡಿಸುತ್ತಾರೆ. ಜುಂಜಪ್ಪನ ದನಗಳು ನೀರು ಕುಡಿಸುವಷ್ಟರಲ್ಲಿ, ಜುಂಜಪ್ಪ ವಿಷಯ ತಿಳಿದು, ಗೌರಸಂದ್ರದ ಮಾರಕ್ಕನ ಸಹಾಯದಿಂದ ನೀರನ್ನು ತಿಳಿಮಾಡಿಸಿ, ಮಾಟದ ಪ್ರಭಾವ ಕಳೆಯುತ್ತಾನೆ. ಅದರಲ್ಲಿ ಹೂತು ಹಾಕಿದ ಬಡಕಲು ಕರುವನ್ನು ಸೋದರ ಮಾವಂದಿರಿಗೆ, ತಮ್ಮಂದಿರ ಕೈಯಲ್ಲಿ ಹಿಂದಿರುಗಿಸಲು ಕಳುಹಿಸುತ್ತಾನೆ. ಅವರು ಅದು ತಮ್ಮದಲ್ಲವೆಂದು ಹಿಂತಿರುಗಿ ಕಳುಹಿಸುತ್ತಾರೆ. ಕೊನೆಗೆ ಜುಂಜಪ್ಪನೇ ತೆಗೆದುಕೊಂಡು ಹೋದಾಗಲೂ ಅದು ತಮ್ಮದಲ್ಲವೆಂದು, ಅದನ್ನು ಸ್ವೀಕರಿಸುವುದಿಲ್ಲ. ಕೊನೆಗೆ ಜುಂಜಪ್ಪ ಮನೆಗೆ ತಂದು ಅದಕ್ಕೆ 'ಬಡಮೈಲ'ನೆಂದು ಹೆಸರಿಟ್ಟ. ದಷ್ಟಪುಷ್ಟವಾಗಿ ಬೆಳೆದು ಯಾರು ಬಗ್ಗಿಸದಂತಹ ಗೂಳಿಯಾಗುತ್ತದೆ. ಸೋದರ ಮಾವಂದಿರು ಎರಡನೆಯದಾಗಿ ಮರಡಿ ರಂಗಣ್ಣನಿಂದ ಮಾಟ ಮಾಡಿಸಿ, ಕೆಂಧೂಳಿ ಬರ, ಡೊಕ್ಕೆಬರ, ಬರುವಂತೆ ಮಾಡಿದರು ವಿಷಯ ತಿಳಿದ ಜುಂಜಪ್ಪ ರಂಗಣ್ಣನಿಗೆ ಹೆದರಿಸಿ ಅವನಿಂದಲೇ ಮಾಟವನ್ನು ತೆಗೆಸುತ್ತಾನೆ. ಸೋದರ ಮಾವಂದಿರು ಚೇಳೂರು ದೂರೆಗಳೊಡನೆ ಪಿತೂರಿ ಮಾಡಿ ಬಡಮೈಲನನ್ನು ಹಿಡಿದು, ಚೇಳೂರು ಕೋಟೆಗೆ ಕಟ್ಟಿಸಿದರು. ಅದು, ಕೋಟೆಯನ್ನು ಭೇದಿಸಿ ಕೊಂಡು ಬಂದು ದನಗಳನ್ನು ಕಾಪಾಡಿತು. ಮೂರು ತಿಂಗಳ ಕೇಡಿನ ನಿದ್ದೆಯಲ್ಲಿ ಇದ್ದ ಜುಂಜಪ್ಪ ಎದ್ದು, ಸೇಳೂರು ದೊರೆಗಳನ್ನು ಪಗಡೆಯಾಟದಲ್ಲಿ ಸೋಲಿಸಿದರು. ಅನಂತರ ಮಾವಂದಿರು ಮಂತ್ರವಾದಿ ಪುಟ್ಟಣ್ಣ ಮತ್ತು ತಾಳೆದುರ್ಗಿ ಎಂಬ ರಾಕ್ಷಸಿ ಮೂಲಕ ಜುಂಜಪ್ಪನನ್ನು ಸಾಯಿಸಲು ಮಾಡಿದ ತಂತ್ರವನ್ನು ನಿಷ್ಫಲಗೊಳಿಸಿ ಅವರಿಗೆ ಬುದ್ಧಿ ಕಲಿಸಿದ. ಹೊನ್ನಹಟ್ಟಿ ಆಲೇಗೌಡನ ಹೆಂಡತಿ ಜಾನಕಲ್ಲು ದೊಡ್ಡಕ್ಕನಿಗೂ ಬುದ್ಧಿ ಕಲಿಸಿದ.

ಕೊನೆಯದಾಗಿ ಜುಂಜಪ್ಪನನ್ನು ಕೊಲ್ಲಲು ಸೋದರ ಮಾವಂದಿರು ಹೊಸ ಉಪಾಯ ಹೂಡಿದರು. ಮನೆದೇವರ ಹಬ್ಬಕ್ಕೆಂದು, ಈತನನ್ನು ಪ್ರೀತಿಯಿಂದ ಮನೆಗೆ ಕರೆದು, ವಿಷದ ಕಜ್ಜಾಯವನ್ನು ಬಡಿಸಿ ಮೋಸ ದಿಂದ ಸಾಯಿಸುತ್ತಾರೆ. ಸತ್ತ ಏಳು ದಿನಗಳ ನಂತರ ಜುಂಜಪ್ಪ ಮೇಲೇಳುತ್ತಾನೆ. ಬೆಂಕಿಯನ್ನು ಚೆಲ್ಲುತ್ತಾ ಕಂಬೇರ ಹಟ್ಟಿಯ ಮನೆಗಳನ್ನು ಸುಟ್ಟು ಹಾಕಿ ಏಳು ಜನ ಮಾವಂದಿರನ್ನು ಸಂಹರಿಸಿ, ತಾನೂ ಸಾಯುತ್ತಾನೆ. ಹುಟ್ಟುವಾಗಲೇ ಆದ ದೈವವಾಣಿಯಂತೆ ಹದಿನಾರನೇಯ ವಯಸ್ಸಿನಲ್ಲಿಯೇ ಜೀವಂತ ಸಮಾಧಿಯಾಗುತ್ತಾನೆ. ಸತ್ತ ನಂತರವೂ ಅನೇಕ ಪವಾಡಗಳನ್ನು ಮಾಡಿದ. ಹೀಗಾಗಿ ಕಾಡುಗೊಲ್ಲರು ಜುಂಜಪ್ಪನನ್ನು ತಮ್ಮ ಆರಾಧ್ಯ ದೈವವೆಂದು ಪೂಜಿಸಲಾರಂಭಿಸಿದರು.

ಹೀಗೆ ಮೂಡಿ ಬಂದ ಕಥಾವೃತ್ತಾಂತವು ಶಿಷ್ಟ ಪುರಾಣದಲ್ಲಿ ಬರುವ ಕೃಷ್ಣಕಂಸರ ನಡುವೆ ಇರುವ ಸಂಘರ್ಷವನ್ನು ನೆನಪಿಗೆ ತರುತ್ತದೆ.

ಜುಂಜಪ್ಪನ ಕಾವ್ಯಕತೆ ವಿಸ್ತಾರದ ದೃಷ್ಟಿಯಿಂದ ಮೂರು-ನಾಲ್ಕು ರಾತ್ರಿಗಳ ಕತೆ. ಈ ಕಾವ್ಯ ಮೌಖಿಕ ಮಹಾಕಾವ್ಯಗಳಲ್ಲಿ ಒಂದು ಅಗ್ರಮಾನ್ಯ ಕೃತಿ.

**ಅಡಿಟಿಪ್ಪಣಿಗಳು**

೧. ಡಾ.ಹೆಚ್.ಕೆ.ನಾಗೇಶ್ (ಸಂ), ಕಾಳಿಂಗರಾಯನ ಕಾವ್ಯ, ೨೦೦೦, ಪುಟ ೨

೨. ಡಾ.ಕೆ.ಆರ್.ಸಂಧ್ಯಾರೆಡ್ಡಿ (ಕನ್ನಡಕ್ಕೆ), ಕಲೆವಾಲಾ, ೨೦೦೧, (ಪ್ರಸ್ತಾವನೆ) XXIX

೩. ಡಾ.ಹೆಚ್.ಕೆ.ನಾಗೇಶ್ (ಸಂ), ಕಾಳಿಂಗರಾಯನ ಕಾವ್ಯ, ೨೦೦೦, ಪುಟ ೩

೪. ಪ್ರೊ.ಎ.ವಿ.ನಾವಡ, ಮೌಖಿಕ ಕಾವ್ಯಸಂಯೋಜನ ಪ್ರಕ್ರಿಯೆ, ೨೦೦೦, ಪುಟ ೩,೪

೫. ಡಾ.ತೀ.ನಂ.ಶಂಕರನಾರಾಯಣ, ಜಾನಪದ ಸಮೀಕ್ಷೆ-ವಿಶ್ಲೇಷಣೆ, ೧೯೯೯, ಪುಟ ೧೨೮

೬. ಅದೇ, ಪುಟ ೩೬೩

೭. ಡಾ.ತೀ.ನಂ.ಶಂಕರನಾರಾಯಣ, ಜನಪದ ಮಹಾಕಾವ್ಯ, ೧೯೯೬, ಪುಟ ೩೨

೮. ಡಾ.ಹೆಚ್.ಕೆ.ನಾಗೇಶ್ (ಸಂ), ಕಾಳಿಂಗರಾಯನ ಕಾವ್ಯ, ೨೦೦೦, ಪುಟ ೧೮

೯. ಡಾ.ಜೀ.ಶಂ.ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೭೭

೧೦. ಡಾ.ಜೀ.ಶಂ.ಪರಮಶಿವಯ್ಯ, ಉಲ್ಲೇಖ: ಪ್ರೊ.ಕಾಳೇಗೌಡ ನಾಗವಾರ (ಸಂ), ಜಿ.ವಿ.ಆನಂದಮೂರ್ತಿ (ಸಂ), ಸಹಸ್ರಮಾನ ಜಾನಪದ ೮, ಜಾನಪದದ ತುಂಬುಹೊಳೆ, ಪುಟ ೮

೧೧. ಡಾ.ಅಂಬಳಿಕೆ ಹಿರಿಯಣ್ಣ, ಜನಪದ ಮಹಾಕಾವ್ಯಗಳು, ೧೯೯೮ ಪುಟ ೧೪

೧೨. ಡಾ.ಹಿ.ಚಿ.ಬೋರಲಿಂಗಯ್ಯ, ಕಾಡು ಕಾಂಕ್ರೀಟ್ ಮತ್ತು ಜಾನಪದ, ೧೯೯೫ ಪುಟ ೪೮

೧೩. ಅದೇ, ಪುಟ ೪೯-೫೦

೧೪. ಡಾ.ಚಂದ್ರು ಕಾಳೇನಹಳ್ಳಿ, ಸೋಲಿಗರ ಸಂಸ್ಕೃತಿ, ೧೯೯೩, ಪುಟ ೧೦೩

೧೫. ಗಂಗಾಧರ ದೈವಜ್ಞ (ಸಂ), ಮಾಳಿಂಗರಾಯನ ಕಾವ್ಯ, ೧೯೯೯, ಪುಟ ೧೩

೧೬. ಡಾ.ಪಿ.ಕೆ.ರಾಜಶೇಖರ್ (ಸಂ), ಮಲೆಯಮಾದೇಶ್ವರ (ಭಾಗ-೨), ಪ್ರಸ್ತಾವನೆ, ಪುಟ ೯೩

೧೭. ಡಾ.ಪಿ.ಕೆ.ರಾಜಶೇಖರ್ , ಮಲೆಯಮಾದೇಶ್ವರ, ಡಾ.ಅರವಿಂದ ಮಾಲಗತ್ತಿ (ಸಂ), ೨೦೦೦, ಪುಟ ೩೮

೧೮. ಪ್ರೊ.ಪುರುಷೋತ್ತಮ ಬಿಳಿಮಲೆ, ಜೀ.ಶಂ.ಪ. ಸಂಸ್ಮರಣೆ, ಡಾ.ಎಚ್.ಜೆ.ಲಕ್ಕಪ್ಪಗೌಡ (ಸಂ), ೧೯೯೫, ಪುಟ ೧೨೧,

೧೯. ಡಾ.ಜೀ.ಶಂ.ಪರಮಶಿವಯ್ಯ (ಸಂ), ಜನಪದ ಕಾವ್ಯ ಕಥೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೯೦

೨೦. ಡಾ.ಚಕ್ಕೆರೆ ಶಿವಶಂಕರ್ (ಸಂ), ಕೋರಣ್ಣ ನೀಡವ್ವ ಕೋಡುಗಲ್ಲಯ್ಯನಿಗೆ, ಕಲ್ಯಾಣಿ ಪ್ರಕಾಶನ, ೧೯೮೮

೨೧. ಡಾ.ಬಿ.ಎಸ್.ಸ್ವಾಮಿ (ಸಂ), ಮಲೆಯಮಾದೇಶ್ವರ, ದಾಮಿನಿ ಸಾಹಿತ್ಯ, ಬೆಂಗಳೂರು, ೨೦೦೧

೨೨. ಟಿಪ್ಪಣಿ : ಎರಡು ಪ್ರಕಟಿತ ಕೃತಿಗಳು

೧. ಡಾ.ಪಿ.ಕೆ.ರಾಜಶೇಖರವರು ಸಂಪಾದಿತ ಕೃತಿ ಮಲೆಯಮಾದೇಶ್ವರ

೨. ಡಾ.ಕೇಶವನ್ ಪ್ರಸಾದ್ ಅವರ ಸಂಪಾದಕತ್ವದಲ್ಲಿ ಪ್ರಕಟವಾಗಿರುವ ಕೃತಿ 'ಮಲೆಮಾದೇಶ್ವರ'

೨೩. ಡಾ.ಅಂಬಳಿಕೆ ಹಿರಿಯಣ್ಣ, ಜನಪದ ಮಹಾಕಾವ್ಯಗಳು, ೧೯೯೮, ಪುಟ ೨

೨೪. ಡಾ.ದೇ.ಜವರೇಗೌಡ, ಜಾನಪದ ಅಧ್ಯಯನ, ೧೯೯೧, ಪುಟ ೧೮೦

೨೫. ಡಾ.ಜೀ.ಶಂ.ಪರಮಶಿವಯ್ಯ, ಕಂಸಾಳೆ, ಕನ್ನಡ ವಿಶ್ವಕೋಶ ಸಂಪುಟ-೩, ಪುಟ ೫೪೩

೨೬. ಡಾ.ಚಕ್ಕೆರೆ ಶಿವಶಂಕರ್, ಕೋರಣ್ಣ ನೀಡವ್ವ ಕೋಡುಗಲ್ಲಯ್ಯನಿಗೆ, ೧೯೮೮, ಪ್ರಸ್ತಾವನೆ ಪುಟ XIV, XV

೨೭. ಡಾ.ಹಿ.ಚಿ.ಬೋರಲಿಂಗಯ್ಯ, ಜನಪದ ಕಲೆಗಳ ಕೋಶ, ೧೯೯೬, ಪುಟ ೯೧

೨೮. ಮೊಗಳ್ಳಿ ಗಣೇಶ್ (ಆಯ್ಕೆ), ಮಲೆಯಮಾದೇಶ್ವರ ಕಾವ್ಯ, ೧೯೯೯, ಪ್ರಸ್ತಾವನೆ, ಪುಟ IX

೨೯. ಡಾ.ಬಿ.ಎಸ್.ಸ್ವಾಮಿ, ಮಲೆಯಮಾದೇಶ್ವರ, ೧೯೯೫, ಪುಟ ೪೨

೩೦. ಡಾ.ಬೋರೇಗೌಡ ಚಿಕ್ಕಮರಳಿ, ಮಲೆಯಮಾದೇಶ್ವರ, ಅರವಿಂದ ಮಾಲಗತ್ತಿ (ಸಂ), ೨೦೦೦, ಪುಟ ೧೧೪

೩೧. ಡಾ.ಜೀ.ಶಂ.ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೯೧

೩೨. ಡಾ.ಹಿ.ಚಿ.ಬೋರಲಿಂಗಯ್ಯ, ವಿಸ್ಮೃತಿ ಮತ್ತು ಸಂಸ್ಕೃತಿ, ೨೦೦೧, ಪುಟ ೮೦

೩೩. ಪ್ರೊ.ಓ.ಎಲ್.ನಾಗಭೂಷಣಸ್ವಾಮಿ, ಕರ್ನಾಟಕ ಜನಪದ ಮಹಾಕಾವ್ಯಗಳು, ಡಾ.ತೀ.ನಂ.ಶಂಕರನಾರಾಯಣ (ಸಂ), ೧೯೯೮, ಪುಟ ೪೫

೩೪. ಡಾ.ಬೋರೇಗೌಡ ಚಿಕ್ಕಮರಳಿ, ಮಲೆಯಮಾದೇಶ್ವರ, ಅರವಿಂದ ಮಾಲಗತ್ತಿ (ಸಂ), ೨೦೦೦, ಪುಟ ೧೨೩

೩೫. ಡಾ.ಅಂಬಳಿಕೆ ಹಿರಿಯಣ್ಣ, ಜನಪದ ಮಹಾಕಾವ್ಯಗಳು, ೧೯೯೮, ಪುಟ ೫೦

೩೬. ಡಾ.ಜೀ.ಶಂ.ಪರಮಶಿವಯ್ಯ; ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೧೫೧

೩೭. ಸಿ.ಎನ್.ರಾಮಚಂದ್ರನ್; ಹೊಸ ಮುಡಿಯ ಮೇಲೆ ಚದುರಂಗ, ಪ್ರಜಾವಾಣಿ ಸಾಪ್ತಾಹಿಕ ಪುರವಣಿ, ೨೭ ಜನವರಿ ೨೦೦೨

೩೮. ಎಸ್.ಎಸ್.ಹಿರೇಮಠ; ಜಾತ್ರೆಗಳು, ಡಿಸೆಂಬರ್, ೧೯೯೩, ಪುಟ ೨೯೭

೩೯. ಡಾ.ಹಿ.ಚಿ.ಬೋರಲಿಂಗಯ್ಯ(ಸಂ), ಮಂಟೇಸ್ವಾಮಿ, ೧೯೯೭, ಪ್ರಸ್ತಾವನೆ XV

೪೦. ಡಾ.ವೆಂಕಟೇಶ ಇಂದ್ವಾಡಿ; ಮಂಟೇಸ್ವಾಮಿ ಪರಂಪರೆ, ೧೯೯೯, ಪುಟ ೨೪

೪೧. ಡಾ.ಹಿ.ಚಿ.ಬೋರಲಿಂಗಯ್ಯ(ಸಂ), ಮಂಟೇಸ್ವಾಮಿ, ೧೯೯೭, ಪ್ರಸ್ತಾವನೆ XVI

೪೨. ಡಾ.ವೆಂಕಟೇಶ ಇಂದ್ವಾಡಿ; ಸಾಂಸ್ಕೃತಿಕ ಪದಕೋಶ ನೀಲಗಾರರು, ೨೦೦೦, ಪ್ರಸ್ತಾವನೆ

೪೩. ಡಾ.ಬಸವಲಿಂಗ ಸೊಪ್ಪಿಮಠ (ಸಂ), ಕೊಡೇಕಲ್ಲ ವಚನವಾಕ್ಯ ಸಂಪುಟ ೧, ೧೯೯೮, ಪ್ರಸ್ತಾವನೆ ೧೧-೧೫

೪೪. ಡಾ.ಬಸವಲಿಂಗ ಸೊಪ್ಪಿಮಠ; ಕೊಡೇಕಲ್ಲು ಬಸವಣ್ಣ- ಒಂದು ಅಧ್ಯಯನ, ೧೯೯೫, ಪುಟ ೭೮

೪೫. ಡಾ.ಗುರುಪ್ರಸಾದ್; ನೀಲಗಾರರು ಒಂದು ಧಾರ್ಮಿಕ ಸಮುದಾಯದ ಅಧ್ಯಯನ, ೧೯೯೫, ಪುಟ ೭೮

೪೬. ಡಾ.ಬಿ.ಎಸ್.ಸ್ವಾಮಿ ; ಮಲೆಯಮಾದೇಶ್ವರ, ೧೯೯೫, ಪುಟ ೨೯

೪೭. ಡಾ.ವೆಂಕಟೇಶ ಇಂದ್ವಾಡಿ; ಸಾಂಸ್ಕೃತಿಕ ಪದಕೋಶ ನೀಲಗಾರರು, ೨೦೦೦, ಪುಟ ೨೦

೪೮. ಡಾ.ಜೀ.ಶಂ.ಪರಮಶಿವಯ್ಯ (ಸಂ), ಶ್ರೀ ಮಂಟೇಸ್ವಾಮಿ, ೧೯೭೩, ಪ್ರಸ್ತಾವನೆ XI

೪೯. ಅದೇ, ಪ್ರಸ್ತಾವನೆ X

೫೦. ಉಲ್ಲೇಖ; ಡಾ.ಎಂ.ಎಂ.ಕಲಬುರ್ಗಿ ಅವರೊಡನೆ ನಡೆಸಿದ ಸಂವಾದದಿಂದ ವ್ಯಕ್ತಗೊಂಡ ಅಂಶ. ಡಾ.ಅಂಬಳಿಕೆ ಹಿರಿಯಣ್ಣ; ಜನಪದ ಮಹಾಕಾವ್ಯಗಳು. ೧೯೯೮, ಪುಟ ೪೧

೫೧. ತಮಂಪ ಮೂರ್ತಿ (ಸಂ), ಧರೆಗೆ ದೊಡ್ಡವರ ಕಾವ್ಯ, ೧೯೮೦, ಪ್ರಸ್ತಾವನೆ XIII-XIV

೫೨. ಡಾ.ಶ್ರೀಕಂಠ ಕೂಡಿಗೆ, ಉಲ್ಲೇಖ; ಕರ್ನಾಟಕ ಜಾನಪದ (ಕ.ಜಾ. ಪ್ರಕಟಣೆ (೧೯೮೯) ಪುಟ ೧೮) ಶಂಕರನಾರಾಯಣ ತೀ.ನಂ (ಸಂ), ಕರ್ನಾಟಕ ಜನಪದ ಮಹಾಕಾವ್ಯಗಳು, ೧೯೯೮, ಪುಟ ೬೨

೫೩. ಡಾ.ಹಿ.ಚಿ.ಬೋರಲಿಂಗಯ್ಯ (ಸಂ), ಮಂಟೇಸ್ವಾಮಿ, ೧೯೯೭, ಪ್ರಸ್ತಾವನೆ XVIII

೫೪. ಚಂದ್ರುಕಾಳೇನಹಳ್ಳಿ; ಕರ್ನಾಟಕ ಜನಪದ ಮಹಾಕಾವ್ಯಗಳು, ಶಂಕರನಾರಾಯಣ ತೀ.ನಂ. (ಸಂ), ೧೯೯೮, ಪುಟ ೫೧

೫೫. ಡಾ.ಅಂಬಳಿಕೆ ಹಿರಿಯಣ್ಣ; ಜನಪದ ಮಹಾಕಾವ್ಯಗಳು, ೧೯೯೮, ಪುಟ ೪೬

೫೬. ಡಾ.ಕಾಳೇಗೌಡ ನಾಗವಾರ; (ಸಂ), ಡಾ.ಅಂಬಳಿಕೆ ಹಿರಿಯಣ್ಣ (ಸಂ), ಡಾ.ಜೀಶಂಪ ಅವರ ಜಾನಪದ ಬರಹಗಳು, ೨೦೦೦, ಪುಟ ೯೧

೫೭. ಡಾ.ವೆಂಕಟೇಶ ಇಂದ್ವಾಡಿ; ಸಾಂಸ್ಕೃತಿಕ ಪದಕೋಶ ನೀಲಗಾರರು, ೨೦೦೦, ಪ್ರಸ್ತಾವನೆ, ಪುಟ ೨

೫೮. ರುದ್ರಪ್ಪ; ಜನಪದ ಸಾಹಿತ್ಯದಲ್ಲಿ ಮಂಟೇಸ್ವಾಮಿ, ೧೯೯೫, ಪುಟ ೮

೫೯. ಡಾ.ಕಾಳೇಗೌಡ ನಾಗವಾರ (ಸಂ), ಅಂಬಳಿಕೆ ಹಿರಿಯಣ್ಣ (ಸಂ), ಜೀಶಂಪ ಅವರ ಜಾನಪದ ಬರಹಗಳು, ೨೦೦೦, ಪುಟ ೮೮

೬೦. ಡಾ.ರಹಮತ್ ತರೀಕೆರೆ; ಕರ್ನಾಟಕದ ಸೂಫಿಗಳು, ೨೦೦೧, ಪುಟ ೭೩

೬೧. ಡಾ.ಮೀರಾಸಾಬಿಹಳ್ಳಿ ಶಿವಣ್ಣ; ಗೊಲ್ಲಕಡಗ, ೧೯೯೯, ಪುಟ ೩

೬೨. ಡಾ.ತೀ.ನಂ.ಶಂಕರನಾರಾಯಣ; ಕಾಡುಗೊಲ್ಲರು, ೧೯೮೮, ಪುಟ ೭, ೮

೬೩ ಡಾ.ಮೀರಾಸಾಬಿಹಳ್ಳಿ ಶಿವಣ್ಣ; ಗೊಲ್ಲಕಡಗ, ೧೯೯೯, ಪುಟ ೪

೬೪. ಡಾ.ಕೃಷ್ಣಮೂರ್ತಿ ಹನೂರ; ಮಲೆನಾಡು ಜಾನಪದ, ಚಿತ್ರದುರ್ಗದ ಮೂರು ಬುಡಕಟ್ಟುಗಳು, ೧೯೮೩, ಪುಟ ೧೮೫

೬೫. ಡಾ.ತೀ.ನಂ.ಶಂಕರನಾರಾಯಣ; ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ೧೯೮೨, ಪುಟ ೨೬

೬೬. ಅದೇ, ಪುಟ ೩೨

೬೭. ಡಾ.ಮೀರಾಸಾಬಿಹಳ್ಳಿ ಶಿವಣ್ಣ; ಗೊಲ್ಲಕಡಗ, ೧೯೯೯, ಪುಟ ೫

೬೮. ಡಾ.ತೀ.ನಂ.ಶಂಕರನಾರಾಯಣ; ಕಾಡುಗೊಲ್ಲರು, ೧೯೮೮, ಪುಟ ೨೭, ೨೮, ೨೯

೬೯. ಗಂಗಾಧರ ದೈವಜ್ಞ; ಬುಡಕಟ್ಟು ಸಮಾಜ, ೨೦೦೦, ಪುಟ ೬೧

೭೦. ಬೂವದ ಮುದ್ದೆ; ಕಾಡುಗೊಲ್ಲರ ಊಟದ ವ್ಯವಸ್ಥೆಯಲ್ಲಿನ ವಿಶೇಷತೆಗೆ ಎಂದರೆ ಅನ್ನದ ಉಂಡೆಗೆ ಇವರು ಬೂವದ ಮುದ್ದೆ ಎನ್ನುವರು. ಚಪ್ಪರದ ಮುಂಭಾಗದಲ್ಲಿ ಒಲೆ ಹೂಡಿ ಅಥವಾ ಅನ್ನಮಾಡಿ, ಹೊರಸಿನ ಮೇಲೆ ಬಿಳಿ ಬಟ್ಟೆ ಹಾಸಿ ಅದರ ಮೇಲೆ ಅನ್ನವನ್ನು ಸುರುವಿ ಅದಕ್ಕೆ ತೆಂಗಿನ ಕಾಯಿತುರಿ, ಬೆಳ್ಳುಳ್ಳಿ ತುಪ್ಪ ಸೇರಿಸಿ ಅನ್ನದ ಉಂಡೆಗಳನ್ನು ಕಟ್ಟಿ ಬಾಳೆ ಎಲೆಯ ಮೇಲೆ ಇಡುತ್ತಾರೆ. ಈ ಉಂಡೆಗಳಿಗೆ ಊರಗೌಡ ತನ್ನ ಉಂಗುರದಿಂದ ಮುದ್ರೆ ಹಾಕುತ್ತಾನೆ. ನಂತರ ಊಟಮಾಡಬೇಕು.

೭೧. ಕೃಷ್ಣಮೂರ್ತಿ ಹನೂರು (ಸಂ), ಜನಪದ ವೀರಗೀತೆಗಳು, ೧೯೮೭, ಪ್ರಸ್ತಾವನೆ ೧೮

೭೨ 'ಜನ್ನಿಗೆ'; ಚಲುವರಾಜುರವರು ಸಂಪಾದಿಸಿರುವ 'ಜುಂಜಪ್ಪ' ಕಾವ್ಯದಲ್ಲಿ ಜುಂಜಪ್ಪನ ನಾಲ್ಕನೇ ತಲೆಯ ಅಜ್ಜದ್ಯಾವರು ದೈಮಾರ ಸತ್ತಾಗ ಕಾಟುಮಲಿಂಗ ದೇವರು ಹೇಳಿದಂತೆ, ದ್ಯಾವುರ ದೈಮಾರನ ದೇಹವನ್ನು ತಳುಕಿನ ಗುಡ್ಡಕ್ಕೆ ತೆಗೆದುಕೊಂಡು ಹೋಗಿ ಒಂದು ಬಂಡೆಯ ಮೇಲೆ ಚೆನ್ನಾಗಿ ಅರೆದಾಗ ಅವನ ಎದೆಯೊಳಗಿನ 'ನೆಣವೆ' ಕರಗಿ ಹಾಲಾಗಿ ಬರುತ್ತೈತೆ ಆ ಹಾಲು ತಂದು ಏಳು ದನಗಳ ಮತ್ತು ಏಳು ಕುರಿಗಳ ಮೇಲೆ ಚೆಲ್ಲಿದಾಗ ಜನಿಗೆ ದನಗಳು, ಜನಿಗೆ ಕುರಿಗಳೆಂದು ಅವಕ್ಕೆ ಹೆಸರಾಗುತ್ತದೆ. ಇವುಗಳ ಹಾಲು ಗಂಜಲವನ್ನು ಬಾಣಂತಿಯರಿಗೆ ಕುಡಿಸಿದರೆ, ಸೂತಕ ಕಳೆಯುತ್ತದೆ. ಈ ರೀತಿ ಕಾಡುಗೊಲ್ಲರಲ್ಲಿ ಜನಿಗೆ ಹೆಸರು ಹಾಗೂ ಜನಿಗೆ ಸಂಪ್ರದಾಯ ಪ್ರಾರಂಭವಾಯಿತು.

೭೩. ಡಾ.ಮೀರಾಸಾಬಿಹಳ್ಳಿ ಶಿವಣ್ಣ; ಜಾನಪದದ ವಿವಿಧ ಮುಖಗಳು, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟುಗಳು, ಪ್ರೊ.ಶ್ರೀಕಂಠ ಕೂಡಿಗೆ (ಸಂ), ಪುಟ ೩೪

೭೪. ಡಾ.ಕಾಳೇಗೌಡ ನಾಗವಾರ; (ಸಂ), ಹುಚ್ಚಪ್ಪ ಮಾಸ್ತರ, ಎನ್. (ಸಂ), ಗಿರಿಜನ ಸಂಸ್ಕೃತಿ, ಕಾಡುಗೊಲ್ಲರ ಬದುಕಿನ ಅರ್ಥ ವ್ಯವಸ್ಥೆ, ೨೦೦೦, ಪುಟ ೨೪೯, ೨೫೦

೭೫. ಡಾ.ತೀ.ನಂ.ಶಂಕರನಾರಾಯಣ; ಜಾನಪದ ಸಮೀಕ್ಷೆ ವಿಶ್ಲೇಷಣೆ, ೧೯೯೯, ಪುಟ ೨೮೬, ೨೮೭

೭೬. ಗುಗ್ಗರಿ ಹಬ್ಬ; ಕಾಡುಗೊಲ್ಲರು ತಮ್ಮ ಹೊಲಗಳಲ್ಲಿ ಬೆಳೆದ ತೊಗರಿ, ಹೆಸರು ಕಾಳು, ಹುರುಳಿ, ಮುಂತಾದ ದ್ವಿದಳ ಧಾನ್ಯಗಳನ್ನು ಗುಗ್ಗರಿ ಹಬ್ಬ ಮಾಡುವವರೆಗೆ ಉಪಯೋಗಿಸುವುದಿಲ್ಲ. ಈ ಹಬ್ಬ ಮಾಡುವವರು ಒಂದು ತಿಂಗಳವರೆಗೆ ತಮ್ಮ ಮನೆಯಲ್ಲಿ ಹುರುಳಿ, ನವಣೆಯನ್ನು ಇಟ್ಟುಕೊಳ್ಳುವುದಿಲ್ಲ. ಹಬ್ಬದ ದಿನ ಈ ಧಾನ್ಯಗಳನ್ನು ತಂದು ದೇವಸ್ಥಾನದಲ್ಲಿ ಬೇಯಿಸಿ ದೇವರಿಗೆ 'ಎಡೆ' ಹಾಕಿ ಪ್ರಸಾದವೆಂದು ತಿನ್ನುತ್ತಾರೆ. ನಂತರ 'ಗುಗ್ಗರಿ ಹಬ್ಬ'ದವರೆಗೂ ಈ ಧಾನ್ಯಗಳನ್ನು ಬಳಸುತ್ತಾರೆ.

೭೭. ಡಾ.ತೀ.ನಂ.ಶಂಕರನಾರಾಯಣ; ಕಾಡುಗೊಲ್ಲರು, ೧೯೮೮, ಪುಟ ೩೯

೭೮. ಡಾ.ತೀ.ನಂ.ಶಂಕರನಾರಾಯಣ; ಜನಪದ ಮಹಾಕಾವ್ಯ, ೧೯೯೬, ಪುಟ ೫೭

೭೯. ಡಾ.ತೀ.ನಂ.ಶಂಕರನಾರಾಯಣ; ಜಾನಪದ ಸಾಹಿತ್ಯ ದರ್ಶನ ೯, ಜುಂಜಪ್ಪ, ಡಾ.ದೇವೇಂದ್ರಕುಮಾರ ಹಕಾರಿ (ಸಂ) ೧೯೮೮, ಪುಟ ೮೩

೮೦. ಡಾ.ಎಂ.ಬಿ.ನೇಗಿನಹಾಳ; ನೇಗಿನಹಾಳ ಪ್ರಬಂಧಗಳು, ೧೯೯೯, ಪುಟ ೧೫೫, ೧೬೦, ೧೬೧, ೧೬೪

೮೧. ಡಾ.ಕಾಳೇಗೌಡ ನಾಗವಾರ; ಜುಂಜಪ್ಪ ೧೯೯೦, ಪುಟ ೨೨, ೨೩

೮೨. ಡಾ.ಹಿ.ಚಿ.ಬೋರಲಿಂಗಯ್ಯ; ಜನಪದ ಕಲೆಗಳ ಕೋಶ, ೧೯೯೬, ಪುಟ ೨೦೯

೮೩. ಡಾ.ಜೀ.ಶಂ.ಪರಮಶಿವಯ್ಯ; ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೨೦೧, ೨೦೨

೮೪. ಚಲುವರಾಜು (ಸಂ), ಜುಂಜಪ್ಪ, ೧೯೯೭, ಸಂಪಾದಕರ ಮಾತು

ಅಧ್ಯಾಯ ೩

# ಮಲೆಯಮಾದೇಶ್ವರ ಕಾವ್ಯ

೩.೧. ಮಲೆಯಮಾದೇಶ್ವರ ಕಾವ್ಯದ ಸ್ತ್ರೀ ಪಾತ್ರಗಳ ಸ್ವರೂಪ

೩.೨. ಮಾತೃ ಪ್ರಧಾನ ವ್ಯವಸ್ಥೆ ಮತ್ತು ಸ್ತ್ರೀ ಪಾತ್ರಗಳು

## ಅಧ್ಯಾಯ ೩

# ಮಲೆಯಮಾದೇಶ್ವರ ಕಾವ್ಯ

### ೩.೧. ಮಲೆಯಮಾದೇಶ್ವರ ಕಾವ್ಯದ ಸ್ತ್ರೀ ಪಾತ್ರಗಳ ಸ್ವರೂಪ

'ಮಲೆಯಮಾದೇಶ್ವರ' ಕಾವ್ಯದ ಪಾತ್ರಪ್ರಪಂಚ ಸಾಕಷ್ಟು ವ್ಯಾಪಕವಾದುದು. ಗುಣ ಸ್ವಭಾವದಲ್ಲಿ ವೈವಿಧ್ಯತೆಯೂ ಇದೆ. ದೇವತೆಗಳು, ಶರಣರು ಮತ್ತು ಸಾಮಾನ್ಯರು ಎಂದು ಸ್ಥೂಲವಾಗಿ ಇಲ್ಲಿನ ಪಾತ್ರಗಳನ್ನು ವರ್ಗೀಕರಿಸ ಬಹುದು. ಈ ವರ್ಗಗಳಿಗೆ ಸೇರದ ಪಾತ್ರಗಳೂ ಇವೆ. ದೈವೀಶಕ್ತಿಯನ್ನು ನಿರಾಕರಿಸಿದ ಶ್ರವಣನಾದರೆ ಪರಪೀಡನೆ, ಇಲ್ಲವೆ ಜಿಪುಣತನವನ್ನು ಮೆರೆಯುವ ಪಾತ್ರಗಳದು ಇನ್ನೊಂದು ಬಗೆ. "ಪಾತ್ರಗಳ ಬಾಹುಳ್ಯ ಮತ್ತು ಸ್ವಭಾವದ ದೃಷ್ಟಿಯಿಂದಲೂ ಒಂದು ಮಹಾಕಾವ್ಯಕ್ಕೆ ಬೇಕಾದ ಬಿತ್ತರ ಕಾವ್ಯದಲ್ಲಿದೆ."[1]

ಬೇವಿನಹಟ್ಟಿ ಕಾಳಮ್ಮ, ಇಕ್ಕೇರಿ ದೇವಮ್ಮ, ಶ್ರವಣದೊರೆ ಇವರು ದೈವೀಶಕ್ತಿಯ ಪ್ರತಿರೋಧದಿಂದ ವಿನಾಶ ಹೊಂದುವ ಪಾತ್ರಗಳಾದರೆ, ಅಲಂಬಾಡಿ ಜುಂಜೇಗೌಡ, ಸಂಕಮ್ಮನ ಗಂಡ ನೀಲಯ್ಯ, ಸರಗೂರಿನ ಮೂಗುದ್ಯಾವು ಮತ್ತು ಅವನ ಹೆಂಡತಿ ರಾಮವ್ವ ಇವರು ಪರಿವರ್ತನೆಗೊಳ್ಳುವ ಪಾತ್ರಗಳಾಗಿ ಕಥಾನಕ ದಲ್ಲಿ ಚಿತ್ರಿತಗೊಂಡಿದ್ದಾರೆ. ಹಲಗೇಗೌಡ ಮಹಾದೇವಮ್ಮ ಮತ್ತು ಸಂಕಮ್ಮ ಇವರ ಶಿಷ್ಟ ಪರಿಪಾಲನೆಯ ಕಡೆ ಬೇರಾಗಿಯೇ ಚಿತ್ರಿತವಾಗುವ ಪಾತ್ರಗಳು. ಇದಲ್ಲದೆ ಮಾದೇಶ್ವರರ ಸಂಗಡ ಗೋಲಿಗಜ್ಜುಗವಾಡುವ ಇಲ್ಲವೇ ಶಿಷ್ಯ ವೃತ್ತಿಯಲ್ಲಿನ ಸಹಚರರುಗಳಲ್ಲದೆ ಸರ್ಪ, ಬಸವ, ಸಿಂಹ ಮುಂತಾದ ಪ್ರಾಣಿ ವರ್ಗವೂ ಕೂಡ ಕಥಾನಕದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತವೆ.

ಕಾವ್ಯದ ಮೂಲ ಉದ್ದೇಶವೇ ಶ್ರವಣದೊರೆಯ ಸಂಹಾರ. ಕಾವ್ಯ ಮುಂದುವರೆದಂತೆಲ್ಲಾ ಕಾವ್ಯದ ಕೇಂದ್ರ ನಾಯಕ ಮಾದೇಶ್ವರನ ಸುತ್ತ ಬರುವ ಕೆಲವು ಪ್ರಮುಖ ಪಾತ್ರಗಳು ಕಾವ್ಯವನ್ನು ಉಜ್ವಲಗೊಳಿಸುತ್ತವೆ. ಅದರಲ್ಲೂ ಸ್ತ್ರೀ ಪಾತ್ರಗಳು ಮನಸೆಳೆಯುತ್ತಾ ಕಾವ್ಯವನ್ನು ಉತ್ತುಂಗ ಶಿಖರಕ್ಕೇರಿಸುತ್ತವೆ. ಬೇವಿನ್ನಟ್ಟಿ ಕಾಳಮ್ಮ ಒಂದು ಕಾಲದಲ್ಲಿ ನಿರ್ಗತಿಕಳಾಗಿದ್ದು, ಮಾದೇಶ್ವರನ ಕೃಪೆಯಿಂದಲೇ ಸಿರಿವಂತಳಾಗಿ ಮಾದೇಶ್ವರನೇ ಆಕೆಯ ಮುಂದೆ ಬಂದು ನಿಂತು ಎಣ್ಣೆ ಮಜ್ಜನಕ್ಕಾಗಿ ಎಳ್ಳು ಕೇಳಿದಾಗ, ಹಿಂದಿನ ತನ್ನ ಬಡತನವನ್ನು ಮರೆತು ಒಂದು ಹಿಡಿ ಎಳ್ಳು ಕೊಡಲು ನಿರಾಕರಿಸಿ ಅಹಂಕಾರದಲ್ಲಿ ಮೆರೆದಾಡುತ್ತಿದ್ದಾಗ, ಅವಳನ್ನು ಪರಿ ಪರಿಯಾಗಿ ಪರೀಕ್ಷಿಸಿ ಅವಳ ಕತ್ತಲು ತುಂಬಿದ ಅಂತರಂಗಕ್ಕೆ ಬೆಳಕು ನೀಡಿದರೂ, ತನ್ನ ಜಿಪುಣತನ ಬಿಡದೆ ತನ್ನ ನಾಶಕ್ಕೆ ತಾನೇ ಕಾರಣಳಾದ ಬೇವಿನಹಟ್ಟಿ ಕಾಳಮ್ಮ, ದಾನಶೀಲೆಯಂತೆ ಬಂದ ಅತಿಥಿಗಳನ್ನು ಉಪಚರಿಸುವ ನೆಪದಲ್ಲಿ

ಅವರಿಗೆ ವಿಷದ ಕಜ್ಜಾಯಗಳನ್ನು ತಿನ್ನಿಸಿ ಕೊಂದು ಅವರಲ್ಲಿದ್ದ ವಸ್ತ್ರಾಭರಣಗಳನ್ನು ಅಪಹರಿಸುತ್ತಿದ್ದ ಇಕ್ಕೇರಿ ದೇವಮ್ಮ ಮುಂತಾದವರು ದುಷ್ಟ ಪಾತ್ರಗಳಲ್ಲಿ ಮಿಂಚಲೆತ್ನಿಸಿ, ವಿನಾಶ ಹೊಂದಿದರೆ, ಸರಗೂರ ಶರಣೆ ರಾಮವ್ವ, ದುರ್ಗದ ಮಲ್ಲಮ್ಮ, ಬೇಡರ ದುಂಡಮ್ಮ, ಅದರಲ್ಲೂ ಇಡೀ ಮಹಾಕಾವ್ಯದಲ್ಲಿ ಅತ್ಯಂತ ಪ್ರಮುಖ ಕಥಾ ಭಾಗದ ಸತ್ಯಗುಣೆ ಸೋಲಿಗರ ಸಂಕಮ್ಮ ಈ ಪಾತ್ರಗಳು ಮಾದೇಶ್ವರನ ಭಕ್ತೆಯರಾಗಿ, ಸತ್ಯ ಶರಣೆಯರಾಗಿ ಮಹಾಕಾವ್ಯದ ಅಸಂಖ್ಯಾತ ಪಾತ್ರಗಳ ಮಧ್ಯೆ ತಮ್ಮ ಸಾತ್ವಿಕ ತೇಜಸ್ಸಿನಿಂದ ಅಪೂರ್ವ ರತ್ನಗಳಂತೆ ಕಂಗೊಳಿಸುತ್ತಿವೆ.

ಮಾದೇವ ಹೆಣ್ಣನ್ನು ಕಣ್ಣೆತ್ತಿ ನೋಡುವವನೇ ಅಲ್ಲ. ಆದರೆ ಹೆಣ್ಣು ಮಕ್ಕಳ ಬಗ್ಗೆ ಹೊಂದಿರುವ ಅಂತಃಕರಣದ ಬಗ್ಗೆ ಅಂದರೆ ಅವರ ಕಷ್ಟ, ದುಃಖದ ಪರಿಹಾರಕ್ಕೆ ಅವರ ಬಳಿ ದಾವಿಸುತ್ತಾನೆಯೇ ವಿನಃ ಮಿಕ್ಕಂತೆ ಅವರು ಹೆಣ್ಣು ಅಂದ್ರೆ ಹೆತ್ತ ತಾಯಿ ಇದ್ದ ಹಾಗೆ. ಮುಖ್ಯವಾಗಿ ಹೆಣ್ಣನ್ನು ಕುರಿತಂತೆ ಮಾದೇಶ್ವರನ ನಿಲುವಿಗೂ ಬೇರೆ ದೇವತೆಗಳಿಗೂ ತುಂಬ ವ್ಯತ್ಯಾಸವಿದೆ. "ಇತರ ದೇವತೆಗಳು ಒಬ್ಬಳಲ್ಲ ಎಂದು ನಾಲ್ಕಾರು ಮಂದಿ ಹೆಂಡಿರನ್ನ ಕಟ್ಟಿಕೊಂಡು ನರಲೋಕದ ಸಂಸಾರಿಗಳಿಗಿಂತ ಕೀಳಾದರೆ ಮಾದೇಶ್ವರ ಹೆಣ್ಣಿನ ವೈರಿಯಾಗಿ ಉಳಿದು ತನ್ನ ಮೇಲ್ಮೆಯನ್ನು ತೋರುತ್ತಾನೆ."[೨] ಕರಿತಲೆ ಜಾತಿ ಕಣ್ಣೆತ್ತಿ ನೋಡ್ಬಾರ್ದು ಕರ್ಮ ಹೊತ್ಕಳ್ಬಾರ್ದು ಎಂಬ ಶೌಚ ನಿಲುವಿನ ಮಾದೇಶ್ವರರು ನಾಗಮಲೇಲಿ ನೆಲಸಿದರು. ತನ್ನ ಸೇವೆಗೆ ಬರುವ ಗಂಡು-ಹೆಣ್ಣುಗಳು ಸರಸವಾಡಬಾರದು, ಬ್ರಹ್ಮಚರ್ಯತ್ವವನ್ನು ಪಾಲಿಸಬೇಕು. ತಿಳಿದೂ ತಿಳಿದು ತಪ್ಪಿ ನಡೆಯುವ ಸ್ತ್ರೀ ಪುರುಷರನ್ನು 'ಹುಲಿ ಕುಕ್ಕಿ' ತಿನ್ನುತ್ತದೆ ಎಂಬ ಪ್ರತೀತಿ ಇದೆ. ಇದು ಮಾದೇಶ್ವರ ನಿರ್ಮಲ ಗುಣವನ್ನು ತೋರಿಸುವುದಲ್ಲದೆ, ಜನಪದರ ದೃಷ್ಟಿಯಲ್ಲಿ ಎಲ್ಲ ದೇವತೆಗಳಿಗಿಂತ ಮಿಗಿಲಾಗಿದ್ದಾರೆ. ಸ್ತ್ರೀಯರು ತನ್ನ ಏಳ್ಮಲೆಗೆ ಬರಬಾರದೆಂಬ ನಿಷ್ಠುರ ನಿಲುವು ಕೂಡಾ ಇದೆ.

ಕಾವ್ಯ ಬೆಳೆಯುತ್ತಾ ಹೋದಂತೆಲ್ಲ ಸ್ತ್ರೀಯರ ವಿಷಯದಲ್ಲಿ ಪ್ರಾರಂಭದಲ್ಲಿದ್ದ ಕಠಿಣ ನಿಲುವು ಸಡಿಲವಾಗಿ "ಕೊನೆಗೆ ಒಂದು ಆರೋಗ್ಯಕರವಾದ ನೆಲೆಗೆ ಬಂದು ಮುಟ್ಟುತ್ತದೆಂಬುದು ಕಾವ್ಯದ ಅಗ್ಗಳಿಕೆಯ ಮತ್ತೊಂದು ಕುರುಹು."[೩] ಅವನ ವೈರಾಗ್ಯ ನಿಷ್ಠೆ ಅಚಲವಾಗಿ ಕೊನೆಯವರೆಗೆ ಉಳಿದರೂ, ತನ್ನ 'ಏಳ್ಮಲೆ ಕೈಲಾಸ'ಕ್ಕೆ ಹೆಂಗಸರು ಬರಬಾರದೆಂಬ ನಿಷ್ಠುರ ನಿಲುವಿಗೆ ಮಾತ್ರ ಅಚಲವಾಗಿ ನಿಲ್ಲಲು ಸಾಧ್ಯವಾಗಲಿಲ್ಲ. "ಭಕ್ತರ ಕೋರಿಕೆಯನ್ನು ಪೂರೈಸಲೇಬೇಕಾದ ಬಿಕ್ಕಟ್ಟಿಗೆ ಸಿಕ್ಕಿಕೊಂಡ ಮಾದೇಶ್ವರ ತನ್ನ ನಿಲುವಿನಲ್ಲಿ ಬದಲಾವಣೆಯನ್ನು ತಂದುಕೊಳ್ಳಬೇಕಾಗುತ್ತದೆ. ಮೂಗುದ್ಯಾವ್ರ ಮಡದಿ ರಾಮವ್ವೆ ಅವನ ನಿಲುವನ್ನು ಬದಲಾಯಿಸುವುದರಲ್ಲಿ ಯಶಸ್ವಿಯಾಗುತ್ತಾಳೆ. ಈ ಬೆಳವಣಿಗೆ ಕೇವಲ ತಾತ್ವಿಕ ನೆಲೆಯ ಬೆಳವಣಿಗೆ ಅಲ್ಲ. ವಾಸ್ತವದ ತಳಹದಿಯಿಂದ ಕೂಡಿದ್ದು"[೪]

ಮಲೆಯಮಾದೇಶ್ವರ ಕಾವ್ಯದಲ್ಲಿನ 'ಸ್ತ್ರೀ' ಪಾತ್ರಗಳಲ್ಲಿ ಚಿತ್ರಿತವಾಗಿರುವ 'ಸ್ತ್ರೀ' ಸಂವೇದನೆ ಮೂಡಿಬಂದಿರುವ ಪರಿಯನ್ನು ನೋಡೋಣ.

## ೩.೧.೧. ಸಂಕಮ್ಮ

ಬುಡಕಟ್ಟುಗಳ ಮನಗೆಲ್ಲುವ ಕಥಾನಕವೇ ಮಹದೇಶ್ವರ ಕಾವ್ಯ. ತನ್ನೆಲ್ಲ ಚಾಣಾಕ್ಷತನ, ಪವಾಡ ಮತ್ತು ಮಾಟದ ಕ್ರಿಯೆಗಳ ಮೂಲಕ ಮಾದೇಶ್ವರರು ಈ ಬುಡಕಟ್ಟುಗಳ ನಡುವಿನ ವೈರುಧ್ಯಗಳನ್ನು ಮೀರಿ ಅವುಗಳನ್ನು ಒಟ್ಟು ಗೂಡಿಸುವ ಕೆಲಸ ಮಾಡುತ್ತಾರೆ. ಮಾದೇವನ ಗಿರಿ, ಜೇನುಮನೆ ಹೆಜ್ಜೇನು ಮಲೆ ಹಾಗೂ ಎಪ್ಪತ್ತೇಳು ಮಲೆಯ ಆ ಬೃಹದಾರಣ್ಯ ಸುತ್ತ ಹನ್ನೆರಡು ಗಾವುದಕ್ಕೆ ಹಬ್ಬಿದ ಬ್ಯಾಡ ಗಂಪುಣ ಸೀಮೆ, ಆನೆ, ಹುಲಿ, ಕರಡಿ ಗಳಂತಹ ಬಲಿಷ್ಠ ಪ್ರಾಣಿಗಳ ಆವಾಸಸ್ಥಾನ ಇಂಥಾ ದಟ್ಟಡವಿಯಲ್ಲಿ ಜಲವಿರುವ ಸ್ಥಳ ನೋಡಿ, ಬಿದಿರುಮಳೆಗಳ ಸೊಂಪಿನಲ್ಲಿ ಮಾದೇವ ನೆಲೆ ಮಾಡುತ್ತಾನೆ. ಅರಣ್ಯವನ್ನೇ ಅವಲಂಬಿಸಿದ ಬೇಟೆಗಾರರು ಅಥವಾ ಕುಮರಿ ಬೇಸಾಯದ ಅರೆ ಕೃಷಿಕ ಬುಡಕಟ್ಟುಗಳು ತಮ್ಮ ವಲಸೆ ಜೀವನದ ನಡುವೆ ಇಂಥ ಸ್ಥಳಗಳನ್ನೇ ಆರಿಸಿ ನೆಲೆ ನಿಲ್ಲುತ್ತಿದ್ದರು.

ನಿರಂತರವಾಗಿ ಹಬ್ಬಿದ ಬೆಟ್ಟ ಸಾಲುಗಳ ಗರ್ಭದಲ್ಲಿ ಸೋಲಿಗರೆಂಬ ಆದಿವಾಸಿ ಜನ ಬಾಳುತ್ತಿದ್ದಾರೆ. ಇಂದು ಕೂಡ ದಟ್ಟಾರಣ್ಯವೇ ಆಗಿರುವ ಆ ಪ್ರದೇಶ ನೂರಾರು ವರ್ಷಗಳ ಹಿಂದೆ ಹೇಗಿದ್ದಿತೆಂಬ ಕಲ್ಪನೆಯೇ ರೋಚಕವಾಗುತ್ತದೆ. ಅಂಥ ನಿಗೂಢ ಅಡವಿಯ ಜೀವಿಗಳಾಗಿದ್ದ ಸೋಲಿಗರು ಮಾದೇಶ್ವರನ ಒಕ್ಕಲಾದ ಬಗೆ, ಸಂಕಮ್ಮನ ಸಾಲಿನಲ್ಲಿ ಚಿತ್ರಿತವಾಗಿದೆ. ಕಾಡಿನ ನಡುವೆ ಅಲ್ಲಲ್ಲಿ ಸೋಲಿಗರ ಹಟ್ಟಿಗಳಿರುವ ತಾಣವನ್ನು ಈಗಲೂ 'ಪೋಡು' ಎಂದು ಕರೆಯುತ್ತಾರೆ. ಅಂಥ ಒಂದು ಪೋಡಿನ ಯಜಮಾನನಾದ 'ತುಂಬೇಸ್ವಾಲುಗ' ಜುಂಜೇಗೌಡನ ಪ್ರೀತಿಯ ಮಗಳು ಸಂಕಮ್ಮ. ಇದೇ ಅಡವಿಯ 'ಕಾಡು ಸ್ವಾಲುಗ' ನೀಲೇಗೌಡನ ಮಗನಾದ 'ಮಲೆಸ್ವಾಲುಗ' ನೀಲೇಗೌಡ ದನಕುರಿಗಳನ್ನು ಕಾಯುತ್ತಿದ್ದ. ಬಾಯಾರಿಕೆಯಾಗಲಾಗಿ 'ಜೂಜಿಗಾತ್ರ'. ಹೊಗೆ ಏಳುತ್ತಿದ್ದ ತುಂಬೆ ಸ್ವಾಲುಗರ ಪೋಡಿಗೆ ದೃಷ್ಟಿ ಮಡಗಿ ಅಲ್ಲಿಗೆ ಧಾವಿಸುತ್ತಾನೆ. ಬಾಯಾರಿದವನಿಗೆ ನೀರು ಕೊಡಲು ಬಂದ ಸಂಕಮ್ಮನ ಚಂದ, ಚೆಲವು, ದುಪ್ಪಾದುಡ, ನಡೆ-ನುಡಿ ನೋಡಿ ಮರಳಾಗುವುದಲ್ಲದೆ, ಹಟ ಮಾಡಿ ಮದುವೆಯಾಗುತ್ತಾನೆ. ಸೋಲಿಗರ ಒಳಪಂಗಡಗಳನ್ನು ಗುರುತಿಸುವ ಹಾಗೂ ಕುಲ ಮತ್ತು ಬಳಿಗಳ ಬಗ್ಗೆ ಮಾಹಿತಿ ನೀಡುವ ಕಾಡು ಸೋಲಿಗ ಎಂಬ ಪ್ರಭೇದಗಳು ಕಾವ್ಯದಲ್ಲಿ ಉಲ್ಲೇಖಿತವಾಗುವುದನ್ನು ಗಮನಿಸ ಬಹುದು.

ಮಲೆಯಮಾದೇಶ್ವರ ಕಾವ್ಯದಲ್ಲಿ ಅತ್ಯಂತ ಪ್ರಮುಖ ಮತ್ತು ಹೃದಯಸ್ಪರ್ಶಿ ಭಾಗಗಳೆಂದರೆ 'ಸಂಕಮ್ಮನ ಸಾಲು' ಮತ್ತು 'ಬೇವಿನಹಟ್ಟಿ ಕಾಳಮ್ಮನ ಸಾಲು' ಪರಸ್ಪರ ವಿರುದ್ಧ ಆಶಯಗಳಿಂದ ರೂಪುಗೊಂಡಿರುವ ಮತ್ತು ಭಿನ್ನ ರಸಗಳನ್ನು ಪೋಷಿಸುವ ಇವೆರಡು ಕಥೆಗಳು ಮಾದೇಶ್ವರ ಕಾವ್ಯದ ಜೀವನಾಡಿಗಳು.

ಸಂಕಮ್ಮನ ಸಾಲು ಸೋಲಿಗರ ಆಹಾರ ಸಂಗ್ರಹಣೆಯ ವಿಧಾನಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ಕಾಡಿನ ಜೀವಿಗಳ ಸೋಲಿಗ ದಂಪತಿಗಳ ಕಥೆ ಇದು. ಸೋಲಿಗರ ನೀಲಯ್ಯ ಒಬ್ಬ ಪಶುಪಾಲಕ. ಈತನ ಮಡದಿ ಸಂಕಮ್ಮ- ಬಂಜೆ. ಇವರಿಬ್ಬರ ನಡುವೆ ಮಾದೇಶ್ವರನ ಪ್ರವೇಶವಾಗುತ್ತದೆ. ಈ ಮೂರು ಪಾತ್ರಗಳ ನಡುವೆ ಮಾತ್ರ ಕಥೆ ಬೆಳೆಯುತ್ತಾ ಹೋಗುತ್ತದೆ. ಈ ಮಹಾಕಾವ್ಯದಲ್ಲಿ ''ಸಂಕಮ್ಮನ ಕಥೆಯಷ್ಟು ಜನಪ್ರಿಯವಾದ ಕಥಾಭಾಗ ಬೇರೆ ಯಾವುದು ಇಲ್ಲವೆಂದು ಹೇಳಬಹುದು.''[೫]

ಇಲ್ಲಿ ಪ್ರಮುಖವಾಗಿ ಏಳು ಸಂಗತಿಗಳನ್ನು ಗಮನಿಸಬೇಕಾಗಿದೆ.

೧. ಸೋಲಿಗರ ಬೇಟೆ ೨. ಬೇಟೆಯ ಅವಧಿ ೩. ಸಂಕಮ್ಮನ ಫಲಾಪೇಕ್ಷೆ ೪. ನೀಲಯ್ಯನ ಅನುಮಾನ ೫. ಮಾಟದ ಪ್ರಾಮುಖ್ಯತೆ ೬. ಮಕ್ಕಳ ಭಾಗ್ಯ ನೀಡುವ ಕ್ರಿಯೆ ೭. ಹುಟ್ಟಿದ ಮಕ್ಕಳನ್ನು ಮೀಸಲು ಬಿಡುವ ಒಪ್ಪಂದ.

ಸೋಲಿಗ ನೀಲೇಗೌಡ ಜುಂಜೇಗೌಡನ ಕಿರಿಯ ಮಗಳು ಸತ್ಯ ಶರಣೆ ಸಂಕಮ್ಮನನ್ನು ತಾನೇ ನೋಡಿ ಮದುವೆಯಾಗಿ, ೧೨ ವರ್ಷವಾದರೂ ಮಕ್ಕಳಾಗದಿರಲು, ಸಂಕಮ್ಮನ ಓರಗಿತ್ತಿಯರು, ಅತ್ತಿಗೆ ನಾದಿನಿಯರು ಸಂಗಡಗಾತಿಯರು ಕೂಡಿಕೊಂಡು,

ಇವಳು ಹುಟ್ಟೀ ಬಂದ ಮೂವತ್ತು
ಮಂಡೇ ಮಾರಿ ಹನ್ನೆರಡು
ಮೈಯಾನ ಬಣ್ಣ ಕೆಡಲಿಲ್ಲ
ಮೊಖದ ಕಲೆಯೇ ತಪ್ಪಲಿಲ್ಲ
ದಟ್ಟಾ ಧರಣಿ ಸಂಕೆಣ್ಣು
ಹುಟ್ಟೂ ಬಂಜೆ ಸಂಕೆಣ್ಣು
ಮಕ್ಕಾಳ ಫಲವೇ ಮೊದಲಿಲ್ಲ
ಎದ್ದು ಮುಖವ ನೋಡಿದರೆ
ನಾವು ಬಂಜೇರಾಗುವವು
ಸಂಗಡ ದನಗಳ ಕಾದಾರೆ
ದನಗಳು ಬಂಜೇರಾಗುವವು
ಮಾಡಿದ ಅಡಿಗೆ ಉಂಡಾರೆ
ನಾವು ಬಂಜೇರಾಗುವವು
ಮೀದ ನೀರ ದಾಟಿದರೆ
ನಾವು ಬಂಜೇರಾಯ್ತೀವಿ
ನಮ್ಮ ಮಕ್ಕಳು ಬಂಜೇಲಾಗುವರು ||ಕೋರಣ್ಯ||

(ಮಲೆಮಾದೇಶ್ವರ, ಪುಟ ೧೪೨)

ಎಂದು ದೂಷಿಸುತ್ತಾರೆ.

"ತಾಯ್ತನ ಜನಪದ ಸಾಹಿತ್ಯದಲ್ಲಿ ಸ್ಪಷ್ಟವಾಗಿ ವೇದ್ಯವಾಗುವುದು ಮಕ್ಕಳಿಲ್ಲದ ಬಂಜೆ ಹೆಣ್ಣುಗಳ ಗೋಳಿನಲ್ಲಿ, ಮಕ್ಕಳು ಬೇಕೆಂಬುದು ವೈಯಕ್ತಿಕ ಅಭೀಪ್ಸೆಯಷ್ಟೇ ಅಲ್ಲ, ಅದು ನಮ್ಮ ಧಾರ್ಮಿಕ ಸಾಮಾಜಿಕ ನಂಬಿಗೆಯೂ ಹೌದು, ಬಂಜೆತನ ಎಂಬುದು ಜನ್ಮಜನ್ಮಾಂತರದ ಪಾಪದ ಫಲ ಎಂಬ ಹಿಂದೂ ಧರ್ಮದ

ನಂಬಿಕೆಗನುಗುಣವಾಗಿ, ಜನಪದ ಸ್ತ್ರೀಯರ ಬದುಕು ರೂಪುಗೊಂಡಿದೆ. ಹೆಣ್ಣಿನ ಬದುಕಿನಲ್ಲಿ ಬಂಜೆತನದ ದುಃಖಕ್ಕೆ ಮಿಗಿಲಾದ ದುಃಖ ಇನ್ನೊಂದಿಲ್ಲ. ಬಂಜೆಯಾದವಳು ಈ ಸಮಾಜದ ಮತ್ತು ಕುಟುಂಬ ವ್ಯವಸ್ಥೆಯಲ್ಲಿ ಅನುಭವಿಸುವ ಅವಮಾನ, ಬಹಿಷ್ಕಾರಗಳನ್ನೂ ಬಂಜೆಯ ದಾರುಣ ದುಃಖವನ್ನು ಜನಪದ ಸಾಹಿತ್ಯ ವಿಧ ವಿಧವಾಗಿ ಅಭಿವ್ಯಕ್ತಿಸಿದೆ."[೬]

ಚುಚ್ಚು ಮಾತುಗಳನ್ನು ಕೇಳಿ ಹೆಚ್ಚು ದಿನ ಒಟ್ಟಿಗೆ ಇರುವುದು ಉಚಿತವಲ್ಲವೆಂದು, ನೀಲೇಗೌಡ ಮಡದಿಯೊಡನೆ ಮೂಡುಮಲೆ ಕಾಡಿಗೆ ಬಂದು ನಿರ್ಜನ ಪ್ರದೇಶವೊಂದರಲ್ಲಿ ಸೊಪ್ಪಿನ ಗುಡಿಸಲನ್ನು ಕಟ್ಟಿಕೊಂಡು ಅಲ್ಲಿ ವಾಸಮಾಡ ತೊಡಗಿದ - ನೀಲೇಗೌಡನಿಗೆ ತನ್ನ ಕುಲದ ಪದ್ಧತಿಯಂತೆ ಒಂಬತ್ತು ತಿಂಗಳ ಬೇಟೆಗೆ ಹೋಗಬೇಕಾದ ಸಂದರ್ಭ ಬರುತ್ತದೆ.

ಮಲೆ ಸೋಲಿಗರು ಸಾಮೂಹಿಕವಾಗಿ ಬೇಟೆಗೆ ಹೋಗುವ ಪ್ರಸಂಗ ಎಂದರೆ, ಇಂದು ಹೋಗಿ ನಾಳೆ ಬರುವ ಬೇಟೆಯಲ್ಲ. ಒಂಬತ್ತು ತಿಂಗಳುಗಳ ಕಾಲ ಸತತವಾಗಿ ನಡೆಯುವ ಸುದೀರ್ಘ ಬೇಟೆಯದು. ಬೇಟೆ ಯೆಂದರೆ ಅದು ಬೇಟೆಯೂ ಅಲ್ಲ. ವಾಸ್ತವವಾಗಿ ಕಾವ್ಯದಲ್ಲಿ ಬರುವ ವಿವರಗಳ ಪ್ರಕಾರ ಅದೊಂದು ಸುದೀರ್ಘ ಆಹಾರ ಸಂಗ್ರಹಣೆಯ ಪ್ರಯಾಣ. ಕಾಡಿನಲ್ಲಿ ಸಿಗುವ ಗೆಡ್ಡೆ-ಗೆಣಸು, ಬಿದರಕ್ಕಿ ತುಡುವೆ, ಜೇನು ಹೆಜ್ಜೇನು ಇತ್ಯಾದಿಯಾಗಿ ಆಹಾರ ಪರಿಕರಗಳ ಸಂಗ್ರಹದ ಬೇಟೆಯದು. ಈ ಆಹಾರ ಸಂಗ್ರಹಣೆಯ ಬಗ್ಗೆ ಮಲೆಯ ಮಾದೇಶ್ವರ ಕಾವ್ಯ ಅತ್ಯಂತ ವೈವಿಧ್ಯಮಯವಾಗಿ ವರ್ಣಿಸುತ್ತದೆ. ಇಡೀ ಪೋಡಿನ ಜನ ಒಮ್ಮೆ ಇಂಥ ಬೇಟೆಗೆ ಹೋಗಬೇಕೆಂದು ನಿರ್ಧರಿಸಿದರೆ, ಮನೆಗೆ ಒಬ್ಬರಂತೆ ಕಡ್ಡಾಯವಾಗಿ ಹೊರಡಲೇಬೇಕು. ಏಕೆಂದರೆ ಆ ದಟ್ಟಾರಣ್ಯದಲ್ಲಿ ಒಬ್ಬಿಬ್ಬರು ಇಂತಹ ಕಾರ್ಯ ಕೈಗೊಳ್ಳುವುದು ಸಾಧ್ಯವೇ ಇಲ್ಲ.

ನೀಲಯ್ಯನಿಗೆ ಬೇಟೆಗೆ ಹೋಗಲು ಆತಂಕ. ಈ ಆತಂಕ ಒಂಟಿ ಗುಡ್ಲಿನಲ್ಲಿರಬೇಕಾದ ಒಂಟಿ ಹೆಣ್ಣಿನ ಕುರಿತುದಲ್ಲ. ಹೀಗೆ ಕಾಡುವ ಆತನ ಆತಂಕ ಆ ಹೆಣ್ಣಿನ ಶೀಲವನ್ನು ಕುರಿತುದು. ಈ ಒಂಬತ್ತು ತಿಂಗಳಲ್ಲಿ ರೂಪಸಿಯಾದ ಹೆಂಡತಿಯ ಪಾತಿವ್ರತ ಉಳಿಯುವ ಬಗ್ಗೆ ಆತಂಕ ಪಡುತ್ತಾನೆ. ಅವಳು ಯಾರನ್ನು ಬೇಕಾದರು ಕೂಡಬಹುದಲ್ಲ ಎನ್ನುವ ಅನುಮಾನ. ಸಂಕಮ್ಮನ ಬಂಜೆತನಕ್ಕೆ ತಾನು ಕಾರಣನಿರಬಹುದಲ್ಲ ಎಂಬ ಒಳಧ್ವನಿ. ಅವನನ್ನು ಈ ಅನುಮಾನಕ್ಕೆ ತಳ್ಳಿರಬಹುದು. ಸಂಕಮ್ಮನ ಫಲಾಪೇಕ್ಷೆಯ ತೀವ್ರ ಹಂಬಲದಲ್ಲಿ ಯಾರಿಗಾದರೂ ತನ್ನ ಗೈರು ಹಾಜರಿನಲ್ಲಿ ಒಲಿದು ಬಿಟ್ಟರೆ? ಎಂಬ ಅನುಮಾನಗಳ ಸರಣಿಯ ಸಂಕಟ.

'ಮಲೆಯ ಮಾದೇಶ್ವರ' ಮಹಾಕಾವ್ಯ ಸ್ತ್ರೀ ಪರವಾದ ಚಿಂತನೆ ನಡೆಸಿರುವುದನ್ನು ಹೇಳುವಾಗ ಸಂಕಮ್ಮನ ಸಾಲು ಪ್ರತ್ಯೇಕವಾಗಿಯೇ ಉಲ್ಲೇಖಿಸಬೇಕಾದದ್ದು. ಇದೇ ಪ್ರಸಂಗ ಪುರುಷ ಶಾಹಿಯ ಧಿಕ್ಕೃತಿಗಾಗಿಯೇ ಮೂಡಿ ಬಂದಿತೇನೋ ಎಂಬಂತಿದೆ.

ಅತ್ತೆಯ ಮಕ್ಕಳು ಬರುವಾರು
ಮಾವನ ಮಕ್ಕಳು ಬರುವಾರು
ಭಾವ-ಮೈದ ಬರುವಾರು

ಬೆಂಕಿ ಎಣೆಯಲ್ಲಿ ಬತ್ತವರೆ
ಬಿಸ್ನೀರ ಎಣೆಯಲ್ಲಿ ಬತ್ತವರೆ
ಗೇಲೀನ ಮಾತ ಆಡುವರು
ರೂಪು ರೇಖೆ ನೋಡುವರು
ಅಂದ-ಚೆಂದ ನೋಡುವರು
ನಿನ್ನ ಮೇಲೆ ಕಣ್ಣು ಇಡುವರು
ಮಡದಿ ಒಲುಮೆಯ ಮದ್ದ ಕೊಡುವಾರು
ನಿನ್ನ ವಾಲೀಸಿಕೊಂಡು ಹೋಗುವರೂS

(ಮಲೆಮಾದೇಶ್ವರ, ಪುಟ ೧೫೪)

ರಕ್ತ ಸಂಬಂಧಗಳನ್ನು ಹೊಂದಿರುವ ಅಣ್ಣ ತಮ್ಮಂದಿರ ಬಗ್ಗೆಯೇ ಅನುಮಾನ, ಕೊನೆಗೆ ಅವರಲ್ಲದಿದ್ದರೆ,

ಮೂಡಲ ಗಿರಿಗೆ ಹೋದಾರೆ
ಮುತ್ತಿನ ಸೆಟ್ಟಿ ಬರ್‍ತಾನೆ
ಮುತ್ತೊಂದ್ಕೇರಾ ತತ್ತಾನೆ
ಮುತ್ತು ಮುತ್ತು ಅಂತ ಸಾರ್‍ತಾನೆ
ನಮ್ಮ ದೊಡ್ಡಿಯ ನೋಡ್ತಾನೆ
ದೊಡ್ಡಿಯ ಬಾಗಿಲಲ್ಲೆ ಬತ್ತಾನೆ
ಕೂಗಿ ನಿನ್ನ ಕರೀತಾನೆ
ನೀನು ಗುಡುಗುಡ್ನೋಡಿ ಬತ್ತೀಯೆ
ಬಾಗಿಲು ಬಗ್ಗಿ ನೋಡ್ತೀಯೆ
ಮುತ್ತಿನ ಸೆಟ್ಟಿ ಕರಿತೀಯ
ಚಾಪಾನಾದ್ರು ಹಾಸ್ತೀಯ
ಮುತ್ತಾನಾದ್ರು ನೋಡತೀಯ
ಕುತ್ತಿಗೆ ಮುಟ್ಟಿ ನೋಡತೀಯ
ಅವ್ನು ನಿನ್ನಂದ ಚಂದ ನೋಡತಾನೆ
ನಿನ್ನ ಚಂದ ಚಾರ ನೋಡತಾನೆ
ನಿನ್ನ ಚಲುವ ಬಾವ ನೋಡತಾನೆ
ನಿನ್ನ ದಪ್ಪ ದುಡುವ ನೋಡತಾನೆ
ನಿನ್ನ ಕೆಂಪು ರಂಪ ನೋಡುತಾನೆ
ನಿನ್ನ ಸುದ್ದ ಸುಳಿಯ ನೋಡತಾನೆ

ನಿನ ನಡಗೆ ನುಡಗೆ ನೋಡತಾನೆ
ನಿನ್ನ ಮೇಲೆ ಕಣ್ಣ ಮಡಗತಾನೆ
ಒಲುಮೆ ಮದ್ದ ಕೊಟ್ಟು ನಿನ್ನ
ವಾಲೇಸಿಕೊಂಡು ಹೋಯ್ತಾನೆ

(ಕೋರಣ್ಯ ನೀಡವ್ವ ಕೋಡುಗಲ್ಲಯ್ಯನಿಗೆ, ಪುಟ ೨೭,೨೮)

ಇವನಲ್ಲದಿದ್ದರೆ,

ಒಬ್ಬ ಆಟನಕಾರ ಬತ್ತಾನೆ
ಒಬ್ಬ ಮಾಟನಕಾರ ಬತ್ತಾನೆ
ಬುಡಬುಡುಕೆವ್ವ ಬತ್ತಾನೆ
ಮುಳ್ಳು ಗುರುಬಾನೆ ಬತ್ತಾನೆ
ನಿನ್ನ ಅಂದ ಚಂದ ನೋಡತ್ತಾನೆ
ನಿನ್ಗೊಂದಂತ್ರ ಕಟ್ಟು ಕಟ್ತಾನೆ
ಮಂತರ ಕಟ್ಟು ಕಟ್ತಾನೆ
ಒಂದು ಮಂತರ ಮಾಯ ಮಾಡ್ತಾನೆ
ನಿನ್ಗೆ ಒಲುಮೆ ಮದ್ದ ಕೊಡ್ತಾನೆ
ಹೆಣ್ಣೆ ವಾಲೇಸಿಕೊಂಡು ಹೋಯ್ತಾನೆ

(ಅದೇ, ಪುಟ ೩೦)

ಏನೇ ಆದರೂ ಹೆಣ್ಣಿನ ಮನಸ್ಸನ್ನು ತಿಳಿಯಲು ಸಾಧ್ಯವೇ ಎಂಬ ಸಂಶಯ

ಅತ್ತೀಯ ಹೂವ ನೋಡಬಹುದು
ಕೊತ್ತೀಯ ಮಾಸ ಕಾಣಬಹುದು
ಬಿಳೀ ಕಾಗೆಯ ನೋಡಬಹುದು
ಮೀನ ಹೆಜ್ಜೆಯ ನೋಡುವುದು...
ನಿಮ್ಮ ಹೆಣ್ಣು ಅಂಬೋ ಹೆಣ್ ಜಾತ್ಯ
ನಂಬೋದು ಹ್ಯಾಗೆ ಸಂಕೆಣ್ಣೆ
(ಉಲ್ಲೇಖ: ಕಾಡು, ಕಾಂಕ್ರಿಟ್ ಮತ್ತು ಜಾನಪದ, ಪುಟ ೫೯)

ಮುತ್ತಿನ ಸೆಟ್ಟಿ ಮತ್ತು ಬಳೆಗಾರ ಸೆಟ್ಟಿಯರು ಆ ಕಗ್ಗಾಡಿಗೆ ಹೋಗುತ್ತಿದ್ದರೋ ಇಲ್ಲವೋ, ನೀಲಯ್ಯನ ಅನುಮಾನವಿರುವುದು ಅವನ ಅಣ್ಣ ತಮ್ಮಂದಿರ ಬಗ್ಗೆಯೇ, ಅವನ ಸುತ್ತ ಪೋಡಿನಲ್ಲಿರುವ ಅವನ ರಕ್ತ ಸಂಬಂಧಿಗಳನ್ನೇ ಅವನು ಅನುಮಾನಿಸುತ್ತಿದ್ದಾನೆ. ಒಂದು ಕಾಲಕ್ಕೆ ಇದ್ದಿರಬಹುದಾದ ಅಣ್ಣ ತಮ್ಮಂದಿರು

ಮತ್ತು ಅತ್ತಿಗೆ ನಾದಿನಿಯರ ನಡುವಿನ ಮುಕ್ತ ಲೈಂಗಿಕ ಸಂಬಂಧ ಹಾಗೂ ಕಾಲ ಕ್ರಮೇಣ ಅಂಥ ಸಂಬಂಧ ಅನೈತಿಕ ಎಂಬ ಭಾವನೆ ಬೆಳೆದು ಸಮಾಜ ಬಾಹಿರವಾದ ಸಂದರ್ಭದ ಮನಸ್ಥಿತಿಯೊಂದನ್ನು ಈ ಕಾವ್ಯ ಭಾಗ ಪ್ರತಿನಿಧಿಸುತ್ತಿರಬಹುದು. ಒಟ್ಟಿನಲ್ಲಿ ತನ್ನ ಈ ಅನುಮಾನದ ಪರಿಹಾರಕ್ಕೆ ಅವನು ಸಂಕಮ್ಮನಿಂದ ಭಾಷೆ ಕೇಳುತ್ತಾನೆ.

ಕೈ ಭಾಷೆ ನೀಡಲು ನಿರಾಕರಿಸುತ್ತಾಳೆ. ಸಂಕಮ್ಮನಿಗೆ ''ಕೈ ಭಾಷೆ ಕೊಡುವುದು ಬರಿಯ ಭಾಷೆಯ ಮಾತಿನ ಪ್ರಶ್ನೆಯಲ್ಲ. ಅದು ಅವಳ ಅಸ್ತಿತ್ವವನ್ನು ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ಪ್ರಶ್ನೆ. ಕೈ ಭಾಷೆ ಕೊಡುವುದು ತನ್ನ ಸ್ವಾಭಿಮಾನಕ್ಕೆ ಅವಮಾನ ಎನ್ನುವುದರ ಜತೆಗೇನೆ ಅದು ತನ್ನ ಸತ್ಯಕ್ಕೆ, ಅಂತಃಸಾಕ್ಷಿಗೆ ಮಾಡುವ ಅಪಚಾರ ಎಂದು ಆಕೆ ಭಾವಿಸುತ್ತಾಳೆ. 'ಬಲಗೈ ಭಾಷೆ ಕೊಟ್ಟುದೇ ಆದರೆ ಅಲ್ಲಿಗೆ ನನ್ನ ಸತ್ಯವೇ ಹುಸಿಯಾದಂಗಾಯ್ತು'. 'ಬಂಜೆ ಗೈ ಭಾಷೆ ಕೊಡುವುದಿಲ್ಲ ಎನ್ನುವ ಮಾತುಗಳಲ್ಲಿ ಬಂಜೆತನವನ್ನು ಮೀರುವ ಸಂಕಮ್ಮನ ತೀವ್ರ ಬಯಕೆಯು ವ್ಯಕ್ತವಾಗುತ್ತದೆ. ಇಲ್ಲಿ ನೀಲೇಗೌಡ, ಪಾತಿವ್ರತ್ಯವನ್ನು ಒಂದು ಮೌಲ್ಯವಾಗಿ ಪ್ರತಿಪಾದಿಸಿದರೆ, ಸಂಕಮ್ಮ ಹೆಣ್ಣಿನ ಸ್ವಾಭಿಮಾನವನ್ನು, ಆತ್ಮಸಾಕ್ಷಿಯನ್ನು, ಒಂದು ಮೌಲ್ಯವಾಗಿ ಮಂಡಿಸುತ್ತಾಳೆ.''[೭]

ಸಂಕಮ್ಮ,

''ನೀನು ಕಟ್ಟಿದ್ದ ತೆರುವ ತಕ್ಕಯ್ಯ
ನನ್ನ ಹಟ್ಟಿಂದಾಚೆ ಕಳುವಯ್ಯ
ನಿನ್ನ ದಾರಿಯ ನೀನು ನೋಡಯ್ಯ
ನನ್ನ ದಾರಿಯ ನಾನು ನೋಡ್ತೀನಿ
ನಾನು ಬಲಗೈ ಮುಟ್ಟಿ ಭಾಷೆ ಕೊಡುವಂತ
ಮಗಳಲ್ಲ, ಹೋಗೋ ಯಜಮಾನ''

(ಉಲ್ಲೇಖ: ಭಾರತೀಯ ಸ್ತ್ರೀವಾದ : ಒಂದು ಸಂಕಂಥನ, ಪುಟ ೩೪)

ಎಂಬ ಪ್ರತಿ ಸವಾಲು ಒಡ್ಡುತ್ತಾಳೆ. ಬುಡಕಟ್ಟು ಸಮಾಜದ ಸಂಕಮ್ಮ ನಂತಹ ಹೆಣ್ಣಿಗೆ, ಗಂಡ ತನ್ನ ಸಂತಾನಕ್ಕೆ ಪ್ರೇರಕನೇ ಹೊರತು, ಅದು ಜನ್ಮ ಜನ್ಮಾಂತರದ ಬಂಧವೂ ಅಲ್ಲ, ಸಂಬಂಧವೂ ಅಲ್ಲ. ಹೀಗಾಗಿ ಸಂಕಮ್ಮ ಕೈ ಹಿಡಿದ ಗಂಡನನ್ನು ಬಿಡಬಲ್ಲಳು. ಆದರೆ ಆತ್ಮ ವಂಚನೆ ಮಾಡಿಕೊಂಡು ಕೈ ಭಾಷೆ ಕೊಡಲಾರಳು.

ಈ ಇಡೀ ಪ್ರಕರಣ, ''ಹೇರಲಾಗುತ್ತಿರುವ ಪರುಷ ಪ್ರಧಾನ ಮೌಲ್ಯಗಳನ್ನು, ಸಂಕಮ್ಮ ತೀವ್ರವಾಗಿ ನಿರಾಕರಿಸುವುದನ್ನು ದಾಖಲಿಸುತ್ತದೆ. ಈ ನಿರಾಕರಣೆ, ಮದುವೆಯ ಸಾಂಪ್ರದಾಯಿಕ ಚೌಕಟ್ಟನ್ನು ಮೀರಿ ಪಾತಿವ್ರತ್ಯಕ್ಕೆ ಹೊಸ ಅರ್ಥವನ್ನು ಒದಗಿಸುವಲ್ಲಿ ಕಾಣುತ್ತದೆ. ಸಂಕಮ್ಮನನ್ನು ಮಾತೃ ಪ್ರಧಾನ ಬುಡಕಟ್ಟೊಂದರ ಹೆಣ್ಣು ಶಕ್ತಿಯಾಗಿ, ನೀಲಯ್ಯನನ್ನು ಪಿತೃ ಪ್ರಧಾನ ಸಮಾಜದ ಪುರುಷನ ಪ್ರತಿನಿಧಿಯಾಗಿ ಗುರುತಿಸ ಬೇಕಾಗಿದೆ.''[೮]

''ಇಲ್ಲಿ ಹೆಣ್ಣು ಮುಕ್ತತೆಗೆ ಹಾತೊರೆದರೆ, ಗಂಡು ಕಟ್ಟುಪಾಡಿನ ಬೇಲಿಯನ್ನು ಭದ್ರಪಡಿಸ ತೊಡಗಿದೆ. ಇದು ಅವಸ್ಥಾಂತರದಲ್ಲಿ ಸಮಾಜವೊಂದರ ಬೇಕು ಬೇಡಗಳ ಸಂಘರ್ಷ. ಆಸೆ ಅದುಮುವಿಕೆಗಳ ಸಂಘರ್ಷ ಮತ್ತು ಮುಕ್ತತೆ ಹಾಗೂ ಪಾತಿವ್ರತ್ಯವೆಂಬ ಮೌಲ್ಯಗಳ ನಡುವಿನ ಸಂಘರ್ಷ.''[೯]

ನೀಲಯ್ಯನ ಪುರುಷಪ್ರಧಾನದ ಕಾಠಿಣ್ಯ ಇಷ್ಟಕ್ಕೇ ನಿಲ್ಲುವುದಿಲ್ಲ. ಭಾಷೆ ಕೊಡಲು ನಿರಾಕರಿಸಿದ ಸಂಕಮ್ಮ ನನ್ನು ಬೆತ್ತಲಾಗಿಸಿ, ಬಳ್ಳಿಗಳಿಂದ ಕೈಕಾಲು ಕಟ್ಟಿ, ಬೋರಲಾಗಿ ಬಿಳಿಸಿ, ಎಲೆಗಳಿಂದ ಮುಚ್ಚಿ, ಗುಡ್ಲ ಮುಂದೆ ಎಪ್ಪತ್ತೇಳು ಮಂಡಲ ಬರೆದನು. 'ಚೀಟು' ಬರೆದು ಮುಂದಿಟ್ಟನು. ಹೆಚ್ಚಿನ 'ರಾಕಸಿ' ಗೊಂಬೆ ಮಾಡಿ ಬಾಗಿಲಲ್ಲಿ ನಿಲ್ಲಿಸಿದನು. ಇನ್ನೂ ಅಲ್ಲಿ ಯಾರು ಸುಳಿಯಲು ಸಾಧ್ಯವಿಲ್ಲ ಎಂಬುದನ್ನು ಖಾತ್ರಿಪಡಿಸಿ ಕೊಂಡು, ಜೂಲುನಾಯಿ ಯೊಡನೆ ಬೀಸುವ ಮಚ್ಚನ್ನು ಹಿಡಿದು ಕಾಡಿಗೆ ನಡೆದ.

'ಚಿತ್ರಹಿಂಸೆ'ಯಲ್ಲಿ ದುಃಖ ಮಾಡುತ್ತ ಸಂಕಮ್ಮ ತಮ್ಮ ಅಪ್ಪನ ಮನೆ ದೇವರು ಮಾದಯ್ಯನಿಗೆ ಮೊರೆಯಿಡ ಲಾಗಿ, ಮಾದಯ್ಯ 'ನರಲೋಕದಲ್ಲೆಲ್ಲೋ ಹೆಣ್ಣಿನ ಗೋಳಾಗುತ್ತಿದೆ' ಎಂದು ಬರಗನೇರಿ ತವಸೆರೆ ಬೆಟ್ಟದ ಮಗ್ಗುಲಾಗಿ ಸಂಕಮ್ಮನ ಗುಡಿಸಿಲ ಬಳಿ ಬಂದ. ಬರಗನನ್ನು ನೋಡಿ ಹೆದರಿಯಾಳೆಂದು, ಸಣ್ಣ ಕೊತ್ತಿಯನ್ನು ಮಾಡಿ ದೂರ ಬಿಟ್ಟು ತನ್ನ 'ಕಪ್ಪುಧೂಳ್ತ'ದಿಂದ ಮಂಡಲವನ್ನು 'ರಾಕಾಸಿಗೊಂಬೆ'ಯನ್ನು ನಾಶಮಾಡಿ ಭಿಕ್ಷೆ ಸಾರಿದ. ಮನೆ ದೇವರು ಮಾದೇವನೇ ಮನೆಯ ಬಾಗಿಲಿಗೆ ಬಂದಿದ್ದಾನೆಂದು ತಿಳಿದು ಸಂಕಮ್ಮ ಒಳಗೆ ಕಣ್ಣೀರಿಟ್ಟಳು; ಹೊರಗೆ ಬರುವಂತಿಲ್ಲ; ಮೈಮೇಲೆ ಬಟ್ಟೆಯಿಲ್ಲ ಗಂಡ ಕೈಕಟ್ಟಿ ಉರುಳಿಸಿದ್ದಾನೆ.

ನೀಲಯ್ಯ ಮಹಾ ಮಾಟಗಾರ ಅನೇಕ ರೀತಿಯ ಮಂಡಲಗಳನ್ನು ಬರೆದು ಕಟ್ಟು ಕಟ್ಟಳೆಗಳನ್ನು ಮಾಡಿ ಹಾವು, ಚೇಳು, ರಾಕ್ಷಸರನ್ನು ಕಾವಲಿಗಿಟ್ಟು ಕುಲದ ಬೇಟೆಗೆ ಹೋಗಿದ್ದಾನೆ. ಆ ಕಟ್ಟುಕಟ್ಟಳೆಗಳನ್ನು ನಿರರ್ಥಕ ಗೊಳಿಸಿಯೇ ಒಳ ಹೋಗಬೇಕು. ಇದು ಮಾದೇಶ್ವರನಿಗೆ ಅಸಾಧ್ಯದ ವಿಚಾರವೇನೂ ಅಲ್ಲ. ಯಾಕೆಂದರೆ ಇವನು ಮೋಡಿಕಾರರ ಗುರು. ಮಂತ್ರ ವಿದ್ಯೆಯ ಸಕಲ ವಿವರಗಳೂ ಗೊತ್ತಿರುವ ಮಹಾ ಮಾಂತ್ರಿಕ. ಮೋಡಿಗೆ ಪ್ರತಿ ಮೋಡಿ ಮಾಡಿ ಕ್ಷಣಾರ್ಧದಲ್ಲಿ ನಿರರ್ಥಕಗೊಳಿಸಬಲ್ಲ ಮಹಾವಿದ್ಯೆಕಾರ. ನೀಲಯ್ಯನ ಎಲ್ಲ ಮಂಡಲ ಗಳನ್ನು ಕಟ್ಟು ಕಟ್ಟಳೆಗಳನ್ನು ನಿರರ್ಥಕಗೊಳಿಸಿ ಸಂಕಮ್ಮಳನ್ನು ಸಮೀಪಿಸುತ್ತಾನೆ. ಅವಳ ಮೈ ಮೇಲಿನ ಮುಳ್ಳು ಬಳ್ಳಿಗಳನ್ನು ಇಲ್ಲವಾಗಿಸುತ್ತಾನೆ. ಬೆತ್ತಲೆ ಇರುವ ಸಂಕಮ್ಮಳಿಗೆ ವಸ್ತ್ರವನ್ನು ದಯಪಾಲಿಸುತ್ತಾನೆ.

ಸಂಕಮ್ಮ ನೀಲಯ್ಯನ ಮಾಟದ ಮಂಡಲದಿಂದ ಬಿಡಿಸಿ ಕೊಂಡಳೆಂದರೆ, ''ಪಾತಿವ್ರತ್ಯದ ಸಂಕೋಲೆಯಿಂದ ಬಿಡಿಸಿಕೊಂಡಳು ಎಂದೆ ಅರ್ಥ.''[೧೦]

ಭಾಗ್ಯ ಕೊಟ್ಟು ಭಗವಂತನಿಗೆ ಭಿಕ್ಷೆ ಕೊಡಲು ಮುಂದಾದಾಗ, ಮಾದೇವ ಬಂಜೆಯ ಕೈಯ ಭಿಕ್ಷೆಯನ್ನು ನಿರಾಕರಿಸಿದ. ಅಮ್ಮ ಬಂಜೆ ಕೈಯ ಭಿಕ್ಷೆ ಬೇಡ. ನಿನ್ನ ಕೈಯ ಭಿಕ್ಷೆ ತೆಗೆದುಕೊಂಡು ನನ್ನ ಕೈಲಾಸಕ್ಕೆ ಹೋಗಿ ಏಳೇಳು ಕೋಟಿ ಪರಿಸೆ ಬಂದಾಗ, ಹಂಚಿದರೆ ಅವರೂ ಬಂಜೆಯರಾಗುವರು ಎಂದ ಮಾದೇವ.

''ತಾಯ್ತನದ ಇಂಥ ಯಾವ ಕಷ್ಟಗಳೂ ಕೂಡ ಮಕ್ಕಳ ಅಭೀಪ್ಸೆಯ ಮುಂದೆ ತೃಣ ಸಮಾನ. ಈ ಅಂಶ ಜನಪದ ಸಾಹಿತ್ಯದಲ್ಲಿ ಇನ್ನೂ ಸ್ಪಷ್ಟವಾಗಿ ವೇದ್ಯವಾಗುವುದು. ಮಕ್ಕಳಿಲ್ಲದ ಬಂಜೆ ಹೆಣ್ಣುಗಳ ಗೋಳಿನಲ್ಲಿ, ಮಕ್ಕಳು ಬೇಕೆಂಬುದು ವೈಯಕ್ತಿಕ ಅಭೀಪ್ಸೆಯಷ್ಟೇ ಅಲ್ಲ, ಅದು ನಮ್ಮ ಧಾರ್ಮಿಕ ಸಾಮಾಜಿಕ ನಂಬಿಕೆಯೂ ಹೌದು. ಬಂಜೆತನ ಎಂಬುದು ಜನ್ಮ ಜನ್ಮಾಂತರದ ಪಾಪದ ಫಲ ಎಂಬ ಹಿಂದೂ ಧರ್ಮದ ನಂಬಿಕೆಗನು ಗುಣವಾಗಿ, ಜನಪದ ಸ್ತ್ರೀಯರ ಬದುಕು ರೂಪುಗೊಂಡಿದೆ. ಹೆಣ್ಣಿನ ಬದುಕಿನಲ್ಲಿ ಬಂಜೆತನದ ದುಃಖಕ್ಕೆ ಮಿಗಿಲಾದ ದುಃಖ ಇನ್ನೊಂದಿಲ್ಲ. ಬಂಜೆಯಾದವಳು ಈ ಸಮಾಜದ ಮತ್ತು ಕುಟುಂಬ ವ್ಯವಸ್ಥೆಯಲ್ಲಿ

ಅನುಭವಿಸುವ ಅವಮಾನ, ಬಹಿಷ್ಕಾರಗಳನ್ನು ಬಂಜೆಯ ದಾರುಣ ದುಃಖವನ್ನು ಜನಪದ ಸಾಹಿತ್ಯ ವಿಧವಿಧವಾಗಿ ಅಭಿವ್ಯಕ್ತಿಸಿದೆ.''[೧೧]

ಸಂಕಮ್ಮ ಸೋಲಲಿಲ್ಲ. ಭಾಗ್ಯ ಕೊಟ್ಟ ಭಗವಂತ, ಮಕ್ಕಳ ಫಲ ಕೊಡು ಎಂದು ಸಂಕಮ್ಮನೇ ಬೇಡಿ ಮಾದಯ್ಯನನ್ನು ಕಾಡುವ ಪ್ರಸಂಗವನ್ನು ಇಲ್ಲಿ ಗಮನಿಸಬಹುದು.

"ಮಕ್ಕಳ ಫಲವನ್ನು ನೀವು ಕೊಟ್ರೆ ಸರಿ
ಇಲ್ಲದೇ ಹೋದ ಪಕ್ಷದಲ್ಲಿ
ನಿಮ್ಮ ಪಾದದ ಮ್ಯಾಲೆ ಬಿದ್ದು
ಪ್ರಾಣನಾದರೆ ಬುಡುತೀನಿ"

(ಮಲೆಯ ಮಾದೇಶ್ವರ, ಪುಟ ೬೨೨)

ಎಂದು ಅಂಗಲಾಚಿದಾಗ,

"ಕೇಳು ಕೇಳು ನನಕಂದ ಸಂಕಮ್ಮ
ಮಕ್ಕಳ್ ಫಲಾ ಕೋಡೋದ್ಕೆ
ನಾನೇನ ಇಸ್ನು ಬ್ರಮ್ಮ ಈಸ್ವುರ ಕೆಟ್ಟೋದ್ನ
ಯಾರ ಮಕ್ಳು ತಂದು ನಿನ್ನೊಟ್ಟೇಲಿ ಕೊಡ್ಲಿ ಕಂದಮ್ಮ
ಒಣು ಮರವನ್ನು ನೆಟ್ಟಿ ಪಾತಿ ಕಟ್ಟಿ ಪಾತಿ ತುಂಬ ನೀರೂದ್ರೆ
ಒಣ್ಮರ ಚಿಗ್ರಿ ಹೂವ್ಬುಡ್ತದ ಕಂದ...."ಎಂದ

(ಅದೇ, ಪುಟ ೬೨೨)

ಮಕ್ಕಳ ಫಲ ಕೊಡ್ತೀನಿ ನನಗೇನು ಕೊಡ್ತಿ ಕಂದಮ್ಮ ಎಂದು ಕೇಳಿದಾಗ, ಹೆಣ್ಣಾಗಲಿ ಗಂಡಾಗಲಿ ಹುಟ್ಟಿದ ಒಂಬತ್ತೇ ದಿನಕ್ಕೆ ಭಿಕ್ಷೆ ಕೊಟ್ಬು ಬಿಡ್ತಿನಿ ಎಂದು ಮಾತು ಕೊಟ್ಟಳು.

"ಜೋಡಿ ಮಕ್ಕಳ ಕೊಟ್ಟಾರೆ ನಿಮ್ಮ
ಮುತ್ತಿನ ಜೋಳಗೆ ದಾನ ನೀಡುವೆನೋಃ"

(ಮಲೆಮಾದೇಶ್ವರ, ಪುಟ ೨೫೨)

ಸಂಕಮ್ಮನ ಭರವಸೆಯಂತೆ ಕಾಡು ಬೆಂಡೇ ಕಾಯಿಯಲ್ಲಿ 'ಪಿಂಡ ಪರಸಾದ' ಕೊಟ್ಟು ಅವಳ ರಕ್ಷಣೆಗೆ ಮನೆಯಲ್ಲಿ ಬಿಳಿಯ ಪಲ್ಲಿಯಾಗಿ ಮಾದೇವ ಉಳಿದ.

ಮಾದೇಶ್ವರನ ಈ ಪ್ರಧಾನ ಉದ್ದೇಶ ಸಂತಾನ ಫಲವನ್ನು ನೀಡುವುದಲ್ಲದೆ, ಆ ಮಕ್ಕಳನ್ನು ತನಗೆ ಮೀಸಲಿಡಬೇಕೆಂದು ತಾಕೀತು ಮಾಡುವುದು ಇಲ್ಲಿನ ವಿಶೇಷ. ಬಂಜೆತನ ನಿವಾರಣೆಯೇ ಇಲ್ಲಿನ ಗುರಿಯಾಗಿದ್ದರೂ, ಕಥಾನಾಯಕನು ತನ್ನ ಒಕ್ಕಲು ವಿಸ್ತರಣೆಯ ಇಂಗಿತವನ್ನು ಪ್ರದರ್ಶಿಸುತ್ತಾನೆ.

ಸಂಕಮ್ಮನಿಗೆ ಇದು ಅನೀತಿಯ ವಿಚಾರವಲ್ಲ. ತಾನು ಬಯಸಿದ ಮಕ್ಕಳನ್ನು ತಾನು ಒಪ್ಪಿದ ಗಂಡಿನಿಂದ ಪಡೆಯುವ ಆರೋಗ್ಯಕರ ಪದ್ಧತಿಯನ್ನು ಅವಳು ಅನುಸರಿಸಿದ್ದಾಳೆ. ಹೀಗಾಗಿ ಇದನ್ನು ಯಾರಿಂದಾದರೂ, ಮುಚ್ಚಿಡಬೇಕೆಂಬ ಒಳ ಭಯವೂ ಅವಳಿಗಿಲ್ಲ. ಈ ವಿಚಾರದಲ್ಲಿ ಅವಳು ತುಂಬ ಸ್ಪಷ್ಟವಾಗಿದ್ದಾಳೆ. ಮಾದೇವ ಕೇಳುತ್ತಾನೆ "ನಿನಗೆ ಮಕ್ಕಳು ಸಂತಾನ ಕೊಟ್ಟು, ಬಂಜೆ ಗುಣ ನೀಗುಸದ್ದಾಯ್ತು, ನಿನ್ನ ಗಂಡ ಕೊಟ್ಟ ಕೊಲೇನಲ್ಲ ನಿಲ್ಲುಸದ್ದಾಯ್ತು, ಸೊಪ್ಪುನ ಗುಡ್ಲೆಲ್ಲ ಹಾಳಾಗೋಗಿಬುಟ್ಟು, ಬೇಕಾದ ಭಾಗ್ಯ ಕೊಟ್ಟುದ್ದಾಯ್ತು, ನಿನ್ನ ಗಂಡ ಬಂದು ಕೇಳತಾನಲ್ಲ ಈ ಅರಮನೆ, ತೊರಮನೆ ಯಾರು ಕಟ್ಟಿ ಕೊಟ್ಟವರು ಯಾರ್ನ ಮಡೀಕೊಂಡು ಬಿಮ್ಮನಸೆ ಆಗಿದ್ದೀಯ ಅಂತ ಕೇಳಾತಾನಲ್ಲ, ಏನಂತ ಹೇಳಿಯೇ ಮಗಳೆ" ಅಂತ ಕೇಳಿದಾಗ, ಅದಕ್ಕೆ ಸಂಕಮ್ಮ ಕೊಡುವ ಉತ್ತರ ಅವಳು ನಂಬಿದ ಮೌಲ್ಯಕ್ಕೆ ಅವಳೆಷ್ಟರ ಮಟ್ಟಿಗೆ ಬದ್ಧಳು ಎಂಬುದನ್ನು ತೋರಿಸುತ್ತದೆ. ಅವಳು ಹೇಳುತ್ತಾಳೆ- ಅಯ್ಯೋ ಗುರುವೆ, ನನ್ನ ಪಾಪಗೇಡಿ ಪ್ರಾಣವನ್ನು ಉಳಿಸಿಕೊಳ್ಳುವುದಕ್ಕಾಗಿ, ನನ್ನ ನಾಲಗೆಯಿಂದ ಒಂದು ಸುಳ್ಳು ಮಾತು ಹೇಳುವುದಿಲ್ಲ, ನಮ್ಮಪ್ಪನ ಮನೆ ದೇವರಾದ ಮಾದೇವ ಬಂದು ಭಾಗ್ಯ ಕೊಟ್ಟ ಅಂತ ಹೇಳೀನೆ, ಹೊರತು ಇನ್ನೊಂದು ಸುಳ್ಳು ಮಾತು ಹೇಳೋದಿಲ್ಲ ನಿನ್ನ ಪಾದ ಅಂದ್ನು. ಒಟ್ಟಾರೆ ಮಕ್ಕಳ ಫಲ ಕೊಡುವ, ಈ ಇಡೀ ಸಂದರ್ಭ ''ಪುರುಷ ಪ್ರಧಾನ ಸಮಾಜದ ಒಪ್ಪಿತ ಮೌಲ್ಯವಾದ ಶೀಲವನ್ನು ನಿರ್ಲಕ್ಷಿಸುವ ಮೂಲಕ ಪಾತಿವ್ರತ್ಯವನ್ನು ಮೀರುವ ಒಂದು ಕ್ರಿಯೆಯಾಗಿ ಮುಖ್ಯವಾಗುತ್ತದೆ.''[೨]

ಒಂಬತ್ತು ತಿಂಗಳ ಕಾಲ ಕುಲದ ಬೇಟೆ ಇದೇ ವೇಳೆಗೆ ಮುಗಿದು ನೀಲಯ್ಯ ಹಿಂತಿರುಗುತ್ತಾನೆ. ಬೇಟೆಯಿಂದ ಮರಳಿದ ನೀಲಯ್ಯನ ಕಣ್ಣಿಗೆ ಬೀಳುವುದು ಏಳುಪ್ಪರಿಗೆಯ ಮನೆ. ಅವನ ಕೋಪ ನೆತ್ತಿಗೇರಿತು. ಉಕ್ಕಿನ ಕತ್ತಿಯನ್ನು ಮಸೆದುಕೊಡು ರುದ್ರಗ್ಟಾಪದಲ್ಲಿ ಬಂದ. ಮಾದಯ್ಯ ಸಂಕಮ್ಮನಂಥ ಗೊಂಬೆಯನ್ನು ಸೃಷ್ಟಿಸಿ ಅವನೆದುರು ಬಿಟ್ಟ. ಮೂರು ತುಂಡಿಗೆ ನೀಲೇಗೌಡ ಅದನ್ನು ಕಡಿದು ಹಾಕಿದ. ಅವನ ಕೋಪ ತಗ್ಗಿತು. ಗರ್ಭಿಣಿಯಾಗಿದ್ದ, ಸಂಕಮ್ಮ ನಂತರ ಹೊರಗೆ ಬಂದು, ತಮ್ಮಪ್ಪನ ಮನೆಯ ದೇವರು ತನಗೆ ಕೊಟ್ಟ ಭಾಗ್ಯವನ್ನು ವಿವರಿಸಿದಳು. ನೀಲೇಗೌಡ ಆ ದೇವರ ದೃಢವನ್ನು ಪರೀಕ್ಷಿಸಲು ಹೆಂಡತಿಗೆ ಪರೀಕ್ಷೆಗಳನ್ನು ಒಡ್ಡಿದ:

ಕುದಿವ ಎಣ್ಣೆಯ ಕೊಪ್ಪರಿಕೆಗೆ ಹಾಕಿದ, ಅದು ಪನ್ನೀರಾಯಿತು. ಇದಕ್ಕೂ ನಾನು ಒಪ್ಪುವುದಿಲ್ಲ ಮತ್ತೊಂದು ಪರೀಕ್ಷೆಗೆ ಗುರಿ ಪಡಿಸುತ್ತೇನೆ ಇದರಲ್ಲಿ ಜಯಶೀಲಳಾದರೆ ಒಪ್ಪುತ್ತೇನೆ ಎಂದ. ಮರುಳು ಗಡಿಗೆ ಮಾಡಿ ಹಾವಿನ ಸಿಂಬಿಯನ್ನು ಮಾಡಿ, ನೀರು ತುಂಬಿಕೊಂಡು ಬರಬೇಕು ಎನ್ನಲು ಮಾದೇಶ್ವರರು ಸಂಕಮ್ಮನಿಗೆ ಸಮಾಧಾನಿಸಿ ಮರಳು ಗಡಿಗೆಯಲ್ಲಿ ನೀರು ತರಲು ನೆರವಾದರು. ಹೀಗೆ ನೀಲಯ್ಯ ಒಂಬತ್ತು ಬಗೆಯ ಕಠಿಣ ಪರೀಕ್ಷೆಗಳಿಗೆ ಸಂಕಮ್ಮನನ್ನು ಗುರಿ ಪಡಿಸಿದ. ಎಲ್ಲ ಪರೀಕ್ಷೆಗಳಲ್ಲೂ ಅವಳು ಜಯಶೀಲಳಾದಳು. ಪುನಃ ಅಗ್ನಿ ಪರೀಕ್ಷೆಗೆ ಸಂಕಮ್ಮನನ್ನು ಗುರಿಪಡಿಸಲು ನೀಲಯ್ಯ ಆಕೆಯನ್ನು ಕೊಂಡಕ್ಕೆ ಹಾಕಿದ. ಅಲ್ಲಿಂದ ಆಕೆ ಮೇಲೆದ್ದು ಬರಲಿಲ್ಲ. ಆಗ ನೀಲಯ್ಯ ತಾನು ಕೊಂಡಕ್ಕೆ ನೆಗೆಯಲು ತೊಡಗಿದ, ಮಾದೇಶ್ವರರು ಆತನನ್ನು ತಡೆದರು. 'ನಿನಗೆ ಆಕೆಯನ್ನು ಮರಳಿ ಕೊಟ್ಟರೆ ನೀನು ಇನ್ನಾವ ಶಿಕ್ಷೆಯನ್ನು ಆಕೆಗೆ ಕೊಡುವುದಿಲ್ಲವೇ? ಎಂದಾಗ ಇಲ್ಲ' ಎಂದನು. ಮಾದೇಶ್ವರನು ಸಂಕಮ್ಮನನ್ನು ಕರುಣಿಸಿದನು. ಸಂಕಮ್ಮ ''ಪುರುಷ ನಿರ್ಮಿತ ವ್ಯವಸ್ಥೆಯಲ್ಲಿ ಬೆಂದು ನರಳುವ ಇಡೀ ಸ್ತ್ರೀ ಜಾತಿಯನ್ನು ಪ್ರತಿನಿಧಿಸುತ್ತಾಳೆ. ಇಂತಹ ವ್ಯವಸ್ಥೆಯಲ್ಲಿ ಸ್ತ್ರೀ

ಬದುಕಿನುದ್ದಕ್ಕೂ ಒಂದಲ್ಲ ಒಂದು ಬಗೆಯ ಸವಾಲನ್ನು ಎದುರಿಸುತ್ತಲೇ ಬಾಳುತ್ತಾಳೆ. ಮದುವೆಯಾದೊಡನೆಯೇ ಮಕ್ಕಳಾಗದಿದ್ದರೆ ಬಂಜೆಯೆಂಬ ತಿರಸ್ಕಾರ. ತಾನು ರೂಪವತಿಯಾಗಿದ್ದರೆ 'ನಿನ್ನ ಹೆಣ್ಣೆಂಬ ಏಳು ಜಾತಿಯ ನಂಬಲಾರೆ' ಎಂದು ಅಡಿಗಡಿಗೂ ಸಂದೇಹಿಸುವ ಗಂಡ. ಪವಿತ್ರಳಾಗಿದ್ದು ತನ್ನ ಪಾವಿತ್ರ್ಯವನ್ನು ಎಲ್ಲರೆದುರಿಗೂ ಅಗ್ನಿ ಪರೀಕ್ಷೆಗಳ ಮೂಲಕ ಋಜುವಾತು ಪಡಿಸಬೇಕಾಗುವ ಒತ್ತಡ.''[೧೩]

ಈ ಕಾವ್ಯದಲ್ಲಿ ಬರುವ ಮೋಡಿ ಮಾಟ ಮತ್ತು ಮಂತ್ರ ವಿದ್ಯೆಯ ಅನೇಕ ವಿವರಗಳು ಪ್ರಾಚೀನ ಸಮಾಜವೊಂದರ ಜೀವನ ಪದ್ಧತಿಯ ಕುರುಹುಗಳಾಗಿ ನಮಗೆ ಕಾಣಿಸುತ್ತದೆ. ಯಾವುದೇ ಬುಡಕಟ್ಟು ಸಮುದಾಯದ ಅವಿಭಾಜ್ಯ ಅಂಗ ಈ ಮಂತ್ರ ವಿದ್ಯೆ. ಮಹಾಮಾಟಗಾರನಾದ ನೀಲೇಗೌಡ ಮತ್ತು ಮಾಟಕಾರರ ಗುರುವಾದ ಮಾದೇಶ್ವರ ಈ ಇಬ್ಬರು ಒಂದು ಕಾಲದ ಎರಡು ಸಮುದಾಯಗಳ ನಡುವೆ ನಡೆಯುತ್ತಿದ್ದಿರಬಹುದಾದ ಮಂತ್ರ ವಿದ್ಯೆಯ ಸ್ಪರ್ಧೆಯನ್ನೇ ಪ್ರತಿನಿಧಿಸುತ್ತಾರೆ. ಮಂತ್ರ ವಿದ್ಯೆಯೇ ಬುಡಕಟ್ಟು ಸಮುದಾಯದಲ್ಲಿ ಪ್ರಮುಖವಾಗಿತ್ತು ಎಂಬುದನ್ನು ಈ ಪ್ರಸಂಗ ನಿರೂಪಿಸುತ್ತದೆ.

ಒಂಬತ್ತು ತಿಂಗಳು ತುಂಬಿತು ಸಂಕಮ್ಮನಿಗೆ. ಬೆನ್ನ ಮಚ್ಚೆಯನ್ನು ಸೀಳಿಕೊಂಡು ಎರಡು ಮಕ್ಕಳು ಹುಟ್ಟಿದರು. ಒಂಬತ್ತು ತಿಂಗಳು ಅನಂತರ ಅಲ್ಲಿಯೇ ಬಿಳಿಯ ಹಲ್ಲಿಯಾಗಿ ಕಾಯುತ್ತಿದ್ದ ಮಾದೇವ ಜಂಗಮನಾಗಿ ಮನೆಯ ಬಾಗಿಲಲ್ಲಿ ಕಾಣಿಸಿಕೊಂಡ. 'ಮಕ್ಕಳ ಭಿಕ್ಷೆ'ಯನ್ನು ಕೇಳಿದೊಡನೆ ನೀಲಯ್ಯನಿಗೆ ಇನ್ನಿಲ್ಲದ ಸಿಟ್ಟು ಬಂದು, ಸೌದೇ ಸೀಳೊಂದನ್ನು ತೆಗೆದುಕೊಂಡು ಅಟ್ಟಿಸಿಕೊಂಡು ಹೋದ. ಮಾದಯ್ಯ ಒಂದು ಗಳಿಗೆ ಮರೆಯಾಗಿ ತನ್ನ ಬರಗನನ್ನು ಕರೆದು, ಮಕ್ಕಳನ್ನು ಕೊಲ್ಲದೆ, ನೀಲಯ್ಯನನ್ನು ಬೆದರಿಸುವಂತೆ ಮಾತ್ರ ಹೇಳಿ ಕಳಿಸಿದ. ಅಬ್ಬರಿಸಿಕೊಂಡು ಬಂದ ಬರಗನನ್ನು ನೋಡಿ ನೀಲಯ್ಯ ಮಂತ್ರದ ಚೀಲವನ್ನು ತೆಗೆದ. ಆದರೆ ಅವನ ಮಂತ್ರ ಕೆಂದಲಿಲ್ಲ. ಬೆದರಿ ಬೆಪ್ಪಾಗಿ ಮಾದಯ್ಯನಿಗೆ ಶರಣಾದ.

"ಸ್ವಾಮಿ ಇಂಥ ದುಷ್ಟಮೂರ್ತಿ ಅಂತ ತಿಳಿಯಲಿಲ್ಲ
ಮಕ್ಕಳ ಭಿಕ್ಷೆ ಕೊಡುತೀನಿ
ನಿನ್ನ ಮಾಯದ ಹುಲಿಯ ಕರಕಪ್ಪ"

(ಕರ್ನಾಟಕ ಜನಪದ ಕಲೆಗಳ ಕೋಶ, ಪುಟ ೬೨)

ಸಂಕಮ್ಮ ಮಕ್ಕಳಿಬ್ಬರು 'ಕಾರಯ್ಯ-ಬಿಲ್ಲಯ್ಯ' ಎಂಬ ಹೆಸರಿನಿಂದ ಮಾದಯ್ಯನ ಭಕ್ತರಾದರು. ಗಿರಿಯಲ್ಲಿ ಅವನ ಎಡಬಲದಲ್ಲಿ ಸದಾ ನಿಂತು ಸ್ವಾಮಿಯನ್ನು ಸೇವಿಸಿದರು.

''ಸಂಕಮ್ಮ ಸ್ಥಾಪಿತ ಸಮಾಜದಲ್ಲಿಯ ಪುರುಷ ಪ್ರಾಧಾನ್ಯವನ್ನು ಮತ್ತು ಅದು ಅಸಹಾಯಕ ಸಮುದಾಯವನ್ನು ನಿಯಂತ್ರಿಸಲು ಹೆಣೆದ ನಿರ್ಬಂಧ ರೂಪೀ ಸಾಮಾಜಿಕ ಕಾನೂನುಗಳನ್ನು ಏಕಕಾಲಕ್ಕೆ ಉಲ್ಲಂಘಿಸುತ್ತಾಳೆ. ಈ ಉಲ್ಲಂಘನೆ ಕೇವಲ ಕ್ಷುದ್ರ ಕಾರಣಗಳಿಗಾಗಿ ನಡೆದದ್ದಲ್ಲ. ಒಂದು ಪ್ರಬಲ ಸಮುದಾಯವೊಂದು ದುರ್ಬಲರನ್ನು ಆಳುವ ಸಲುವಾಗಿ ಸೃಷ್ಟಿಸಿದ ಹುಸಿ ಮೌಲ್ಯಗಳನ್ನು ಧ್ವಂಸ ಮಾಡುವ ಛಲಗಾರಿಕೆಯದಾಗಿದೆ.''[೧೪] 'ಪುರುಷ ನಿರ್ಮಿತ ವ್ಯವಸ್ಥೆಯಲ್ಲಾಗುವ ಸ್ತ್ರೀ ಶೋಷಣೆಯನ್ನು ಸ್ತ್ರೀಯ ಸ್ವಾಭಿಮಾನವನ್ನು ಮತ್ತು ಸ್ತ್ರೀಯ ಮಾನಸಿಕ ಸ್ಥೈರ್ಯವನ್ನು 'ಸಂಕಮ್ಮನ ಸಾಲು' ದಾಖಲಿಸುತ್ತದೆ.

ಮಲೆಯಮಾದೇಶ್ವರ ಕಾವ್ಯ ಸದ್ಯ ಮೌಖಿಕಪರಂಪರೆಯಲ್ಲಿ ಉಳಿದು ಬಂದಿರುವ ಜಗತ್ತಿನ ಶ್ರೇಷ್ಠ ಮೌಖಿಕ ಮಹಾಕಾವ್ಯಗಳಲ್ಲೊಂದು ಎನಿಸಿದರೆ ಅದರಲ್ಲಿನ ಸಂಕಮ್ಮ ಸ್ತ್ರೀ ಸಮುದಾಯದ ಪ್ರತಿಭಟನೆಯ ಧ್ವನಿಯಾಗಿ ಪ್ರತಿನಿಧಿಸುತ್ತಾಳೆ.

### ೩.೧.೨. ಬೇವಿನಹಟ್ಟಿ ಕಾಳಮ್ಮ

ಮಲೆಯಮಾದೇಶ್ವರ ಕಾವ್ಯದ 'ಬೇವಿನಹಟ್ಟಿ ಕಾಳಮ್ಮ'ನ ಸಾಲು ಸಂಕಮ್ಮನ ಸಾಲಿಗಿಂತ ಪೂರ್ಣವಾಗಿ ಭಿನ್ನವಾದುದು.

ಮಾದಪ್ಪನ ''ಮಂಡೆಗೆ ಎಣ್ಣೆ ಮಜ್ಜಣ'' ಬೇಕೆನಿಸಿ, ಎಳ್ಳು ಬೆಳೆಯುವ ರೈತನನ್ನು ಒಕ್ಕಲಾಗಿ ಪಡೆಯ ಬೇಕೆಂದು, ತನ್ನಿಂದಲೇ ಧನವಂತಳಾದ ಬೇವಿನಹಟ್ಟಿ ಕಾಳಮ್ಮಳ ಧನ ಮದವನ್ನು ಅಡಗಿಸಿದ ಸಾಹಸವೇ ಬೇವಿನಕಾಳಿಯ ಸಾಲು. ದೇವರು ಕೊಟ್ಟಾಗ ಜೋಗಿ, ಜಂಗಮ, ಗುಡ್ಡರಿಗೆ ದಾನ ನೀಡಬೇಕೆಂದು ಸಾಲಲ್ಲೇ ಬೇವಿನಕಾಳಿಯ ಕಥೆ ಹುಟ್ಟಿಕೊಂಡಂತೆ ಕಾಣುತ್ತದೆ. ಬೇವಿನಕಾಳಿ ಲೌಕಿಕ ವ್ಯಕ್ತಿ. ಆಸೆ ಆಕಾಂಕ್ಷೆಗಳನ್ನು ತುಂಬಿಕೊಂಡಿರುವುದು ಸಹಜ ಎಂಬುದನ್ನು ಜನಪದ ಕವಿ ಸೂಕ್ಷ್ಮವಾಗಿ ಚಿತ್ರಿಸಿದ್ದಾನೆ. 'ಬೇವಿನಕಾಳಿ, ಉದ್ಧಟ ತನದ ಹೆಂಗಸು, ಅವಳ ದರ್ಪ, ಅಟ್ಟಹಾಸ, ಟೇಂಕಾರಗಳು ಮುಗಿಲು ಮುಟ್ಟುವಂಥವು. ಯಾರಿಗೂ ಲೆಕ್ಕಿಸದ, ಯಾರನ್ನು ಪುರಸ್ಕರಿಸಿದ, ಯಾವುದರ ಪರಿವೆಯೂ ಇಲ್ಲದ, 'ಗಯ್ಯಾಳಿ'ಯವಳು. ಮೊದಲು ದೀನಳಾಗಿ ಬಡವೆಯಾಗಿ ಬದುಕಿದ್ದು, ಮಾದೇಶ್ವರನ ಕರುಣೆಯಿಂದಲೇ ಐಶ್ವರ್ಯವನ್ನು ದಕ್ಕಿಸಿ ಕೊಂಡುವಳು.ಆದರೆ ಅದರ ಸೊಕ್ಕಿನಲ್ಲಿ ಮೈ ಮರೆತವಳು. ಹೀಗೆ ಐಶ್ವರ್ಯದ ಮದದಲ್ಲಿ ಬೀಗುವವರನ್ನು ಮಾಯಕಾರ ಮಾದೇವ ಪರೀಕ್ಷಿಸದೆ ಬಿಡುವನೆ!' ಬೇವಿನಹಟ್ಟಿ ಕಾಳಮ್ಮಳ ಸೊಕ್ಕನ್ನು ಮಾದೇವ ಮುರಿದ ಕಥೆ ಬಹುಸ್ವಾರಸ್ಯಪೂರ್ಣ.

ಮಾದಪ್ಪನಿಗೆ, 'ತಿಂಗಾ ತಿಂಗಳು' ಎಣ್ಣೆ ಮಜ್ಜನ ಆಗಬೇಕು. ಎಣ್ಣೆ ಮಜ್ಜನಕ್ಕೆ ಒಕ್ಕಲು ಪಡೆದುಕೊಂಡು ಬರಬೇಕು ಅಂಥ ಭಕ್ತರನ್ನು ಹುಡುಕಿ ತರಬೇಕು ಎಂದು ಕೋಲು ಮಂಡೇಕಾರಯ್ಯನೊಡನೆ ಈ ವಿಚಾರ ತಿಳಿಸಿದಾಗ, ಅವನು ಅಂಥ ಬಲವನ್ನು ಪಡೆದಿಲ್ಲವೆಂದು ವ್ಯಕ್ತವಾಗುತ್ತದೆ. ಮಾದಪ್ಪ ನರಲೋಕವನ್ನೆಲ್ಲಾ ಸುತ್ತಿಯಾಯಿತು. ಆದರೆ ಒಬ್ಬರ ಮನೆ ದೃಢ ಒಬ್ಬರಲ್ಲಿ ಕಾಣಲಿಲ್ಲ. ವ್ಯಥೆಯಿಂದ ಮೂಡ ಮಲೆಗೆ ಮರುಳುವಾಗ, ದಾರಿಯಲ್ಲಿ 'ಏಳು ದೊರೆ ಹಳ್ಳ'ದ ಬಳಿಗೆ ಬಂದಾಗ, ಇಲ್ಲಿ ಬೇವಿನಕಾಳಿಯ ಬಡತನವನ್ನು ಬಯಲು ಮಾಡಿದ ನೆನಪಾಯಿತು.

"ನಿನಗೆ ಒಕ್ಕಲಾಗ್ತಿನೀ ಗುರುವೇ
ತಿಂಗಾ ತಿಂಗಳು ಚಾಕರಿ ಮಾಡ್ತಿನಿ
ಕಂಡ್ಗುದೂಪ ಕೊಂಡುದುಳಿಗೆ ಸುರಿತ್ತೀನಿ
ಎಂದು ಹೇಳಿದ್ದಳು"

(ಮಲೆಮಾದೇಶ್ವರ, ಪುಟ ೩೨೬)

ಹಾಗೂ,

"ಎಳ್ಳು ಮಜ್ಜನಕ್ಕೆ ವಕ್ಕಲಾಗ್ತಿನಿ
ಬಿತ್ತಿದ ಬೆಳೆ ಸರಿಪಾಲು ಕೊಡ್ತಿನಿ
ಹುಟ್ಟಿದ ಮಕ್ಕಳ್ನೆಲ್ಲ ಹೆಸರ್ಕರಿತೀನಿ"

(ಅದೇ, ಪುಟ ೩೨೮)

ಭಾಗ್ಯ ಕೊಡು ಗುರುವೇ ಎಂದು ಬೇಡಿ ಪಡೆದಿದ್ದು ನೆನಪಾಯಿತು. ಆದರೆ ಈವತ್ತು ಕಾಳಮ್ಮ ಅಂದ್ರೆ ಸಾಮಾನ್ಯವಲ್ಲ.

"ಏಳೇಳ್ ನಾಲ್ಕುಹಟ್ಟಿ ಕಟ್ಟಿದ್ದಾಳೆ ಸಾಲ್ಗೆ
ಗಂಧ ತೊಟ್ಟಿ ಗಾರೆ ತೊಟ್ಟಿ
ಚಿನ್ನತೊಟ್ಟಿ ರನ್ನತೊಟ್ಟಿ ಕಟ್ಟಿಸಾವಳೇ
ಏಳುಜನ ಗಂಡು ಮಕ್ಳು
ಏಳುಜನ ಜೀತಗಾರ್ರು
ಏಳುಜನ ಸೋಸೆರ್ರು
ದನಕರಿ ಕಟ್ಟುವದಕ್ಕೆ
ಚಿನ್ನ ಬೆಳ್ಳಿ ಗೂಟ ನೆಡಿಸಿದ್ದಾಳೆ"

(ಅದೇ, ಪುಟ ೩೨೬)

ಕಾಳಮ್ಮನ ಐಶ್ವರ್ಯ ಕಣ್ಣಿಂದ ನೋಡಲು ಸಾಧ್ಯವಿಲ್ಲದಂತ ಐಶ್ವರ್ಯ. ಆದರೆ ಅವಳಿಗೆ ಈ ಸಕಲೈಶ್ವರ್ಯ ಬಂದ ಮೇಲೆ ಮಾದೇವ 'ಅಂಬೋ ಮಾತೇ' ಮರೆತು ಹೋಯಿತು. ಆಲದ ಸೊಪ್ಪು ಬೇಯಿಸಿಕೊಂಡು, ಅಂಬಲಿ ಕಾಯಿಸಿಕೊಂಡು, ತೊಪ್ಪೆ ಬೆರಣೆ ತಟ್ಟಿಕೊಂಡು, ಕಾದಳ್ಳಿಯಲ್ಲಿ ಬಹಳ ಬಡಸ್ಥನ ದಲ್ಲಿದ್ದ ಬೇವಿನಕಾಳಿ ಬಹಳ ದುಃಖದಲ್ಲಿದ್ದು ಮಾದೇವನ ಧ್ಯಾನ ಮಾಡಿ ಅವರಿಂದ ಸಕಲೈಶ್ವರ್ಯವನ್ನು ಪಡೆದಳು. ಬೇವಿನಕಾಳಿ ಯಾವ ರೀತಿ ಐಶ್ವರ್ಯದಲ್ಲಿ ಓಲಾಡುತ್ತಿದ್ದಳೆಂದರೆ, ಏಳು ಜನ ಮಕ್ಕಳು, ಸೊಸೆಯರೊಡನೆ ಏಳಟ್ಟಿ ಕುರಿ, ಏಳು ಕೊಪ್ಪರಿಗೆ ದ್ರವ್ಯ, ಗಾಜಿನ ಉಪ್ಪರಿಕೆ, ಮಂಟಪ, ಮುಕ್ಕಾಲು ಮಂಚ, ಪಾದ ತೊಳೆಯಲಿಕ್ಕೆ ಪಚ್ಚೆ ಕಲ್ಲಂತೆ, ಎತ್ತು ಕಟ್ಟಕ್ಕೆ ಮುತ್ತಿನ ಗೂಟ, ಎಮ್ಮೆ ಕಟ್ಟಕ್ಕೆ ಬೆಳ್ಳಿಗೂಟ, ಏಳು ಕೊಪ್ಪರಿಗೆ ದ್ರವ್ಯ, ಮೂವತ್ತು ಮೊಳ ಪಟ್ಟೆ ಸೀರೆಯನ್ನು ಮೂರೇ ಸುತ್ತಿಗೆ ಸುತ್ತಿದ್ದಳಂತೆ. ಅವಳ ಕೋಟಾರದಲ್ಲಿ ಮುನ್ನೂರು ಮುವತ್ತು ಕಂಡ್ಗ ಎಳ್ಳು ರಾಶಿ ಎಣ್ಣೆ ಮಜ್ಜನಕ್ಕಿನ್ನಾವ ಕೊರತೆ ಎಂದು ಮಾದೇವ ಅವಳಿಂದ ಎಳ್ಳನ್ನು ಪಡೆಯಲು ಬೇವಿನಹಟ್ಟಿ ದಾರಿ ಹಿಡಿದ. ಕಾಳಮ್ಮನ ಹಟ್ಟಿ ಐಶ್ವರ್ಯವನ್ನು ಕಣ್ಣೆನಿಂದ, ಅರೆಗಣ್ಣು ಬಿಟ್ಟು ನೋಡಿದ್ದಲ್ಲದೆ, ಆಕೆಯ ಹಟ್ಟಿ ಐಶ್ವರ್ಯವನ್ನು ಕಾಯಲು, ಹಟ್ಟಿ ಬಾಗಲಲ್ಲಿ ಕಡಿಯೋ ನಾಯಿ, ಕಚ್ಚುವಂತ ಏಳು ತಲೆ ಕಾಳಿಂಗ ಸರ್ಪ, ಬಾಗಿಲ್ಗೆ ಇಬ್ಬರು ಗೊಲ್ಲರಿಟ್ಕೊಂಡು, ಯಾರು ಹರದೇಶಿ, ಪರದೇಶಿ, ಕಾಳಮುಖ ಸನ್ಯಾಸಿ, ದಾಸ ಜೋಗಿ ಗುಡ್ಡ, ಹೀಗೆ ಯಾರೂ ಭಿಕ್ಷೆ ಕೇಳಿಕೊಂಡು ಒಳಗೆ ಬರದ ಹಾಗೆ ವ್ಯವಸ್ಥೆ ಮಾಡಿ ಕೊಂಡಿರುವುದನ್ನು ಗಮನಿಸಿ, ಆಕೆಯ ದೃಢ ಪರೀಕ್ಷಿಸಲು ಮಾದಪ್ಪ ನಿರ್ಧರಿಸಿದರು.

ಇತ್ತ, ಬೇವಿನ ಕಾಳಿ ಎಳ್ಳು ಕಣಕ್ಕೆ ಹೋಗುವಾಗ, ತನ್ನ ಹಿರಿಯ ಸೊಸೆ ದೇವಾಜಿಯನ್ನು ಕರೆದು ಬುದ್ಧಿ ಹೇಳ್ತಾಳೆ.

"ಯಾರಾದ್ರೂ ಅಯ್ಯಗಳು ಅಪ್ಪಗಳು।
ಗುಡ್ಡಗಳು ಜೋಗಿಗಳು ಜಂಗಮರು ಬರ್‍ತಾರೆ।
ಅವರಿಗೆಲ್ಲಾ ಒಂದೊಂದಿಡಿ ರಾಗಿ ಕೊಡ್ತಾ ಬಂದ್ರೆ।
ನನ್ನ ಮನೇಲಿ ಏಳು ಸೇರು ರಾಗಿ ಕಾಲಿ ಆಗ್ಬುಡ್ತದೆ।

(ಮಲೆಯಮಾದೇಶ್ವರ, ಪುಟ ೨೪೪)

'ಅದೇ ರಾಗಿಯನ್ನು ಏಳು ಮುದ್ದೆ ಮಾಡಿ ಏಳು ಜನ ಮಕ್ಕಳಿಗೆ ಕೊಟ್ಟಿದ್ದೇ ಆದ್ರೆ, ಅವರೂ ಇನ್ನು ಬದ್ರುಗೆ ಉಳಿದಾವ್ರೆ 'ದ್ಯಾವಾಜಿ'. ನಮ್ಮಟ್ಟಿವಳಿಗೆ ಯಾರಾದರೂ ದಾರಿ ಹೋಕರು, 'ವಸಿಸುಣ್ಣ ಕೊಡಮ್ಮಿ' ಅಂತ ಕೇಳಿದರೂ, ಒಂದು ಸಾಸುವೆ ಗಾತ್ರ ಸುಣ್ಣವನ್ನು ಕೊಡ ಕೂಡದು. ಪ್ರಾಣ ವೋಗ್ತಿದೆ ಅಂದ್ರು, ಒಂದು ತೊಟ್ಟು ಬಾಯಿಗೆ ನೀರು ಬಿಡಬಾರದಮ್ಮಿ. ರಾಗಿ ಬೀಸುವಾಗ ಒಂದೊಂದು ಸಣ್ಣ ರಾಗಿ ಕಾಳು ಉಳ್ಕೊಂಡು ಬುಡ್ತದೆ, ಅದಕ್ಕೆ ಆ ರಾಗಿ ಕಲ್ಲಿನ ಸುತ್ತ ಉಕ್ಕಿನ ಸೂಜಿಯಾಗೆ ಉಳಿಸು' ಎನ್ನುತ್ತಾಳೆ. 'ಏಳು ಜನ ಉಂಡ ಎಂಜಲ ನೀರ ಕಲಗಚ್ಚಿಗೆ ಉಯ್ಯಬೇಕು. ಕಲಗಚ್ಚನ್ನು ಕಾಗೆ ಗೂಗೆ ಬಂದು ಕುಡಿದರೆ! ಅದಕ್ಕೆ ಮಂಜಿನ ಬಲೆ ಬೀಸಬೇಕು' ಎಂದು ಹಿರಿ ಸೊಸೆಗೆ ಎಚ್ಚರಿಸಿದಳು. ತನ್ನ ಏಳು ಮಂದಿ ಮೊಮ್ಮಕ್ಕಳಿಗೆ ಅರಪಾವು ಹಾಲನ್ನು ಹಂಚಿ ಕೊಟ್ಟಳು. ಕಣದ ಬಳಿ ಆಳುಗಳು ಎಳ್ಳು ತಿಂದಾರು ಎಂಬ ಅಂಜಿಕೆಯಿಂದ, ಆಗಾಗ ಅವರು ಬಾಯಿ ಮುಕ್ಕಳಿಸಿ ಕಲ್ಲ ಮೇಲೆ ನೀರನ್ನು ಉಗಿಯಬೇಕು. ಒಂದು ಎಳ್ಳು ಪರಿ ಕಂಡರೂ, ಅವರಿಗೆ ಕೊಡುವ ಮೂರು ಹಣಕ್ಕೆ ಖೋತ. ಇರುವೆಗಳು ಎಳ್ಳನ್ನು ಕಚ್ಚಿಕೊಂಡು ಹೋದಾವೆಂದು ಕಣದ ಸುತ್ತಲೂ 'ಕೊಂಡದ ಗುಳಿ' ತೆಗೆಸಿದ್ದಳು.

ಇಂಥ ಬೇವಿನಕಾಳಿಯ ಮನೆಗೆ ಮಾದೇವ 'ಕ್ಯಾರಣ್ಯ'ಕ್ಕೆ ಬಂದವರೆ, ಮಲೆಯ 'ಭಸ್ಮ'ವನ್ನು ತೆಗೆದು ನಾಯಿ, ಸರ್ಪ, ಗೊಲ್ಲಣರ ಮ್ಯಾಲೆ ಹಾಕಿದರು. ಬೇವಿನ್ನಟಿ ಒಳಗಡೆ ಹೋಗಿ 'ಪಾದಾ ತೊಳೆವಂತ ಪಚ್ಚೆಗಲ್ಲಿನ ಮ್ಯಾಲೆ ನಿಂತ್ಕಂಡ್ರು' ಜಂಗುನ ಸಬ್ದ ಮಾಡುದ್ರು, ಏಳು ಜನ ಸೊಸೆರು ಓಡ್ ಬಂದ್ರು. ದುರುದುರ್‍ನೆ ಮಾದಪ್ಪನ ನೋಡಿದರು. ಹಿರಿ ಸೊಸೆ, ಆಲಂಬಾಡಿ ಜುಂಜೇಗೌಡನ ಮಗಳು ಮಲ್ಲಾಜಮ್ಮ ನನ್ನ ಅಪ್ಪನ ಮನೆ ದೇವ್ರು ಅಂತೇಳಿ ಮಾದಪ್ಪನ ಪಾದ ತೊಳೆದು

ನನ್ನಪ್ಪ ನನ್ನ ಅತ್ತಮ್ಮನಾದ ಕಾಳಮ್ಮ
ನಮಗೆ ರಾಗಿ ಅಳತೆ ಕೊಡ್ತಾರೆ
ಅಸಿಟ್ಟು ಅಳತೆಕೊಡ್ತಾರೆ
ಕಟ್ಟಿದ ಮುದ್ದೆ ತೂಕ ಮಾಡ್ತರೆ
ಏನಾದ್ರು ಹೆಚ್ಚು ಕಡಿಮೆಯಾದರೇ
ನಮ್ಮ ನಡಹಟ್ಟಿಯೊಳಗೆ ಮುಂಡ್ಕ ಕಟ್ಟಾಕುಬಿಟ್ಟು

ಹುಣಸೆ ಚಬ್ಬೆ ತಕ್ಕಂಡು
ಸೀರೆ ಎತ್ತಿ ಮ್ಯಾಲೆ ಕಟ್ಟುಬಿಟ್ಟು
ನಮ್ಗ ಕೊಡಬಾರ್ದ ಶಿಕ್ಷೆ ಕೊಡ್ತಾಳೆ ಅತ್ತಮ್ಮ

(ಮಲೆಮಾದೇಶ್ವರ, ಪುಟ ೩೩೭)

ಇಂಥ ಬೇವಿನ್ಪಟಿಗೆ ನೀವು ಬರಬಹುದಾ, ದಾನ, ಭಿಕ್ಷೆ ಅಂದ್ರೆ ಆಕೆಗೆ ಲಕ್ಷ್ಯವಿಲ್ಲ ಎನ್ನುತ್ತಾಳೆ. ಮಾದೇವ ಕಾಳಮ್ಮ ಇರುವ ಜಾಗ ಕೇಳುತ್ತಾರೆ. ಬಾಣಗಾರ ಕೆಬ್ಬೆ ಹೊಲದಲ್ಲಿ ಇರುವ ವಿಚಾರ ತಿಳಿದು, ಅಲ್ಲಿಗೆ ಬಂದ್ರು. ಎಳ್ಳಿನ ಕ್ಯಾರಣ್ಯದ ಭಿಕ್ಷೆ ಸಾರುದ್ರು, ನಾನು ಮಾದಪ್ಪ, "ಮೂರು ಕೊಳ್ಗ ಎಳ್ಳನ್ನು ನನ್ನ ಮುತ್ತಿನ ಜೋಳಿಗ್ಗೆ ನೀಡು'' ಎಂದರು. ಬೇವಿನ ಕಾಳಿಗೆ ಕ್ಯಾಪ ಬಂದಿತು. ಮಾದಪ್ಪನೊ ಮಾರಪ್ಪನೊ ನನಗೆ ಒಂದೂ ಗೊತ್ತಿಲ್ಲ ದಾನ ಕೊಡುವುದಿಲ್ಲವೆಂದಳು. ಮೂರು ಕೊಳಗಬೇಡ, ಎರಡು ಕೊಳಗನಾದ್ರು ಕೊಡಲು ಕೇಳಿದರು ಮಾದಪ್ಪ. "ದಾನ ಕೊಡುವಂತ ಮಗಳಲ್ಲ. ನನ್ನ ಗಂಡನಾದ ಕೆಂಡೇಗೌಡ, ಮೂಡ್ಲು ಕಾಡಿಗೆ ಎಳ್ಳು ಹುಂಡಿ ದನವದ್ಕೊಂಡು ಹೋಗವ್ನೆ. ನನ್ನ ಎಳ್ಳು ಹುಂಡಿ ದನಗಳನ್ನು ಕಿರುಬ ತಿಂದರೂ ಸರಿಯೇ. ನನ್ನ ಗಂಡನಾದ ಕೆಂಡೇಗೌಡನು ಸತ್ಹೋದ್ರು ಸರಿಯೇ, ನಾನು ಮುಂಡೆ ಆದ್ರೂನೂವೆ ದಾನ ಕೊಡುವುದಿಲ್ಲ" ಎನ್ನುತ್ತಾಳೆ. ಒಂದು ಕೊಳಗ ಎಳ್ಳು ದಾನ ಕೇಳುತ್ತಾನೆ. ಆಗ ಬೇವಿನ ಕಾಳಿಗೆ ರುದ್ರ ಕ್ಯಾಪವೇ ಬಂದಿತು.

"ನೀನೇನಾದ್ರು ಮುಂಗಾರ್ನಲ್ಲಿ ಬಂದು
ನನ್ನ ಬಾಣಗಾರ ಕೆಬ್ಬೆ ಹೊಲದಲ್ಲಿ
ಏರ್‌ಕಟ್ಕಂಡು
ಹೊಲ ಉತ್ತು ಇಂಟ್ಗೆ ಒಂದು ಮೊಗೆ
ನೀರು ಊದು ಸಾಕಾಗಿತ್ತು
ಇಲ್ಲ ನಿಮ್ಮ ಅಪ್ಪ ಅಮ್ಮ
ನಿಮ್ಮ ತಾಯಿ ತಂದೆರು ಬಂದು
ಏನಾದ್ರು ನನ್ನ ಆಳುಗಳಿಗೆಲ್ಲ
ಅಂಬಲಿ ಕಾಯ್ಸಿ ವತ್ತು ಸಾಕಾಗಿತ್ತ"

(ಮಲೆಮಾದೇಶ್ವರ, ಪುಟ ೩೪೭)

ಎನ್ನುವ ಬೇವಿನಕಾಳಿಯ ಮಾತನ್ನು ಕೇಳಿ ಮಾದಯ್ಯನಿಗೆ ಆಶ್ಚರ್ಯವಾಯಿತು. ಮುನ್ನೂರು ಮೂವತ್ತು ಕಂಡ್ಗ ಎಳ್ಳಿನ ರಾಶಿ ಇದೆ. ಈ ರಾಶಿ ಎಲ್ಲ ಇಲ್ಲಿ ಬೂದಿಯಾಗೋದ್ರು ಸರಿಯೇ ದಾನ ಕೊಡುವುದಿಲ್ಲ ಎನ್ನುತ್ತಾಳೆ. ಒಂದು ಕೊಳಗ ಎಳ್ಳು ಕೊಡುವುದಕ್ಕೆ ನಿನಗೆ ಹೊಟ್ಟೆ ಉರಿದರೆ "ಮೂರುಬಳ್ಳ" ಕೊಡುವಂತೆ ಕೇಳಿದಾಗ, ಗಂಡ, ಗಂಡುಮಕ್ಕಳು ಹಾಗೂ ಏಳು ಜನ ಮೊಮ್ಮಕ್ಕಳನ್ನು ಕೊಂದರೂ ಸರಿ, ನಾನು ಎಳ್ಳಿನದಾನ ಕೊಡುವುದಿಲ್ಲ ಎನ್ನುತ್ತಾಳೆ.

ಕೊನೆಗೆ ಮಾದೇವ ಎರಡು ಬಳ್ಳ ಕೇಳುತ್ತಾನೆ. ಆಗ ಕಾಳಮ್ಮ ಪದೇ ಪದೇ ಚರ್ಚೆ ಮಾಡ್ತಾ ಇದ್ದಿಯಾ, ನನ್ನ ಏಳೇಳು ಹದಿನಾಲ್ಕು ರಾಮಲಕ್ಷ್ಮಣ ಕಣಜದಲ್ಲಿ ತುಂಬಿರುವ ಬೆಳ್ಳಿ ರೂಪಾಯಿಗಳು ನನಗೆ ದಕ್ಕದೇ

ಹೋದರೂ ಸರಿ ನಿನಗೆ ಎಳ್ಳು ಕೊಡುವುದಿಲ್ಲ ಎನ್ನುತ್ತಾಳೆ. ಅಹಂಕಾರದ ಮಾತಾಡಿ ಅಡವಿ ಪಾಲಾಗಬೇಡ 'ಒಂದು ಬಳ್ಳ ಎಳ್ಳಾದ್ರು' ತಂದೂ ನನ್ನ ಮುತ್ತಿನ ಜೋಳುಗ್ಗೆ ನೀಡು ಎಂದು ಮಾದೇವ ಕೇಳಿದಾಗ,

'ನನ್ ಎಳ್ಳನ ರಾಶಿ ಬೂದಿಯಾಗೋದ್ರು ಸರಿಯೇ
ಏಳು ಜನ ಗಂಡುಮಕ್ಳು
ನಿಂತಾಗೇ ಕೊಟಾರದ ಸುತ್ತ
ಗೋಗಲ್ಲಾಗೀ ನಿಂತ್ಕಂಡ್ರು ಸರಿಯೇ'

(ಮಲೆಮಾದೇಶ್ವರ, ಪುಟ ೩೫೦)

ಎಳ್ಳು ದಾನ ಕೊಡುವುದಿಲ್ಲ ಎಂದು ತನ್ನ ದೃಢ ನಿರ್ಧಾರವನ್ನು ತಿಳಿಸಿಬಿಟ್ಟಳು.

ಆಗ ಮಾದಪ್ಪ ಇಂತಹವರನ್ನು ಇನ್ನು ಮುಂದೆ ನರಲೋಕದಲ್ಲಿ ಬಿಟ್ರೇ, 'ದಾಸಯ್ಯಗ್ಗೆ ಧರ್ಮವಿಲ್ಲ, ನನ್ನಂತ ಜಂಗಮರ್ಗೆ ಕ್ವಾರಣ್ಯ ನಿಂತೋಗುಬುಡುತ್ತೆ'' ಅಂತೇಳಿ ಕಾಳಮ್ಮ ಹೇಳ್ದ ಪ್ರಕಾರ, "ಕೆಂಡೇಗೌಡನ ಏಳು ಹುಂಡಿ ದನಗಳನ್ನು, ಮಾದೇವನ ಎಪ್ಪತ್ತೇಳು ಹುಲಿಗಳು ತಿಂದ್ವು. ಮಾದೇವನ ಆದೇಶದಂತೆ, ಮೂಕಳ್ಳಿ ಮಾರಮ್ಮ, ಬೇವಿನ ಕಾಳಮ್ಮನ ಗಂಡ ಕೆಂಡೇಗೌಡನನ್ನು ಸುಂಟ್ರಗಾಳಿಯಾಗ್ ಸುತ್ತುಕ್ ಬಿಟ್ಟಳು.'' 'ಚಳಿ ಜ್ವರ ಬಂದು ಪ್ರಾಣ ಹೋಗುಬಿಡ್ತು.' ಕಾಳಮ್ಮ ಕಟ್ಟೆ ಹೊಲದಲ್ಲಿ ಗಂಡನ ಸಮಾಧಿ ಮಾಡಿ, ಮುತ್ತೈದೆ ಬಳೆ ತೆಗ್ದು, ಎದೆ ಮೇಲೆ ಒಡೆದು ಬಿಟ್ಟು, ಎಳ್ಳಿನ ಕೊಟಾರಕ್ಕೆ ಬಂದು ಮುನ್ನೂರು ಮೂವತ್ತು ಕಂಡುಗ ಎಳ್ಳಿನ ರಾಸಿ ಹಾಕ್ದಳು. ಮಾದಪ್ಪ 'ಭಸ್ಮ' ಹಾಕಿ ಎಳ್ಳಿನ ರಾಸಿ ಬೂದಿ ಮಾಡಿದ. ಕಾಳಮ್ಮ ಏಳು ಜನ ಗಂಡು ಮಕ್ಕಳನ್ನು ಕರ್ಕಂಡು ಬೇವಿನಹಟ್ಟಿಗೆ ಬರುತ್ತಾಳೆ. ಏಳುಂಡಿ ಕುರಿ ಮಾತ್ರ ಇವೆ. ಮಕ್ಕಳು ಕುರಿ ಹೊಂಡ ಕಂಡು ಕಾಡಿಗೆ ಹೋಗಿದ್ದಾರೆ. ಮಾದೇವ ನೋಡ್ದ "ನನ್ನ ಮಕ್ಕಳ ಗೋಗಲ್ಲು ಮಾಡು" ಅಂತ ಹೇಳಿದ್ದಳು ಬೇವಿನಕಾಳಿ. ಭಸ್ಮ ತೆಗೆದು ಕುರಿ ಮೇಯ್ಯವಂತ ಮಕ್ಕಳ ಮೇಲೆ ಹಾಕಿದ್ರು, ಏಳು ಜನ ಗೋಗಲ್ಲಾಗ್ ಬಿಟ್ರು. ಕುರಿಗಳನ್ನು ಕಿರುಬಗಳು, ತ್ವಾಳಗಳು ಕಿತ್ತಾಡ್ತ ತಿಂದು ಬುಟ್ವೊ. ಏಳು ಜನ ಸೊಸೆರು ಮುಂಡೆರಾದರು. ಏಳು ಜನ ಮೊಮ್ಮಕ್ಕಳವರೆ. ಕಿವ್ಡ್ ಮಾರಮ್ಮನಿಗೆ ಮಕ್ಕಳ ಪ್ರಾಣ ತೆಗೆದುಕೊಳ್ಳಲು ಹೇಳಿದಂತೆ ಅವಳು ಏಳು ಜನ ಮೊಮ್ಮಕ್ಕಳ ಸೊಲ್ಲು ಸೆಳ್ಡ್‌ಬುಟ್ಟಳು. ಕೆಬ್ಬೆ ಹೊಲದಲ್ಲಿ ಮೊಮ್ಮಕ್ಕಳ ಸಾಲು ಸಮಾಧಿ ಮಾಡಿ, ಬೇವಿನಕಾಳಿ ಏಳು ಜನ ಸೊಸೆರ ಕರಕಂಡು, ಕೌದಳ್ಳಿಗೆ ಬಂದು ಅಲ್ಲಿ ಕೂಲಿ ಮಾಡುತ್ತಾ, ಅಣ್ಣೆ ಸೊಪ್ಪು ಬೇಯ್ಸಿಕೊಂಡು, ತಿಂದು ನೀರು ಕುಡಿಕಂಡು ಇರುವಾಗ, ಕಾಳಮ್ಮನ ದೃಢ ಈಗಲಾದರೂ ಹ್ಯಾಗಿದೆ ಅಂತೇಳಿ ಪರೀಕ್ಷಿಸಲು ಕೊರವಂಜಿಯಾಸ ತಾಳ್ಕಂಡು, ಕಾಳಮ್ಮನಿಗೆ, "ಮಲೆ ಮಾದೇಶ್ವರನಿಗೆ ನೀನು ಒಕ್ಕಲು ಆಯ್ತಿ ಅಂತ ಹೇಳಿ ಕಾಣಿಕೆ ಕಟ್ಟ ಕಂಡ್ರೆ ತಿರಗು ಭಾಗ್ಯ ಎಚ್ಚುತೆ" ಅಂತ ಮಾದೇವ ಶಾಸ್ತ್ರ ಹೇಳುತ್ತಾನೆ.

"ಮಾದೇಶ್ವರ ನನಗೆ ಭಾಗ್ಯ ಕೊಟ್ಟು ಹೋಗಿದ್ದ, ಆದರೆ, ಅವನ ಹೆಸರಿನ ಮೇಲೆ ನಾನು ಹೋಗಿ, ಮೂರು ಕಾಸಿನ ಧೂಪ ಹಾಕ್ಲಿಲ್ಲ... ನನಗೆ ಬಡಸ್ತಾನ ಬಂತು, ತಿರುಗ ಹೋಗಿ ನಾಚಿಗಿಲ್ದೆ ನಾನವುನ್ನ ಕೇಳೊದಿಲ್ಲ"[೨೫] ಎನ್ನುತ್ತಾಳೆ. ಆರು ಜನ ಸೊಸೆಯರನ್ನು ಅವರವರ ತವರಿಗೆ ಕಳಿಸುತ್ತಾಳೆ. ಹಿರಿ ಸೊಸೆ

ಮಲ್ಲಾಜಮ್ಮ ಮಾತ್ರ ಅತ್ತೆ ಜೊತೆ ಉಳಿಯುತ್ತಾಳೆ. "ಪುನಃ ಮಾದೇವ ಬೇವಿನಟ್ಟಿ ಬಾಗಿಲಿಗೆ ಬರುತ್ತಾನೆ. ಕ್ಯಾರಣ್ಯ ಭಿಕ್ಷಾ ಕೇಳುತ್ತಾನೆ. ಮಾದಪ್ಪನ ಒಕ್ಕಲಾಗಲು ತಿಳಿಸುತ್ತಾನೆ. ಆದರೆ, ಏಳುಮಲೆ ಸುದ್ದಿ ಹೇಳಬೇಡ, ಹೋಗಯ್ಯ ಜಂಗಮ ಅಂದ್ಲು." ಮಾದಯ್ಯ ಭಸ್ಮ ತೆಗೆದು ಏಳು ಹಟ್ಟಿಗೂ ಪಿಡಿದವರೆ, ಹಟ್ಟಿ ಉರಿದೋಗಿ ಬುಡ್ತು, ಇನ್ನು ಕಾಳಮ್ಮನನ್ನು ಭೂಲೋಕದಲ್ಲಿ ಉಳಿಸಬಾರದು ಎಂದು ಏಳುಮಲೆ ಭಸ್ಮ ಅಂಗೈಲಿ ಇಟ್ಟು ಕೊಂಡು, ಸಾಲೂರು ಮಠದ ಗುರುಗಳಾದ ಶಾಂತ ಮಲ್ಲಿಕಾರ್ಜುನ ಸ್ವಾಮಿಯವರ ಪಾದವನ್ನು ನೆನೆದು, 'ಕಾಳಮ್ಮನ ಮಂಡೇ ಮೇಲೆ ಏಳುಮಲೆ ಭಸ್ಮ ಪಿಡಿದು ಸುಟ್ಟು ಭಸ್ಮ ಮಾಡಿ ಬುಟ್ರು.' ಬೇವಿನಹಟ್ಟಿ ಕಾಳಮ್ಮ ಏಳು ಹಟ್ಟಿಯ ಮೇಲೆ ಮಾದಯ್ಯನ ಪರಿಸೆ ನಡೆಯುವ ದಾರಿಯಾಯಿತು. ಮಲ್ಲಾಜಮ್ಮನನ್ನು ಆಲಂಬಾಡಿ ಸೀಮೆಗೆ ಕಳಿಸಿದರು.

ಡಾ.ಪಿ.ಕೆ.ರಾಜಶೇಖರವರು ಸಂಪಾದಿಸಿರುವ ಜನಪದ ಮಹಾಕಾವ್ಯ ಮಲೆಯ ಮದೇಶ್ವರ ಕಾವ್ಯದಲ್ಲಿ ಬೇವಿನಹಟ್ಟಿ ಕಾಳಮ್ಮನನ್ನು 'ಗೋಗಲ್ಲ ಮಾಡಿನಿಲ್ಸ'ದ ಮೇಲೆ ಕಾಳಮ್ಮನ ಸೊಸೆ ದೇವಾಜಮ್ಮನ ಭಕ್ತಿಗೆ ಮೆಚ್ಚಿ ಸತ್ತು ಬಿದ್ದಿದ್ದ ಗಂಡನನ್ನು ಬದುಕಿಸಿ ತನ್ನ ಒಕ್ಕಲು ಮಾಡಿಕೊಂಡು,

"ದೀವುಳ್ಗೆ ತಿಂಗ ನಿನ್ಮನೆಯಿಂದ
ಒಂದ್ಹಿಡಿ ಎಳ್ಳು ನನ್ನ ಎಣ್ ಮಜ್ಜಣ್ಕೆ ಬರ್ಬೇಕು
ನಿನ್ನೊಂಸ ಪರಿಯಂತ ಎಲ್ಲಿದ್ರೂ...
ಕೊಟ್ಟು ಕಳಿಸಲು"

(ಮಲೆಯಮಾದೇಶ್ವರ, ಪುಟ ೮೮೮)

ತಿಳಿಸಿ ಏಳ್ಮಲೆ ಕೈಲಾಸ್ಕೆ ಮಾದೇವ ಪಯಣಿಸಿದ.

ಪ್ರಾರಂಭದಲ್ಲಿ ಕೂಲಿನಾಲಿ ಮಾಡಿ ಹೊಟ್ಟೆ ಹೊರೆಯುತ್ತಿದ್ದ ಕಾಳಮ್ಮ ಮಾದೇವನ ಅನುಗ್ರಹದಿಂದ ಕಣ್ಣಿಂದ ನೋಡಲು ಸಾಧ್ಯವಿಲ್ಲದಂತ ಐಶ್ವರ್ಯವಂತಳಾಗಿ, ಗಂಡ, ಏಳು ಜನ ಗಂಡು ಮಕ್ಕಳು, ಸೊಸೆ ಯಂದಿರು, ಏಳುಜನ ಮೊಮ್ಮಕ್ಕಳೊಡನೆ ಸುಖವಾಗಿರುವಾಗ, "ನಿನಗೆ ಒಕ್ಕಲಾಗುತ್ತೇನೆ, ಬೆಳೆದ ಬೆಳೆಯಲ್ಲಿ ಸರಿಪಾಲು ಕೊಡುತ್ತೇನೆ" ಎಂದು ಮಾದೇವನಿಗೆ ಕೊಟ್ಟಿದ್ದ ವಚನವನ್ನು ಮರೆಯುತ್ತಾಳೆ. ಅವಳಿತ್ತ ವಚನವನ್ನು ಜ್ಞಾಪಿಸಿ, ಅವಳಿಂದ ಎಳ್ಳಿನ ಭಿಕ್ಷೆಯನ್ನು ಪಡೆಯಲು ಮಾದೇಶ್ವರ ಹೋದಾಗ, ಒಂದು ಎಳ್ಳುಕಾಳು ಭಿಕ್ಷೆಯನ್ನು ಕೊಡಲೊಪ್ಪದೆ, ಅವನನ್ನು ಅವಮಾನಿಸಿ, ತನ್ನ ಸರ್ವಸ್ವವನ್ನು ಕಳೆದುಕೊಂಡು ತಿರಿದುಣ್ಣುವ ಸ್ಥಿತಿ ಬಂದರೂ, ಮಾದೇಶ್ವರನ ಒಕ್ಕಾಲಾಗಲು ನಿರಾಕರಿಸಿ, ಕೊನೆಗೆ ಮಾದೇವನಿಂದ ನಾಶವಾಗುತ್ತಾಳೆ. "ಅವಳು ಕೆಟ್ಟಾದರೂ ಸಹಿಸಿಯಾಳು, ಆದರೆ ಕೊಟ್ಟು ಮಾತ್ರ ಸಹಿಸಲಾರದವಳು. ಹೆಣ್ಣಿನ ಈ ಬಗೆಯ ಹಠಮಾರಿತನದ ಅತಿರೇಕ ಸಾಹಿತ್ಯ ಪ್ರಪಂಚದಲ್ಲಿ ಅತ್ಯಂತ ವಿರಳ. ಅವಳು ಛಲದಲ್ಲಿ ದುರ್ಯೋಧನನನ್ನು ಮೀರಿದವಳು"[೧೬] ಎಂದು ಡಾ.ಪಿ.ಕೆ.ರಾಜಶೇಖರವರು ಅಭಿಪ್ರಾಯಪಡುವುದು ಸಹಜವೇ ಆಗಿದೆ.

"ಬೇವಿನಹಟ್ಟಿ ಕಾಳಮ್ಮನ ಕತೆ ಮಾದೇಶ್ವರ ಕತೆಗಳ ಸಾಲಿನಲ್ಲಿ ಅತ್ಯಂತ ರಮ್ಯವಾದ ನಾಟಕೀಯವಾದ ಬಹುಮಟ್ಟಿಗೆ ವರ್ಣನಾತ್ಮಕವಾದ ರಚನೆ. ಇಲ್ಲಿ ಕಥೆಯ ಅಂಶಕ್ಕಿಂತ ಸಂಭಾಷಣೆಯ ಸೊಗಡು, ಶಕ್ತಿ

ಮೆಚ್ಚುವಂಥದ್ದು. ಬೇವಿನಹಟ್ಟಿ ಕಾಳಮ್ಮನ ಐಶ್ವರ್ಯದ ವರ್ಣನೆಗಿಂತ ಅವಳ ದರ್ಪ, ಅಹಂಕಾರಗಳ ಚಿತ್ರಣಕ್ಕಿಂತ ಅವಳ ಕೃಪಣತೆ, ಕುಟಿಲತೆಗಳನ್ನು ಚಿತ್ರಿಸುವಲ್ಲಿ ಕವಿ ತನ್ನ ಸಾಮರ್ಥ್ಯವನ್ನು ಮೆರೆದಿದ್ದಾನೆ. ಜಿಪುಣತನದ ಆಗ್ರೇಸರಿಯಾಗಿ ಬೇವಿನಕಾಳಿ ಈ ಕತೆಯಲ್ಲಿ ಗೋಚರಿಸುತ್ತಾಳೆ. ಐಶ್ವರ್ಯದ ವಜ್ರರಕ್ಷೆಯಲ್ಲಿ ಮಲೆತ ಅವಳ ಕೃಪಣ ಸ್ವಭಾವವನ್ನು ಅತ್ಯಂತ ಮನೋಜ್ಞವಾಗಿ ಅಪ್ರತಿಮವಾಗಿ ಜನಪದ ಕವಿ ಚಿತ್ರಿಸಿದ್ದಾನೆ."[೧೭]

ಬೇವಿನಹಟ್ಟಿ ಕಾಳಮ್ಮನ ಕಥೆಯ ಶೈಲಿ ಹಾಸ್ಯ ಭರಿತವಾಗಿದೆ. ಕಂಸಾಳೆಯವರರಲ್ಲಿ ಬೇವಿನಹಟ್ಟಿ ಕಾಳಮ್ಮನ ಕಥೆ ಜನಪ್ರಿಯ. ಕಾಳಮ್ಮನ ಭೌತ ದೇಹದ ವರ್ಣನೆ, ಜಿಪುಣತನ ಮತ್ತು ಅವಳ ಹಠಮಾರಿತನಗಳನ್ನು ಜನಪದ ಕವಿಗಳು ಸೃಷ್ಟಿಸಿರುವುದನ್ನು ಕಂಸಾಳೆ ಕಥಾ ಸಂಪ್ರದಾಯಗಳಲ್ಲಿ ವೈವಿಧ್ಯಪೂರ್ಣವಾಗಿ ಮೂಡಿ ಬಂದಿವೆ. ಕಾಳಮ್ಮ ಯಾವ ರೀತಿಯಾಗಿ ಸಿರಿ ಸಂಪತ್ತಿನಲ್ಲಿ ವಾಲಾಡ್ತಾ ಇದ್ದಾಳೇಂದ್ರೆ "ನಲವತ್ತೇರು ಬಟ್ಟು ಬತ್ತುಟುಕೇ ಎಂಬತ್ತೇರು ಆರಂಬ ಮಾಡ್ತಾರಂತೆ ಹೊಲದಲ್ಲಿ... | ಏಳು ಜನ ಜೀತಾಳುಗಳು | ಏಳು ಜನ ಕಂಬಲಿಕಾರರು | ಏಳು ಜನ ತಮ್ಮ ಗಂಡು ಮಕ್ಕಳು | ಎಲ್ಲ ಇಪ್ಪತ್ತೊಂದು ಜನ ಕೆಲಸ ಮಾಡ್ತಾರೆ ಹೊಲದಲ್ಲಿ... | ಏಳು ನೂರೆಪ್ಪತ್ತು ಕಂಡುಗ ಎಳ್ಳು ಬೆಳೆದು | ಬಗಲು ರಾಸಿ ಆಕ್ಬುಟ್ರವ್ರೆ | ಆದ್ರೆ ಕಾಳಮ್ಮ ಅಂತಕ್ಕವಳು | ಏಳು ನೂರೆಪ್ಪತ್ತು ಕಂಡುಗ ಎಳ್ಳು | ಮುಗಿಲ ರಾಸಿ ಮೇಲೆ | ಎಪ್ಪತ್ತೇಳು ಮೊಳ ಸೀರೆ ಒಂದೇ ಸುತ್ತು ಸುತ್ತುಕೊಂಡು ಕೂಡಿರುವಂತೆ ಐಸ್ವರ್ಯ ಒಂದು ಬುಡ್ತು ಕಾಳಮ್ಮನಿಗೆ ಅಲ್ಲಿಗೆ | ಬೇವಿನ ಕಾಳಿ ಕಾಲು ತೊಳೆಯಲ್ಲಿಕ್ಕೆ ನಡಟ್ಟಿ ಒಳಗೆ ಪಚ್ಚದ ಕಲ್ಲು | ಮೂಡಲ ಬರೋ ಸೂರ್ಯನಿಗೆ ಮೂಡಲ ಮುಕ ಹಾಕ್ಕಂಡು | ಎಡಬಲ ರಾಮ ಕಣಜ ಲಕ್ಷ್ಮಣ ಕಣಜ | ದನ ಕುರಿಗಳಿಗುಂಟು ಅಪರಂಜಿ ಗುಂಟು | ಒಂದನೇ ಬಾಕಲಲ್ಲಿ ದನ ಕಟ್ಟವ್ರೆ | ಎರಡನೇ ಬಾಗಿಲಲ್ಲಿ ಕಡೆಯೋ ನಾಯಿ ಕಟ್ಟವ್ರೆ | ಮೂರನೇ ಬಾಕಲಲ್ಲಿ ಬಂದೂಕದಲ್ಲಿ ಪಾರ ಮಡಗವ್ರೆ | ನಾಕನೇ ಬಾಗಿಲಲ್ಲಿ ಬಿಚ್ಚುಗತ್ತಿ ಪಾರ ಮಡಗವ್ರೆ |"[೧೮] ಸೊಸೆಗೆ ಬುದ್ಧಿ ಹೇಳುವ ರೀತಿ, ಬೇವಿನಹಟ್ಟಿ ಕಾಳಮ್ಮ ಕಡು ಜಿಪುಣತನವನ್ನು ಚಿತ್ರಿಸುತ್ತದೆ.

"ಯಾರಾದ್ರೂ ಅಯ್ನಗಳು ಅಪ್ಪಗಳು ಗುಡ್ಡಗಳು ಜೋಗಿಗಳು | ಜಂಗಮರು ಬರ್ತಾರೆ | ಅವರಿಗೆಲ್ಲಾ ಒಂದೊಂದಿಡಿ ರಾಗಿ ಕೊಡ್ತಾ ಬಂದ್ರೆ | ನನ್ನ ಮನೇಲಿ ಏಳು ಸೇರು ರಾಗಿ ಕಾಲಿ ಆಗ್ಬುಡ್ತದೆ |"[೧೯] ದಾನ ಕೊಡ ಬೇಡಿ ಎಂದು ಹೇಳುತ್ತಾ ಸೊಸೆಯರಿಗೆ ಇನ್ನೊಂದು ಮಾತು ಹೇಳುತ್ತಾಳೆ.

"ನನ್ನಟ್ಟವಳಗೆ ಎಲ್ಲಾ ಹೋಗ್ತಕ್ಕಂತ | ನಡುದಾರಿ ಇದು | ಯಾರಾದರೂ ವೋಗ್ತೀರೋ ಅಂತ ಕಾಲದಲ್ಲಿ ಇಗೋ ವಸಿ ಸುಣ್ಣ ಕೊಡಮ್ಮಿ ಅಂತ ಕೇಳ್ಬುಟ್ರೆ | ಏನಾದ್ರೂ ಒಂದು ಸಾಸುವೆ ಗಾತ್ರ ಸುಣ್ಣ ಈಸ್ಕಂಬುಟ್ರೆ | ಯಾರಾದ್ರೂ ಪಟ ಪಟ ಒದ್ದಾಡ್ಬುಟ್ಟು | ಪ್ರಾಣ ವೋಗ್ತಿದೆ ಅನ್ಬುಟ್ರೆ | ಒಂದು ತೊಟ್ಟು ಬಾಯಿಗೆ ನೀರು ಬಿಟ್ಬುಗಿಟ್ಟೇ...|" ಎಂದು ಎಚ್ಚರಿಸುತ್ತಾಳಲ್ಲದೆ, "ರಾಗಿ ಬೀಸುವಾಗ ಕಣ್ ತಪ್ಪಿಸಿ ಉಳ್ಕೊಂಡ ರಾಗಿಗೆ | ರಾಗಿ ಕಲ್ಲಿನ ಸುತ್ತ ಉಕ್ಕಿನ ಸೂಜಿಯಾಗಿ ಉಳಿಸವ್ವಾ | ಮಿಕ್ಕ, ಅಂಬಲಿ ಹಿಟ್ಟು ಉಳ್ಳಿ | ಅದೂ ತಂಗಳು ಮಜ್ಜಿಗೆ, ಏನಾರ ಮಿಕ್ಕಂಡ್ರೆ ಅದನ್ನು ತಕ್ಕೊಂಡೋಗಿ | ಹಿಂದ್ಲಟ್ಟಿ ಕಲ್ಗಚ್ಚಿಗೆ ಸುರಿತಿದ್ದೆ | ಆ ಕಲ್ಗಚ್ಚಿನಲ್ಲಿ ನನ್ನ ಆ ಎತ್ಗಳು ಕ್ವಾಣಗಳು | ಕುಡಿದೇ ಇನ್ನು ಬದ್ರಾಗವೇ | ಅದೆಲ್ಲಾ ಹಿಂದ್ಲಟ್ಟಿ ಒಳಗೆ ಹಾಕಿದ್ದೆ | ಕಾಗೆ ಎತ್ಕೊಂಡೋಗತ್ತವೆ | ಹದ್ದು ಹಿಟ್ಟು ಹೊತ್ತ ಕಂಡೋಗ್ತವೆ | ಪಾರ್ವಾಳಗಳು ಬರ್ತಾವೆ | ಕಾಳ ತಿನ್ನಂಡು

ಹೊರಟೋಗ್ತಾವೆ...। ಅವೆಲ್ಲಾ ಒದ್ದೆಯಿದ್ದಂಗೆ ಮಾಡ್ಬೇಕಾದ್ರೆ, ನನ್ನ ಹಿಂದ್ಲಟ್ಟಿ ಒಳಗೆ ಮಂಜಿನ ಬಲೆಯ ಬೀಸಬೇಕು"[೨೦] ಈ ತರ ಬುದ್ಧಿವಾದ ಜಿಪುಣತನದ ಪರಮಾವಧಿ ಎಂದರೆ ಪಂಚಾಮೃತವನ್ನೇ ಮಾಡಿ ಹಾಕುವ ಸೊಸೆಯರಿದ್ದರೂ, 'ಅಂಬ್ಲಿ' ಮಾಡಿಸಿಕೊಂಡು ಕುಡಿಯುತ್ತಾಳೆ. ಒಂದು ಸಾರಿ "ಒಂದ್ನೊಣ ಆಡ್ಕೊಂಡು ಬಂದು ಅಂಬ್ಲಿ ಒಲೀಕೆ ಬಿದ್ದೋಯ್ತು ಕಾಳಮ್ಮ ನೋಡುತ್ತಾಳೆ. ಅದರ ರೆಕ್ಕೆ ಮ್ಯಾಲೆ ರಾಗಿ ಒಡುಪು ಹತ್ತಿ ಕೊಂಡಿದೆ. ಕಾಳಮ್ಮ ಬಿದ್ದಂತ ನೊಣವನ್ನು, ಬಲಗೈಲಿ ಹಿಡ್ಕೊಂಡು ಎಲುವ್ಹೋ ನನ್ಮಗುನ ನೊಣವೆ, ರಾಗಿ ಒಡುಪು ನಿನ್ ಮೈ ತುಂಬ ಹತ್ಕೊಂಡದಲ್ಲಿ ನಿನ್ನೊಟ್ಟೆ ವೊಳೀಕೆ ಎಷ್ಟಂಬ್ಲಿ ಕುಡ್ಕೊಂಡಿದ್ದೀಯ ನಿನ್ನೊಟ್ಟೆ ಒಳಗಿರೋ ಅಂಬ್ಲಿಯನಾ ಬುಡೇಳಲ್ಲ ಅಂತ್ಹೇಳಿ. ನೊಣವ ಕೈಲಿಡ್ಕೊಂಡು ಚೀಪಿ ಎಸುದವುಳೆ."[೨೧]

ಜೀತದಾಳುಗಳು, ತನ್ನ ಕಣ್ ಮರೆಸಿ ಎಳ್ಳು ತಿಂದು ಬಿಡ್ತರೆ ಅಂತೇಳಿ ಅಲ್ಲಿಯೇ ಕುಳಿತುಕೊಳ್ಳುವುದಲ್ಲದೆ ಆವಾಗಲೀಗ ಬೆಳ್ಳಿ ಬಿಂದಿಗೆಯಲ್ಲಿ ನೀರಿಟ್ಕೊಂಡು ಏಳು ಜನ ಜೀತಗಾರ್ರು 'ನೀರು ಮುಕ್ಕಳ್ಸಿ ಅರೆ ಕಲ್ಲು ಮ್ಯಾಲೆ ಉಗಿಸ್ತಾಳೆ.' ಭೂಮಿ ಒಳಗೆ ಇರ ಎಳ್ಳು ಎತ್ಕೊಂಡ್ ಹೋಗಬುಡತದೆ ಅಂತೇಳಿ 'ಎಳ್ಳಿನ ಕೊಟಾರದ ಸುತ್ತ ಹುಣಸೆ ತರಗೆಂಡ ಊದವಳೆ.'

ಬೇವಿನಕಾಳಿಯ ಭೌತ ದೇಹದ ವರ್ಣನೆ ಕಂಸಾಳೆಯವರ ಕೈಯಲ್ಲಿ ಸ್ವಾರಸ್ಯಕರವಾಗಿ ಬಂದಿದೆ. ಬೇವಿನಹಟ್ಟಿ ಕಾಳಮ್ಮನದು ಸ್ಥೂಲ ದೇಹ. ಊಟ ಮಾಡಿ ಏಳಲಕ್ಕೂ ಆಗುತ್ತಿರಲಿಲ್ಲ. ಸೊಸೆಯರು ಆಕೆಯನ್ನು ಎತ್ತಿ ನಿಲ್ಲಿಸಬೇಕು. ತೇಗಿನ ಗಾಡಿಯಲ್ಲಿ ಕುಳಿತರೆ, ಗಾಡಿಯೇ ಭೂಮಿಗೆ ಹೂತುಕೊಳ್ಳುತ್ತಿತ್ತು.

ಎಳ್ಳಿನ ಭಾಷೆಗೆ ಮಾದೇವ ಕೆಚ್ಚೆ ಹೊಲ್ದತ್ರ ಬಂದು ಕಾಳಮ್ಮ "ಮುಕ್ಕಾಲು ಮಂಚದ ಮೇಲೆ, ಮೂಡೆ ಗಾತ್ರದ ಡೊಳ್ಳು, ಮುಂಗೈವರಗು ಮಾಡ್ಕಂಡು, ಕಣ್ಮುಚ್ಕಂಡು ಕಾದು ಕೂತವಳೆ. ಆಗ ಮಾದಪ್ಪ ಜೋರಾಗಿ ಕ್ಬಾರಣ್ಯದ ಭಿಕ್ಷೆ ಸಾರುದ್ರು, ಭಿಕ್ಷೇ ಎಂಬ ಸದ್ದು ಕೇಳಿ 'ಕಣ್ಣು ಬುಡಕೆ ಕಣ್ಣು ಪರೆ ಬೆಳ್ಕೊಗವೆ'- ಆಗಲಿಲ್ಲ -ಕಂಬಳಗಾರ ಮಲ್ಲಣ್ಣನಿಂದ ಕಾವಿಬಟ್ಟೆ ಜಂಗಮರು ಬಂದವರೇ ಅಂತ ಕೇಳಿದ ತಕ್ಷಣ. ಮಲ್ಲಣ್ಣನಿಗೆ ಚಿನ್ನ. ಬೆಳ್ಳಿ ಚಿಮ್ಟ ತಕ್ಕೊಡ್ ಒಂದು 'ರೆಪ್ಪೆ ಎತ್ತಲು' ತಿಳಿಸಿದಳು. 'ಎಡಗೈಲಿ ಬಲಗೈಲಿ ಎರಡು ಚಿಮ್ಟ ಇಡ್ಕಂಡು, ಎಡಗಣ್ಣು ಬಲಗಣ್ಣು ರೆಪ್ಪೆ ಇಡ್ಕಂಡು' ಎರಡು ಕಣ್ಣಿನ ರೆಪ್ಪೆ ಯಾವಾಗ ಎತ್ತಿದ್ರೋ ಅರಗಣ್ಣು ಕಿರಗಣ್ಣು ಬಿಟ್ಟು, ಮಾದಪ್ಪನ ಜಂಗಮ ರೂಪ ನೋಡಿದಳು."[೨೨] ಇಂಥ ವಿವರ ಪೂರ್ಣ ಸೂಕ್ಷ್ಮ ವರ್ಣನೆಗಳು ಉದ್ದಕ್ಕೂ ಮನೋಜ್ಞವಾಗಿ ಬಂದಿವೆ. ಬೇವಿನಕಾಳಿ ಭಿಕ್ಷೆ ಕೊಡುವುದಿಲ್ಲ ಎಂದಾಗ ಮಾದೇಶ್ವರರು ಮಾರಿಯ ರನ್ನು ಕರೆಯುವ ಪರಿಯನ್ನು ಕಂಸಾಳೆ ಕಥಾ ಸಂಪ್ರದಾಯ ಇರಲ್ಲಿ ಜನಪದ ಕವಿಯ ಮಾತುಗಳಲ್ಲೇ ಕೇಳಬೇಕು.

"ಸೋಸಲೆ ಹೊನ್ನಾದೇವಿ, ಮೂಗೂರು ತಿಬ್ಬಾದೇವಿ, ಚಾಮುಂಡೇಶ್ವರಿ, ಕಂಚಿ ಕಾಮಾಕ್ಷಿ, ದುರ್ಗಿ, ಚೌಡಿ, ಎಂಬುದಾಗಿ ಕೂಗಿದವನಂತೆ, ಶಿವನು ಆಗಲೀಗ ಅವರು ಬಂದು ಕಂಡುಗು ಕುಂಕುಮವನ್ನು ಒಂದೊಂದು ಬುಟ್ಟಿಗೆ ಇಟ್ಟುಕೊಂಡು, ಮುನ್ನೂರು ಮುವತ್ತಾರು ಗಜ ಸೀರೆ ಒಂದೊಂದೇ ಸುತ್ತಿಗೆ ಸುತ್ತಿಕೊಂಡು, ಅಪ್ಪ ತೆಂಗಿನ ಮರಾನೆ ಕಿತ್ತುಕೊಂಡು, ಅಪ್ಪಾ ತೆಂಗಿನ ಮರಾನ ಕೈಲಿಡ್ಕಂಡು ಜಗ್ಗಿ ಜಗ್ಗೆಂದು ಒತ್ತಾವರೆಲ್ಲೋ ದೇವಾ... ಎನ್ನುವಾಗ ಉತ್ಪ್ರೇಕ್ಷಾಲಂಕಾರಗಳು ಮಿಂಚಿವೆ."[೨೩]

'ಜನಪದ ಕಾವ್ಯದಲ್ಲಿ ಆದರ್ಶ ಸ್ತ್ರೀಯರಿರುವಂತೆಯೇ ಕೆಟ್ಟ ಸ್ತ್ರೀಯರು ಇದ್ದಾರೆ' ಎಂಬುದನ್ನು ಕಾಳಮ್ಮನ ವ್ಯಕ್ತಿತ್ವದಲ್ಲಿ ಕಾಣಬಹುದು.

ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಯರಲ್ಲಿಬೇಕಾದ ಚಾರಿತ್ರ್ಯ, ಪಾತಿವ್ರತ್ಯ, ವಿಧೇಯತೆ, ದಾನ-ಧರ್ಮ, ನಯ-ವಿನಯ, ತ್ಯಾಗ-ಸಹನೆ, ಮುಂತಾದ ಸದ್ಗುಣಗಳಿಗೆ ವಿರುದ್ಧವಾದ ಗುಣಗಳನ್ನು ಹೊಂದಿದ ಬೇವಿನಹಟ್ಟಿ ಕಾಳಮ್ಮನಂತ ಸ್ತ್ರೀಯರು, ಶಿಕ್ಷೆಗೊಳಗಾಗುವುದನ್ನು ಜನಪದ ಕಥೆ, ಪುರಾಣ ಮತ್ತು ಮಹಾಕಾವ್ಯಗಳಲ್ಲಿ ಕಾಣಬಹುದಾಗಿದೆ.

'ಮಲೆಯ ಮಹದೇಶ್ವರ ಕಾವ್ಯದ ಬೇವಿನಹಟ್ಟಿ ಕಾಳಮ್ಮನ ಸಾಲು, ಸಂಕಮ್ಮನ ಸಾಲಿಗಿಂತ ಸಂಪೂರ್ಣ ವ್ಯತಿರಿಕ್ತವಾದದ್ದು.' ಬೇವಿನಹಟ್ಟಿ ಕಾಳಮ್ಮ, ಮಾತೃಪ್ರಧಾನತೆಯ ಪ್ರತೀಕವಾಗಿ ಎದ್ದು ಕಾಣುತ್ತಾಳೆ ಎಂಬುದಾಗಿ ಡಾ.ಹಿ.ಚಿ.ಬೋರಲಿಂಗಯ್ಯನವರು ಅಭಿಪ್ರಾಯ ವ್ಯಕ್ತಪಡಿಸುತ್ತಾ, ಕಾಳಮ್ಮ ಗಂಡನಾದ ಕೆಂಡೇಗೌಡ ಪ್ರಾಮುಖ್ಯತೆಯಾಗಲಿ, ಹಾಗೆಯೇ ಕಾಳಮ್ಮನ ಮಕ್ಕಳ ಪಾತ್ರವಾಗಲಿ, ನೇರವಾದ ಪಾತ್ರವಾಗಿ ಗೋಚರಿಸುವುದೇ ಇಲ್ಲ. ಕಾಳಮ್ಮನ ಸೊಸೆಯರ ಪಾತ್ರ ಮುಖ್ಯವಾಗಿದ್ದು, ಹೆಂಗಸರದೇ ವಹಿವಾಟು, ಗಂಡಸರು ಬೇಟೆ, ಆಹಾರ ಸಂಗ್ರಹಣೆ ಹಾಗೂ ಪಶುಸಂಗೋಪನೆಯಲ್ಲಿ ತೊಡಗುತ್ತಿದ್ದರೆ, ಹೆಣ್ಣು ಮಕ್ಕಳು ಮರಿಗಳ ಪಾಲನೆ ಮಾಡಿಕೊಂಡು, ತನ್ನ ಬಿಡುವಿನ ವೇಳೆಯಲ್ಲಿ ಬಿತ್ತಿ ಬೆಳೆಯುವ ಮೂಲಕ ಕೃಷಿಯ ಉಪಯುಕ್ತತೆಯನ್ನು ಸಾಧಿಸಿ, ಆರ್ಥಿಕ ಸಬಲತೆಯನ್ನು ಸಾಧಿಸಿದ ಹೆಣ್ಣು. "ಮಾತೃಪ್ರಧಾನ ಕುಟುಂಬದ ಪಳೆಯುಳಿಕೆ ಬೇವಿನಹಟ್ಟಿ ಕಾಳಮ್ಮ"[೨೮] ಎನ್ನುತ್ತಾರೆ.

ಕೃಷಿಯ ಕಾಯಕವನ್ನು ದೈವ ಎಂದು ನಂಬಿದ್ದ ಮಹಾಸ್ವಾಭಿಮಾನಿ ಹಾಗೂ ಸ್ತ್ರೀ ಪ್ರಧಾನ ವ್ಯವಸ್ಥೆಯ ಪ್ರತಿರೂಪವಾದ ಕಾಳಮ್ಮ ಮಾದೇಶ್ವರನನ್ನು ಎಳ್ಳು ಭಿಕ್ಷೆ ನೀಡದೆ ದಿಕ್ಕರಿಸುತ್ತಾಳೆ. ಯಾವ ಕಾರಣಕ್ಕೂ ತನ್ನ ಅಸ್ತಿತ್ವವನ್ನು ಬಿಟ್ಟು ಕೊಡಲೊಪ್ಪದ, ಕಾಳಮ್ಮನ ಸ್ವಾಭಿಮಾನ ಮಾದೇಶ್ವರನಿಗೆ ಅಹಂಕಾರವಾಗಿ, ಸೊಕ್ಕಾಗಿ ಕಾಣುತ್ತದೆ. 'ದೈವ ಇಲ್ಲಿ ದಾರಿ ತಪ್ಪುತ್ತದೆ.' ಸಂಕಮ್ಮನ ಪ್ರಸಂಗದಲ್ಲಿ ಕರುಣೆಯಾಗಿ ವಿವೇಕಿಯಾಗಿ ಕಾಣಿಸಿ ಕೊಂಡ ಮಾದೇವ ಇಲ್ಲಿ ವಿವೇಕ ತಪ್ಪುತ್ತಾನೆ, ನಿಷ್ಕರುಣೆಯಾಗುತ್ತಾನೆ. ಕಾಳಮ್ಮನನ್ನು ಸರ್ವನಾಶ ಮಾಡುತ್ತಾನೆ. ಇದು ಸ್ಥಳೀಯವಾಗಿ ಮತ್ತು ಹೊರಗಿನಿಂದ ಬಂದು ಎರಡು ಸಂಸ್ಕೃತಿಗಳ ನಡುವಿನ ಘರ್ಷಣೆ ಎಂದು ವಿಶ್ಲೇಷಿಸುತ್ತಾ "ಕಾಳಮ್ಮನ ಪ್ರಸಂಗ ಪುರುಷಪ್ರಧಾನ ಸಂಸ್ಕೃತಿ, ಮಾತೃಪ್ರಧಾನ ಸಮಾಜದ ಮೇಲೆ ಸಾಧಿಸಿದ ಗೆಲುವಿನ ಸಂಕೇತವಾಗಿ ಉಳಿಯುತ್ತದೆ"[೨೯] ಎಂದು ಡಾ.ಹಿ.ಚಿ.ಬೋರಲಿಂಗಯ್ಯನವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಪ್ರಾರಂಭದಲ್ಲಿ ಬೇವಿನಹಟ್ಟಿ ಕಾಳಮ್ಮ ಮಾದೇವನಲ್ಲಿ 'ನಿನಗೆ ಒಕ್ಕಲಾಗ್ತಿನೀ, ತಿಂಗಾ ತಿಂಗಳು ಚಾಕರಿ ಮಾಡ್ತಿನಿ, ಕಂಡ್ಗು ಧೂಪ ಕೊಂಡು ದುಳಿಗೆ ಸುರಿತ್ತೀನಿ, ಎಳ್ಳು ಮಜ್ಜನಕ್ಕೆ ವಕ್ಕಲಾಗ್ತಿನಿ' ಎಂದಿದ್ದಲ್ಲದೆ, ಬಿತ್ತಿದ ಬೆಳೆಯಲ್ಲಿ ಪಾಲು ಕೊಡ್ತಿನಿ ಹುಟ್ಟಿದ ಮಕ್ಕಳ್ಗೆಲ್ಲ ಹೆಸರ್ಕರಿತೀನಿ, ಅಂತೇಳಿ ವಚನವನ್ನು ನೀಡಿದಳು. ಆದರೆ ಮರೆಯುತ್ತಾಳೆ. ಮಾದೇಶ್ವರನು ಹೆಜ್ಜೆ ಹೆಜ್ಜೆಗೂ ಬಿಡದೆ ಕ್ಯಾರಣ್ಯ ಕೇಳುತ್ತಾ, ಅವಳಿತ್ತ ವಚನವನ್ನು ಜ್ಞಾಪಿಸುತ್ತಾ, ಎಳ್ಳು ಭಿಕ್ಷೆ ನೀಡಿದರೆ ಮತ್ತಷ್ಟು ಭಾಗ್ಯ ಕೊಡುವೆನೆನ್ನುತ್ತಾನೆ. ಆದರೂ ದಿಕ್ಕರಿಸುತ್ತಾಳೆ. ಅವಳ

ನಾಶ ಸಮರ್ಥನೀಯ. ಆದರೆ ಮಾದೇವ ಯಾವ ತಪ್ಪನ್ನು ಮಾಡದ ಕಾಳಮ್ಮನ ಗಂಡ, ಆರು ಜನ ಗಂಡು ಮಕ್ಕಳು ಹಾಗೂ ಆರು ಜನ ಸೊಸೆಯರು ಮತ್ತು ಏಳು ಜನ ಮೊಮ್ಮಕ್ಕಳನ್ನು ನಾಶ ಮಾಡುವಲ್ಲಿ, 'ದೈವ ದಾರಿ ತಪ್ಪಿದೆ' ಎನ್ನಬಹುದು. ಕಾಳಮ್ಮನ ಧೋರಣೆಗಳು, ಹೆಚ್ಚು ಅಮಾನವೀಯವಾಗಿದ್ದು, ಆಕೆ ಮಾತೃ ವಂಶೀಯ ಸಮರ್ಥನೆಯನ್ನು ಮಾಡಿಕೊಳ್ಳಲಾಗದೆ, ಪುರುಷ ಪ್ರಧಾನ ಸಮಾಜದಲ್ಲಿ ಕಂಡು ಬರುವ ದಬ್ಬಾಳಿಕೆ, ಕ್ರೌರ್ಯಗಳನ್ನು ಬೆತ್ತಲು ಮಾಡುತ್ತಾ, ಕಾಳಮ್ಮನಂತಹ ದುಷ್ಟ ಪಾತ್ರಗಳು ಮಾತೃ ಪ್ರಧಾನ ಸಂಸ್ಕೃತಿಯನ್ನು ನಾಶಮಾಡುವ ಸಂಕೇತವಾಗಿ ಉಳಿಯುತ್ತದೆ.

"ಮಾದೇಶ್ವರ ಕಾಲದಲ್ಲಿ ಊಳಿಗಮಾನ್ಯ ಪದ್ಧತಿಯನ್ನೂ ಬಂಡವಾಳಶಾಹಿ ಪ್ರವೃತ್ತಿಯನ್ನೂ ಪ್ರತಿನಿಧಿಸುವ ಒಂದು ಅಂಶವಾಗಿದೆ. ಮಹದೇಶ್ವರನು ಬಂಡವಾಳಶಾಹಿಗಳ ವಿರುದ್ಧವಾಗಿದ್ದನು. ಹಾಗೂ ಅವರ ವಿರುದ್ಧ ಬಂಡಾಯವನ್ನು ಸಾರಿದರು ಎಂಬುದು ಇಲ್ಲಿನ ಬೇವಿನಕಾಳಿಯ ವಂಶ ನಿರ್ವಂಶವಾದ ಕತೆಯಲ್ಲಿ ವ್ಯಕ್ತ ಪಟ್ಟಿದೆ."[೨೬] ಇದು ಮಾದೇಶ್ವರ ತನ್ನ ಒಕ್ಕಲುಗಳನ್ನು ಹೆಚ್ಚು ಮಾಡಿಕೊಳ್ಳುವ ರೀತಿಯಲ್ಲಿ ನೋಡಬಹುದು.

"ಸಿರಿ ಸಂಪತ್ತು ಒಂದೇ ಕಡೆ ಶೇಖರವಾಗಬಾರದು, ಹಾಗೆ ಆದರೆ ಅಪಾಯ ಖಂಡಿತ ಎಂಬ ಆಶಯ" ಬೇವಿನಕಾಳಿ ಸಾಲಿನ ಮೂಲಕ ತಿಳಿಯುತ್ತದೆ.

### ೩.೧.೩. ಉತ್ರಾಜಮ್ಮ

ಮಾದೇಶ್ವರರು ಬಂಕಾಪುರಿಯ ಮರುಳ ಶ್ರವಣದೊರೆಯನ್ನು ಸಂಹಾರ ಮಾಡಲು ಉತ್ತರಾಜಮ್ಮ ಮತ್ತು ಕಲ್ಯಾಣದೇವರ ಮಗನಾಗಿ ಜನಿಸುತ್ತಾರೆ.

ಹೆಬ್ಬಣಿ ಮಾದಯ್ಯನವರಿಂದ ಸಂಗ್ರಹಿಸಿ, ಡಾ.ಕೆ.ಕೇಶವನ್ ಪ್ರಸಾದ್ ಅವರ ಸಂಪಾದಕತ್ವದಲ್ಲಿ ಕನ್ನಡ ವಿಶ್ವವಿದ್ಯಾಲಯ, ಹೊರತಂದಿರುವ ಮಲೆ ಮಾದೇಶ್ವರ ಕಾವ್ಯದಲ್ಲಿ ಬರುವ ಮಾದಪ್ಪ ಹುಟ್ಟಿ ಬೆಳೆದ ಸಾಲಿನಿಂದ ಕಥೆಯನ್ನು ನಿರೂಪಿಸಲಾಗಿದೆ.

ಭೀಮನಕೊಲ್ಲಿಯಲ್ಲಿ ಹಲಗಪ್ಪ ಮತ್ತು ಮುದ್ದಮ್ಮನವರನ್ನು ಒಕ್ಕಲಾಗಿ ಪಡೆದು ಅವರಿಂದ ಹಾಲು ಮಜ್ಜನ ಮಾಡಿಸಿಕೊಂಡು, ಸುತ್ತ ಮೂರೂ ಗ್ರಾಮಗಳಿಂದ ಭೀಮನಕೊಲ್ಲಿ ಮಾದಪ್ಪ ಅಂತ್ಹೇಳಿ ಜಾತ್ರೆ ಮಾಡಿಸಿಕೊಂಡು, ಭೀಮನಕೊಲ್ಲಿಯನ್ನು ಬಿಟ್ಟು ಮಾದೇವ ನಾಲ್ಕಾರು ರಾಜ್ಯಗಳನ್ನು ನೋಡ್ಕಂಡ್ ಹೋಗುತ್ತಾ ಇದ್ದಾರೆ. ಆದರೆ ಎಲ್ಲಿಯೂ ಮಾರೀರು, ಮಸಣಿಯರು, ದುರ್ಗಿ, ಚಾಮುಂಡಿಯರು ಕಾಣಿಸುತ್ತಿಲ್ಲ. ಯಾವ ದೇವಾನುದೇವತೆಗಳೂ ಕಾಣ ಸಿಗುತ್ತಿಲ್ಲ. ಯಾವ ಅಡವಿ ಸೇರಿದ್ದಾರೋ, ಅಂತ್ಹೇಳಿ, ಮಾದೇವ ತೀಕ್ಷ್ಣ ದೃಷ್ಟಿ ಯಿಂದ ನೋಡ್ಕಂಡು ಬರುತ್ತಾ ಇದ್ದಾಗ, ದಕ್ಷಿಣ ಭಾಗದಲ್ಲಿದ್ದ ಬಂಕಾಪುರಿವೊಳಗೆ ಶ್ರವಣದೊರೆ, ಎಲ್ಲಾ ದೇವಾನುದೇವತೆಗಳನ್ನೂ ಮಾರಿ ಮಸಣಿಯರನ್ನು ತನ್ನ ಕಾರಾಗೃಹದಲ್ಲಿಟ್ಕೊಂಡು ತನ್ನ ಚಾಕರಿ ಮಾಡಿಸ್ಕಂಡ್ ಇದ್ದಾನೆ.

ಇದನ್ನೆಲ್ಲಾ ತೀಕ್ಷ್ಣ ದೃಷ್ಟಿಯಿಂದ ಗಮನಿಸಿದ ಮಾದೇವ ಬಂಕಾಪುರಿ ಕೋಟೆಯ ಬಾಗಿಲಲ್ಲಿ ನಿಂತು ಜಂಗಿನ ಶಬ್ದ ಮಾಡಿದರು. ತಕ್ಷಣವೇ ಅಲ್ಲಿದ್ದ ದೇವಾನುದೇವತೆಗಳು ಜಂಗಿನ ಶಬ್ದ ಕೇಳಿ ಉತ್ತರ ದೇಶದ

ಮಾಯ್ಕಾರ ಬಂದನೆಂದು ನಿಂತ್ಕೊಂಡಾಗ, ಬಂದವರಾರೆಂದು ಶ್ರವಣದೊರೆ ನಾರಾಯಣ ಮತ್ತು ಬ್ರಹ್ಮ ದೇವರನ್ನು ಕೇಳಿ, ಅವನನ್ನು ಕಾರಾಗೃಹಕ್ಕೆ ಸೇರಿಸಿಕೊಳ್ಳಲು “ಡೈರಿ ಬುಕ್ಕೊಗೆ ಬರ್ಕೊ” ಎಂದು ಬ್ರಹ್ಮ ದೇವರಿಗೆ ಹೇಳಿ, ಮಾದೇವನ ತಂದೆ ತಾಯಿ ಯಾರೆಂದು ಕೇಳಿದ. ಮಾದೇವನಿಗೆ ಸಿಡಿಲು ಹೊಡೆದಂತಾಯಿತು. ತಂದೆ ತಾಯಿಗಳು, ಗುರು ಹಿರಿಯರು ಇಲ್ಲದ ಮೇಲೆ ಲೋಕ ಕಲ್ಯಾಣ ಮಾಡುವುದಕ್ಕೆ ಸಾಧ್ಯವಿಲ್ಲವೆಂದು, ಅಲ್ಲಿಂದ ಮಾಯವಾಗಿ ಹೊರಟ ಮಾದೇವ ಉತ್ತುಮಾಪುರದ ಪಕ್ಕದಲ್ಲಿರುವ ಬಂಕಾಪುರಿಗೆ ಹೊರಟಿದ್ದಾರೆ.

ಪರಮೇಶ್ವರನ ವರದಲ್ಲಿ ಹುಟ್ಟಿದ ಶಂಕರಪ್ರಿಯ ಎಂಬ ದೊರೆಗೆ, ಪಾರ್ವತಿಯ ವರ ಪ್ರಸಾದವಾದ ರಾಮಾಂಬಿಕೆ, ಪತಿಶೀಲೆ ಎಂಬಿಬ್ಬರು ಹೆಂಡಂದಿರು. ಮಕ್ಕಳ ಭಾಗ್ಯವಿರಲಿಲ್ಲ. ಶಿವನ ವರದಿಂದ ಎರಡನೆ ಹೆಂಡತಿ ಪತಿಶೀಲೆಯ ಗರ್ಭದಲ್ಲಿ ಶಿವದಾಸನೆಂಬ ಹುಟ್ಟಿದ ಮಗ ಬೆಳೆದು ಯೌವನಕ್ಕೆ ಕಾಲಿರಿಸಿದ. ಉತ್ತಮಾಪುರದಲ್ಲಿ ಭದ್ರಕಾಳಿ ವರದಲ್ಲುಟ್ಟಿದ್ದ ಉತ್ರಾಜಮ್ಮನಿಗೂ ಈ ಶಿವದಾಸನಿಗೂ ಲಗ್ನವಾಯಿತು. ಬಂಕೇಶಪುರಿಯ ಪಟ್ಟವನ್ನು ಶಿವದಾಸನಿಗೆ ಕಟ್ಟಿ ತಂದೆ ತಾಯಿಗಳು ದೈವಾಧೀನರಾದರು.

ಉತ್ರಾಜಮ್ಮ ಶಿವಭಕ್ತೆ. ಪ್ರತಿ ದಿನ ಬೆಳಗಾಗಲೆದ್ದು, ಪತಿಪಾದಕ್ಕೆ ಪೂಜೆ ಮಾಡಿ, ಕಲ್ಯಾಣಿಯಲ್ಲಿ ಮಿಂದು ಮಡಿಯಾಗಿ ಆತ್ಮಲಿಂಗ ಪೂಜೆ ಮಾಡ್ಕಂಡು, ನೂರೊಂದು ಲಿಂಗಕ್ಕೆ ಪೂಜೆ ಮಾಡುತ್ತಿದ್ದಳು. ಉತ್ರಾಜಮ್ಮ ದಂಪತಿಗಳು ಒಂದು ಮಂಚ್ದಲ್ಲಿ ಮಲಗ್ತಾಯಿರಲಿಲ್ಲ. ಏಳು ತಲೆ ಕಾಳಿಂಗ ಸರ್ಪವನ್ನು ಕರ್ದು ತಲೆದಿಂಬು ಮಾಡ್ಕೊಂಡು ಮಲಗುತ್ತಿದ್ದರು. ಉತ್ರಾಜಮ್ಮನಿಗೆ, ನಲವತ್ತು ವರ್ಷ ವಯಸ್ಸಾದರೂ, ಮಕ್ಕಳ ಫಲವಿಲ್ಲ. ನಾವು ಶಿವನ ಭಕ್ತರಾಗಿಯೂ ರಾಜ್ಯಕ್ಕೆ ತಕ್ಕಂಥ ಮಗನನ್ನು ಕೊಡಲಿಲ್ಲವೆಂಬ ಕೊರಗು. ಗುರುಗಳಾದ ವ್ಯಾಘ್ರಾನಂದ ಸ್ವಾಮಿಗಳನ್ನು ಕೇಳಲಾಗಿ, ಶಿವನ ಆಶೀರ್ವಾದದಿಂದ ನಿಮಗೆ ಮಕ್ಕಳ ಭಾಗ್ಯ ಕೊಡುವುದಾಗಿಯೂ, ನಂತರ ನಮಗೇನು ಕೊಡುವಿರೆಂದು ಕೇಳಿದಾಗ, ಪುತ್ರ ಸಂತಾನವಾದರೆ ಅವರು ಕೇಳಿದ್ದನ್ನು ಕೊಡುವುದಾಗಿ ಉತ್ರಾಜಮ್ಮ ಸ್ವಾಮಿಗಳಿಗೆ ವಚನ ನೀಡುತ್ತಾಳೆ. ದಿನ ನಿತ್ಯದಂತೆ, ಉತ್ರಾಜಮ್ಮ ಕೊಳದಲ್ಲಿ ಸ್ನಾನ ಮಡಿ ಮಾಡಿಕೊಂಡು, ನೀರು ಹೂ ಹೊತ್ತುಕೊಂಡು ಬರುತ್ತಿದ್ದಾಗ ಕೊಳದ ಏರಿಯ ಹತ್ತಿರ ಮಾದೇವ ಬಿಳಿಪಲ್ಲಿಯಾಗಿ ಕಾಯುತ್ತಿರುತ್ತಾನೆ. ಉತ್ರಾಜಮ್ಮನವರನ್ನು ನೋಡಿ, ಇವರೇ ನನಗೆ ತಾಯಿಯಾಗಲು ತಕ್ಕವರೆಂದು ನಿರ್ಧರಿಸಿ, ಒಂದು ಸೋಮವಾರ, ಉತ್ರಾಜಮ್ಮ ಸ್ನಾನ ಮಾಡಿಕ್ಕೊಂಡು, ನೀರು ತುಂಬಿಕೊಂಡು, ಹೂವನ್ನು ಎತ್ತುವುದಕ್ಕೆ ಕಲ್ಯಾಣಿ ಸುತ್ತ ಬಂದರು. ಆದರೆ ಮಾದೇವ ಒಂದೂ ಹೂ ಇಲ್ಲದ ಹಾಗೆ ಮಾಯ ಮಾಡಿದ್ದಾನೆ. ಉತ್ರಾಜಮ್ಮ ಹೂ ಇಲ್ಲವಲ್ಲಾ ಎಂದು ಚಿಂತಿಸುತ್ತಿರಬೇಕಾದರೆ, ಬಿಳಿಯ ಪಲ್ಲಿಯಾಗಿ ಕೂತಿದ್ದ ಮಾದೇವ ನಡು ಕಲ್ಯಾಣಿ ವೊಳಗೆ ಕೆಂದಾವರೆ ಹೂವಾಗಿ ಹೂವಿನ ಮಧ್ಯದಲ್ಲಿ ಪುಟ್ಟ ಲಿಂಗವಾಗಿ ಕುಳಿತಿದ್ದಾನೆ. ಹೂವನ್ನು ನೋಡಿದ ಉತ್ರಾಜಮ್ಮ ಅದನ್ನು ಕೀಳಲು ಕಲ್ಯಾಣಿಗೆ ಇಳಿತಾ ಇರಬೇಕಾದರೆ, ಹೂವಿನಲ್ಲಿದ್ದ ಮಾದೇವಾ ತೇಲಾಡುತ್ತಾ, ಉತ್ರಾಜಮ್ಮನವರಿದ್ದೆಡೆಗೆ ಹೂ ಬರುತ್ತದೆ. ಹೂವನ್ನು ತೆಗೆದುಕೊಂಡು ಮನೆಗೆ ಬಂದ ಉತ್ರಾಜಮ್ಮ ಶಿವ ಪೂಜೆಗೆ ತಂದ ಹೂವನ್ನು ಒಂದೊಂದು ಗರಿಯನ್ನು ನೂರೊಂದು ಲಿಂಗಕ್ಕೆ ಇಟ್ಟು ಮಧ್ಯೆ ಇರುವಂಥ ದಿಂಡನ್ನು ಗಂಧದ ಕರಡಿಗೆಯೊಳಗೆ ಇರಿಸಿಕೊಳ್ಳುತ್ತಾರೆ. ಉತ್ರಾಜಮ್ಮ ನಿದ್ರಿಸಿ ಬೆಳಗಾಗುವ ಹೊತ್ತಿಗೆ, ಆ ಗಂಧದ ಕರಡಿಗೆಯಲ್ಲಿದಂತ ಮಾದೇವನೆಂಬ ಪುಟ್ಟಲಿಂಗವು ಸಣ್ಣ ಬಾಲಕನಾಗಿ ಆ ತಾಯ ಮಗ್ಗಲಲ್ಲಿ

ಮಲಗಿದ್ದಾನೆ. ಅಳುತ್ತಿದ್ದ ಅಂದ ಚೆಂದದ ಸಣ್ಣ ಬಾಲಕನನ್ನು ನೋಡಿ ತಾಯಿ ತನ್ನ ತೊಡೆಯ ಮೇಲಿಟ್ಟುಕೊಂಡು ಮುದ್ದಾಡಿದ್ರು. ತಾಯಿಗೆ ಎದೆ ಹಾಲು ಬಂದು ಎದೆ ಭಾರವಾಯಿತು. ಆಗ ತಾಯಿ ಮಗನಿಗೆ ಎದೆ ಹಾಲನ್ನು ಕುಡಿಯಲು ಹೇಳಿದರು. ಆದರೆ ಮಾದೇವ ನಿನ್ನ ಎದೆ ಹಾಲು ಬೇಡ, ನನ್ನ ಮುತ್ತಿಕ್ಕಿ ಮುದ್ದಾಡಬೇಡ, ನಾನು ಮುಂದೆ ಭಕ್ತರ ಸಾಮ್ರಾಜ್ಯವನ್ನು ಕಟ್ಟಬೇಕಾಗಿದೆ ಎಂದು ತಾಯಿಗೆ ಹೇಳಿ ನಿನ್ನ ಎದೆ ಹಾಲನ್ನು ನೀಲಗಿರಿ ತಾಳೆರೆ ತವಸರೆ ಕಂಭದ ಬೋಳಿವೊಳುಗೆ ಹುಟ್ಟರೇ ಕಲ್ಲ ಮ್ಯಾಲೆ ಕರೆದು ಬುಡಮ್ಮಾ, ಶೂರ್ಣಾವತಿ ನದಿಯಾಗಿ ಹರೀಲಿ ಮುಂದೆ ಚಿಕ್ಕಾಲಳ್ಳ, ದೊಡ್ಡಾಲಳ್ಳವಾಗಲಿ, ದೀಪಾವಳಿ ತಿಂಗಳಲ್ಲಿ ನೂರೊಂದು ಜನ ಕೊಡ ಮಕ್ಕಳ ತಂದು ನನ್ನ ಮಂಡೇ ಮ್ಯಾಲೆರೆದಾಗ, 'ತಾಯಿ ಹಾಲರಬಿ' ಅಂತ್ಹೇಳಿ ನೆನಪು ಮಾಡ್ಕಳ್ತೀನಿ ಅಂತಾರೆ. ಆದರಂತೆ ತಾಯಿ ಉತ್ರಾಜಮ್ಮ ನಡೆದುಕೊಳ್ಳುತ್ತಾರೆ.

ಮಗನಿಗೆ ವ್ಯಾಘ್ರಾನಂದ ಸ್ವಾಮಿಗಳು 'ಮರಿದೇವ್ರು' ಎಂದು ನಾಮಕರಣ ಮಾಡಿದರು. ಮರಿದೇವ್ರಿಗೆ ಆರು ವರ್ಷಗಳಾದಾಗ, ಸ್ವಾಮಿಗಳು ಉತ್ರಾಜಮ್ಮನಿಗೆ ಹಿಂದೆ ಮಗನಾದರೆ ಕಾಣಿಕೆ ಕೊಡುತ್ತೇನೆಂದು ಹೇಳಿದ್ದನ್ನು ಜ್ಞಾಪಿಸಿ ಮರಿದೇವ್ರನ್ನು ಕಾಣಿಕೆಯಾಗಿ ಪಡೆದುಕೊಂಡು ಶ್ರೀಶೈಲಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ವಿದ್ಯೆ ಬುದ್ಧಿ ಕಲಿಸಿದರು. ಸ್ವಾಮಿಗಳು ರಾತ್ರಿ ಹನ್ನೆರಡು ಗಂಟೆಯಲ್ಲಿ ಮರಿದೇವ್ರನ್ನು ಕಾಡಿಗೆ ಕರೆದು ಕೊಂಡು ಹೋಗುವುದು. ಅವ್ರಾಣಿ, ಗೊದ್ದ, ಗೋಸುಂಬೆ, ಹಾವು, ಚೇಳು, ಹುಲಿ ಚಿರತೆ ಎಲ್ಲವನ್ನು ಕರೆದು ಅವುಗಳ ಮೈ ಸವರಿ ದೀಪುದಿಕ್ಕೆ ನಿಲ್ಲಿಸಿದರೆ ಮರಿದೇವ್ರು ಗುರುಗಳನ್ನು ಇವು ಕಾಡುಮೃಗ ಜಾತಿಯವು ಅಂದ್ರೆ ಗುರುಗಳು ನಾವು ಎಷ್ಟು ಸಾಧುವಾಗಿದ್ದೆವೊ, ಅವು ಕೂಡ ಅಷ್ಟು ಸಾಧುವಾಗಿದ್ದು ಬುದ್ಧಿಯಾಗಿರ್ತವೆ ಎನ್ನುತ್ತಾರೆ. ಹುಲಿಮ್ಯಾಲೆ ಕೂರಿಸಿ ಸವಾರಿ ಮಾಡಿಸುತ್ತಾರೆ. ಕೊನೆಗೆ ಸ್ವಾಮಿಗಳು ಮರಿದೇವ್ರಿಗೆ 'ನಿನ್ನಿಂದ ಲೋಕ ಕಲ್ಯಾಣಕ್ಕೆ ಹೋಗು' ಎನ್ನುತ್ತಾರೆ. ಗುರುಗಳ ಮಾತಿನಂತೆ ಶ್ರೀಶೈಲವನ್ನು ಬಿಟ್ಟು ಕಲ್ಯಾಣದಲ್ಲಿ ದೊಡ್ಡ ಬಸವಣ್ಣನವರ ನೀಲಮ್ಮನವರ ದೃಢ ನೋಡಿಕೊಂಡು ಸುತ್ತೂರೂ ಮಠಕ್ಕೆ ಬರುತ್ತಾರೆ. ಮಾದೇಶ್ವರರು ಹೇಗೆ ಜನಿಸಿದರೆಂಬುದಕ್ಕೆ ಒಂದೊಂದು ಕಂಸಾಳೆ ಕಥಾ ಸಂಪ್ರದಾಯ ಒಂದೊಂದು ರೀತಿಯಲ್ಲಿ ವರ್ಣಿಸಿವೆ. ಕಂಸಾಳೆ ಕಲಾವಿದರು ಮಾದೇಶ್ವರ ತಂದೆ, ಚಂದ್ರಶೇಖರ ಮೂರ್ತಿ, ಮಾದಯ್ಯ, ಮಲ್ಲಪ್ಪ, ಶಿವದಾಸಪ್ಪ, ಕಲ್ಯಾಣದೇವರು, ಲಿಂಗ ಮಾರಣ್ಣ ಎಂಬ ನಾನಾ ಹೆಸರುಗಳನ್ನು ಹೇಳುತ್ತಾರೆ. ಇವೆಲ್ಲದರ ಆಧಾರಗಳಿಂದ ಮಾದೇಶ್ವರರ ತಂದೆ ಚಂದ್ರಶೇಖರಮೂರ್ತಿ, ತಾಯಿ ಉತ್ರಾಜಮ್ಮ ಎಂದುಕೊಳ್ಳಬಹುದು.

ಪ್ರಕಟವಾಗಿರುವ ವಿವಿಧ ಕಂಸಾಳೆ ಸಂಪ್ರದಾಯದ ಕತೆಗಳಲ್ಲಿ ಮಾದೇಶ್ವರನ ಜನನದ ವಿಭಿನ್ನತೆಯನ್ನು ಗಮನಿಸೋಣ.

**ಪಾಠ - ೨**

ಮೈಸೂರು ಜಿಲ್ಲೆಯ ಕುಕ್ಕರಹಳ್ಳಿಯ ಕಂಸಾಳೆ ಮರಿಯಯ್ಯನ ಕಥೆಯಂತೆ (ಡಾ. ಜೀ. ಶಂ. ಪರವರ ದಕ್ಷಿಣ ಕರ್ನಾಟಕ ಕಾವ್ಯಪ್ರಕಾರಗಳು ಮಹಾಪ್ರಬಂಧದಲ್ಲಿ ಚಿತ್ರಿತವಾಗಿರುವಂತೆ) ಮಾದೇಶ್ವರ ಭೀಮನಕೊಲ್ಲಿಯಲ್ಲಿ ಹಲಗೇಗೌಡನನ್ನು ಒಕ್ಕಲು ಮಾಡಿಕೊಂಡು ನಡುವೊಲೆ ಮಾದೇಶ್ವರ ಎಂದು ಪೂಜಿಸಿಕೊಂಡ ನಂತರ ಕಲ್ಲೂರು ತೋಪಿನಲ್ಲಿ ಲಗ್ಗೆ ಚಂಡಾಟದಲ್ಲಿ ಹುಡುಗರನ್ನು ಸೋಲಿಸಿದಾಗ ಅವರು 'ತಂದಿಲ್ಲದವನು ತಾಯಿಲ್ಲದವನು'

ಎಂದು ಬೈದಿದ್ದಕ್ಕೆ ಶಿಕ್ಷೆ ವಿಧಿಸಿ, ನಂತರ ಮಕ್ಕಳು ವರ್ಷಕ್ಕೊಂದು ಸಲ ನವರಾತ್ರಿಯಲಿ 'ಮಕ್ಕಳಾಟಿಕೆ ಮಾದಯ್ಯನ ಹಬ್ಬ' ಮಾಡಬೇಕು ಮತ್ತು ಮಾದೇಶ್ವರನ ಒಕ್ಕಲಾಗ ಬೇಕೆಂದು ಹುಡುಗರಿಂದ ಒಪ್ಪಿಗೆ ಪಡೆದ ಅವರ ಸಂಕಟಗಳನ್ನು ಪರಿಹರಿಸಿದ ನಂತರ, ಮಾದೇಶ್ವರರು ಯೋಚಿಸಿದರು, ಹುಡುಗರು ತಾಯಿ ತಂದೆಯಿಲ್ಲ ದವನೆಂದಿದ್ದು, ಮುಂದೆ ನಾನು ಬಂಕಾಪುರಿ ಶ್ರವಣದೊರೆಯನ್ನು ಕೊಲ್ಲಲು ಹೋದಾಗ ಅವನು ನನ್ನ ತಂದೆ ತಾಯಿ ಯಾರೆಂದು ಕೇಳಿದಾಗ ಉತ್ತರಿಸಲು ಉತ್ತರವಿಲ್ಲವೆಂದು ತಿಳಿದು ತಕ್ಕ ತಂದೆ ತಾಯಿಯನ್ನು ಪಡೆಯಲು ಉತ್ತರಾಜ ಪಟ್ಟಣಕ್ಕೆ ಹೋಗುತ್ತಾರೆ.

ಮಹಾಪತಿವ್ರತೆಯಾದ ಉತ್ರಾಜಮ್ಮನ ಪತಿ ಚಂದ್ರಶೇಖರಮೂರ್ತಿ ಮಹಾ ಶರಣ. ಉತ್ರಾಜಮ್ಮನ ಲಗ್ನವಾದಾಗ ಕಲ್ಯಾಣದ ಬಸವಣ್ಣನವರಿಗೆ 'ಮಯಾಣಂ' ಕೊಡಲು ಹೋದರೆ ಬಸವಣ್ಣನವರು ಯಾಗ ದಲ್ಲಿದ್ದರು. ಚಂದ್ರಶೇಖರ ಮೂರ್ತಿಗಳು ಅಲ್ಲಿಯೇ ತಪಸ್ಸಿಗೆ ಕುಳಿತರು. ಗಂಡ ಹೆಂಡಿರು ಒಬ್ಬರೊಬ್ಬರನ್ನು ನೋಡಲಿಲ್ಲ. ಪ್ರತಿ ದಿನ ಅರವತ್ತು ವರ್ಷದ ಮುದುಕಿಯಾದ ಉತ್ರಾಜಮ್ಮ, ಕಲ್ಯಾಣಿಕೊಳಕ್ಕೆ ನೀರಿಗೆ ಬರುವುದು. ತನ್ನ ಹೃದಯವನ್ನೇ ಸೀಳಿ, ಒಳಗಿದ್ದ ಕಳ್ಳು ತೆಗೆದು ಕುಕ್ಕಿ ಮಾಡಿ ಬೇಲಿಯ ಮೇಲೆ ಒಣಗಲು ಹಾಕಿ, ಅಂಗೈಯಲ್ಲಿ ಲಿಂಗ ಪೂಜೆ ಮಾಡುವುದು ಪದ್ಧತಿ. ಇದನ್ನು ನೋಡಿದ ಮಾದೇಶ್ವರ ಈಕೆಯನ್ನೇ ತಾಯಿಯಾಗಿ ಪಡೆಯಲು ನಿರ್ಧರಿಸಿ ಒಂದು ತಾವರೆ ಹೂವಾಗಿ ತೇಲಿದರು. ಅದನ್ನು ಕೀಳಲು ಕೈಹಾಕಿದರೆ ಮಾಯವಾಯಿತು. ಉತ್ರಾಜಮ್ಮನಿಗೆ ಏಕೋ ಸುಸ್ತು ಸಂಕಟವಾಗಿ ಮಾವಿನ ಮರವೊಂದರ ಕೆಳಗೆ ಮಲಗಿ ಕೊಂಡಾಗ ಮಾದೇವ, ಮಾವಿನ ಹಣ್ಣಾಗಿ ಕೆಳಕ್ಕೆ ಬಿದ್ದಾಗ, ಅದನ್ನು ಎರಡೂ ಕೈಯಲ್ಲಿ ಎತ್ತಿಕೊಂಡು ಮನೆಗೆ ಬಂದು ಮೂರು ಚೂರು ಮಾಡಿ ಮೂರನೆಯ ಚೂರನ್ನು ತಾನು ಸೇವಿಸಿದಳು. ಮಾದೇಶ್ವರ ಅವಳ ಗರ್ಭವನ್ನು ಸೇರಿಕೊಂಡ. ಉತ್ರಾಜಮ್ಮ ಗರ್ಭ ಧರಿಸಿದ ವಿಚಾರ ಬಿಜ್ಜಳ ರಾಜನಿಗೆ ತಿಳಿದು, ಅವನ ಎದುರಿಗೆ ಹೋಗ ಬೇಕಾಯಿತು. ಆಗ ಮಾದೇಶ್ವರ ಅವಳ ಗರ್ಭದಲ್ಲಿ ಮಾತಾಡಿದರು.

"ನಿನ್ನ ಮುತ್ತಿನಂಥ ಕಣ್ಣೀರು ಮೂರು ಹನಿ ಧರೆ ಮೇಲೆ ಬಿದ್ದರೆ, ಧರೆ ಹತ್ತಿ ಧರೆ ಉರಿದು ಹೋಗುತ್ತದೆ." ಕೊರಳ ಕರಡಿಗೆಯನ್ನು ನಡು ಮನೆಗೂಟಕ್ಕೆ ಹಾಕಿ ಹೋಗುವಂತೆ ಸೂಚಿಸಿದಾಗ, ಉತ್ರಾಜಮ್ಮ ಮೊದಲಿ ನಂತಾದಳು. ದೊರೆ ಮುಂದೆ ಕಾಣಿಸಿಕೊಂಡಳು. ಮನೆಗೆ ಬಂದು ಕರಡಿಗೆಯನ್ನು ಧರಿಸಿದ ಮೇಲೆ ಮತ್ತೆ ಮಾದೇವ ಅವಳ ಗರ್ಭದಲ್ಲಿ ಕಾಣಿಸಿಕೊಂಡ. ಒಂದು ಪಾಠದಲ್ಲಿ ಉತ್ರಾಜಮ್ಮನ ಬೆನ್ನಿನ ಬಲಭಾಗದಲ್ಲಿ ಎಳ್ಳಪ್ಪು ಜಾಗ ಮಾಡಿಕೊಂಡು ಮಾದೇವ ಈ ಲೋಕಕ್ಕೆ ಅವತರಿಸಿದ. ಮಗನ ಅಂದ ಚೆಂದವನ್ನು ನೋಡಿ ಮಗನನ್ನು ಬಾಚಿ ತಬ್ಬಿಕೊಂಡು ಮುತ್ತಿಕ್ಕಲು ಹೋದಾಗ, ಎದೆಯಾಡಲು ಹೋದಾಗ ಮಾದೇವ 'ಮೀಸಲಳಿ ಯುತ್ತದೆ' ಎಂದು ಅದನ್ನು ಸ್ವೀಕರಿಸದೆ, ಎದೆಯ ಹಾಲನ್ನು ಕರೆದು ಮುಂಗೈ ಗಾತ್ರ ಬುತ್ತಿಯನ್ನು ಕಟ್ಟಬೇಕೆಂದ. ಮುಂದೆ ನನ್ನ ಪರಸೆಗೆ ಬರುವ ಹೆಣ್ಣೇಳು ಕೋಟಿ, ಗಂಡೇಳು ಕೋಟಿ ಗಣಂಗಳಲ್ಲಿ ಮೀಸಲು ಬುತ್ತಿಗೆ ಹಾಲು ಹಾಕಿಸಿ ಕಟ್ಟಿಸುವುದಕ್ಕೆ ಉಳಿದ ಹಾಲನ್ನು ಭೂಮಿಗೆ ಕರೆದರೆ ಬರುವ ಭಕ್ತರು ಮೂರು ಬೊಗಸೆ ನೀರು ಕುಡಿದು ಬೆಟ್ಟ ಹತ್ತಲು ಸರಿಯಾಗುತ್ತದೆ ಎಂದು ಮಾದೇಶ್ವರರು ತಿಳಿಸಿದಂತೆ ಉತ್ರಾಜಮ್ಮ ಮಾಡಿದಳು.. ತಾಯಿಯಿಂದ ಬೀಳ್ಕೊಂಡ ಮಾದೇಶ್ವರರು ಬಸವಣ್ಣ ನೀಲಮ್ಮನವರ ದೃಢ ನೋಡಲು ಕಲ್ಯಾಣಕ್ಕೆ ಭೇಟಿ ನೀಡಿ, ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ ಬುದ್ಧಿ ಕಲಿಸಿ, ಬಸವಣ್ಣನವರನ್ನು ಹರಸಿ, ದಕ್ಷಿಣಕ್ಕೆ ಹೊರಟು ಕಪಿಲಾತೀರದ ಸುತ್ತೂರಿನ ಮಠಕ್ಕೆ ಬಂದರು.

## ಪಾಠ - ೩

ಡಾ.ಜೀ.ಶಂ.ಪರಮಶಿವಯ್ಯನವರು ಸಂಗ್ರಹಿಸಿರುವ ಜನಪದ ಕಾವ್ಯ ಕಥೆಗಳಲ್ಲಿ ಬರುವ ಮಾದೇಶ್ವರನ ಹುಟ್ಟಿನ ಬಗೆಗಿನ ಕಥೆಯಲ್ಲಿ ತಪೋನಿಷ್ಟರಾಗಿದ್ದ ಚಂದ್ರಶೇಖರ ಮೂರ್ತಿ ಮತ್ತು ಸತ್ಯ ಶರಣೆ ಉತ್ರಾಜಮ್ಮನವರಿಗೆ ಶಿಶುವಾಗಬೇಕೆಂದು ಅಲ್ಲಿ ಮಾದಪ್ಪ ಮೂರು ತಿಂಗಳ ಶಿಶುವಾಗಿ ಗೋಚರಿಸಿ, ಮಾಯದಲ್ಲಿ ಮರೆಯಾದ ತಾವರೆ ಹೂವಾಗಿ ಮಾದೇವ ಕೊಳದಲ್ಲಿ ಕಾಣಿಸಿದರು. ಆ ಹೂವನ್ನು ಉತ್ತರಾಜಮ್ಮ ಕಣ್ಣಿಗೆ ಒತ್ತಿಕೊಳ್ಳಲು ಮಾದೇವ ಆಕೆಯ ಹೃದಯವನ್ನು ಸೇರಿದರು. ಆಕೆ ಗರ್ಭಿಣಿಯಾದಳು. ಒಂಬತ್ತು ತಿಂಗಳು ತುಂಬಿದ ಮೇಲೆ ಸೋಮವಾರ ಒಂಬತ್ತು ಗಂಟೆಯ ವೇಳೆಗೆ ಮಾದೇಶ್ವರರು ಆಕೆಯ ಬೆನ್ನ ಮೇಲಿದ್ದ ಮಚ್ಚೆಯನ್ನು ತನ್ನ ಕಿರುಬೆರಳಿನಿಂದ ಸೀಳಿಕೊಂಡು ಹೊರಬಂದರು. ಶಿಶುವನ್ನು ಕಂಡ ಚಂದ್ರಶೇಖರ ಮೂರ್ತಿಗಳು ಮಡದಿಯನ್ನು ಶಂಕೆಯಿಂದ ಕಂಡರು ಹುಟ್ಟಿದ ಮಗ ಆರೇಳು ದಿನಗಳಾದರೂ ಕಣ್ಣು ಬಿಟ್ಟಿಲ್ಲ ಹಾಲು ಕುಡಿದಿಲ್ಲ. ಚಂದ್ರಶೇಖರ ಮೂರ್ತಿಗಳು ಕಲ್ಯಾಣ ನಗರದ ಹಾವಾಡಿಗರಿಂದ ಒಂದು ಪಾವು ಕಳ್ಳಿಯ ಹಾಲು, ಒಂದು ಪಾವು ಎಕ್ಕದ ಹಾಲು ಜೊತೆಗೆ ಒಂದು ಪಾವು ನಾಗರಹಾವಿನ ವಿಷವನ್ನು ತರಿಸಿದರು. ಹಾಲನ್ನು ಮಗುವಿಗೆ ಕುಡಿಸಲು ಪತ್ನಿಗೆ ಹೇಳಿದರು. ತಾಯಿ ಹಾಲಿನ ಬಟ್ಟಲನ್ನು ಮುಂದೆ ನೀಡುತ್ತಿದ್ದಂತೆ, ಮಗು ಎದ್ದು ಕುಳಿತು, ತುಂಬಾ ದಾಹವೆಂದು ಮಾತನಾಡುತ್ತಾ ಹಾಲನ್ನು ಕುಡಿದಿದ್ದಾನೆ. ಚಂದ್ರಶೇಖರ ಮೂರ್ತಿಗಳು ಅಚ್ಚರಿಪಟ್ಟರು. ಅಸಮಾನ್ಯ ಶಿಶುವೆಂದು ಎತ್ತಿ ಮುದ್ದಾಡಿದರು. ಚಂದ್ರಶೇಖರ ಮರಿದೇವರು ಎಂದು ಮುದ್ದಾದ ಹೆಸರಿಟ್ಟರು. ಹನ್ನೆರಡು ತುಂಬಿದ ಮರಿದೇವರು ತನ್ನ ನೆಲೆ ಬೇರೆ ಎಂದು ತಂದೆ ತಾಯಿ ಅನುಮತಿ ಪಡೆದು ಹೊರಟು ನಿಂತರು. ಹೋಗುವಾಗ ಬುತ್ತಿ ಕಟ್ಟಿಸಿಕೊಂಡರು ಹಾಗೇ ರಾಮ, ಲಕ್ಷ್ಮಣ ಎಂಬ ಎರಡು ಕಣಜಗಳನ್ನು ಸೃಷ್ಟಿಸಿ ಇದನ್ನು ಪೂಜಿಸಿರಿ, ಒಳಗಿನಿಂದ ಮುತ್ತು ರತ್ನ ಬೀಳುತ್ತವೆ. ಅದನ್ನು ಬಳಸಿಕೊಳ್ಳಿರಿ... ಕೈ ಹಾಕಬೇಡಿ ಎಂದರು.

"ಒಂದು ನಿರ್ದಿಷ್ಟ ಉದ್ದೇಶ ಸಾಧನೆಗಾಗಿ ಭೂಲೋಕದಲ್ಲಿ ಜನ್ಮ ತಾಳುವುದು ಜನರ ಸತ್ವಪರೀಕ್ಷೆ ಮಾಡಿ ಅವರನ್ನು ತಮ್ಮ ಭಕ್ತರಾಗಿ ಸ್ವೀಕರಿಸುವುದು ದುಷ್ಟ ಜನರನ್ನು ಶಿಕ್ಷಿಸುವುದು ತಮ್ಮ ಮಹಿಮಾ ಸಾಮರ್ಥ್ಯಗಳನ್ನು ಸಾಬೀತು ಮಾಡುವಂಥ ಪವಾಡಗಳನ್ನು ಜರುಗಿಸುವುದು. ಇದು ಸಾಮಾನ್ಯವಾಗಿ ಎಲ್ಲ ಪುರಾಣ ಪುರುಷರ ಚರಿತ್ರೆಯಲ್ಲಿ ಕಂಡು ಬರುವ ಒಂದು ಸಿದ್ಧ ಸೂತ್ರ. ಇದೇ ಸೂತ್ರ ಮಾದೇಶ್ವರನಿಗೂ ಅನ್ವಯಿಸುತ್ತದೆ."[೨೭]

ಪೌರಾಣಿಕ ವ್ಯಕ್ತಿಗಳು ಯಾರೂ ಕೂಡ ಸಾಮಾನ್ಯ ಮನುಷ್ಯರಂತೆ ಗಂಡು ಹೆಣ್ಣಿನ ಸಂಯೋಗದಿಂದ ಜನಿಸುವುದಿಲ್ಲ ಎಂಬುದು ಜನಪದ ಆಶಯಗಳಲ್ಲೊಂದು ಎಂಬುದನ್ನು ಗಮನಿಸಬೇಕಾದ ಅಂಶ. ''ತಾಯಿ ಆಗಬೇಕಾದ್ರೆ ಅವ್ರು ಅಂಟಾಗಿರಲಿಕ್ಕಿಲ್ಲ, ಮುಟ್ಟಾಗಿರಲಿಕ್ಕಿಲ್ಲ, ಸೂತ್ಕ ಆಗಿರಲಿಕ್ಕಿಲ್ಲ, ಕಿವಿನಾಗೆ ಬಂದ್ರೆ ಗುಗ್ಗೆ ಅಂತಾರೆ, ಮೂಗಿನಾಗೆ ಬಂದ್ರೆ ಗೊಣ್ಣೆ ಅಂತಾರೆ ಬಾಯಿನಾಗ ಬಂದ್ರೆ ಎಂಜಲು ಅಂತಾರೆ,"[೨೮] ''ವೀರ ಪುರುಷರು ಸಾಮಾನ್ಯವಾಗಿ ತಾಯಂದಿರ ಬೆನ್ನು ಮಾರ್ಗವಾಗಿ ಹುಟ್ಟುತ್ತಾರೆ. ಶರಣರಿಗೆ ಹುಟ್ಟಿದ ಮೇಲೂ ಮತ್ತೆ ಎರಡನೆಯ ಹುಟ್ಟು ಇರುತ್ತದೆ."[೨೯] ಮಾದೇಶ್ವರ ಜನನವೂ ಇದಕ್ಕೆ ಹೊರತಲ್ಲ. ಮೇಲೆ ನಮೂದಿಸಿರುವ ''ಕಂಸಾಳೆ ಕಥಾ ಸಂಪ್ರದಾಯಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಅವುಗಳ ಸಾಮ್ಯ ವೈಷಮ್ಯಗಳನ್ನು

ಗುರುತಿಸಬಹುದು. ಕಥೆಯ ಹಂದರ ಒಂದೇ ಆದರೂ ಮಾದೇಶ್ವರರು ಹುಟ್ಟಿದ ಊರು, ತಂದೆ, ತಾಯಿಗಳ, ಜನನದ ವಿವರಣೆ ವ್ಯತ್ಯಾಸವಿರುವುದನ್ನು ಕಾಣಬಹುದಾಗಿದೆ.''[೩೦]

ಕಾವ್ಯ ಪವಾಡಮಯವಾಗಿದೆ ಹಾಗೆಯೇ ಆಶಯಗಳೂ ಪೂರಕವಾಗಿ ಬಂದಿವೆ. ಇವುಗಳ ನಡುವೆ ಗೆರೆ ಎಳೆಯುವುದು ಅತ್ಯಂತ ಸೂಕ್ಷ್ಮವೂ ಕಷ್ಟ ಸಾಧ್ಯವೂ ಆದ ಕೆಲಸವಾಗಿದೆ. ಮಾದೇಶ್ವರನ ಹುಟ್ಟಿದ ಸಾಲಿನ ಕಥೆಯಲ್ಲಿ ಬರುವ ಕೆಲವು ಪವಾಡಗಳು ಮತ್ತು ಆಶಯಗಳು ಸುಳಿದಿರುವುದನ್ನು ಗುರುತಿಸಬಹುದು.

ಉತ್ರಾಜಮ್ಮ ಹೂವನ್ನು ಮೂಸಿದಾಗ ಗರ್ಭಿಣಿ ಆಗುವುದು, ಇಳಿ ವಯಸ್ಸಿನಲ್ಲಿ ಮಗುವನ್ನು ಹಡೆಯುವುದು, ಅಕಾಲಿಕ ಗರ್ಭದಾರಣೆಗೆ ಅಂಜಿದ ಉತ್ರಾಜಮ್ಮನಿಗೆ ಮಾದೇಶ್ವರರು ತಾಯಿಯ ಹೊಟ್ಟೆಯೊಳಗಿರುವಾಗಲೇ ತನ್ನ ಜನನದ ಉದ್ದೇಶವನ್ನು ಹೇಳಿ ತಾಯಿಯನ್ನು ಸಮಾಧಾನಪಡಿಸುವುದು, ಕರಡಿಗೆ ತೆಗೆದಿಟ್ಟಾಗ ಉತ್ರಾಜಮ್ಮ ಗರ್ಭ ಧರಿಸದೆ ಹಾಗೆ ಕಾಣುವ, ನಂತರ ಹಾಕಿಕೊಂಡಾಗ ಗರ್ಭದಲ್ಲಿ ಸೇರಿಕೊಳ್ಳುವುದು, ಹಾವನ್ನೇ ಸಿಂಬಿ ಮಾಡಿಕೊಳ್ಳುವುದು, ಮರಳನ್ನೇ ಅರಿವೆ ಮಾಡಿಕೊಳ್ಳುವುದು, ಏಳು ತಲೆ ಕಾಳಂಗ ಸರ್ಪವನ್ನು ಕರ್ರು ತಲೆದಿಂಬು ಮಾಡ್ಕೊಂಡು ಮಲಗುವುದು, ಕರುಳನ್ನು ತೆಗೆದು ಶುಚಿಮಾಡಿ ಒಣ ಹಾಕಿ ಮತ್ತೆ ಧರಿಸಿಕೊಳ್ಳುವುದು. ಮಾದೇಶ್ವರರು ಬಿಳಿ ಪಲ್ಲಿಯಾಗಿ ಗೋಡೆಗೆ ಅಡರಿ ಕೂರುವುದು. ಇದೆಲ್ಲ ಜನಪದ ಕಟ್ಟು ಕಥೆಯೊಂದರ ಚೌಕಟ್ಟಿನಲ್ಲಿ ಇದೆಲ್ಲ ಆಧ್ಯಾತ್ಮಿಕ ಸೂಕ್ಷ್ಮಗಳನ್ನು ಪವಾಡಗಳನ್ನು ರೂಪವನ್ನು ಪಡೆದು, ಜನಪ್ರಿಯ ಜನಪದ ಆಶಯಗಳಲ್ಲಿ ಆಕರ್ಷಕವಾಗಿ ಮೂಡಿ ಬಂದಿದೆ.

ಮಾದೇಶ್ವರರು ತಾಯಿ ಉತ್ರಾಜಮ್ಮ ಕಟ್ಟಿಕೊಟ್ಟ ಮುಂಗೈ ಗಾತ್ರದ ಮೂರು ಬುತ್ತಿಯನ್ನು ಕಲ್ಯಾಣದ ಶರಣರಿಗೆಲ್ಲ ಹಂಚಿದ ಮೇಲು ಅನ್ನ ಉಳಿಯುವುದು, ಉಗ್ರಾಣವೆಲ್ಲ ಅನ್ನಮಯವಾಯಿತು. ಇದೊಂದು ಅಕ್ಷಯ ಪವಾಡ, ಅನ್ನದಾನ ಮಾಡಿದಷ್ಟು ಹೆಚ್ಚುತ್ತದೆ. ದಾನಗಳಲ್ಲೆಲ್ಲಾ ಅನ್ನದಾನ ಮಿಗಿಲು ಎಂಬುದನ್ನು ಈ ಪವಾಡ ಹೇಳುತ್ತದೆ. ಅಲ್ಲದೆ ಇದ್ದುದನ್ನು ಎಲ್ಲರೂ ಹಂಚಿಕೊಂಡು ತಿಂದರೆ ಉತ್ತಮ ಎಂದು ಸಾರಲು ಮಾದೇಶ್ವರರು ಈ ಪವಾಡವನ್ನು ಎಸಗಿದಂತಿದೆ.

''ಮಾದೇಶ್ವರರು ಮನೆ ಮನೆಗೆ ಹೋಗಿ ಭಿಕ್ಷೆ ತರಲು ಮನೆ ತುಂಬಿ ಹೋಗುತ್ತಿತ್ತು. ಇನ್ನು ದಿನವೂ ತಂದರೆ ಎಲ್ಲಿ ತುಂಬಿಕೊಳ್ಳುವುದು ಎಂಬ ಚಿಂತೆಯುಂಟಾಯಿತು. ತಾಯಿ ಉತ್ರಾಜಮ್ಮ ಮಗನಿಗೆ 'ಮಗು ನೀನು ದಿನಕ್ಕೆ ಎರಡು ಸೇರು ಮಾತ್ರ ಭಿಕ್ಷೆ ತೆಗೆದುಕೊಂಡು ಬಾ' ಎಂದು ಹೇಳುತ್ತಾಳೆ. ಇದರಲ್ಲಿ ಒಂದು ತತ್ವ ಅಡಗಿದೆ. ಹೆಚ್ಚಿಗೆ ಸಂಗ್ರಹಿಸಿಕೊಂಡು ಒಬ್ಬರೇ ಸುಖಪಡಬಾರದು. ಇದು ಅಕ್ರಮವಾಗುತ್ತದೆ. ನಾವು ಯಾವಾಗಲೂ ಎಷ್ಟು ಬೇಕೋ ಅಷ್ಟನ್ನು ಮಾತ್ರ ಶೇಖರಿಸಿಟ್ಟುಕೊಳ್ಳಬೇಕು. ಬೇರೆಯವರಿಂದ ಉಚಿತವಾಗಿ ಸಿಗುತ್ತದೆಂದು ನಾವು ದುರಾಸೆಯಿಂದ ಪಡೆಯಬಾರದು ಎಂಬ ನೀತಿಯನ್ನು ಈ ಪ್ರಸಂಗದಲ್ಲಿ ಜನಪದ ಕವಿ ಚಿತ್ರಿಸಿದ್ದಾನೆ.''[೩೧]

ಮೇಲಿನ ಮೂರು ಪಾಠಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಉತ್ರಾಜಮ್ಮನ ಪಾತ್ರವನ್ನು ಅತ್ಯಂತ ಮೋಹಕವಾಗಿ ಚಿತ್ರಿಸಲಾಗಿದೆ. ಈಕೆ ಭಕ್ತಿಯ ಪುತ್ಥಳಿ. ನಿಷ್ಠೆ ನಿಯಮಗಳೇ ಸಾಕಾರವೆತ್ತ ಅನನ್ಯ ಮೂರ್ತಿಯವಳು. ಉತ್ರಾಜಮ್ಮ ಎಂತಹ ಸತ್ಯ ಶರಣೆ ಎಂದರೆ, ಹಾವನ್ನೇ ಸಿಂಬೆಯಾಗಿ ಮಾಡಿಕೊಂಡು, ಮರಳನ್ನೇ

ಅರಿವೆ ಮಾಡಿಕೊಂಡು, ಮೂವತ್ತು ಮೂರು ಕೋಟಿ ಲಿಂಗಗಳ ಪೂಜೆಗೆ ಹೂ ತರಲು ತಾವರೆ ಕೊಳಕ್ಕೆ ಹೊರಟರೆ ಅವಳ ಪೂಜೆಯ ವೇಳೆಗೆ ಲೆಕ್ಕವಿಲ್ಲದ ಲಕ್ಕಪತ್ರೆ, ಹಂಗಿಲ್ಲದ ಬಿಲ್ಪಪತ್ರೆ, ಮಿಕ್ಕನಾದುದು ಗರಿಕೆ ಪತ್ರೆ ಇವು ತಾವಾಗಿಯೇ ಬರುತ್ತವೆ. ತನ್ನ ತನುವನ್ನು ಸೀಳಿ ಒಳಗಿದ್ದ ಕರುಳನ್ನು ತೆಗೆದು ಕುಕ್ಕಿ ಮಡಿ ಮಾಡಿ ಬೇಲಿಯ ಮೇಲೆ ಒಣಗಲು ಹಾಕಿ ಅಂಗೈಯಲ್ಲಿ ಲಿಂಗ ಪೂಜೆ ಮಾಡುವ ಪೂಜೆಯ ವೈಖರಿ ರೋಮಾಂಚಕರ ವಾದುದು. ಇಂಥ ಪತಿವ್ರತಾ ಶಿರೋಮಣಿ ಗರ್ಭದಲ್ಲಿ ಜನಿಸಿ, ಈಕೆಯನ್ನು ತಾಯಿಯನ್ನಾಗಿ ಪಡೆಯಲು ಮಾದೇಶ್ವರ ಇಚ್ಛಿಸಿದ್ದು ಸಹಜ. ತಾವರೆ ಹೂವಾಗಿ ಆಕೆಯ ಕೈಗೆ ಬಂದು, ಅದನ್ನು ಮೂಸಿದ್ದರಿಂದಲೇ ಉತ್ರಾಜಮ್ಮ ಗರ್ಭ ಧರಿಸುತ್ತಾಳೆ. ಒಂಬತ್ತು ತಿಂಗಳು ತುಂಬಿದ ಮೇಲೆ ತಾಯಿಯ ಬೆನ್ನ ಮೇಲಿದ್ದ ಮಚ್ಚೆಯನ್ನು ತನ್ನ ಕಿರುಬೆರಳಿನಿಂದ ಸೇರಿಕೊಂಡು ಹೊರ ಬಂದ ನಂತರ ತಾಯಿಯ ಬೆನ್ನನ್ನು ಮೊದಲಿದ್ದ ರೂಪಕ್ಕೆ ತರುತ್ತಾರೆ.

''ಶರಣ ಚಂದ್ರಶೇಖರ ಮೂರ್ತಿಯ ಪಾತ್ರ ಗೌಣವಾಗಿದ್ದರೂ ಆತ ಅತ್ಯಂತ ಕಠಿಣತಮ ವ್ಯಕ್ತಿ ಎಂಬಂತೆ ಚಿತ್ರಿತವಾಗಿದೆ. ಆತ ಸಂಶಯಗ್ರಸ್ಥ ಒಂದು ರೀತಿಯಲ್ಲಿ ಅತ್ಯಂತ ಕ್ರೂರಿ. ತಾನು ಪತ್ನಿಯನ್ನು ಕೂಡದೆ ಮಗುವಾಗಿದೆ ಎಂದಾಗ 'ಮಾಯದ ಮಗು' ಎಂದು ಅವಳ ಪರೀಕ್ಷೆಗೆ ತೊಡಗುವ ರೀತಿ ಘೋರ. ಮಗುವಿನ ಹಾಲನ್ನು ತರುವ ನೆಪದಲ್ಲಿ ಕಳ್ಳಿಯ ಹಾಲು, ಎಕ್ಕದ ಹಾಲನ್ನು ತಂದು ಅದಕ್ಕೆ ಹಾವಿನ ವಿಷವನ್ನು ಬೆರಸಿ ಕುಡಿಯಲು ಕೊಡುತ್ತಾನೆ. ಅದು ಉತ್ರಾಜಮ್ಮನ ಅರಿವಿಗೆ ಬರುತ್ತದೆ. ಆಕೆ ಶಿವನ ಹೆಸರನ್ನು ಹೇಳಿ ಬಟ್ಟಲನ್ನು ಮಗುವಿನ ಮುಂದೆ ಹಿಡಿದಳು. ಆಗ ಹಾಲನ್ನು ಸ್ವೀಕರಿಸಿದ ರೀತಿ ಅತ್ಯಂತ ಕುತೂಹಲಕಾರಿಯಾಗಿ ಜನಪದ ಕವಿ ವರ್ಣಿಸುತ್ತಾನೆ. ಕಳ್ಳಿಯ ಹಾಲು ಎಂದಾಗ ಕಣ್ಣು ಬಿಟ್ಟು ನೋಡಿ, ಎಕ್ಕದ ಹಾಲು ಎಂದಾಗ ಪಕಪಕನೆ ನಕ್ಕು, ನಾಗರಹಾವಿನ ವಿಷ ಎಂದಾಗ ಎದ್ದು ನಿಂತು ಕೊಡಮ್ಮ ತುಂಬ ಹಸಿವು ಎಂದಿತು.''[೩೨]

''ಉತ್ರಾಜಮ್ಮನ ಕತೆ ಮಾದೇಶ್ವರ ಕಾವ್ಯದ ಎಲ್ಲ ಪಾಠಗಳಲ್ಲೂ ಅತ್ಯಂತ ಆಕರ್ಷಕ ಭಾಗಗಳಲ್ಲಿ ಒಂದು. ಉತ್ರಾಜಮ್ಮನ ಭಕ್ತಿಯ ನೈಜತೆ, ತಾಯ್ತನದ ಹಂಬಲ, ಲೋಕಕ್ಕೆ ಅಂಜಿ ನಡೆಯುವ ಸದ್ಗುಣ ಮನಮುಟ್ಟುವಂತೆ ಚಿತ್ರಿತವಾಗಿದೆ.''[೩೩]

### ೩.೧.೪. ಇಕ್ಕೇರಿ ದೇವಮ್ಮ

ಇಕ್ಕೇರಿ ದೇವಮ್ಮ ದುಷ್ಟ ಲಕ್ಷಣಗಳ ಸ್ತ್ರೀ. ಇಕ್ಕೇರಿ ಪಟ್ಟಣದವಳಾದ ಈಕೆ, ಊರಿಗೆ ಬರುವ ದಾಸ, ಜೋಗಿ, ಜಂಗಮ, ನೀಲಗಾರರು ಮಂಟೇದಯ್ಯ, ಪಕೀರಯ್ಯನೇ ಆಗಲಿ, ಅವರಿಗೆ ಭಿಕ್ಷೆ ಕೊಡುವುದಾಗಿ ಹೇಳಿ ಮನೆಗೆ ಕರೆದು, 'ಇಸ ಇಕ್ಕಿ' ಕೊಂದು ಅವರಲ್ಲಿದ್ದಂತ ಹಣ, ವಡವೆ ವಸ್ತುಗಳನ್ನು ಕಿತ್ತುಕೊಂಡು ಅವರ ಹೆಣವನ್ನು ಹಿತ್ತಲಲ್ಲಿ ಹೂಳುತ್ತಿದ್ದಳು. ಹೀಗೆ ಮೋಸದಲ್ಲಿ ಸಂಪಾದಿಸಿದ ದ್ರವ್ಯವನ್ನು ಏಳು ಕೊಪ್ಪರಿಗೆಯಲ್ಲಿ ತುಂಬಿಟ್ಟಿದ್ದಳು. ಇಂತಹ ಕೆಟ್ಟ ಹೆಂಗಸನ್ನು ಕ್ರೂರವಾಗಿ ಶಿಕ್ಷಿಸುವ ಕಥೆಯೇ ಇಕ್ಕೇರಿ ದೇವಮ್ಮನ ಸಾಲು.

ಕನ್ನಡ ವಿಶ್ವವಿದ್ಯಾಲಯ, ಡಾ.ಕೇಶವನ್ ಪ್ರಸಾದ್ ಅವರ ಸಂಪಾದಕತ್ವದಲ್ಲಿ ಹೆಬ್ಬಣಿ ಮಾದಯ್ಯರವರಿಂದ ಸಂಪಾದಿಸಿಕೊಂಡು ಪ್ರಕಟಿಸಿರುವ ಮಲೆಮಾದೇಶ್ವರ ಕೃತಿಯಲ್ಲಿ ಇಕ್ಕೇರಿ ದೇವಮ್ಮನ ಕಥೆ ಪ್ರಸ್ತಾಪವಾಗಿಲ್ಲ.

ಡಾ.ಚಕ್ಕೆರೆ ಶಿವಶಂಕರ್‌ರವರ ಸಂಪಾದಕತ್ವದ 'ಕೋರಣ್ಯ ನೀಡವ್ವ ಕೋಡುಗಲ್ಲಯ್ಯ'ನ ಕಾವ್ಯದಲ್ಲಿ (ಪಾಠ-೧) ಮತ್ತು ಡಾ.ಜೀ.ಶಂ.ಪರವರ 'ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು' ಮಹಾಪ್ರಬಂಧದಲ್ಲಿ ಚಿತ್ರಿತವಾಗಿರುವ (ಪಾಠ-೨)ಇಕ್ಕೇರಿ ದೇವಮ್ಮನ ಕಥೆಗಳು ಈ ಕೆಳಕಂಡಂತಿವೆ.

ಪಾಠ - ೧

ಇಕ್ಕೇರಿ ಪಟ್ಟಣದಲ್ಲಿ ವಾಸಿಸುತ್ತಿದ್ದ ದೇವಮ್ಮ ಯಾರಾದ್ರು, ದಾಸಯ್ಯ, ಜೋಗಯ್ಯ, ಜಂಗುವಯ್ಯ, ದೊಂಬಿದಾಸ್ರು, ಬುಡಬುಡಕೆಯವ್ರ, ಹಕ್ಕಿ ಪಿಕ್ಕಿಯವ್ರು, ಬಂದ್ರೆ ಅವರಿಗೆ ಭಿಕ್ಷೆ ಕೊಡುವುದಾಗಿ, ಅಥವಾ ದಾರೀಲಿ ಹೋಗುವವರು, ದನ ಕುರಿಗಳ ವ್ಯಾಪಾರದವ್ರುಗಳಿಗೆ ಮನೇಲಿರುವುದಕ್ಕೆ ತಾವು ಜಾಗ ಕೊಡುವುದಾಗಿ ಹೇಳಿ ಮನೆಗೆ ಕರೆದು ಕೊಂಡು ಹೋಗಿ ಅವರನ್ನು ಕೊಂದು ಅವರಲ್ಲಿದ್ದಂತ ಹಣ, ವಡವೆ, ವಸ್ತುಗಳನ್ನೆಲ್ಲಾ ಕಿತ್ತು ಕೊಳ್ಳುತ್ತಿದ್ದಳು. ಈ ರೀತಿಯಲ್ಲಿ ಸಂಪಾದಿಸಿದ ಬೆಳ್ಳಿ ರೂಪಾಯಿ, ವಡವೆ ವಸ್ತ್ರಗಳನ್ನು ಏಳು ಗೋಡೆಗಳಲ್ಲಿ ತುಂಬಿದ್ದು ಇಂತಹ ಹೆಂಗಸನ್ನು ಶಿಕ್ಷಿಸಲು ಮಾದೇವ ಬೆಲೆ ಬಾಳುವ ಒಡವೆಗಳನ್ನು ಧರಿಸಿ, ಚಿನ್ನದ ಕಳಶ, ಬೆಳ್ಳಿ ನಾಗಬೆತ್ತ ಹಿಡಿದುಕೊಂಡು ಬಿನ್ನಕ್ಕೆ ಇಕ್ಕೇರಿ ದೇವಮ್ಮನ ಮನೆಗೆ ಹೊರಟರು.

ದೇವಮ್ಮ ಮಾದೇವನ ಮೈಮ್ಯಾಲೆ ಇರುವ ಒಡವೆಗಳನ್ನು ನೋಡಿ, ತನ್ನ ಮನೆಗೆ ಬಿನ್ನಕ್ಕೆ ಬರಲು ವಿನಂತಿಸಿದಳು. ಬೇರೆಯವರ ಮನೆ ಬಿನ್ನ ತೀರಿಸಿಕೊಂಡು, ಅವಳ ಮನೆಗೆ ಬರುವುದಾಗಿ ಹೇಳಿದರೂ, ದೇವಮ್ಮ ಮಾಡುವ ಅಡುಗೆ ನೋಡಲು ಮಾದೇವ ಬಿಳಿಪಲ್ಲಿಯಾಗಿ ಆಕೆಯ ಮನೆ ಸೇರಿದರು.

ದೇವಮ್ಮ ಏಳು ವಿಷದ ಕಜ್ಜಾಯ ಮಾಡಿ, ವಿಸದ ಗಂಜಿಕಾಯ್ಸಿ, ಕಳ್ಳಿ ಹಾಲು, ಎಕ್ಕದ ಹಾಲನ್ನು ಸುಣ್ಣದ ತಿಳಿಗೆ ಕಲಸಿ ಮಡಗಿದ್ದಾಳೆ. ಮಾದೇವ ನೋಡಿ, ಒಳ್ಳೆಯದಾಯ್ತು ಎಂದುಕೊಂಡು ದೇವಮ್ಮನ ಮನೆಗೆ ಊಟಕ್ಕೆ ಬಂದರು. ಏಳು ವಿಷದ ಕಜ್ಜಾಯ ಇಕ್ಕಿ, ವಿಸದ ಗಂಜಿಬುಟ್ಲು ತಂದರು ದೇವಮ್ಮ. ಮಾದೇವ ನೋಡಿ 'ತಂದೆ ಶಂಕರಮೂರ್ತಿ' 'ತಾಯಿ ಉತ್ತಾಜಮ್ಮ' ಕುಂತೂರು ಮಠದ ಸ್ವಾಮಿಗಳನ್ನು ನ್ಯನಕಂಡು, ಮೂರು ಕಜ್ಜಾಯ ಎತ್ತಿ ಜೋಳಗೆ ಒಳಗೆ ಮಡಗಿದರು. ಉಳಿದ ನಾಲ್ಕು ಕಜ್ಜಾಯಗಳನ್ನು ತಿಂದು, ಹಾಲು ಅನ್ನ ಬಡಿಸಲು ಹೇಳಿದಾಗ, ಕಳ್ಳಿ ಹಾಲು ಬಡಿಸಿದಳು. ಮೊಸರೆಂದು ಎಕ್ಕದಾಲು ಬಿಟ್ಟಳು. ಅದನ್ನೂ ಊಟ ಮಾಡಿ, ಸುಣ್ಣದ ತಿಳಿಯನ್ನು ಮಜ್ಗೆ ಎಂದು ಕೊಟ್ಟಾಗ ಅದನ್ನು ಕುಡಿದು, ಕೈ ತೊಳೆದು ಹಜಾರಕ್ಕೆ ಬಂದು ಕುಳಿತುಕೊಂಡರು ಮಾದೇಶ್ವರರು. ಎಲೆ ಅಡಿಕೆಗೆ ಮದ್ದು ಹಾಕಿ ಮಾದಪ್ಪನಿಗೆ ಕೊಡಬೇಕೆನ್ನುವಾಗ, ಮಾದೇವ ಒಂದು ಗಳಾಸು ನೀರು ಕೇಳಿದರು. ಮನೆಯಲ್ಲಿ ನೀರಿದ್ದರೂ, ಇಲ್ಲವೆಂದು ನೀರನ್ನು ತರಲು ಹೊರ ಹೋಗುತ್ತಾಳೆ. ದೇವಮ್ಮ ಹೋಗುವಾಗ ಮೊಮ್ಮಕ್ಕಳು ವಿಸದ ಕಜ್ಜಾಯ ತಿಂದಾರೆಂದು ಕಿರು ಮನೇಲಿ ಬಿಟ್ಟು ಬೀಗ ಹಾಕೊಂಡೋಗುತ್ತಾಳೆ. ಮಾದೇವ ಎಲ್ಲವನ್ನು ನೋಡಿ ಬಂದು ಕಜ್ಜಾಯ ತೆಗೆದು ಏಳು ಭಾಗ ಮಾಡಿ ಬಾಗಿಲ ಸಂದಿ ಒಳಗೆ ಮಕ್ಕಳಿಗೆ ಕೊಟ್ಟರು. ಮೊಮ್ಮಕ್ಕಳು ಕಜ್ಜಾಯ ತಿಂದು ಸತ್ತು ಮಲಗಿದರು.

ದೇವಮ್ಮ ನೀರು ತೆಗೆದುಕೊಂಡು ಬರುವುದರೊಳಗಾಗಿ, ಮಾದೇವ, ಇಕ್ಕೇರಿ ದೇವಮ್ಮನ ರೂಪದಲ್ಲಿ ದೇವಮ್ಮ ಮಾಡಿದ ಎಲ್ಲಾ ಅಡುಗೆಯನ್ನು ಮಂಕ್ರಿಯಲ್ಲಿ ತೆಗೆದುಕೊಂಡು ಹೊಲದ ಬಳಿ ಕೆಲಸ ಮಾಡುತ್ತಿದ್ದ ಏಳು ಜನ ಗಂಡು ಮಕ್ಳು ಮತ್ತು ಏಳು ಜನ ಸೊಸೆಯಂದಿರ ಬಳಿಗೆ ಹೋದರು. ಎಲ್ಲರನ್ನೂ ಕರೆದು ಆಲದ ಮರದ ಬುಡದಲ್ಲಿ ಊಟಕ್ಕೆ ಬಡಿಸುತ್ತಾರೆ. ಒಂದು ಕಜ್ಜಾಯವನ್ನು ಏಳು ಭಾಗ ಮಾಡಿ ಏಳು ಮಂದಿ ಸೊಸೆಯರಿಗೆ ಇನ್ನೊಂದು ಕಜ್ಜಾಯವನ್ನು ಏಳು ಭಾಗ ಮಾಡಿ ಏಳು ಮಂದಿ ಗಂಡು ಮಕ್ಕಳಿಗೂ ಕೊಟ್ಟರು. ಎಲ್ಲರೂ ಕಜ್ಜಾಯ ತಿಂದು ಸಾಯುತ್ತಾರೆ. ಮಾದೇವ ಬಿಳಿಪಲ್ಲಿಯಾಗಿ ಆಲದ ಮರ ಸೇರಿದರು.

ನೀರು ತೆಗೆದುಕೊಂಡು ಬಂದ ದೇವಮ್ಮ ನೀಲಗಾರ ಸತ್ತಿರಬೇಕೆಂದೂ, ಅವನ ಮೈ ಮೇಲಿನ ಒಡವೆಗಳ ನ್ನೆಲ್ಲಾ ಕಳಕೊಂಡು ಬಿಡಬೇಕೆಂದೂ ಮನೆನೆಲ್ಲಾ ನೋಡುತ್ತಾಳೆ. ನೀಲಗಾರನಿಲ್ಲ. ಕ್ಯಾಣಿ ಬೀಗ ತೆಗೆದು ನೋಡಿದರೆ ಮೊಮ್ಮಕ್ಕಳು ಸತ್ತಿದ್ದಾರೆ. ಮಕ್ಕಳಿಗೆ ಸುದ್ದಿ ಕೊಡೋಕೆ, ಹೊಲದ ಹತ್ತಿರ ಬಂದರೆ, ಅಲ್ಲಿ ಮಕ್ಕಳು, ಸೊಸೆಯಂದಿರೆಲ್ಲ ಸತ್ತಿದ್ದಾರೆ. ಲಬ ಲಬನೆ ಬಾಯಿ ಬಡಕೊಂಡು, ಇದು ಕೊಳ್ಳೇಗಾಲದವ್ರು ನನ್ನ ಮ್ಯಾಲೆ ಮಾಟ ಮಾಡಬುಟ್ಟವರೆ, ಅಂತೇಳಿ ದೇವಮ್ಮ ಶಾಸ್ತ್ರ ಕೇಳೋಕೆ ಬರುತ್ತಿದ್ದಾಳೆ.

ಆಲದ ಮರದಲ್ಲಿ ಬಿಳಿಪಲ್ಲಿಯಾಗಿದ್ದ ಮಾದೇವ, ಶಾಸ್ತ್ರ ಹೇಳುವವನಾಗಿ ದೇವಮ್ಮನನ್ನು ನಡು ದಾರೀಲಿ ಸಂಧಿಸಿ ಶಾಸ್ತ್ರದಲ್ಲಿ ಹುಟ್ಟಿದ ವಿಚಾರವೆಂದು ತಿಳಿಸುತ್ತಾನೆ. ಕೊನೆಗೆ ನನ್ನ ಮಕ್ಕಳು, ಸೊಸೆಯಂದಿರು, ಮೊಮ್ಮಕ್ಕಳನ್ನು ಉಳುಸ್ಕೊಬೇಕಾದರೆ ಏನು ಮಾಡಬೇಕೆಂದು ಕೇಳುತ್ತಾಳೆ. ಆಗ ಮಾದೇವ ನೀನು ತಲೆ ಒಡೆದು ಮಡಗಿರುವಂತ ದುಡ್ಡು, ಏಳು ಗುಳಿವಳಗೆ ಬರೀ ಬೆಳ್ಳಿ ರೂಪಾಯಿಗಳೇ ಇದೆ. ಅದರಿಂದ ಮಾದೇವನ ಗುಡಿಸುತ್ತ ಸುತ್ತಾಲೆ ಕಟ್ಸಿ ಕೊಡಬೇಕು ಎನ್ನುತ್ತಾರೆ. ಆಗಲೆಂದು ಕಾಣ್ಕೆ ಕಟ್ಟಿದಳು. ಮಾದೇವ ಶಾಸ್ತ್ರ ಹೇಳಿದ ಮೇಲೆ ತುಂಡು ಬೇವುನ ಯಾಸ ತಾಳಿ, ಆಕಾಸ ಮಾರ್ಗದಲ್ಲಿ ಬಂದು, ದೇವಮ್ಮ ಬರುವ ಮುಂಚಿತವಾಗಿ ಏಳು ಉದ್ದಾಂಡಾನು ತೆಗೆದು ಎಲ್ಲರ ಮೇಲೆ ಬಿಸಾಕಿದರು. ಎಲ್ಲರೂ ವಿಸಾವ ಕಕ್ಕೊಂಡು ಮೇಲಕ್ಕೆದ್ರು.

ಇಕ್ಕೇರಿ ದೇವಮ್ಮ ತಾನು ಮಾಡಿದ್ದು ತಪ್ಪೆಂದು ತಿಳಿದು, ಮಾದಪ್ಪನ ಪಾದಕ್ಕೆ ಎರಗಿದಳು. ತಲೆ ಒಡೆದು ಮಡಗಿದ್ದಂತ ದುಡ್ಡಿನಲ್ಲಿ ಹನ್ನೆರಡು ಅಂಕಣದ ಗುಡಿಸುತ್ತಾ ಸುತ್ತಾಲೆ ಕಟ್ಟಿಸಿಕೊಂಡು ಮಜ್ಜಣದ ಕೊಳ ನಿರ್ಮಿಸಿಕೊಂಡು, ದೇವಮ್ಮನನ್ನು ಕೆಚ್ಚಿಮುರದು ಒಕ್ಕಲು ಮಾಡಿಕೊಂಡಿದ್ದಾನೆ ಮಾದೇವ.

ಪಾಠ - ೨

ಮಲೆಯಮಾದೇಶ್ವರರು, ಮುಡುಕತೊರೆ ಮಲ್ಲಣ್ಣ, ಬಿಳಿಗಿರಿರಂಗಯ್ಯರವರನ್ನು ಕರೆದುಕೊಂಡು ಇಕ್ಕೇರಿ ದೇವಮ್ಮನ ಹಟ್ಟಿಗೆ ಭಿಕ್ಷೆಗೆ ಬಂದರು. ಬಂದವರಿಗೆಲ್ಲ ಮದ್ದಿಕ್ಕಿ ಕೊಲ್ಲುತ್ತಿದ್ದ ಅವಳು ತನಗೂ ಹೀಗೆ ಮಾಡಬಹುದೆಂದುಕೊಂಡು ಬಂದಿದ್ದ ಮಾದೇವ. ದೇವಮ್ಮನಿಗೆ ಏಳು ಜನ ಗಂಡು ಮಕ್ಕಳು.

ಮನೆಯ ಬಾಗಿಲಿಗೆ ಬಂದು ಭಿಕ್ಷೆ ಬೇಡಿದ ಮೂವರಿಗೂ, ಎಡೆ ಬಡಿಸಲು ತಾನೇ ಒತ್ತಾಯ ಮಾಡಿ ಒಪ್ಪಿಸಿದಳು. ಏಳು ಪಿಂಡಿಹಾಲನ್ನು ತರಿಸಿ, ಏಳು ಗಡಿಗೆ ಕಳ್ಳಿ ಹಾಲಿನಲ್ಲಿ ಬೇಯಿಸಿ ವಿಷದ ಕಜ್ಜಾಯ ತಯಾರಿಸಿ ದಳು. ಊಟಕ್ಕೆ ಬಂದ ಮಾವರಿಗೂ ಕಳ್ಳಿಯ ಹಾಲನ್ನು ಹಸುವಿನ ಹಾಲೆಂದು ಇಟ್ಟು ವಿಷದ ಕಜ್ಜಾಯವನ್ನು ಬಡಿಸಿದಳು. ಜೋಳಿಗೆಗೂ ಆರು ಆರು ಕಜ್ಜಾಯಗಳನ್ನು ಅವರು ಪಡೆದುಕೊಂಡರು.

ಊಟವನ್ನು ಮುಗಿಸಿ ಊರಹೊರಗೆ ಬರುತ್ತಿದ್ದಾಗ ದೇವಮ್ಮನ ತಂಗಿ ಚೆನ್ನಾಜಮ್ಮ ಅಕ್ಕನ ಮನೆಗೆ ಬರುತ್ತಿದ್ದಳು. ಕಳ್ಳರ ವೇಷವನ್ನು ಧರಿಸಿ ಈ ಮೂವರೂ ಅವಳನ್ನು ಅಟ್ಟಿಸಿಕೊಂಡು ಹೋಗಿ ಕಜ್ಜಾಯದ ಗಂಟನ್ನು ಕಸಿದರು.

ಮೂವರೂ ಚೆನ್ನಾಜಮ್ಮನಿಗಿಂತ ಮುಂದೆ ಹೋಗಿ ಒಂದು ಕಟ್ಟೆಯ ಬಳಿ ಊಟ ಮಾಡುತ್ತಿದ್ದರು. ಜನರನ್ನು ನೋಡಿ ಚೆನ್ನಾಜಮ್ಮ ಲಬಲಬನೆ ಬಾಯಿ ಬಡಿದು ಕೊಂಡಳು. ಮಾದೇಶ್ವರ ಅವಳ ಬಳಿಗೆ ಬಂದು ಸಮಾಧಾನ ಮಾಡಿ ವಿಷದ ಕಜ್ಜಾಯವನ್ನು ಕೊಟ್ಟು ಕಳಿಸಿದರು.

ಅಕ್ಕನ ಮಕ್ಕಳು ಬೀದಿಯಲ್ಲಿ ಆಡುತ್ತಿದ್ದರು. ಚೆನ್ನಾಜಮ್ಮ ವಿಷದ ಕಜ್ಜಾಯವನ್ನು ತಿಳಿಯದೆ ಮಕ್ಕಳಿಗೆ ಕೊಟ್ಟಳು. ಅವರೆಲ್ಲ ಅಲ್ಲಲ್ಲೇ ಸತ್ತು ಮಲಗಿದರು. ತನ್ನ ಮಕ್ಕಳನ್ನು ವಿಷವಿಕ್ಕಿ ಕೊಂದಳೆಂದು ದೇವಮ್ಮ ತಂಗಿಯ ಮೇಲೆ ಜಗಳಕ್ಕೆ ಹೋದಳು. ಮಲ್ಲಯ್ಯ, ಬಿಳಿಗಿರಿರಂಗ, ಮಾದಯ್ಯ ಮೂವರೂ ಪಂಚಾಯ್ತಿದಾರರ ವೇಷದಲ್ಲಿ ಬಂದು ದೇವಮ್ಮನ ತಪ್ಪನ್ನು ತೋರಿಸಿ, ಅವಳ ಹಟ್ಟಿ ಹಾಳುಮಾಡಿ ಕೊಟ್ಟಿಗೆ ಬಯಲು ಮಾಡಿದರು.

ಪರರ ಹಣಕ್ಕೆ ಆಸೆ ಪಡಬಾರದು ಎನ್ನುವ ನೀತಿಯನ್ನು ಇಕ್ಕೇರಿ ದೇವಮ್ಮನ ಸಾಲು ನಿರೂಪಿಸುತ್ತದೆ. ಇಲ್ಲಿನ ಆಶಯಗಳು, ''ಲೋಕಕಲ್ಯಾಣಕ್ಕಾಗಿ, ದುಷ್ಟರ ನಿಗ್ರಹಕ್ಕಾಗಿ, ಅನಿವಾರ್ಯವಾಗಿ ಮಾದೇವ ಈ ಪವಾಡಗಳನ್ನು ಮಾಡಿ ದೇವಮ್ಮ ಒಳ್ಳೆಯ ದಾರಿಗೆ ಬರಲು ನೆರವಾದರೆ,''[೩೪] ದುಷ್ಟರನ್ನು ವ್ಯಂಗ್ಯಪೂರಿತವಾಗಿ ವರ್ಣಿಸುವುದು ಜನಪದರ ಹವ್ಯಾಸ. ಇಕ್ಕೇರಮ್ಮನ ಸಾಲಿನಲ್ಲೂ ಈ ವರ್ಣನೆ ಎರಡೇ ಸಾಲುಗಳಲ್ಲಿದ್ದರೂ ನೆನೆ ಉಕ್ಕಿಸುತ್ತದೆ.

'ಪಟ್ಟೆ ಮಂಚದ್ಮೇಲೆ ಕುಂತಿದ್ರೆ-ಅವ್ರ
ಹೊಟ್ಟೆ ತೊಡೆಮ್ಯಾಲೆ ಕುಂತೈಯ್ತೆ'

ಇಕ್ಕೇರಿ ದೇವಮ್ಮ ಬಡಿಸಿದ ವಿಷದ ಕಜ್ಜಾಯವನ್ನು ತಿಂದು ಅವಳಿಗೆ ಶಾಪ ಹಾಕುವ ಮಾದೇವನ ಪರಿ ಗ್ರಾಮೀಣ ಸೊಗಡಿನಿಂದ ಶೋಭಿಸುತ್ತದೆ.

ಎಲೊ ಅನ್ಯಾಯಕಾತಿ ಕೆಟ್ಮುಂಡೆ
ನಮುಗೆ ಇಸದ ಕಜ್ಜಾಯವನ್ನು ನೀನು ಕೊಟ್ಟಿದ್ದಿಯಲ್ಲ
ನಿನ್ನಟ್ಟಿ ಬರುದಾಗ್ಲಿ ಕೊಟ್ಗೆ ಹಾಳಾಗ್ಲಿ
ಬೆನ್ನುಜದ್ಕೆ ಸೊಸೆ ನಿನ್ಮನ್ಗೆ ಬರುದೇ ಹೋಗ್ಲಿ

ಗ್ರಾಮೀಣ ಸೊಗಡಿನ ಗ್ರಾಮ್ಯ ಶೈಲಿಯ ಸಂವಾದ ನಾಟಕೀಯ ಸೊಗಸು ಈ ಸಾಲಿನಲ್ಲಿಯೂ ವರ್ಣಿತವಾಗಿದೆ.

ಮ್ಯಾಲುಕೆದ್ದು ''ದೇವಮ್ಮ ಹೋಗ್ಬರ್ತಿವಿ ನನಕಂದ'' ಅಂದ್ರಂತೆ
''ಬಿಕ್ಕನ ಬಿರಿಯಾಳ ಉಂಡು
ಈ ನನ್ಮಗುನ್ಮಕ್ಳು ಹೋಯ್ತುರಲ್ಲ'' ಅಂದ್ಬುಟ್ಟು ದೇವಮ್ಮ
''ಮುನುಗಳೇ ನೀವೆಲ್ಲೋದೀರಿ

ಬಿಸ್ನು ಇನ್ನೂವೆ ಕುಂತ್ಕೊಳ್ಳಿ ಸ್ವಾಮಿ'' ಅಂದ್ಲು
''ಇಲ್ಲ ಕಂದ ಹೊತ್ತಾಯ್ತು ಸಾವೋಯ್ತೀವಿ''
''ಸ್ವಾಮಿ ನಾಳೇ ದಿವ್ಸವು ನೀವು ಬರ್ಬೇಕು
ನಾಳೆ ಒಂದೇವುರ ಕೆಲ್ಸ ಐತೆ ಸ್ವಾಮಿ
ಮರೀಬ್ಯಾಡಿ ಕಂಡುತ್ವಾಗಿ ಬನ್ನಿ''
''ಕಂಡುತ್ವಾಗ್ಲೂ ಬತ್ತೀವಿ ನಡಿಯಮ್ಮ''
ದೇವಮ್ನ ಮನೆಯ ಬುಟ್ಟವ್ರೆ ಸ್ವಾಮಿ
ಮುನುಮುಂದುಕೆ ದೈ ಮಾಡವ್ರೆ
ಮೂರು ಜನ ಮೂರ್ತಿಗಳು ಹೋಯ್ತಿದ್ರೆ ದೇವಮ್ಮ
ಕೈ ನಟ್ಕೆ ನರ್ಕ್ಯಾವ್ವಲ್ಲಪ್ಪ ಮಾದೇವ
ನೋಡಿ ನಮ್ಮ ಶಿವನಾ

(ಮಲೆಯಮಾದೇಶ್ವರ, ಪುಟ ೧೨೯)

ಪಾಠ ೨ ರಲ್ಲಿನ ಕಥೆಯಲ್ಲಿ ಮುಡುಕುತೊರೆ ಮಲ್ಲಯ್ಯ ಮತ್ತು ಬಿಳಿಗಿರಿರಂಗಯ್ಯ ಮಾದೇಶ್ವರನ ಜೊತೆಯಲ್ಲಿ ಬಂದಂತೆ ಚಿತ್ರಿತವಾಗಿದೆ. ಇಲ್ಲಿ ''ಮುಡುಕು ತೊರೆ ಮಲ್ಲಯ್ಯ ಮತ್ತು ಬಿಳಿಗಿರಿ ರಂಗಯ್ಯ ಇವರ ಆಗಮನದ ಅಗತ್ಯವೇ ಇಲ್ಲ ಎನ್ನುವ ಡಾ.ಜೀ.ಶಂ.ಪ.ರವರ ಅಭಿಪ್ರಾಯ''[೩೯] ಸಹಜವಾದುದು. ಪಾಠ ೧ ರಲ್ಲಿ ಮಾದೇಶ್ವರ ರೊಬ್ಬರೇ ಇಕ್ಕೇರಿ ದೇವಮ್ಮನಿಗೆ ತಕ್ಕ ಶಿಕ್ಷೆ ವಿಧಿಸಿರುವುದನ್ನು ಕಾಣಬಹುದಾಗಿದೆ. ದೇವಮ್ಮ ದುಷ್ಟ ಲಕ್ಷಣಗಳ ಸ್ತ್ರೀಯೆಂಬುದರಲ್ಲಿ ಸಂಶಯವಿಲ್ಲ. ಅನ್ಯರ ಜೀವಕ್ಕೆ ಮೃತ್ಯುವಾದವಳು. ಅತ್ಯಂತ ಕ್ರೂರಿಯಾದ ಹೆಂಗಸು ಸಮಾಜ ಘಾತಕಿ, 'ಮದ್ದಿಕ್ಕುವ' ದುಷ್ಟ ಚಟಕ್ಕೆ ಅಂಟಿಕೊಂಡು ಎಷ್ಟೋ ಜೀವಗಳನ್ನು ತೆಗೆದವಳು ಅಂಥವಳನ್ನು ಕ್ರೂರವಾದ ರೀತಿಯಲ್ಲೆ ದಂಡಿಸುವುದು ಮಾದೇಶ್ವರರಿಗೆ ಅನಿವಾರ್ಯ.

## ೩.೨. ಮಾತೃಪ್ರಧಾನ ವ್ಯವಸ್ಥೆ ಮತ್ತು ಸ್ತ್ರೀ ಪಾತ್ರಗಳು

ಪ್ರಾಚೀನ ಕಾಲದಲ್ಲಿ ಮಾನವನು ಅಲೆಮಾರಿ ಜೀವನವನ್ನು ನಡೆಸುತ್ತಿದ್ದು, ಕಾಡಿನಲ್ಲಿ ಏಕಾಂಗಿಯಾಗಿ ಅಲೆದಾಡುತ್ತಿದ್ದು ಗೆಡ್ಡೆಗೆಣಸು, ಹಣ್ಣು ಹಂಪಲನ್ನು ತಿಂದು ಜೀವಿಸುತ್ತಿದ್ದನು. ಆಗ ಹೆಣ್ಣು ಗಂಡಿನ ನಡುವೆ ಯಾವುದೇ ಬಗೆಯ ತಾರತಮ್ಯ ಇರಲಿಲ್ಲವೆನ್ನಬಹುದು. ತನ್ನ ಉಳಿವಿಗಾಗಿ ಮೊದಲು ಕಲಿತದ್ದು ಬೇಟೆ. ಬೇಟೆ ಮಾಡಲು ಹರಿತವಾದ, ಮೊನಚಾದ ಶಿಲೆಗಳನ್ನು ಬಳಸಿ ಬೇಟೆ ಆಡುತ್ತಿದ್ದ. ಹಸಿ ಮಾಂಸವನ್ನು ತಿನ್ನ ತೊಡಗಿದ್ದ, ಮಾನವ ಬೆಂಕಿಯ ಹಾಗೂ ಮೀನಿನ ಬಳಕೆ ಕಲಿತ ಮೇಲೆ ಪ್ರಾಣಿಗಳ ಮಾಂಸವನ್ನು ಬೇಯಿಸಿ ಕೊಂಡು ತಿನ್ನ ತೊಡಗಿದ ಹಾಗೂ ನದಿ ತೀರಗಳನ್ನು ಆರಿಸಿಕೊಳ್ಳುವುದು ಸಾಧ್ಯವಾಯಿತು. ಗಿಡಗಳ ಎಲೆಗಳಿಂದ, ಉಡಿಗೆಗಳನ್ನು ಮಾಡಿಕೊಂಡನು. ಕಾಡುಗಳಲ್ಲಿ ಪ್ರಾಣಿಗಳು ಕಡಿಮೆಯಾಗ ತೊಡಗಿದಂತೆ, ತನ್ನ ಆಹಾರಕ್ಕಾಗಿ ಬೇರೆ ಮಾರ್ಗವನ್ನು ಹುಡುಕಬೇಕಾಯಿತು. ಆ ಸಂದರ್ಭದಲ್ಲಿ ಪಶುಪಾಲನೆಯನ್ನು ಪ್ರಾರಂಭಿಸಿದ. ಕುರಿಗಳ ಬಳಕೆಯಿಂದ ಉಣ್ಣೆಯ ಬಟ್ಟೆಯನ್ನು ತಯಾರಿಸತೊಡಗಿದನು. ಮುಂದುವರೆದಂತೆ ಮನುಷ್ಯ ಮಣ್ಣಿನ ಮಡಕೆ

ಮಾಡುವುದನ್ನು ಕಲಿತಾಗ, ಅವನ ವಿಕಾಸದ ಮತ್ತೊಂದು ಘಟ್ಟ ಆರಂಭವಾಯಿತು. ಈ ಘಟ್ಟದ ಮುಖ್ಯ ಲಕ್ಷಣವೆಂದರೆ 'ಪಶುಪಾಲನೆ ಮತ್ತು ಕೃಷಿ'ಯ ಆರಂಭ.

"ಪ್ರಕೃತಿಯ ಎಲ್ಲ ವೈಚಿತ್ರ್ಯಗಳನ್ನು ಬಿಡಿಸಲಾಗದ ನಿಗೂಢಗಳನ್ನು ಗಮನಿಸಿದ ಆದಿಮ ಮನುಷ್ಯ ತನ್ನನ್ನೂ ಮೀರಿದ ಅಗೋಚರ ಶಕ್ತಿಯೊಂದಿದೆ ಎಂದು ನಂಬಿದ. ಆ ಶಕ್ತಿಯನ್ನು ಒಲಿಸಿಕೊಳ್ಳುವ ಮೂಲಕ ತನ್ನ ಒಳ್ಳೆಯದನ್ನು ಸಾಧಿಸಿಕೊಳ್ಳಬೇಕು ಎಂಬುದು ಅವನ ಉದ್ದೇಶವಾಯಿತು. ಯಾಕೆಂದರೆ ನಿಸರ್ಗದ ಒಡಲಲ್ಲಿ ಬಾಳುತ್ತಿದ್ದ ಅವನಿಗೆ ಸಹಜವಾಗಿಯೇ ನೂರೆಂಟು ಕಂಠಕಗಳು ಎದುರಾಗುತ್ತಿದ್ದವು. ಆದ್ದರಿಂದ ಅಗೋಚರ ಶಕ್ತಿಯನ್ನು ಒಲಿಸಿಕೊಳ್ಳುವ ಮೂಲಕ ತನಗೆ ಒದಗುವ ಕಂಠಕಗಳಿಂದ ಪಾರಾಗಬೇಕು ಎಂಬುದು ಅವನ ತರ್ಕವಾಗಿತ್ತು. ಹೀಗಾಗಿ ದೇವರ ಕಲ್ಪನೆಯು ಆರಂಭವಾಯಿತು."[೩೬]

ಮನುಷ್ಯ ನಾಗರೀಕನಾಗಲು ಹವಣಿಸಿದ ಮೊದಲ ಘಟ್ಟ ಆಹಾರ ಸಂಗ್ರಹಣೆ. ಅಂದರೆ ತನಗೆ ಬೇಕಾದ ಅಗತ್ಯ ವಸ್ತುಗಳನ್ನು ಅರಸುತ್ತಾ ಕಾಡಿನಿಂದ ಕಾಡಿಗೆ ಅಲೆದ ಮೃಗೀಯ ಜೀವನ ಅದು. ಆದರೂ ಹಾಗೆ ಲಭ್ಯವಾದ ಆಹಾರವನ್ನು ಒಂದು ಕಡೆ ಕೂಡಿಡುವ, ಸಂರಕ್ಷಿಸುವ ಬುದ್ಧಿಯನ್ನು ಉಪಯೋಗಿಸಿದ್ದೇ ಅವನು ನಾಗರೀಕತೆ ಕಡೆಗೆ ಮುಖ ಮಾಡಿದ ಪ್ರಥಮ ಹಂತ. ಒಂದು ಗುಂಪಿನ ಜನ ಒಟ್ಟಾಗಿ ವಾಸಿಸುವ ಮೂಲಕ ತಮಗೊಂದು ಅಸ್ತಿತ್ವ ಕಂಡುಕೊಳ್ಳುತ್ತಿದ್ದ ಕಾಲ ಅದು. ಅಲ್ಲಿ ಯಾರು ಗಂಡ ಅಥವಾ ಯಾರು ಹೆಂಡತಿ ಎಂಬ ಕಲ್ಪನೆ ಇರಲಿಲ್ಲ. ಸಮೂಹ ಜೀವನ ಅದು. ಮಕ್ಕಳನ್ನು ಹಡೆಯಬಲ್ಲ ಶಕ್ತಿ ಪಡೆದ ಮಾತೃ ಮಾತ್ರ ಅಲ್ಲಿ ಮುಖ್ಯ. ಅವಳಿಗೇ ಅಲ್ಲಿ ಪ್ರಾಧಾನ್ಯತೆ. ಆಹಾರ ಸಂಗ್ರಹಣೆಗಾಗಿ ಹೊರಟ ಗಂಡಸು ಹಿಂತಿರುಗಿ ಬಂದಾಗ ಲಭ್ಯವಿದ್ದ ಹೆಂಗಸಿನ ಜೊತೆ ತನ್ನ ಲೈಂಗಿಕ ತೃಷೆ ತೀರಿಸಿಕೊಳ್ಳುತ್ತಿದ್ದ ಅಷ್ಟೆ. ಆದರೆ ಯಾರು ಮಗುವಿನ ತಾಯಿಯಾಗುತ್ತಾಳೋ ಅವಳಿಗೆ ವಿಶೇಷ ಸ್ಥಾನಮಾನ. ಅದರ ತಂದೆ ಯಾರು ಎಂಬುದು ಅಲ್ಲಿ ಮುಖ್ಯವೇ ಅಲ್ಲ. ಹೀಗಾಗಿ ತಾಯಿಯೇ ಸತ್ಯ. ಇಷ್ಟಲ್ಲದೆ ಗಂಡಸರು ಹೊರಗಿನಿಂದ ಸಂಗ್ರಹಿಸಿ ತಂದ ಆಹಾರಗಳನ್ನು ಸಂರಕ್ಷಿಸಿ ಇಡುವುದು, ಹೆತ್ತ ಮಕ್ಕಳನ್ನು ಪೋಷಿಸುವುದು ಮುಂತಾದಂತೆ ಇಡೀ ಸಮೂಹದ ಜವಾಬ್ದಾರಿ ತಾಯಿಯದೇ ಆಗಿತ್ತು. ಆದ್ದರಿಂದ ಮಾತೃವಿನ ಸ್ಥಾನ ನಿರ್ವಿವಾದವಾಗಿ ಪ್ರಾಮುಖ್ಯತೆ ಗಳಿಸಿತ್ತು. ಹೀಗಾಗಿ ಸೃಷ್ಟಿಗೆ ಕಾರಣವಾದ ಮತ್ತು ಪೋಷಣೆಗೆ ಅಗತ್ಯವಾದ ಮಾತೃವನ್ನು ಗೌರವಿಸಿ, ಆರಾಧಿಸಿದ್ದು ಕೂಡ ಅಷ್ಟೇ ಸಹಜ. ಮಾತೃವಿನ ಆರಾಧನೆ ಆರಂಭವಾದ ಮೊದಲ ಹಂತ ಇದು.

ಆಹಾರ ಸಂಗ್ರಹಣೆ ಮತ್ತು ಅದನ್ನು ಶೇಖರಿಸಿ ಇಡುವ ಕೆಲಸ ಹೆಣ್ಣಿಗೆ ಸೇರಿತು. ಅವುಗಳನ್ನು ಕೆಡದಂತೆ ಇಡಬೇಕಾಯಿತು. ಈ ಹಂತದಲ್ಲಿ ಮಾತೃವಿನ ಆರಾಧನೆಯನ್ನು ಕಾಣಬಹುದು. "ಆಹಾರ ಸಂಗ್ರಹಣಾ ಹಂತದಿಂದ, ಆಹಾರ ಉತ್ಪಾದನಾ ಹಂತಕ್ಕೆ ಸಾಗುವಲ್ಲಿ ಉಂಟಾಗುವ ಮೊದಲ ಬದಲಾವಣೆ ಎಂದರೆ, ಆಹಾರವನ್ನು ಕೆಡದಂತೆ ಸಂಗ್ರಹಿಸುವ ಪರಿಕರಗಳನ್ನು ತಯಾರಿಸಿಕೊಳ್ಳುವುದೇ ಆಗಿದೆ. ಇದರಿಂದ ಆಹಾರ ಸಂಗ್ರಹಣೆಯ ಅಪವ್ಯಯದ ಭಯವು ಕಡಿಮೆಯಾಗಿ ಬದುಕು ಒಂದಿಷ್ಟು ಸರಾಗಗೊಳ್ಳುತ್ತದೆ. ಮಡಿಕೆ ಕುಡಿಕೆಗಳು, ಬುಟ್ಟಿಗಳು ಈ ಪ್ರಯತ್ನದಲ್ಲೇ ಹುಟ್ಟಿಕೊಳ್ಳುತ್ತವೆ. ಬಹುಮಟ್ಟಿಗೆ ಇವನ್ನು ಹೆಂಗಸರೇ ತಯಾರಿಸುತ್ತಾರೆ. ಮಡಿಕೆ ಕುಡಿಕೆಗಳು ಆಹಾರವನ್ನು ಕೆಡದಂತೆ ಕಾಪಾಡುವ ಒಂದು ಉತ್ಪಾದನಾ ಸಾಧನವಾಗಿ ರೂಪುತಳೆ

ಯಿತೆಂಬ ಕಾರಣದಿಂದಲೇ ಅವು ಮಾತೃದೇವತೆಗಳ ಪೂಜೆಯ ಮುಖ್ಯ ಭಾಗವೂ ಆಗುತ್ತದೆ. ಇಂದಿಗೂ ಮಾತೃದೇವತೆಯ ಹೆಸರಿನಲ್ಲೇ ನಡೆಯುವ 'ಬೋಗಿಲು'ಗಳಂತಹ ಹಬ್ಬಗಳಲ್ಲಿ ಮಡಿಕೆ ಕುಡಿಕೆಗಳಿಗೆ ಪ್ರಧಾನ ಸ್ಥಾನವಿರುವುದನ್ನು ಕಾಣಬಹುದಾಗಿದೆ. ಮಡಿಕೆಗಳು ಮಾತೃದೇವತೆಗಳ ಆರಾಧನಾ ವಿಧಿಗಳಲ್ಲಿ ಪ್ರಧಾನ ಪಾತ್ರವನ್ನು ಪಡೆಯುತ್ತವಷ್ಟೇ ಅಲ್ಲದೆ, ಎಷ್ಟೋ ವೇಳೆ ಸ್ವತಃ ಅವು ಮಾತೃದೇವತೆಗಳ ಪ್ರತಿರೂಪಗಳಾಗಿ ನೇರವಾಗಿ ಪೂಜೆಗೊಳಗಾಗುತ್ತವೆ. ಪ್ರಾಚೀನ ಕಾಲದಿಂದ ಈವರೆಗೂ ಮಡಿಕೆಗಳನ್ನು ತಯಾರಿಸುವ ಕುಂಬಾರರು ಮಡಿಕೆಯ ಕತ್ತಿನ ಭಾಗದಲ್ಲಿ ಅಲಂಕಾರದ ಕುಸುರಿ ಕೆಲಸವನ್ನು ಮಾಡುತ್ತಾರೆ. ಅದು ಸ್ಪಷ್ಟವಾಗಿ ಸ್ತ್ರೀತ್ವವನ್ನು ಸೂಚಿಸುವಂಥದ್ದಾಗಿರುತ್ತದೆ. ಸತ್ತವರು ಮತ್ತೆ ತಾಯಿಯ ಗರ್ಭವನ್ನು ಸೇರಿಕೊಳ್ಳುತ್ತಾರೆ ಎಂಬ ನಂಬಿಕೆ ಯಿಂದಾಗಿ ಬಹು ಪ್ರಾಚೀನ ಸಮಾಜಗಳಲ್ಲಿ ಸತ್ತವರ ದೇಹಗಳನ್ನು ತಾಯಿಯ ಗರ್ಭದ ಸಂಕೇತವಾದ ಮಡಿಕೆಗಳಲ್ಲಿಟ್ಟು ಹೂಳುತ್ತಿದ್ದರು.''[೩೭]

ಗಂಡು ಬೇಟೆಗೆ ಹೋಗಿದ್ದಾಗ, ಆಹಾರ ಸಂಗ್ರಹಣೆಯ ಜೊತೆಗೆ ಕೃಷಿ ಸಂಸ್ಕೃತಿಯನ್ನು ಹೆಣ್ಣು ರೂಢಿಸಿ ಕೊಂಡಳು. ಕೃಷಿ ಪ್ರಧಾನ ಕುಟುಂಬದಲ್ಲಿ ಸ್ತ್ರೀಯೇ ಮನೆಯೊಡತಿ. ಗೃಹಕೃತ್ಯದ ಸಂದರ್ಭದಲ್ಲಿ ಸ್ತ್ರೀಯು, ಬೀಜವು ಗಿಡವಾಗುವುದನ್ನು ಕಂಡಳು. ಕೈಗುದ್ದಲಿಯಿಂದ ಕೃಷಿಯನ್ನು ಆರಂಭ ಮಾಡಿದಳು. ಅವಳ ಶ್ರಮ ಶಕ್ತಿಗೆ ಅಪಾರವಾದ ಮಹತ್ವವಿತ್ತು. ಹೀಗಾಗಿ ''ಹೆಣ್ಣಿನ ಗರ್ಭಧಾರಣೆ ಮತ್ತು ಭೂಮಿಯ ಸಸ್ಯಧಾರಣೆ ಇವೆರಡಕ್ಕೂ ಸಾಮ್ಯತೆಯನ್ನು ಕಂಡುಕೊಂಡ ಆದಿಮಾನವ ಹೆಣ್ಣು ಮತ್ತು ಭೂಮಿ ಇವೆರಡೂ ಪೂಜ್ಯ ವಸ್ತುಗಳೆಂದು ಭಾವಿಸಿದ.''[೩೮] ಕೃಷಿ ಅವಳ ಮೂಲಕವೇ ಮುಂದುವರೆಯಿತು. ಹಾಗೂ ಮಕ್ಕಳನ್ನು ಅವಳ ಮೂಲಕ ಗುರುತಿಸುವ ಪರಿಪಾಠದಿಂದಾಗಿ, ಮಾತೃಪ್ರಧಾನವಾದ ಸಮೂಹ ಸಮಾಜ ಬೆಳೆಯಿತು. ''ಮಹಿಳೆ ಕುಟುಂಬದ ಯಜಮಾನಿಯಾಗಿ, ಸಂಸಾರದ ನಿರ್ವಹಣೆಯನ್ನು ಸುಗಮವಾಗಿ ನಡೆಸಿಕೊಂಡು ಹೋಗುತ್ತಿದ್ದಳು. ಇಂದೂ ಕೂಡ ಬುಡಕಟ್ಟು ಸಮಾಜಗಳಲ್ಲಿ ಮಾತೃಪ್ರಧಾನ ವ್ಯವಸ್ಥೆಯ ಸ್ತ್ರೀ ಯಜಮಾನಿಕೆಯ ವಾಸನೆ ಇರುವುದು ಕಂಡುಬರುತ್ತದೆ.''[೩೯]

ಭಾರತದಲ್ಲಿ ಕೃಷಿಯ ಅನ್ವೇಷಣೆಯಿಂದ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಬೆಳೆದು ಬಂದಿತ್ತು. ಈ ಹಂತದಲ್ಲಿ ಆಸ್ತಿಯ ಹಕ್ಕು ಹೆಣ್ಣಿನ ಒಡೆತನಕ್ಕೆ ಒಳಪಟ್ಟಿದ್ದು ಕೌಟುಂಬಿಕ ತಲೆಮಾರಿನಲ್ಲಿ ಹೆಣ್ಣಿನ ಕಡೆಯಿಂದ ಮಾತೃಪ್ರಧಾನ ವ್ಯವಸ್ಥೆಯಲ್ಲಿ ಆಸ್ತಿಯ ಮೇಲಿನ ಹಕ್ಕು ಹೆಣ್ಣಿನ ಒಡೆತನದಲ್ಲಿ ಇರುವುದರಿಂದ ಹೆಣ್ಣಿನ ಮದುವೆ ನಂತರ ಆಸ್ತಿಯ ಒಡೆತನ ಹೆಣ್ಣು ಮಕ್ಕಳಿಗೆ ಹೋಗುತ್ತದೆ. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಗಂಡು ಹೆಣ್ಣಿನ ಮೇಲೆ ದಬ್ಬಾಳಿಕೆ ನಡೆಸುವ ಅಧಿಕಾರವಿಲ್ಲ. ಹೆಣ್ಣಿಗೆ ಮರುಮದುವೆಗೆ ಅವಕಾಶವಿದೆ. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಕಾಣಬಹುದು. ಉದಾಹರಣೆಗೆ: ಸಿರಿ ಮತ್ತು ಕರಾವಳಿ ಪ್ರದೇಶಗಳಲ್ಲಿ 'ಮಾತೃಮೂಲ ಕುಟುಂಬ' ವ್ಯವಸ್ಥೆಯನ್ನು ಕಾಣಬಹುದು.

ಹೀಗೆ ಎಲ್ಲ ಕಡೆ ಅಸ್ತಿತ್ವದಲ್ಲಿದ್ದ ಮಾತೃಮೂಲ ಕುಟುಂಬ ವ್ಯವಸ್ಥೆ ಕ್ರಿ.ಪೂ.೧೦೦೦ದ ವೇಳೆಗೆ ಆರ್ಯರು ಭಾರತದಲ್ಲಿ ತಮ್ಮ ಭೂಸ್ವಾಮ್ಯವನ್ನು ವಿಸ್ತರಿಸುತ್ತಾ ಹೋದಹಾಗೆಲ್ಲಾ ಇಲ್ಲಿನ ಮೂಲ ನಿವಾಸಿಗಳಾದ ದ್ರಾವಿಡರಿಗೂ, ಆವರಿಗೂ ಘರ್ಷಣೆಗಳು ಹೆಚ್ಚುತ್ತಾ ಹೋದವಷ್ಟೇ ಅಲ್ಲ ಆರ್ಯ ಸಂಸ್ಕೃತಿಯ ಪ್ರಾಬಲ್ಯವೂ

ಬೆಳೆಯುತ್ತಾ ಹೋಯಿತು. ಭಾರತೀಯ ಸಮಾಜದ ವಿಭಜನೆ ಹಾಗೂ ಮಾತೃ ಪ್ರಧಾನವಾದಂಥ ಮೌಲ್ಯಗಳ ಹಾಗೂ ಆಚರಣೆಗಳ ನಶಿಸುವಿಕೆ ಈ ಯುಗದಲ್ಲಿ ಪ್ರಾರಂಭವಾಗಿ ಆಗ ಆರಂಭವಾದ ಲಿಂಗ ವ್ಯವಸ್ಥೆಯ ಅಸಮಾನತೆ ಇಂದಿಗೂ ಹೊಸ ಹೊಸ ರೂಪಗಳನ್ನು ತಾಳಿ ಮುಂದುವರೆದುಕೊಂಡು ಬಂದಿದೆ ಎಂಬುದು ಗಮನಾರ್ಹವಾದ ವಿಷಯ. ಒಂದೆಡೆ ಕುಟುಂಬದ ಒಳಗೆ ಮತ್ತೊಂದೆಡೆ ಕುಟುಂಬದ ಹೊರಗೆ ಮಹಿಳೆಯ ಸ್ಥಾನ ಕ್ಷೀಣಿಸುತ್ತಾ ಹೋಯಿತು. ನೇಗಿಲು ಪ್ರಧಾನ ಕೃಷಿ ವ್ಯವಸ್ಥೆಯಿಂದ ಸ್ತ್ರೀಯರನ್ನು ದೂರವಿಟ್ಟದ್ದು, ಪುರುಷ ದಬ್ಬಾಳಿಕೆ ಹಾಗೂ ಶೋಷಣೆ ಹೆಚ್ಚಾಗಿ ಮಹಿಳೆಯನ್ನು ಗೃಹಬಂಧಿಯನ್ನಾಗಿಸಿದ್ದು ಕೇವಲ ಮಕ್ಕಳನ್ನು ಹೆರುವ ಯಂತ್ರವನ್ನಾಗಿ ಪರಿವರ್ತಿಸಿದ್ದು, ಜಾತಿ ಶ್ರೇಣಿಯಲ್ಲಿ ಕೆಳಸ್ತರಗಳಲ್ಲಿ ಇರಿಸಲ್ಪಟ್ಟಿದ್ದ ಜಾತಿಗಳ ಮಹಿಳೆಯರೊಡನೆ ವಿವಾಹೇತರ ಸಂಬಂಧವನ್ನು ಬೆಳೆಸುವುದು, ಜ್ಞಾನ ಎನ್ನುವ ಸಂಪನ್ಮೂಲವನ್ನು ಮೇಲ್ಜಾತಿಗಳ ಮತ್ತು ಪುರುಷರ ಸೊತ್ತಾಗಿಸಿದ್ದು - ಈ ಎಲ್ಲ ಪ್ರವೃತ್ತಿಗಳೂ ಆರ್ಯ ಸಂಸ್ಕೃತಿಯ ಸ್ತ್ರೀ ವಿರೋಧಿ ಮೌಲ್ಯಗಳನ್ನು ಸಮಾಜದಲ್ಲಿ ಸ್ಥಾಪಿಸಿ, ದ್ರಾವಿಡ ಸಂಸ್ಕೃತಿಯಲ್ಲಿ ಕಂಡುಬರುತ್ತಿದ್ದ ಸ್ತ್ರೀ ಪುರುಷ ಸಮಾನತೆಯನ್ನು ಗೌರವಿಸುತ್ತಿದ್ದ ಮೌಲ್ಯಗಳ ನಾಶಕ್ಕೆ ಕಾರಣವಾಯಿತು.

ಮಲೆಯಮಾದೇಶ್ವರ ಕಾವ್ಯದಲ್ಲಿ ಜಗತ್ತಿನ ಮೂಲದಲ್ಲಿದ್ದ ಸ್ತ್ರೀ ದೈವ, ಆದಿಶಕ್ತಿ, ಈ ಕಲ್ಪನೆ ಮಾತೃ ದೇವತಾರಾಧಕ ಕೃಷಿಕರಲ್ಲಿ ಮಾತ್ರ ಸಾಧ್ಯವಿತ್ತು. ಬ್ರಹ್ಮ, ವಿಷ್ಣು, ಶಿವರೆಂಬ ತ್ರಿಮೂರ್ತಿಗಳನ್ನು ಹುಟ್ಟಿಸಿದವಳು ಈ ಆದಿಶಕ್ತಿ. ತಾನು ಹುಟ್ಟಿಸಿದ ಮಕ್ಕಳನ್ನೇ ತನಗೆ ಪುರುಷರಾಗಲು ಕೇಳುತ್ತಾಳೆ. ಆಗ ಆದಿಶಕ್ತಿ ಮತ್ತು ತ್ರಿಮೂರ್ತಿಗಳ ನಡುವೆ ನಡೆಯುವ ಸಂವಾದವು ಮಾತೃಪ್ರಧಾನ ಸಂಸ್ಕೃತಿ ಮತ್ತು ಪುರುಷ ಪ್ರಧಾನ ಸಂಸ್ಕೃತಿಗಳ ನಡುವಿನ ಸಂಘರ್ಷವನ್ನು ಸೂಚಿಸುತ್ತದೆ. ಇಲ್ಲಿ ಮೊದಲು ಆದಿಶಕ್ತಿಯೆ ಗೆಲ್ಲುತ್ತಾಳೆ. ಅಂದರೆ ಮಾತೃಪ್ರಧಾನ ಸಂಸ್ಕೃತಿಯ ಗೆಲವು ಆದರೆ ಮಾದೇವ ತನ್ನ ತರ್ಕದಿಂದ, ಆದಿಶಕ್ತಿಯ ಎಲ್ಲ ವಿದ್ಯೆಗಳನ್ನು ಕೈವಶ ಮಾಡಿಕೊಂಡು, ಆಕೆಯನ್ನು ನಾಶಗೊಳಿಸುತ್ತಾನೆ. ಅಂದರೆ ಮಾತೃ ಸಮಾಜದ ಸತ್ವವನ್ನೆಲ್ಲ, ಪಿತೃಪ್ರಧಾನ ಸಂಸ್ಕೃತಿ ವಶಪಡಿಸಿಕೊಳ್ಳುವುದು.

ಬುಡಕಟ್ಟು ಮಹಾಕಾವ್ಯವಾದ ಮಲೆ ಮಾದೇಶ್ವರ ಕಾವ್ಯದ 'ಸಂಕಮ್ಮನ ಸಾಲಿನ' ನಾಯಕಿ 'ಸಂಕಮ್ಮ' ಮಾತೃಮೂಲ ಕುಟುಂಬದ ಪ್ರತೀಕವಾಗಿ ಕಂಡುಬಂದರೆ, 'ಬೇವಿನಟ್ಟಿ ಕಾಳಮ್ಮನ ಸಾಲು'ವಿನ 'ಬೇವಿನಟ್ಟಿ ಕಾಳಮ್ಮ' ಮಾತೃಮೂಲ ಕುಟುಂಬದ ನಾಶದ ಪ್ರತೀಕವಾಗಿದ್ದಾಳೆ.

ಸೋಲಿಗರ ನೀಲೇಗೌಡ ದುಂಡೇಗೌಡನ ಮಗಳು ಸತ್ಯಶರಣೆ ಸಂಕಮ್ಮನನ್ನು ತಾನೇ ಮೆಚ್ಚಿ ಮದುವೆಯಾಗಿರುತ್ತಾನೆ. ನೀಲಯ್ಯನು ಚಲುವಿ ಸಂಕಮ್ಮನನ್ನು ಬಿಟ್ಟು ಒಂಬತ್ತು ತಿಂಗಳ ಕಾಲಕುಲದ ಬೇಟೆ ಹೊರಡಬೇಕಾದ ಪ್ರಸಂಗದಲ್ಲಿ ಬೇಟೆಗೆ ಹೋಗದಿದ್ದರೆ ಕುಲದಿಂದ ಹೊರಗೆ ಹಾಕುವ ಭಯ, ಸಂಕಮ್ಮ ಒಬ್ಬಳನ್ನೇ ಬಿಟ್ಟು ಹೋಗಲು ಆತಂಕ ಅವನಿಗೆ. ನಾನು ಬೇಟೆಯಿಂದ ಹಿಂತಿರುಗಿ ಬರುವುದರೊಳಗೆ ಯಾರಿಗಾದರೂ ಒಲಿದು ಬಿಟ್ಟರೆ ಎಂದು ಅವಳ ಶೀಲದ ಬಗ್ಗೆ ಶಂಕಿಸಿ, ಭಾಷೆ ಕೊಡುವಂತೆ ಸಂಕಮ್ಮನನ್ನು ಒತ್ತಾಯಿಸುತ್ತಾನೆ. ಯಾವ ತಪ್ಪು ಮಾಡದ ಅವಳು ಭಾಷೆ ಕೊಡಲು ನಿರಾಕರಿಸುತ್ತಾಳೆ. ಹೆಣ್ಣು ಪಾತಿವ್ರತ್ಯದ ಪ್ರತೀಕ. ಅಂತಹ ಹೆಣ್ಣನ್ನು ಪುರುಷ ಪ್ರಧಾನ ಸಮಾಜ ಪುರುಷರ ನಿರ್ಬಂಧಗಳಲ್ಲಿ, ದಬ್ಬಾಳಿಕೆಯ ಕ್ರೌರ್ಯಗಳಲ್ಲಿ

ಬಂಧಿಸಲು ಪ್ರಯತ್ನಿಸುತ್ತದೆ. ಆದರೆ ಸಂಕಮ್ಮ ಪುರುಷಾಧಿಕಾರದ ಕಟ್ಟುಪಾಡಿನ ಮೌಲ್ಯಗಳನ್ನು ತೀವ್ರವಾಗಿ ವಿರೋಧಿಸುತ್ತಾಳೆ. "ಸಂಕಮ್ಮನಿಗೆ ಕೈ ಭಾಷೆ ಕೊಡುವುದು ಬರಿಯ ಭಾಷೆಯ ಮಾತಿನ ಪ್ರಶ್ನೆಯಲ್ಲ. ಅದು ಅವಳ ಅಸ್ತಿತ್ವವನ್ನು, ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ಪ್ರಶ್ನೆ. ಕೈ ಭಾಷೆ ಕೊಡುವುದು ತನ್ನ ಸ್ವಾಭಿಮಾನಕ್ಕೆ ಅವಮಾನ ಎನ್ನುವುದರ ಜತೆಗೇನೇ ಅದು ತನ್ನ ಅಂತಃಸಾಕ್ಷಿಗೆ ಮಾಡುವ ಅಪಚಾರ ಎಂದು ಆಕೆ ಭಾವಿಸುತ್ತಾಳೆ."[೪೦] ಬಂಜೆ. ಕೈ ಭಾಷೆ ಕೊಡಲು ನಿರಾಕರಿಸುತ್ತಾಳೆ.

ಪಶುಪಾಲನೆಯ ಹಂತದಲ್ಲಿ ಇದ್ದ ನೀಲಯ್ಯ- ಪುರುಷ ಪ್ರಧಾನ ಸಮಾಜದ ಪ್ರತಿನಿಧಿಯಾಗಿ ಕಂಡುಬಂದರೆ, ಸಂಕಮ್ಮ ಮಾತೃಮೂಲ ವ್ಯವಸ್ಥೆಯ ಪ್ರತೀಕವಾಗಿ ಕಂಡುಬರುತ್ತಾಳೆ. 'ಭಾಷೆ ಕೊಡಲು ನಿರಾಕರಿಸಿದಳೆಂಬ ಒಂದೇ ಕಾರಣಕ್ಕಾಗಿ ಸಂಕಮ್ಮನನ್ನು ನೀಲಯ್ಯ ಮಾಟದ ಮೂಲಕ ಮಂಡಲವನ್ನು ಬರೆದು ಬಂಧಿಸುತ್ತಾನೆ. ಈ ಕೃತ್ಯ ಪುರುಷ ನಿರ್ಮಿತ ವ್ಯವಸ್ಥೆಯಲ್ಲಿ ಗಂಡು ಹೆಣ್ಣಿನ ಸ್ವಾತಂತ್ರ್ಯ, ಆದರ್ಶವನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಂಡು "ಹೆಣ್ಣಿನ ಪಾತಿವ್ರತ್ಯದ ರಕ್ಷಣೆಗೆ ಗಂಡು ಅನುಸರಿಸುವ ಮಾರ್ಗ ಆಕೆಗೆ ಹೊರಜಗತ್ತಿನ ಸಂಪರ್ಕವನ್ನು ಕಡಿದು ಕಟ್ಟೆಚ್ಚರದಲ್ಲಿ"[೪೧] ಬಂಧಿಸುವುದಾಗಿದೆ.

ನೀಲಯ್ಯನ ಅನುಪಸ್ಥಿತಿಯಲ್ಲಿ ಒಂಟಿಗುಡ್ಲಿಗೆ ಮಾದಯ್ಯನ ಆಗಮನವಾಗುತ್ತದೆ. ಮಾದಯ್ಯನ ಔದಾರ್ಯಕ್ಕೆ ಮಾರುಹೋದ ಸಂಕಮ್ಮ 'ಮಕ್ಕಳ ಫಲ'ಕ್ಕಾಗಿ ಒತ್ತಾಯಿಸುತ್ತಾಳೆ. ಈ ಒತ್ತಾಯದ ಹಿಂದಿನ ಬಯಕೆ ಎಂದರೆ ತಾಯ್ತನ. ಹೆಣ್ಣು ಎಷ್ಟೇ ಕಷ್ಟನಷ್ಟಗಳನ್ನು ಅನುಭವಿಸಿದರೂ ಪಾತಿವ್ರತ್ಯದ ನಂತರದ ಸ್ಥಾನ ತಾಯ್ತನ. ಬಂಜೆಯಾದವಳು ಸಮಾಜದಲ್ಲಿ ಕುಟುಂಬದಲ್ಲಿ ಅನುಭವಿಸುವ ಕಷ್ಟನಷ್ಟಗಳು, ಅವಮಾನ, ನಿಂದನೆಗಳು, ದಾರುಣವಾದುದು. 'ಪಿಂಡಪರಸಾದ'ದ ಮೂಲಕ ಮಾದೇವ ಮಕ್ಕಳ ಫಲವನ್ನು ಕರುಣಿಸುತ್ತಾನೆ. ಇಲ್ಲಿ ಸ್ತ್ರೀಯ ಪಾತಿವ್ರತ್ಯದ ನಂತರದ ಬಯಕೆಯು ಪ್ರಕಟಗೊಂಡಿದೆ. ಸಂಕಮ್ಮ ಗಂಡ ನೀಡಿದ ಹಿಂಸೆ, ಸತ್ವಪರೀಕ್ಷೆ ಎಲ್ಲವನ್ನು ಸ್ವಸಾಮರ್ಥ್ಯದಿಂದ ಗೆದ್ದು, ಇಲ್ಲಿ ಹೆಣ್ಣು ಮುಕ್ತತೆಗೆ ಹಾತೊರೆದರೆ, ಗಂಡು ಕಟ್ಟುಪಾಡಿನ ಬೇಲಿಯನ್ನು ಭದ್ರಪಡಿಸತೊಡಗಿದೆ. ಇದು ಅವಸ್ಥಾಂತರದಲ್ಲಿ ಸಮಾಜವೊಂದರ ಬೇಕು ಬೇಡಗಳ ಸಂಘರ್ಷ, ಆಸೆ ಅದುಮುವಿಕೆಗಳ ಸಂಘರ್ಷ ಮತ್ತು ಮುಕ್ತತೆ ಹಾಗೂ ಪಾತಿವ್ರತ್ಯವೆಂಬ ಮೌಲ್ಯಗಳ ನಡುವಿನ ಸಂಘರ್ಷ. "ಒಟ್ಟಾರೆ ಮಕ್ಕಳ ಫಲ ಕೊಡುವ (ಪಡೆವ) ಈ ಇಡೀ ಸಂದರ್ಭ ಪುರುಷಪ್ರಧಾನ ಸಮಾಜದ ಒಪ್ಪಿದ ಮೌಲ್ಯವಾದ ಶೀಲವನ್ನು ನಿರ್ಲಕ್ಷಿಸುವ ಮೂಲಕ ಪಾತಿವ್ರತ್ಯವನ್ನು ಮೀರುವ ಒಂದು ಕ್ರಿಯೆಯಾಗಿ ಮುಖ್ಯವಾಗುತ್ತದೆ."[೪೨] ಸಂಕಮ್ಮ ಮಾತೃಪ್ರಧಾನವಾದ ಉಳಿವಿಗಾಗಿ ಹೋರಾಟ ಮಾಡುತ್ತಾಳೆ.

ಇದೇ ಕಾವ್ಯದ 'ಬೇವಿನಹಟ್ಟಿ ಕಾಳಮ್ಮನ ಸಾಲು' 'ಸಂಕಮ್ಮ'ನ ಸಾಲಿಗಿಂತ ವಿರುದ್ಧ ದಿಕ್ಕಿನಲ್ಲಿ ಸಾಗುತ್ತದೆ. 'ಬೇವಿನಹಟ್ಟಿ ಕಾಳಮ್ಮ'ನ ಸಾಲಿನಲ್ಲಿ 'ಗಂಡಿನ ಪ್ರಾಮುಖ್ಯತೆ ಏನೂ ಇಲ್ಲ ಎಂಬುವಷ್ಟರ ಮಟ್ಟಿಗೆ ಮಾತೃಮೂಲ ಕುಟುಂಬದ ಲಕ್ಷಣಗಳು ಎದ್ದು ಕಾಣುತ್ತದೆ. ಏಳುಜನ ಗಂಡು ಮಕ್ಕಳುಳ್ಳ ಕಾಳಮ್ಮ ಕೂಲಿನಾಲಿ ಮಾಡಿ ಬಡತನದಲ್ಲಿ ಹೊಟ್ಟೆ ಹೊರೆಯುತ್ತಿದ್ದು, ಮಾದೇಶ್ವರನ ಕೃಪೆಯಿಂದಲೇ ಶ್ರೀಮಂತಳಾದಳು. ಅವಳಿಗೆ ಸಿರಿತನದ ಮದ ಹೆಚ್ಚಿದಂತೆ ಜಿಪುಣಳಾದಳು. ಸೊಸೆಯಂದಿರಿಗೆ ಹಾಗೂ ಆಳು-ಕಾಳು ಎಲ್ಲರಿಗೂ ಚಿತ್ರಹಿಂಸೆ ಕೊಟ್ಟುದ್ದಲ್ಲದೆ, ಸಂಪತ್ತನ್ನು ಕರುಣಿಸಿದ ಮಾದೇಶ್ವರನನ್ನು ಮರೆಯುತ್ತಾಳೆ. ಈ ಸಾಲಿನಲ್ಲಿ ಗಂಡಿನ

ಪ್ರಾಮುಖ್ಯತೆ ಏನೂ ಇಲ್ಲ. ಎಲ್ಲ ವಹಿವಾಟು ಹೆಂಗಸಿನದು. ವರ್ಷದ ಬಹುಭಾಗ ವನ್ನು ಅಲೆಮಾರಿಗಳಂತೆ ಕಳೆಯುತ್ತಿದ್ದ ಗಂಡಸರು ಬೇಟೆ, ಆಹಾರ ಸಂಗ್ರಹಣೆ ಹಾಗೂ ಪಶುಸಂಗೋಪನೆಯಲ್ಲಿ ತೊಡಗುತ್ತಿದ್ದರು. ಮಕ್ಕಳು ಮರಿಗಳ ಪಾಲನೆ ನೋಡಿಕೊಂಡು ಒಂದು ಗೊತ್ತಾದ ಸ್ಥಳದಲ್ಲಿ ಬಿಡಾರ ಹೂಡುತ್ತಿದ್ದರು. ಹೆಣ್ಣು ತನ್ನ ಬಿಡುವಿನ ವೇಳೆಯಲ್ಲಿ ಬಿತ್ತಿ ಬೆಳೆಯುವ ಮೂಲಕ ಕೃಷಿಯ ಉಪಯುಕ್ತತೆಯನ್ನು ಕಂಡುಕೊಂಡಳು. ಇದು ಪ್ರಧಾನವಾಗುತ್ತಾ ಬಂದ ಹಾಗೆ ಆರ್ಥಿಕ ಸಬಲತೆಯನ್ನು ಸಾಧಿಸಿದ ಹೆಣ್ಣು ಇಡೀ ಕುಟುಂಬದ ಗೌರವ ಸ್ಥಾನಕ್ಕೆ ಏರಿದವಳು. ಸಂತಾನೋತ್ಪತ್ತಿಯಲ್ಲದೆ ಆಹಾರೋತ್ಪತ್ತಿಗೂ ಕಾರಣಳಾದ ಹೆಣ್ಣಿನ ಶ್ರಮ ಅವಳಿಗೊಂದು ಆಡಳಿತ ಶಕ್ತಿಯನ್ನು ತಂದುಕೊಟ್ಟಿತು. ಸದಾ ಹೊರಗೆ ತಿರುಗುವ ಗಂಡಸು ನೆಪಮಾತ್ರ ದವನಾಗಿ ಹೆಣ್ಣು ಬಯಸಿದಂತೆ ನಡೆಯಬೇಕಾದ ಪ್ರಸಂಗವೂ ಇರುತ್ತಿತ್ತು. ಇಂಥ ಮಾತೃಪ್ರಧಾನ ಕುಟುಂಬದ ಏಳೆಯುಳಿಕೆ ಮಲೆಮಾದೇಶ್ವರ ಕಾವ್ಯದ ಬೇವಿನಹಟ್ಟಿ ಕಾಳಮ್ಮ.

ಮಾದೇಶ್ವರರ ಎಣ್ಣೆ ಮಜ್ಜನಕ್ಕೆ ಬೇಕಾದ ಎಳ್ಳು ಬೇಕಾಗಿದ್ದು, ಬೇವಿನಹಟ್ಟಿ ಕಾಳಮ್ಮನಿಂದ ಎಳ್ಳಿನ ಭಿಕ್ಷೆ ಪಡೆಯಬೇಕೆಂದು ಮನಸ್ಸು ಮಾಡಿದರು. ಕಾಡಿನ ಬುಡಕಟ್ಟು ಪ್ರದೇಶ, ನಾಡಾಗಿ ಪರಿವರ್ತಿತವಾದಾಗ ಅಲ್ಲಿಯ ಜನ ಬೇಟೆಯಿಂದ ಕೃಷಿಗೆ ಪರಿವರ್ತನೆಗೊಳ್ಳುತ್ತಿದ್ದಾಗ, ದೀಪದ ಅವಶ್ಯಕತೆ ಹೆಚ್ಚಾಗಿತ್ತು. ಆಗ ಎಳ್ಳು ಬೆಳೆಯುತ್ತಿದ್ದ ಕಾಳಮ್ಮನಿಗೆ ಎಲ್ಲಿಲ್ಲದ ಮಹತ್ವ ಬಂದಿತ್ತು. ಕಾಳಮ್ಮ ಸ್ವಾಭಿಮಾನದಿಂದ ಬೀಗುತ್ತಿದ್ದಳು. ಮಾದೇಶ್ವರ ಕಾಳಮ್ಮನ ಬಳಿ ಎಳ್ಳು ಭಿಕ್ಷೆ ಕೇಳುವುದರೊಂದಿಗೆ ಅವರಿಬ್ಬರ ನಡುವೆ ಸಂಘರ್ಷ ಪ್ರಾರಂಭವಾಗುತ್ತದೆ. ಎಳ್ಳಿನ ಭಿಕ್ಷೆ ಕೊಡಲೊಪ್ಪದ ಕಾಳಮ್ಮ ಒಂದು ಹಂತದಲ್ಲಿ ತನ್ನ ಗಂಡುಮಕ್ಕಳು ಮೊಮ್ಮಕ್ಕಳು ಆಸ್ತಿ ಎಲ್ಲವನ್ನು ಕಳೆದುಕೊಂಡರೂ ಸಹ ಭಿಕ್ಷೆ ಕೊಡಲು ನಿರಾಕರಿಸುತ್ತಾಳೆ. ಇಲ್ಲಿ ಕಾಳಮ್ಮ ಮಾನವೀಯತೆಯನ್ನು ಕಳೆದುಕೊಂಡು ಉದ್ಧಟತನದಿಂದ ವರ್ತಿಸುತ್ತಾಳೆ. "ಭಿಕ್ಷೆ ಕೊಡುವುದರಿಂದ ಅವಳ ಎಳ್ಳು ಧಾನ್ಯ ಕಡಿಮೆಯಾಗುತ್ತದೆ ಎನ್ನುವುದಕ್ಕಿಂತ ಭಿಕ್ಷೆ ಕೊಡುವ ಮೂಲಕ ಮಾದಯ್ಯನ ಹೆಚ್ಚಳತನಕ್ಕೆ ಒಗ್ಗುವುದಿಲ್ಲ. ಅಥವಾ ಶರಣಾಗುವುದಿಲ್ಲ ಎಂಬ ಹಠ ಇಲ್ಲಿ ಗಮನ ಸೆಳೆಯುತ್ತದೆ."[೪೩]

ಸಂಪತ್ತನ್ನು ಕರುಣಿಸಿದ ಮಾದೇವ ಉದ್ಧಟತನದ ಕಾಳಮ್ಮನನ್ನೂ ಅವಳ ಕುಟುಂಬವನ್ನೂ ನಾಶ ಮಾಡುತ್ತಾನೆ. ಮಾತೃಮೂಲ ಕುಟುಂಬದ ನಾಶವನ್ನು ಇಲ್ಲಿ ಕಾಣುತ್ತೇವೆ.

ಬೇವಿನಹಟ್ಟಿ ಕಾಳಮ್ಮ ಸ್ತ್ರೀಯರಲ್ಲಿ ಇರಬೇಕಾದ ನಯ, ವಿನಯ, ದಾನ, ತ್ಯಾಗ ಸಹನೆ ಮುಂತಾದ ಸದ್ಗುಣಗಳಿಗೆ ವಿರುದ್ಧ ಗುಣಗಳಾದ ಜಿಪುಣತನ, ಉದ್ಧಟತನ, ಅಹಂಕಾರ, ದುಷ್ಟತನಗಳನ್ನು ಹೊಂದಿ ತನ್ನ ನಾಶಕ್ಕೆ ತಾನೇ ಕಾರಣವಾಗುತ್ತಾಳಾದರೂ "ಒಟ್ಟಾರೆ ಈ ಕಾಳಮ್ಮನ ಪ್ರಸಂಗ ಪುರುಷಪ್ರಧಾನ ಸಂಸ್ಕೃತಿ ಮಾತೃಪ್ರಧಾನ ಸಮಾಜದ ಮೇಲೆ ಸಾಧಿಸಿದ ಗೆಲುವಿನ ಸಂಕೇತವಾಗಿ ಉಳಿಯುತ್ತದೆ."[೪೪]

ಮಾತೃಪ್ರಧಾನ ಮೌಲ್ಯಗಳ ಹಾಗೂ ಆಚರಣೆಗಳ ನಶಿಸುವಿಕೆಯು ಪ್ರಾರಂಭವಾದುದು ಪಶುಪಾಲನೆ ಆರಂಭಗೊಂಡು ಪುರುಷರ ಕೈಗೆ ಪಶು ಸಂಪತ್ತು ಸೇರಿ ಹೋದ ಮೇಲೆ. ಪಿತೃಸ್ವಾಮ್ಯ ಸಮಾಜ ಹುಟ್ಟಿಕೊಂಡ ನಂತರದಲ್ಲಿ ಪುರುಷರ ದಬ್ಬಾಳಿಕೆ ಹಾಗೂ ಶೋಷಣೆ ಹೆಚ್ಚಾಗಿ ಮಹಿಳೆಯರನ್ನು ಗೃಹಬಂಧಿಯನ್ನಾಗಿಸಿದ್ದಲ್ಲದೆ, ಧಾರ್ಮಿಕ ಕ್ಷೇತ್ರದಲ್ಲಿ ಸ್ತ್ರೀಯರ ಭಾಗವಹಿಸುವಿಕೆ ಕ್ರಮೇಣ ಕಡಿಮೆಯಾಗತೊಡಗಿತು.

“ಪುರುಷ ಮಾನಸಿಕವಾಗಿ ಮಹಿಳೆಗಿಂತ ಕ್ರೂರಿ. ತನ್ನ ದೈಹಿಕ ತೀಟೆಯಿಂದ ಅನೇಕ ಮನಸ್ಸುಗಳನ್ನು ಘಾಸಿ ಮಾಡಿದ್ದಾನೆ. ವಂಶವಾಹಿನಿಯಲ್ಲಿ ತಾನು ಮೇಲು ಎಂದು ಬಲತ್ಕಾರವಾಗಿ ಹಿಂಸೆಯಿಂದ ಸಾಧಿಸಿದ್ದಾನೆ. ಮಾತೃಪ್ರಧಾನ ಕುಟುಂಬ ನಶಿಸಿ ಹೋಗಿದ್ದು ಹೀಗೆ ಎನ್ನಬಹುದು.”[೪೫]

**ಅಡಿಟಿಪ್ಪಣಿಗಳು**

೧. ಡಾ.ಬೋರೇಗೌಡ ಚಿಕ್ಕಮರಳಿ: ಮಲೆಯ ಮಾದೇಶ್ವರ, ಡಾ.ಅರವಿಂದ ಮಾಲಗತ್ತಿ (ಸಂ), ೨೦೦೦, ಪುಟ ೧೧೨

೨. ಡಾ.ಕೆ.ಆರ್.ಸಂಧ್ಯಾರೆಡ್ಡಿ; ೨೦೦೦, ಅದೇ, ಪುಟ ೭೮

೩. ಡಾ.ಬೋರೇಗೌಡ ಚಿಕ್ಕಮರಳಿ, ಅದೇ, ಪುಟ ೧೧೭

೪. ಅದೇ, ಪುಟ ೧೧೮

೫. ಡಾ.ಪಿ.ಕೆ.ರಾಜಶೇಖರ, (ಸಂ) ಜಾನಪದ ಮಹಾಕಾವ್ಯ ಮಲೆಯಮಾದೇಶ್ವರ, ಸಂಪುಟ ೨, ೧೯೯೧, ಪುಟ ೯೪

೬. ಡಾ.ಕೆ.ಆರ್.ಸಂಧ್ಯಾರೆಡ್ಡಿ, ಜನಪದ ಸಾಹಿತ್ಯದಲ್ಲಿ ಮಹಿಳೆ, ೧೯೯೫, ಪುಟ ೨೩

೭. ಡಾ.ಗಾಯತ್ರಿ ನಾವಡ, ಭಾರತೀಯ ಸ್ತ್ರೀವಾದ : ಒಂದು ಸಂಕಥನ, ೨೦೦೦, ಪುಟ ೩೩

೮. ಅದೇ, ಪುಟ ೫೩

೯. ಡಾ.ಹಿ.ಚಿ.ಬೋರಲಿಂಗಯ್ಯ, ಕಾಡು ಕಾಂಕ್ರೀಟ್ ಮತ್ತು ಜಾನಪದ, ೧೯೯೫, ಪುಟ ೬೦

೧೦. ಡಾ.ಹಿ.ಚಿ.ಬೋರಲಿಂಗಯ್ಯ, ವಿಸ್ಮೃತಿ ಮತ್ತು ಸಂಸ್ಕೃತಿ, ೨೦೦೦, ಪುಟ ೮೦

೧೧. ಡಾ.ಕೆ.ಆರ್.ಸಂಧ್ಯಾರೆಡ್ಡಿ, ಜನಪದ ಸಾಹಿತ್ಯದಲ್ಲಿ ಮಹಿಳೆ, ೧೯೯೫, ಪುಟ ೨೩

೧೨. ಡಾ.ಹಿ.ಚಿ.ಬೋರಲಿಂಗಯ್ಯ, ಕಾಡು ಕಾಂಕ್ರೀಟ್ ಮತ್ತು ಜಾನಪದ, ೧೯೯೫, ಪುಟ ೬೩

೧೩. ಡಾ.ಸಿ.ಎನ್.ರಾಮಚಂದ್ರನ್, ಪ್ರಜಾವಾಣಿ ಸಾಪ್ತಾಹಿಕ ಪುರವಣಿ, ೨೦-೧-೨೦೦೨

೧೪. ಎ.ಎಸ್.ಪ್ರಭಾಕರ, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ೨೦೦೦, ಪುಟ ೭೭

೧೫. ಡಾ.ಕೇಶವನ್ ಪ್ರಸಾದ್ (ಸಂ), ಮಲೆಮಾದೇಶ್ವರ, ಕನ್ನಡ ವಿ.ವಿ., ೧೯೯೭, ಪುಟ ೩೬೭

೧೬. ಡಾ.ಪಿ.ಕೆ.ರಾಜಶೇಖರ (ಸಂ), ಜನಪದ ಮಹಾಕಾವ್ಯ ಮಲೆಯಮಾದೇಶ್ವರ, ಸಂಪುಟ ಎರಡು, ೧೯೯೧, ಪ್ರಸ್ತಾವನೆ ೯೪

೧೭. ಡಾ.ಜೀ.ಶಂ.ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೧೧೭

೧೮. ಡಾ.ಬಿ.ಎಸ್.ಸ್ವಾಮಿ (ಸಂ), ಜಾನಪದ ಮಹಾಕಾವ್ಯ ಮಲೆಯ ಮಾದೇಶ್ವರ, ೨೦೦೧, ಪುಟ ೨೪೧

೧೯. ಅದೇ, ಪುಟ ೨೪೪

೨೦. ಅದೇ, ಪುಟ ೨೪೫

೨೧. ಡಾ.ಪಿ.ಕೆ.ರಾಜಶೇಖರ (ಸಂ), ಜನಪದ ಮಹಾಕಾವ್ಯ ಮಲೆಯಮಾದೇಶ್ವರ, ಸಂಪುಟ ಎರಡು, ೧೯೯೧, ಪುಟ ೭೭೭, ೭೭೮

೨೨. ಡಾ.ಕೆ.ಕೇಶವನ್ ಪ್ರಸಾದ್ (ಸಂ); ಮಲೆಮಾದೇಶ್ವರ, ಕನ್ನಡ ವಿ.ವಿ., ೧೯೯೭, ಪುಟ ೩೩೯, ೩೪೦

೨೩. ಡಾ.ಬಿ.ಎಸ್.ಸ್ವಾಮಿ; ಮಲೆಯಮಾದೇಶ್ವರ-ಒಂದು ಅಧ್ಯಯನ, ೧೯೯೩, ಪುಟ ೨೩೭

೨೪. ಡಾ.ಹಿ.ಚಿ.ಬೋರಲಿಂಗಯ್ಯ; ಕಾಡು ಕಾಂಕ್ರೀಟ್ ಮತ್ತು ಜಾನಪದ, ೧೯೯೫, ಪುಟ ೬೪

೨೫. ಅದೇ, ಪುಟ ೬೭

೨೬. ಡಾ.ಚಂದ್ರು ಕಾಳೇನಹಳ್ಳಿ; ಸೋಲಿಗರ ಸಂಸ್ಕೃತಿ, ೧೯೯೩, ಪುಟ ೧೧೦

೨೭. ಡಾ.ಕೆ.ಆರ್.ಸಂಧ್ಯಾರೆಡ್ಡಿ; ಮಲೆಯಮಾದೇಶ್ವರ, ಡಾ.ಅರವಿಂದ ಮಾಲಗತ್ತಿ (ಸಂ), ೨೦೦೨, ಪುಟ ೭೫

೨೮. ಡಾ.ಬಿ.ಎಸ್.ಸ್ವಾಮಿ; ಮಲೆಯಮಾದೇಶ್ವರ-ಒಂದು ಅಧ್ಯಯನ, ೧೯೯೩, ಪುಟ ೨೯೮, ೨೯೯

೨೯. ಕೃಷ್ಣಮೂರ್ತಿ ಹನೂರು; ಸುವರ್ಣ ಜಾನಪದ-೧, ಪುಟ ೫೬೬

೩೦. ಡಾ.ಬಿ.ಎಸ್.ಸ್ವಾಮಿ: (ಸಂ), ಮಲೆಯಮಾದೇಶ್ವರ, ೨೦೦೧, ಪುಟ ೫೫

೩೧. ಡಾ.ಬಿ.ಎಸ್.ಸ್ವಾಮಿ: ಮಲೆಯಮಾದೇಶ್ವರ - ಒಂದು ಅಧ್ಯಯನ, ೧೯೯೩, ಪುಟ ೩೦೬, ೩೦೭

೩೨. ಡಾ.ಜೀ.ಶಂ.ಪರಮಶಿವಯ್ಯ; ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೩೦೯, ೩೧೦

೩೩. ಅದೇ, ಪುಟ ೧೧೦

೩೪. ಡಾ.ಪಿ.ಕೆ.ರಾಜಶೇಖರ; ಮಲೆಯಮಾದೇಶ್ವರ, ೧೯೭೩, ಪುಟ ೧೯೮ ಉಲ್ಲೇಖ: ಅರವಿಂದ ಮಾಲಗತ್ತಿ, (ಸಂ) ಮಲೆಯಮಾದೇಶ್ವರ, ಪುಟ ೧೨೯, .

೩೫. ಡಾ.ಜೀ.ಶಂ.ಪರಮಶಿವಯ್ಯ; ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೯೭, ಪುಟ ೧೧೯

೩೬. ಡಾ.ಹಿ.ಚಿ.ಬೋರಲಿಂಗಯ್ಯ; ಬುಡಕಟ್ಟು ದೈವಾರಾಧನೆ, ೨೦೦೦, ಪುಟ ೧೦-೧೧

೩೭. ಪ್ರಾಚೀನ ಭಾರತದ ಚರಿತ್ರೆ, ಡಿ.ಡಿ.ಕೋಸಾಂಬಿ ಅವರ ಚಿಂತನೆಗಳು ಮೂಲ- ಬಾಲಗೋಪಾಲ್, (ಅನು) ಎಚ್.ಎಸ್. ಶ್ರೀಮತಿ, ಉಲ್ಲೇಖ: ಡಾ.ಹಿ.ಚಿ.ಬೋರಲಿಂಗಯ್ಯ ಬುಡಕಟ್ಟು ದೈವಾರಾಧನೆ ೨೦೦೦, ಪುಟ ೧೦೫

೩೮. ಡಾ.ಸಿದ್ಧಲಿಂಗಯ್ಯ; ಗ್ರಾಮದೇವತೆಗಳು, ೧೯೯೭, ಪುಟ ೧೭

೩೯. ಗಂಗಾಧರ ದೈವಜ್ಞ; ಬುಡಕಟ್ಟು ಸಮಾಜ ೨೦೦೦, ಪುಟ ೯೪

೪೦. ಡಾ.ಗಾಯಿತ್ರಿ ನಾವಡ; ಭಾರತೀಯ ಸ್ತ್ರೀವಾದ : ಒಂದು ಸಂಕಥನ, ೨೦೦೦, ಪುಟ ೩೩, ೩೪

೪೧. ಅದೇ, ಪುಟ ೩೪

೪೨. ಡಾ.ಹಿ.ಚಿ.ಬೋರಲಿಂಗಯ್ಯ; ಕಾಡು ಕಾಂಕ್ರೀಟ್ ಮತ್ತು ಜಾನಪದ, ೧೯೯೫, ಪುಟ ೬೨, ೬೩

೪೩. ಡಾ.ಕೆ.ಕೇಶವನ್ ಪ್ರಸಾದ್; (ಸಂ). ಮಲೆಮಾದೇಶ್ವರ, ೧೯೯೭, ಪ್ರಸ್ತಾವನೆ ೧೯

೪೪. ಡಾ.ಹಿ.ಚಿ.ಬೋರಲಿಂಗಯ್ಯ; ಕಾಡು ಕಾಂಕ್ರೀಟ್ ಮತ್ತು ಜಾನಪದ, ೧೯೯೫, ಪುಟ ೬೭

೪೫. ರಾಜೇಗೌಡ ಹೊಸಹಳ್ಳಿ; ಜಾನಪದ ಮತ್ತು ಹಿಂಸೆ, ರಂಗಾರೆಡ್ಡಿ ಕೋಡಿರಾಂಪುರ (ಸಂ), ಜಾನಪದ ೧೯೯೩, ೧೯೯೫, ಪುಟ ೪೪

## ಅಧ್ಯಾಯ ೪

# ಮಂಟೇಸ್ವಾಮಿ ಕಾವ್ಯ

೪.೧. ಮಂಟೇಸ್ವಾಮಿ ಮತ್ತು ಅನುಭಾವಿ ಸ್ತ್ರೀ

೪.೨. ಸ್ತ್ರೀ ದೇವತೆಗಳು ಮತ್ತು ಮಂಟೇಸ್ವಾಮಿ ಸ್ತ್ರೀ ಪರಿಭಾವನೆ

# ಅಧ್ಯಾಯ ೪

# ಮಂಟೇಸ್ವಾಮಿ ಕಾವ್ಯ

## ೪.೧. ಮಂಟೇಸ್ವಾಮಿ ಮತ್ತು ಅನುಭಾವಿ ಸ್ತ್ರೀ

ಜಗತ್ತಿನ ಮಹೋನ್ನತ ಮೌಖಿಕ ಪರಂಪರೆಯ ಮಹಾಕಾವ್ಯಗಳಲ್ಲಿ 'ಧರೆಗೆ ದೊಡ್ಡವರ ಕಾವ್ಯ' ಬಹುದೊಡ್ಡ ಮಹಾಕಾವ್ಯಗಳಲ್ಲಿ ಒಂದೆನ್ನಬಹುದು. ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳಲ್ಲಿ ಒಂದು ವಿಶಿಷ್ಟವಾದ ಧಾರ್ಮಿಕ ಜನಪದ ಮಹಾಕಾವ್ಯ. ಕಾವ್ಯದ ನಾಯಕ ಮಂಟೇಸ್ವಾಮಿ ಜಗತ್ತನ್ನೇ ಸೃಷ್ಟಿಸಬಲ್ಲ ಒಬ್ಬ ಪವಾಡ ಪುರುಷ. ನೀಲಗಾರ ಪರಂಪರೆ ಮಂಟೇಸ್ವಾಮಿಗಳನ್ನು ೧೨ನೇ ಶತಮಾನದ ಅಲ್ಲಮರಿಗೆ ಸಮೀಕರಿಸಿಕೊಂಡಿದೆ. ಕಲ್ಯಾಣವನ್ನು ಕೈಲಾಸದೊಂದಿಗೆ ಸಮೀಕರಿಸಿದ್ದಾರೆ. ಈ ಕಾವ್ಯ ನೀಲಗಾರ ಸಂಪ್ರದಾಯದ ಧಾರ್ಮಿಕ ಕಾವ್ಯ. "ಬ್ರಹ್ಮನ ಕಲ್ಪನೆಗಿಂತ ಭಿನ್ನವಾದ ಕಲ್ಪನೆ, ಈ ಕಾವ್ಯದ ಜಗತ್ತು ಸೃಷ್ಟಿಯ ಸಾಲಿನಲ್ಲಿ ದಾಖಲಿಸಲಾಗಿದೆ. ಕೈಲಾಸದ ಜಾಗಟೆಯ ನಾದದಿಂದ ಓಂಕಾರ ರೂಪವಾಗಿ ವ್ಯಕ್ತವಾದರು. ಕೃಷಿ ಮಾಡುವ ಮತ್ತು ಕೃಷಿಯನ್ನು ಅವಲಂಬಿಸಿದ ಜನವರ್ಗ ಮಂಟೇಸ್ವಾಮಿಯನ್ನು ಆರಾಧಿಸುತ್ತಾರೆ. ಕಾಡಿಗೂ ನಾಡಿಗೂ ಮಧ್ಯಂತರ ಜಗತ್ತೊಂದರಲ್ಲಿ ಇರುವ ಕೆಲವು ಜನವರ್ಗಗಳು ಮಂಟೇಸ್ವಾಮಿಯ ಆರಾಧಕರು. ಇವರು ಮಂಟೇಸ್ವಾಮಿ ಯಿಂದಲೇ ಈ ಜಗತ್ತು ಸೃಷ್ಟಿಯಾದದ್ದು ಎಂದು ನಂಬುತ್ತಾರೆ."[೧] ಮಂಟೇಸ್ವಾಮಿ ಸ್ವಯಂಭೂ, ಮಾದಪ್ಪ ಶಿವನ ಅವತಾರವಾದರೆ, ಮಂಟೇಸ್ವಾಮಿ ಮತ್ತೊಬ್ಬ ದಲಿತ ಶರಣ ಮಂಟೇದಯ್ಯ. ಆದ್ದರಿಂದಲೇ ಮಂಟೇಸ್ವಾಮಿಗೆ ಧರೆಗೆ ದೊಡ್ಡವರು ಎಂಬ ಹೆಸರು. ಇವರನ್ನು ಪ್ರಭುಸ್ವಾಮಿ, ಪ್ರಭುದೇವರು, ಧರೆಗೆ ದೊಡ್ಡವರು, ಪರಂಜ್ಯೋತಿ, ಮುಂತಾದ ಹೆಸರುಗಳಲ್ಲಿ ನೀಲಗಾರರು ಕರೆಯುತ್ತಾರೆ.

ಮಂಟೇಸ್ವಾಮಿ ಕಾವ್ಯ ಆರಂಭವಾಗುವುದು ಕಲ್ಯಾಣದಿಂದಲೇ. ೧೨ನೇ ಶತಮಾನದ ಶರಣರು ತಮ್ಮ ತಾತ್ವಿಕ ಚಿಂತನೆಗಳಿಗೆ ಕಲ್ಯಾಣವನ್ನೇ ಕೇಂದ್ರವನ್ನಾಗಿ ಮಾಡಿಕೊಂಡು, ಸಾರಿದ ಕಾಯಕತತ್ವ, ಜಾತ್ಯಾತೀತ ಸಮಾಜ, ಆರ್ಥಿಕ ಸಮಾನತೆ ಮುಂತಾದ ತತ್ವಗಳನ್ನು ಮತ್ತೆ ತರುವ ಪ್ರಯತ್ನ ಮತ್ತೊಮ್ಮೆ ಸಾಗುತ್ತದೆ. ಮಂಟೇಸ್ವಾಮಿಗಳು ಕಾವಿ ಕಲ್ಯಾಣವನ್ನು ಬರಿದು ಮಾಡಲು ಕೈಲಾಸದಿಂದ ಕಲ್ಯಾಣಕ್ಕೆ ಬರುವ ರೀತಿಯೇ ಒಂದು ಪವಾಡ ಸದೃಶ್ಯವಾಗಿ ಕಾವ್ಯದಲ್ಲಿ ಚಿತ್ರಿತವಾಗಿದೆ. ಇಲ್ಲಿ ನೀಲಗಾರರು ತಮ್ಮ ಕಾಲದ ಸಾಂಸ್ಕೃತಿಕ ನಾಯಕರನ್ನು ಕಲ್ಯಾಣದ ನಾಯಕರೊಟ್ಟಿಗೆ ಸಮೀಕರಿಸಿಕೊಂಡು ಬಸವ, ಅಲ್ಲಮರಿಗಿಂತ ಮಂಟೇಸ್ವಾಮಿಗಳು ವಿಭಿನ್ನ ಕಾಲದ ವ್ಯಕ್ತಿಗಳಾದರೂ, ತತ್ವಗಳಲ್ಲಿ ಒಂದೇ ಎಂಬ ಪರಿಕಲ್ಪನೆಗಳ ಚರ್ಚೆಯಲ್ಲಿ ಕಾಲವನ್ನು ಗೌಣಗೊಳಿಸಿದ್ದಾರೆ. ಕಲ್ಯಾಣದಲ್ಲಿ ಜಂಗಮ ವೇಷದಲ್ಲಿನ ಕಪಟಿಗಳನ್ನು ಬಯಲು ಮಾಡಿದರು. ಬಸವಣ್ಣ ನೀಲಾಂಬಿಕೆಯರ ಭಕ್ತಿಯ ದೃಢವನ್ನು ಪರೀಕ್ಷಿಸುವ ಚಿತ್ರಣ ಕಾವ್ಯದಲ್ಲಿ ರೋಚಕತೆಗೆ ಎಳೆದೊಯ್ಯುವುದು.

ಮಂಟೇಸ್ವಾಮಿಗಳು ಬಸವಣ್ಣನವರಿಂದ ಕಾಲಜ್ಞಾನ ಪುಸ್ತಕ ಹಾಗೂ ಸಾಕು ಮಗ ರಾಚಪ್ಪಾಜಿ, ಫಲಹಾರ ದಯ್ಯ ಮತ್ತು ಹಿರೇ ಚನ್ನಾಜಮ್ಮನವರನ್ನು ಕರೆದುಕೊಂಡು ಕೊಡೇಕಲ್ಲಿಗೆ ಬರುತ್ತಾರೆ. ಇವರ ಪರ್ಯಾಟನೆ ಮುಖ್ಯವಾಗಿ ಶಿಶು ಮಕ್ಕಳನ್ನು ಸಂಪಾದಿಸುವುದಲ್ಲದೆ, ಒಂದೊಂದು ಜನವರ್ಗವನ್ನು ಮಂಟೇಸ್ವಾಮಿ ಪಂಥದ ಅನುಯಾಯಿಗಳನ್ನಾಗಿ ಮಾಡುವುದು. ಇಲ್ಲಿ ರಾಚಪ್ಪಾಜಿ ವಿಜಯನಗರದ ಗಾರುಡಿಗರ ಹುಡುಗರನ್ನು ಗಾರುಡಿ ವಿದ್ಯೆಯಿಂದಲೇ ಸೋಲಿಸಿ ಗಾರುಡಿಗರೆಲ್ಲರನ್ನೂ ಮಂಟೇಸ್ವಾಮಿಗಳ ಒಕ್ಕಲು ಮಾಡಲಾಗುತ್ತದೆ. ಅಲ್ಲಿಂದ ಕಾಗಿನೆಲೆಯಲ್ಲಿ ದೊಡ್ಡಮ್ಮತಾಯಿಯನ್ನು ಪಡೆದು, ಸಖರಾಯ ಪಟ್ಟಣದಲ್ಲಿ ದೊರೆಯ ಇಬ್ಬರು ಮಕ್ಕಳನ್ನು ಮುಂದಿನ ಗುರುಮಠಕ್ಕೆ ಸ್ವಾಮಿಗಳನ್ನಾಗಿ ಮಾಡಲು ಪಡೆದುಕೊಂಡು, ಅದಿಹೊನ್ನಾಯಕನ ಹಳ್ಳಿಯಲ್ಲಿ ಬಳೆಯ ಮುದ್ದಮ್ಮನಿಂದ 'ಮಂಟೇದಲಿಂಗಯ್ಯ' ಎಂಬ ನಾಮಕರಣ ಮಾಡಿಸಿಕೊಂಡು, ಆದಿಮಳವಳ್ಳಿಯಲ್ಲಿ ಏಳು ದಿವಸವಿದ್ದು, ಕೋಟೆ ಕೊತ್ತಲು, ಪೇಟೆ, ಮನೆಗಳ ಮಾಡಿ, ಕುಂತೂರು ಬೆಟ್ಟಕ್ಕೆ ಶಿಷ್ಯರೊಡನೆ ಹೋಗುತ್ತಾರೆ. ಅಲ್ಲಿಂದ ಬೊಪ್ಪಗೌಡನಪುರದಲ್ಲಿ ಕುರುಬ ಬೊಪ್ಪೇಗೌಡನ ಕುರಿದೊಡ್ಡಿಯಲ್ಲಿ ಮಠಮನೆ ಮಾಡಿಕೊಂಡು, ೧೨ ಅಂಕಣದ ಗಂಧದ ಮಾಳಿಗೆ ಕಟ್ಟಿಸಿಕೊಂಡು ಮಡಿವಾಳ ಮಾಚಯ್ಯನ ಹುಬ್ಬೆ ಒಲೆಯಲ್ಲಿ 'ಅಮೃತಮಣ್ಣನ್ನು' ಗುರುತಿಸಿ ಅಲ್ಲಿ ಮಠವನ್ನೂ ಕತ್ತೆ ಕಟ್ಟೊ ಕೊಟ್ಟಿಗೆಯನ್ನು ಚಂದ್ರಶಾಲೆಯಾಗಿ ಮಾಡಿ ನೆಲೆಗೊಳಿಸುತ್ತಾರೆ. ಮಂಟೇಸ್ವಾಮಿಗಳು ಬೊಪ್ಪಗೌಡನಪುರದಲ್ಲಿ ನಿಲ್ಲುತ್ತಾರೆ. ಮಂಟೇಸ್ವಾಮಿಯ ಪರ್ಯಟನೆಯ ಜೊತೆಗೆ ಸಾಗುವ ಈ ಕಥಾನಕ ಮುಖ್ಯವಾಗಿ ಶಿಶುಮಕ್ಕಳನ್ನು ಪಡೆಯುತ್ತಾ ಸಾಗುತ್ತದೆ. ಇದು ಕತೆಯ ಪ್ರಥಮ ಘಟ್ಟ.

"ಮಂಟೇಸ್ವಾಮಿಯ ಕಾವ್ಯ ಅದ್ಭುತ ಕಥೆಗಳ ಒಂದು ಚಿತ್ರಶಾಲೆ"[೨] ಕಲ್ಯಾಣದಿಂದ ಹೊರಟ ಧರೆಗೆ ದೊಡ್ಡವರು ಬೊಪ್ಪೆಗೌಡನ ಪುರವನ್ನು ಸೇರುವಲ್ಲಿ ಪಡೆದುಕೊಂಡ ಶಿಷ್ಯರಲ್ಲಿ ೧. ರಾಚಪ್ಪಾಜಿ, ೨. ಚೆನ್ನಾಜಮ್ಮ ೩. ಫಲಾಹಾರದಯ್ಯ ೪. ಬಾಚಿ ಬಸವಯ್ಯ/ಸಿದ್ದಪ್ಪಾಜಿ ೫. ದೊಡ್ಡಮ್ಮತಾಯಿ ೬. ಸಖರಾಯಪಟ್ಟಣದ ಇಬ್ಬರು ರಾಜಕುಮಾರರಾದ, ಹಿರಿಯ ಗುರು ಬಸವರಾಜೇಂದ್ರ ಸ್ವಾಮಿಗಳು, ಕಿರಿಯ ಗುರುರಾಜ ಪಟ್ಟದ ವೀರಭದ್ರಸ್ವಾಮಿಗಳು ಇವರೆಲ್ಲಾ ಮಂಟೇಸ್ವಾಮಿ ಪಂಥದ ಪ್ರಮುಖ ಅನುಯಾಯಿಗಳು. ಈ ಶರಣರೊಡನೆ ಕೂಡಿ ಈ ಪರಂಪರೆಯನ್ನು ಕಟ್ಟಿದ್ದಾರೆ.

ಧರೆಗೆ ದೊಡ್ಡವರ ಕತೆಯಲ್ಲಿ ದೊಡ್ಡಮ್ಮತಾಯಿಯವರ ಪಾತ್ರ ಹಿರಿದಾದುದಾಗಿದೆ. ಎಲ್ಲಾ ಧಾರ್ಮಿಕ ಕ್ರಿಯೆಯಲ್ಲಿ ತಾಯ್ತನದ ಸ್ಥಾನದಲ್ಲಿ ನಿಲ್ಲುತ್ತಾರೆ. ಇವರನ್ನು ದುಡವುಳ್ಳ ದೊಡ್ಡಮ್ಮ ಎಂದು ನೀಲಗಾರರು ಕರೆಯುತ್ತಾರೆ. "ದೊಡ್ಡಮ್ಮತಾಯಿ ಎನ್ನುವುದು ಒಂದು ವಿಶೇಷಣ. ಅವರ ಹೆಸರನ್ನು ನೀಲಗಾರರು ಕೊನೆಯ ತನಕ ಪ್ರಸ್ತಾಪಿಸಿಲ್ಲ. ದೊಡ್ಡಮ್ಮತಾಯಿಯೆಂದೆ ಕರೆದುಕೊಳ್ಳುತ್ತಾರೆ."[೩]

ದೊಡ್ಡಮ್ಮತಾಯಿಯ ಪತಿ ರಾಚಪ್ಪಾಜಿ, ಮಂಟೇಸ್ವಾಮಿಯವರೊಂದಿಗೆ ಉತ್ತರದಿಂದ ದಕ್ಷಿಣಕ್ಕೆ ಬಂದವರು.

"ಮಂಟೇಸ್ವಾಮಿಯವರನ್ನು, ಕೊಡೇಕಲ್ಲ ಬಸವಣ್ಣನವರ ಶಿಷ್ಯರೆಂದು, ಕೊಡೇಕಲ್ಲ ಚರಿತ್ರಕಾವ್ಯ 'ನಂದಿ ಆಗಮ ಲೀಲೆ'ಯಲ್ಲಿ ಮಂಟೇದ, ಮಂಟೇಲಿಂಗ ಹೆಸರಿನ ಈ ಮಂಟೇಸ್ವಾಮಿ 'ದ್ರವಿಡ ದೇಶ' (ತಮಿಳುನಾಡು?)

ದಿಂದ 'ಕಾಯಸಿದ್ಧಿ' ಗಳಿಸಲು ಕೊಡೇಕಲ್ಲ ಬಸವಣ್ಣನನ್ನು ಹುಡುಕಿಕೊಂಡು ಕೊಡೇಕಲ್ಲಿಗೆ ಬಂದು, ಅಲ್ಲಿ ಕೆಲಕಾಲ ಇದ್ದು, ಸಾಧನೆಗೈದು, ಕೊಡೇಕಲ್ಲ ಬಸವನ ಆದೇಶದಂತೆ ದಕ್ಷಿಣದತ್ತ ಹೊರಟರು"[೪] ಎಂಬುದಾಗಿ ಡಾ.ಬಸವಲಿಂಗ ಸೊಪ್ಪಿಮಠರವರು ಅಭಿಪ್ರಾಯ ಪಡುತ್ತಾರೆ.

"ರಾಚಪ್ಪಯ್ಯ ಕೊಡೇಕಲ್ಲ ಬಸವಣ್ಣನ ಹಿರಿಯ ಮಗನಾದ ಈತ 'ರಾಚ' ಅಂಕಿತದಲ್ಲಿ ಹಾಡುಗಳನ್ನು ಹತ್ತು ಪ್ರೌಢಕಾವ್ಯಗಳನ್ನು ರಚಿಸಿದ ಪ್ರತಿಭಾವಂತ... ರಾಚಪ್ಪಯ್ಯ ಗೃಹಸ್ಥ, ಕುಮಾರಸ್ವಾಮಿ ಎಂಬ ಎಳೆವಯಸ್ಸಿನ ಈತನ ಮಗು ಅಕಾಲಮರಣಕ್ಕೀಡಾಯಿತೆಂದು ಕೊಡೇಕಲ್ಲವರು ಮಗುವಿನ ಸಮಾಧಿ ಸ್ಥಾನವನ್ನು ಈಗಲೂ ತೋರಿಸುತ್ತಾರೆ. ಜೀವನದ ಒಂದು ಹಂತದಲ್ಲಿ ವೈರಾಗ್ಯ ತಾಳಿದವನಾಗಿ ರಾಚಪ್ಪಯ್ಯ ಕೊಡೇಕಲ್ಲು ಬಿಟ್ಟು ಕಾವೇರಿ ತೀರದತ್ತ ನಡೆದನೆಂದು"[೫] ಕೊಡೇಕಲ್ಲ ಸ್ಥಳ ಪುರಾಣ ಹೇಳುತ್ತದೆಂದು ಡಾ.ಸೊಪ್ಪಿನಮಠ ಅಭಿಪ್ರಾಯಪಡುತ್ತಾ, "ರಾಚಪ್ಪಯ್ಯನ ಸಮಾಧಿ ಇರುವ ಕಾವೇರಿ ತೀರದ ಕಪ್ಪಡಿಗೆ ಕೊಡೇಕಲ್ ಸಂಪ್ರದಾಯ ದವರು ನಡೆದುಕೊಳ್ಳುತ್ತಾರೆ. ಆ ಅಂಶ ಮತ್ತು ಕಲ್ಯಾಣ ಬಸವನಿಗೆ ಸಾಕುಮಗ ನಾಗಿ ರಾಚಪ್ಪಯ್ಯನ ಉಲ್ಲೇಖವೇ ಇಲ್ಲದಿರುವುದರಿಂದ ಮಂಟೇಸ್ವಾಮಿ ಕಂಡ ಬಸವಣ್ಣ ಕೊಡೇಕಲ್ಲ ಬಸವಣ್ಣ ಎಂಬುದು ತಂತಾನೆ ಸಿದ್ಧವಾಗುತ್ತದೆ"[೬] ಎನ್ನುತ್ತಾರೆ.

"ಕೊಡೇಕಲ್ಲು ಸಾಹಿತ್ಯದಲ್ಲಿ ದೊಡ್ಡಮ್ಮತಾಯಿಯ ಪೂರ್ವದ ಹೆಸರು ಏನು ಎಂಬುದು ತಿಳಿದು ಬಂದಿಲ್ಲ. ವಿಜಾಪುರದ ಸರಸೆಟ್ಟಿ ಮನೆತನದ ಹೆಣ್ಣು ಮಗಳು ಎಂಬುದಷ್ಟೆ ತಿಳಿದು ಬರುತ್ತದೆ... ರಾಚಪ್ಪಾಜಿ-ದೊಡ್ಡಮ್ಮ ತಾಯಿಯವರ ಮಗ ಕುಮಾರಸ್ವಾಮಿಯವರ ಗದ್ದುಗೆ ಕೊಡೇಕಲ್ಲಿನಲ್ಲಿದೆ. ಮಗನ ಅಕಾಲಿಕ ಸಾವು ಇವರು ಕೊಡೇಕಲ್ಲು ಬಿಡಲು ಕಾರಣವಾಯಿತೆಂದು ಹೇಳುತ್ತಾರೆ. ಮಂಟೇಸ್ವಾಮಿಗಳ ಸಿದ್ಧಪಥದಲ್ಲಿ ರಾಚಪ್ಪಾಜಿ ದೊಡ್ಡಮ್ಮತಾಯಿ ಪ್ರಾರಂಭದಿಂದಲೂ ಕಾಣಿಸಿಕೊಳ್ಳುತ್ತಾರೆ. ಈ ಇಬ್ಬರು ದಂಪತಿಗಳು ಉತ್ತರದಿಂದ ದಕ್ಷಿಣಕ್ಕೆ ಬಂದಿರುವುದು ಖಚಿತ."[೭]

ಡಾ.ವೆಂಕಟೇಶ ಇಂದ್ವಾಡಿಯವರು ಸಂಗ್ರಹಿಸಿರುವ 'ಧರೆಗೆ ದೊಡ್ಡವರ ಕತೆ'ಯಲ್ಲಿ ಮಂಟೇಸ್ವಾಮಿ ಕಲ್ಯಾಣದಲ್ಲಿದ್ದಾಗ ಅಕ್ಕಮಹಾದೇವಿಯನ್ನು, ದೊಡ್ಡಮ್ಮತಾಯಿಯಾಗಿ ಜನ್ಮತಾಳುವಂತೆ ಹೇಳುತ್ತಾರೆ.

ಮೈಸೂರು ಜಿಲ್ಲೆಯ ಗಾಯಕರು, ದೊಡ್ಡಮ್ಮತಾಯಿಯನ್ನು ಮೈಸೂರು ಸಂಸ್ಥಾನದಿಂದ ಪಡೆಯುತ್ತಾರೆ. ಧರೆಗೆ ದೊಡ್ಡವರು ಮೈಸೂರು ಮಹಾರಾಣಿಯವರ ದೃಢವನ್ನು ನೋಡಲು ಮಹಾರಾಣಿಯವರ ಮನೆಗೆ ಭಿಕ್ಷೆಗೆ ಹೋಗಿ, ಭಿಕ್ಷೆ ಸಾರಿದರು. ಮಹಾರಾಣಿಯವರು ಮಡಿ ಉಟ್ಟು, ಮುತ್ತುರತ್ನ, ತಾಮ್ರ, ವಜ್ರ, ವೈಢೂರ್ಯ, ಬೆಣ್ತಕ್ಕಿ ಭಂಗಿ ಸೊಪ್ಪು, ವೀಳ್ಯ, ಅಡಿಕೆಯನ್ನು ಮರದಲ್ಲಿ ತುಂಬಿಕೊಂಡು ಭಿಕ್ಷೆ ನೀಡಲು ಬಂದಾಗ, ಗುರುಗಳು ನಿಮಗೆ ಮಕ್ಕಳು ಎಷ್ಟು ಎಂದು ಕೇಳಿದರು. ಮಹಾರಾಣಿಯವರಿಗೆ ಕೋಪ ಬರುತ್ತದೆ. ಗುರುಗಳು ಕೋಪ ಮಾಡಿಕೊಳ್ಳಬೇಡ ನನ್ನ ಕಂದ, ಯಾರೇ ಆಗಲಿ ಮೊಟ್ಟಮೊದಲು ಬೀದಿಯಲ್ಲಿ ಭಿಕ್ಷೆಗೆ ಬಂದಾಗ, ಮಕ್ಕಳೆತ್ತಿರುವ ಪುಣ್ಯಗಿತ್ತಿ ಭಿಕ್ಷೆ ನೀಡಿದರೆ, ಅವತ್ತು ಬೆಟ್ಟ ಸುತ್ತಿದರೂ, ಹೊಟ್ಟೆ ತುಂಬುತ್ತದೆ. ಜೋಳಿಗೆ ತುಂಬುತ್ತದೆ. ಜೇಬಿಗೆ ಕಾಸು ಆಗುತ್ತದೆ. ಆದ್ದರಿಂದ ಮಕ್ಕಳಿಲ್ಲದ ಬಂಜೆ ಕೈನ ಭಿಕ್ಷೆ ಜೋಳಿಗೆಗೆ ನೀಡಬಾರದು ಎನ್ನುತ್ತಾರೆ. ಮಹಾರಾಣಿಯವರು ಮದುವೆಯಾಗಿ ೧೨ ವರ್ಷಗಳಾದರೂ, ಮಕ್ಕಳಿಲ್ಲ ಎಂದಾಗ,

ಗುರುಗಳು, ಅವಳಿ-ಜವಳಿ ಅಂದರೆ ಒಂದು ಹೆಣ್ಣು ಒಂದು ಗಂಡು ಮಗು ಕರುಣಿಸುತ್ತೇನೆ. ಗಂಡು ಮಗುವಿಗೆ ರಾಜ್ಯದ ಪಟ್ಟ ಕಟ್ಟಿ, ಹೆಣ್ಣು ಮಗುವನ್ನು ನಮ್ಮ ಮುತ್ತಿನ ಜೋಳಿಗೆಗೆ ದಾನ ಕೊಡಬೇಕು ಎನ್ನುತ್ತಾರೆ. ಕಾರಗಳ್ಳಿ ಮಾರನಾಯಕ ಹೆಣ್ಣು ಮಗು ಹುಟ್ಟಿದರೆ ಪರಿವಾರ ಜಾತಿಯವರಿಗೆ ಕೊಡಬೇಕೆಂದು ತಾಮ್ರದ ಚಪ್ಪೋಡು ಬರೆಸಿರುವುದನ್ನು ಮಹಾರಾಣಿ ಗುರುಗಳಿಗೆ ತಿಳಿಸುತ್ತಾರೆ. ಆದರೂ ಗುರುಗಳಿಗೆ ಹೆಣ್ಣು ಮಗುವನ್ನು ದಾನ ಕೊಡುವುದಾಗಿ ಮಾತು ಕೊಡುತ್ತಾರೆ. ಆಗ ಗುರುಗಳು

'ಬೆಂಡಕಾಯ ತೆಗೆದರಂತಾ
ಪಿಂಡ ಪರ್ಸಾದ ಕೊಟ್ಟರಂತಾ'

(ಧರೆಗೆ ದೊಡ್ಡವರ ಕತೆ, ಪುಟ ೫೦)

ನವಮಾಸ ಕಳೆದ ಮೇಲೆ ಮಹಾರಾಣಿಯವರು ಅವಳಿ-ಜವಳಿ ಒಂದು ಹೆಣ್ಣು, ಒಂದು ಗಂಡು ಮಗುವಿಗೆ ಜನ್ಮ ನೀಡಿದರು. ಮಾರನಾಯಕ ಹೆಣ್ಣು ಮಗುವನ್ನು ತನ್ನ ಪರಿವಾರಕ್ಕೆ ಕೇಳಿದ. ಮಹಾರಾಜರು ಇದು ಶಿವನ ಹೆಣ್ಣು ಮಗು ಎಂದರು. ಮಾರನಾಯಕ ಯುದ್ಧಕ್ಕೆ ಬಂದ. ಧರೆಗೆ ದೊಡ್ಡವರು, ಭೂಮಿಯಿಂದ ಉತ್ಪತ್ತಿಯಾದಂತಹ ಏಳೆಡೆ ಚಿನ್ನದ ಕಂಡಾಯ ಹೊತ್ತುಕೊಂಡು, ಮೂಡಚಾರಿ ಬಾಗಲಲ್ಲಿ ಕುಳಿತುಕೊಂಡರು. ಮಾರನಾಯಕ ಮಗುವನ್ನು ಮುಟ್ಟಲು ಹೋದಾಗ ಗುರುಗಳು ತಡೆಯಲು ಬಂದರು. ಗುರುಗಳ ಕುತ್ತಿಗೆಗೆ ಕೈಹಾಕಿ ತಳ್ಳಿ ಮಗುವನ್ನು ಎತ್ತಿಕೊಳ್ಳಲು ಹೋದನು. ಆಗ ಧರೆಗೆ ದೊಡ್ಡವರು ಮಗುವನ್ನು ಕಂಡಾಯಕ್ಕೆ ಧಾರೆ ಎರೆದು ಬಿಟ್ಟರು. ಜಾತಿ ಪರಿವಾರದವರು ಹೆಣ್ಣನ್ನು ಕೇಳಿದರು ಎಂದು ಹೇಳಿ, ಗುರುಗಳು ಜಾತಿ ಪರಿವಾರದವರಿಗೆ,

'ತೋರಬಡಾಯ ಬರಲೆಪ್ಪಾ
ನಾಳಾ ಕಲಿಯುಗದಲ್ಲಿ
ಜಾತಿಲಿ ಪರಿವಾರದೊಳಗ
ಹನ್ನೊಂದು ಬಣ್ಣ ಆಗಲೇಪ್ಪಾ
ನಾನ್ ಹಾಕ್ದ ಶಾಪ ನಿಮ್ಗ
ಶಾಶ್ವತವಾಗಲೆಪ್ಪಾ'

(ಧರೆಗೆ ದೊಡ್ಡವರ ಕತೆ, ಪುಟ ೫೩)

ಎಂದು ಶಾಪವನ್ನು ಕೊಟ್ಟು ಈಗಲಾದರೂ ಹೆಣ್ಣು ಮಗುವನ್ನು ದಾನ ಕೊಡುವಂತೆ ಮಹಾರಾಣಿಯವರನ್ನು ಕೇಳಿದಾಗ, ಮಹಾರಾಣಿಯವರು "ನಾವು ಲಕ್ಷಿಕರು, ನೀವು ಭಿಕ್ಷುಕರು, ನೀವು ಈ ಹೆಣ್ಣು ಮಗುವನ್ನು ತೆಗೆದು ಕೊಂಡು ಏನು ಮಾಡುತ್ತೀರ ಪ್ರಭು" ಎಂದಾಗ, ಗುರುಗಳು ಈ ಮಗುವಿಗೆ 'ದೊಡ್ಡಮ್ಮತಾಯಿ' ಎಂದು ನಾಮಕರಣ ಮಾಡಿ, ಕಿಡುಗಣ್ಣ ರೇಚಪ್ಪಾಜಿಗೆ ನಿನ್ನ ಮಗಳನ್ನು ಕೊಟ್ಟು ಲಗ್ನ ಮಾಡುತ್ತೇವೆ ಎಂದರು. ಕಪ್ಪಡಿ ಕೈಲಾಸಕ್ಕ ಹೋಗುವಾಗ ದೊಡ್ಡಮ್ಮ

'ವಂಗ ತೋಪಿನೊಳಗ
ಹೊರ ಸೂತ್ಗವಾಗಿ
ತಿಂಗಳ ಮುಟ್ಟಾದಿ ಅಂತಾ
ಕುಕ್ಕನ ಕೂತ್ಕಂಡ್ರ
ಮುಟ್ಟನಹಳ್ಳಿ ತೋಪು ಅಂತಾ
ಮುಟ್ಟಿ ಪೂಜೆ ಮಾಡಿ
ಆ ತೋಪಿನ 'ದೊಡ್ಡಮ್ಮ' ಅಂತಾ
ನಾಮಾಂಕಿತ ಮಾಡ್ತೀನಿ'

(ಧರೆಗೆ ದೊಡ್ಡವರ ಕತೆ, ಪುಟ ೫೩,೫೪)

ಎಂಬ ಗುರುಗಳ ಮಾತನ್ನು ಕೇಳಿದ ಮಹಾರಾಣಿ ಮಗಳನ್ನು ಗುರುಗಳಿಗೆ ಧಾರೆಯೆರೆದು ಕೊಡುತ್ತಾರೆ. ನಂತರ ಗುರುಗಳು ಶಿಷ್ಯರೊಂದಿಗೆ ಮೈಸೂರನ್ನು ಬಿಡುತ್ತಾರೆ.

ಜೀ.ಶಂಪ.ರವರ 'ಶ್ರೀ ಮಂಟೇಸ್ವಾಮಿ' ಕಾವ್ಯದ ಪ್ರಕಾರ ಮಂಡ್ಯ ಜಿಲ್ಲೆಯ ಗಾಯಕರು, ದೊಡ್ಡಮ್ಮ ತಾಯಿಯನ್ನು ಕಾಗಿನೆಲೆಯಿಂದ ಪಡೆಯುತ್ತಾರೆ. ಮಂಟೇಸ್ವಾಮಿಗಳು ಕಲ್ಯಾಣವನ್ನು ಬಿಟ್ಟು ಹೊರಡುವಾಗ, ಬಸವೇಶ್ವರರ ಬಳಿ ಇದ್ದ ಕಾಲಜ್ಞಾನ ಪುಸ್ತಕವನ್ನು ಪಡೆದು, ಅವರ ಜೊತೆ ಇದ್ದ ರಾಚಪ್ಪಯ್ಯನನ್ನೂ, ಫಲಾರದಯ್ಯನನ್ನೂ ಶಿಶುಮಗನ ಮಾಡಿಕೊಡಿ, ಚೆನ್ನಾಜಮ್ಮನ ಶಿಶು ಮಗಳ ಮಾಡಿಕೊಡಿ ಎಂದು ಕೇಳಿದರು. ಸುರಮ್ಮ ಮತ್ತು ಕೂಡಲಸಂಗಮ ದೇವರು ತಮ್ಮ ಪುತ್ರ ರಾಚಪ್ಪಾಜಿಯನ್ನು, ಬಸವೇಶ್ವರರಿಗೆ ಒಪ್ಪಿಸುವಾಗ, ಅವರ ಕಲ್ಯಾಣ ಮಾಡಿಸುವಂತೆ ತಿಳಿಸಿದ್ದರು. ಧರೆಗೆ ದೊಡ್ಡವರು ಅವರ ಕಲ್ಯಾಣವನ್ನು ನೆರವೇರಿಸುವುದಾದರೆ, ಅವನನ್ನು ಕೊಡುವುದಾಗಿ ಹೇಳಿದ್ದರು. ಗುರುಗಳು ಒಪ್ಪಿದ್ದರು. ತಾವು ಬಯಸಿದ ಶಿಷ್ಯರನ್ನೂ, ಕಾಲಜ್ಞಾನ ಪುಸ್ತಕವನ್ನು ಸ್ವೀಕರಿಸಿ, ಧರೆಗೆ ದೊಡ್ಡವರು, ಕಲ್ಯಾಣದ ಕಡೆಯ ಬಾಗಿಲಿಗೆ ಬಂದರು. 'ಈರಭದ್ರನ ಹಲಗೆ ಗೇಯುತ್ತ ಬಾಚಿಬಸವಯ್ಯ ಕುಳಿತಿದ್ದ. ಧರೆಗೆ ದೊಡ್ಡವರನ್ನು ಕಂಡು ಗುಡುಗುಡನೆ ಓಡಿಬಂದು ಸಾಷ್ಟಾಂಗ ನಮಸ್ಕಾರ ಮಾಡಿ, ನಿಮಗೆ ಶಿಶು ಮಗ ಆಯ್ತೀನಿ' ಎಂದು ಕೇಳಿಕೊಂಡ. ಆದರೆ ಧರೆಗೆ ದೊಡ್ಡವರು "ಮುಂದೆ ನಿನ್ನ ಶಿಶು ಮಗನ್ನ ಮಾಡ್ಕೊಳ್ತೀನಿ. ಮರ್ತ್ಯಲೋಕದಲ್ಲಿ ಮುದ್ದೋಜಿ ಮಡದಿಯ ತಾಯಿ ಗರ್ಭದಲ್ಲಿ ಹುಟ್ಟು ಹೋಗು ನೀನು ಹುಟ್ಟಿದ ಏಳು ವರ್ಷಕ್ಕೆ ಬಂದು ಶಿಶು ಮಗನಾಗಿ ಪಡೀತೀನಿ"[೮] ಎಂದು ಹೇಳಿ ಮುಂದೆ ಹೊರಟರು.

ವಿಜಯನಗರವನ್ನು ಬಿಟ್ಟು ಮಂಟೇಸ್ವಾಮಿಗಳು, ಕಾಗಿನೆಲೆಗೆ ಬಂದರು.ರಾಚಪ್ಪಾಜಿಯವರಿಗೆ ಕಲ್ಯಾಣ ಮಾಡಬೇಕೆಂದು ಹೆಣ್ಣು ನೋಡಲು ಯೋಚಿಸಿದರು. ಅರಸು ಕುಲದವರಾದ ಬಸವಲಿಂಗಯ್ಯ ಮತ್ತು ಅವನ ಮಡದಿ ಕಲ್ಯಾಣಮ್ಮನವರಿಗೆ ಗಂಡು ಮಕ್ಕಳಿಲ್ಲ. ಒಂದೇ ಒಂದು ಹೆಣ್ಣು ಮಗು. ಸ್ವಾಮಿಗಳು ಕ್ವಾರಣ್ಯಕ್ಕೆ ಹೋದರು. ಕಲ್ಯಾಣಮ್ಮ ಮುತ್ತುರತ್ನವ ದಾನಕ್ಕೆ ತಂದರು. ಆಗ ಸ್ವಾಮಿಗಳು "ನನಗೆ ಮುತ್ತು ರತ್ನ ಬೇಡ ನಿಮ್ಮ ಮಗಳನ್ನು ದಾನ ಕೊಡಿ" ಎಂದರು. ಭಿಕ್ಷೆಗೆ ಬಂದವನ ಸೊಕ್ಕು ಕಂಡ ಬಸವಲಿಂಗಯ್ಯನಿಗೆ ಕೋಪ

ಬಂತು. ಭಿಕ್ಷೆಗೆ ಬಂದವನು ಮಗಳನ್ನು ಕೇಳುವುದೆ ಅಂತ. ಇನ್ನಿಲ್ಲದ ಸಿಟ್ಟಿನಿಂದ, ಸ್ವಾಮಿಯ ಕತ್ತ ಮೇಲೆ ಗುದ್ದಿ ಆಚೆಗೆ ತಳ್ಳಿ ಬಿಟ್ಟರು. ಸ್ವಾಮಿಗಳಿಗೂ ಕೋಪ ಬಂದು, ಜೋಳಿಗೆ ಇಂದ ಕಪ್ಪುಧೂಳ್ತ ತೆಗೆದು ಹೆಣ್ಣು ಮಗುವಿನ ಮೇಲೆ ಎಸೆದು, ಸರಸರನೆ ನಡೆದರು.

ಇತ್ತ ಮಗುವಿಗೆ ಯಮದ ಚಳಿಜ್ವರ ಬಂತು. ನಿಮಿಷ ಮಾತ್ರದಲ್ಲಿ ಪ್ರಾಣ ಬಿಟ್ಟಿತು. ಕಲ್ಯಾಣಮ್ಮ, ಬಸವಲಿಂಗಯ್ಯನಿಗೆ ಚಿಂತೆ ಆಯಿತು. ಯಾವನೋ ಪರದೇಶಿ ಬಂದ, ಮಗಳನ್ನು ಕೇಳಿದ, ಇಲ್ಲ, ಅಂದೆವು. ಅನ್ಯಾಯವಾಗಿ ಮಗು ಸತ್ತು ಹೋಯಿತು ಅಂತ ದುಃಖ ಮಾಡಿದರು. ಹೆಣವ ಸಿಂಗಾರ ಮಾಡಿ ಸ್ಮಶಾನಕ್ಕೆ ತಂದು ಒಪ್ಪ ಮಾಡಿ, ಮನೆಗೆ ದುಃಖದಲ್ಲಿ ಹಿಂದಿರುಗಿದರು.

ಧರೆಗೆ ದೊಡ್ಡವರು, ಸ್ಮಶಾನಕ್ಕೆ ಬಂದರು, ಜೋಳಿಗೆಯಿಂದ ಕಪ್ಪುಧೂಳ್ತ ತೆಗೆದರು. ಗುಡ್ಡದ ಮೇಲೆ ಎರೆಚಿದರು. ಮಗಳು ಎದ್ದು ಬಂದಳು. ಅವಳಿಗೆ ಸ್ನಾನ ಮಾಡಿಸಿ, ಕಾವಿಬಟ್ಟೆ ಉಡಿಸಿದರು, ವಿಭೂತಿ, ಕಪ್ಪು ಇಕ್ಕಿದರು ನಾಗಬೆತ್ತ ಹೊರಿಸಿದರು. ಬಸವಲಿಂಗಯ್ಯನ ಮನೆಗೆ ಕರೆದು ತಂದರು. ದುಃಖ ಮಾಡುತ್ತಿದ್ದ, ಗಂಡ-ಹೆಂಡತಿಗೆ ಕೋಪ ಬಂದು, 'ಹುಚ್ಚು ಕಾಡ ಜಂಗಮ ಮನೆ ಹಟ್ಟ ಬಿಟ್ಟು ಆಚೆಗೆ ಹೋಗು ಅಂದರು, ಸಿಟ್ಟು ಮಾಡಬೇಡಿ, ಹೆಣ್ಣು ಮಗು ಯಾರದು ನೋಡಿ' ಎಂದರು.

ಮಗಳನ್ನು ನೋಡಿ ಕಲ್ಯಾಣಮ್ಮ ಇವಳು ಬಂದರು. ನಮ್ಮ ಮಗಳು ಅಂದರು. ನಿಮ್ಮ ಮಗಳಾದರೆ ಕರೆಕೊಂಡು ಹೋಗಿ, ಅಂತ ಗುರುಗಳು ಹೇಳಿದರು. ಗಂಡ ಹೆಂಡತಿ ಎಷ್ಟು ಕರೆದರೂ ಮಗಳು ಹೋಗಲಿಲ್ಲ, ಯಾವಾಗ ವಸ್ತು ಹೋಯಿತೊ ಆಗಲೇ ಒಂದು ಯುಗಾಂತರ ತುಂಬಿತು. ಈಗ ಯಾವ ಸ್ವಾಮಿ ನನ್ನ ಪಡೆದರೊ ಅವರ ಪಾದವನ್ನು ನಂಬಿ ಬದುಕುತ್ತೀನಿ ಹೋಗಿರಿ ಎಂದಳು. ಗುರುಗಳು ಇವಳನ್ನು ದೇವರು ಮಾಡುತ್ತೀವಿ ಇವಳ ಮಠಕ್ಕೆ ಬರುವ ಹಣವನ್ನೆಲ್ಲ ನೀವೇ ಉಪಯೋಗಿಸಿ, ಮಠದ ಕಡೆ ಬಾಗಿಲಲ್ಲಿ ಇದ್ದುಕೊ ಬನ್ನಿ ಎಂದು ಗಂಡ ಹೆಂಡತಿಯರನ್ನು ಜೊತೆಗೆ ಕರೆದುಕೊಂಡು ಗುಂಬಳಪುರಕ್ಕೆ ಹೊರಟರು.

ಪ್ರೊ.ಹಿ.ಚಿ.ಬೋರಲಿಂಗಯ್ಯನವರು 'ಮಹದೇವಯ್ಯ'ನವರಿಂದ ಸಂಗ್ರಹಿಸಿರುವ 'ಮಂಟೇಸ್ವಾಮಿ' ಕಾವ್ಯದ ಪ್ರಕಾರ, ವಿಜಯನಗರದಲ್ಲಿ ಚೆನ್ನಾಜಮ್ಮನನ್ನು ಶಿಶುಮಗಳನ್ನಾಗಿ ಪಡೆದು, ಅಲ್ಲಿಂದ ಮಂಟೇಸ್ವಾಮಿಗಳು ಹಾಲುಗುರುವಿನ ಕಡೆ ಬಂದರು. ಹಾಲುಗುರು ನಿಂಗಮ್ಮನ ಮಗಳು ತುಂಬಿದ ಸೋಮವಾರ ಅಮಾವಾಸ್ಯೆಯ ದಿನ ಪ್ರಾಣ ಬಿಟ್ಟಳಂತೆ. ಹಾಲು ಗುರು ಜನ ಎಲ್ಲಾ ಸೇರಿ ಸತ್ತ ಶವವನ್ನು ಒಪ್ಪ ಮಾಡಿ ಹಿಂತಿರುಗಿದರು. ಅದೇ ಸಮಯಕ್ಕೆ ಧರೆಗೆ ದೊಡ್ಡವರು, ರಾಚಪ್ಪಾಜಿ, ಹಿರೇಚೆನ್ನಾಜಮ್ಮನನ್ನು ಕರೆದುಕೊಂಡು ಹೆಣ ಹೊತ್ತು ಕೊಂಡು ಹೋದ ಮಾರ್ಗದಲ್ಲಿಯೇ ಹೋಗಿ, ಈವತ್ತು ತುಂಬಿದ ಸೋಮವಾರ ತುಂಬಿದ ಅಮಾವಾಸ್ಯೆಯಲ್ಲಿ ಸತ್ತಂತ ಪ್ರಾಣಿ, ನಾಳೆ ದಿವಸ ನನ್ನ ಶಿಶು ಮಗಳು ಆಗುತ್ತಾಳೆಂದು ಹೇಳಿ ಶವದ ಮುಂದೆ ಹಿರೇ ಚನ್ನಾಜಮ್ಮ ಮತ್ತು ರಾಚಪ್ಪಾಜಿಯನ್ನು ಕೂರಿಸಿಕೊಂಡು, ಆರು ಸಾಸ್ತ್ರ, ಹದಿನೆಂಟು ಪುರಾಣ ಓದಿ, ಕಪ್ಪುಧೂಳ್ತವನ್ನು ತೆಗೆದು ಸಮಾಧಿಯ ಮೇಲೆ ಎಸೆದರು. ಸತ್ತಂತ ಪ್ರಾಣಿ ಕಿಲಕಿಲ ನಗುತ್ತಾ ಭೂಮಿಯಿಂದ ಮೇಲಕ್ಕೆ ಎದ್ದಳಂತೆ. ಸತ್ತಂತ ಪ್ರಾಣಿಯ ನೀನು ಪಡೆದೆಯಲ್ಲ ತಂದೆ, ನಾನು ನಿನಗೆ ಶಿಶು ಮಗಳಾಗುತ್ತೇನೆ ಎಂದರು. ನೀನು

ತುಂಬಿದ ಅಮಾವಾಸ್ಯೆಯ ಸೋಮವಾರ, ಸತ್ತು ಪ್ರಾಣವನ್ನು ಬಿಟ್ಟಿರುವುದರಿಂದ ಹಾಲುಗುರು ನಿಂಗಮ್ಮನ ಮಗಳು ಎಂಬ ಹೆಸರು ಸಮಾಧಿಯಲ್ಲಿಯೇ ಹಾಳಾಗಿ ಹೋಗಲಿ ಎಂದು ಹೇಳಿ

'ಧರೆಗೆ ದೊಡ್ಡವರ ಶಿಶು ಮಗಳು
ನಿನ್ನ 'ದೊಡ್ಡಮ್ಮತಾಯಿ' ಎಂತ
ನಾಮಕರಣ ಆಗಲವ್ವ' ||ಸಿದ್ದಯ್ಯ||

(ಮಂಟೇಸ್ವಾಮಿ, ಪುಟ ೨೧೭)

ಎಂದು ನಿನ್ನ ಭೂಲೋಕದಲ್ಲಿ ರಾಚಪ್ಪಾಜಿಯವರ ಧರ್ಮಪತ್ನಿ ಮಾಡಿ ಮುತ್ತೈದೆ ಭಾಗ್ಯ ನೀಡುವೆನೆಂದು, ದೇವ ಮಾನವರ ಮುಂದೆ, ನರಲೋಕದ ಸತ್ಯಶರಣರ ಮುಂದೆ ಧರೆಗೆ ದೊಡ್ಡವರು ರಾಚಪ್ಪಾಜಿಗೂ, ತೋಪಿನ ದೊಡ್ಡಮ್ಮತಾಯಿಗೂ ಕೈ ಹಿಡಿಸಿ ಕನ್ಯಾದಾನವನ್ನು ಮಾಡಿದರು.

"ಈ ಸಾವು ಮತ್ತು ಪುನರ್ಜನ್ಮಗಳು, ವ್ಯಕ್ತಿಯನ್ನು ಲೌಕಿಕ ಬಾಳಿನಿಂದ ಕತ್ತರಿಸಿ, ಅನುಭಾವ ದೀಕ್ಷೆ ಕೊಡುವುದರ ಸಂಕೇತಗಳು, ದೀಕ್ಷೆ ಕೊಟ್ಟ ಮೇಲೆ ಹೊಸಜನ್ಮ ಆಗುವುದರಿಂದ ಹೆಸರೂ ಬದಲಾಗಬೇಕು."[೯]

"ಮಂಟೇಸ್ವಾಮಿಗಳು ಮೂಲತಃ ದಕ್ಷಿಣದಿಂದಲೇ ಗುರುಗಳಾದ ಗುರುಬಾರಲಿಂಗಯ್ಯನವರನ್ನು ಹರಸಿಕೊಂಡು ಉತ್ತರಕ್ಕೆ ಹೋದವರು. ಕಾಯಸಿದ್ಧಿಗಾಗಿ ಕೊಡೇಕಲ್ಲು ತಲುಪಿದ ಮೇಲೆ ಅನೇಕ ಸಿದ್ಧಿಗಳನ್ನು ಪಡೆದ ನಂತರ ದಕ್ಷಿಣಕ್ಕೆ ಮತ್ತೆ ಚಲಿಸಿದ್ದಾರೆ. ಆದ್ದರಿಂದ ನೀಲಗಾರರು ಅವರ ಸಿದ್ದಿ ಪಥದ ಆರಂಭದಿಂದಲೇ ಮಂಟೇಸ್ವಾಮಿ ಕತೆಯನ್ನು ಪ್ರಾರಂಭಿಸಿದ್ದಾರೆ... ಮಂಟೇಸ್ವಾಮಿಗಳು ವಿಕ್ರಮಿಸಿದ ಈ ಸುದೀರ್ಘ ಸಿದ್ಧಿಪಥದಲ್ಲಿ ಅವರೊಟ್ಟಿಗೆ ರಾಚಪ್ಪಾಜಿ, ದೊಡ್ಡಮ್ಮತಾಯಿ, ಫಲಹಾರದಯ್ಯ ಮುಂತಾದ ಉತ್ತರದ ಶರಣರಿದ್ದರೆನ್ನುತ್ತಾರೆ."[೧೦] ಡಾ.ರಾ.ವೆಂಕಟೇಶ ಇಂದ್ವಾಡಿಯವರು.

ಈ ಶಿಶುಮಕ್ಕಳನ್ನು ಪಡೆಯುವುದೇ ಒಂದೊಂದು ಕಥಾನಕವಾಗಿ ಹೊರಹೊಮ್ಮಿದೆ. "ಎಲ್ಲಿಯೂ ಅದು ಹಿಂಸೆಯ ರೂಪ ತಾಳುವುದಿಲ್ಲ. ಆದರೆ ಮಂಟೇಸ್ವಾಮಿ ಅಹಂಕಾರಿಗಳನ್ನು ಬಿಡುವವನಲ್ಲ. ಅವರು ಎಷ್ಟೇ ದೊಡ್ಡವರಾದರೂ ಅಂಥವರ ಅಸ್ತಿತ್ವವನ್ನು ಪಲ್ಲಟಗೊಳಿಸಬಲ್ಲ ಶಕ್ತಿ ಅವನಿಗಿದೆ. ಎಂಥದ್ದನ್ನೂ ಅಧೀನ ಮಾಡಿಕೊಳ್ಳಬಲ್ಲ ಚಾತುರ್ಯವಿದೆ. ಇಂಥ ಇಕ್ಕಟ್ಟು ಬಂದಾಗಲೆಲ್ಲ ಮಲೆಯಮಾದೇಶ್ವರ ಒಬ್ಬ ಸಾಂಸ್ಕೃತಿಕ ನಾಯಕನಾಗಿ ಕಂಡರೆ ಮಂಟೇಸ್ವಾಮಿ ಒಬ್ಬ ಆಧ್ಯಾತ್ಮಕ ನೇತಾರನಾಗಿ ಕಾಣಿಸಿಕೊಳ್ಳುತ್ತಾನೆ. ಸೌಮ್ಯವಾಗಿಯೇ ಎಲ್ಲವನ್ನೂ ಅಧೀನಕ್ಕೆ ತೆಗೆದುಕೊಳ್ಳುತ್ತಾನೆ. ಯಾವುದಾದರೂ ಸಾಧ್ಯವಾಗದಿದ್ದಾಗ ಅವನು ಮೌನಿಯಾಗುತ್ತಾನೆ. ಕುಂತೂರು ಬೆಟ್ಟ ಹತ್ತುತ್ತಾನೆ, ಅದರ ತುತ್ತ ತುದಿಯಲ್ಲಿ ಕುಂತು ತನ್ನ ಭಂಗಿ ಚಿಲುಮೆ ತೆಗೆಯುತ್ತಾನೆ. ಮಂಟೇಸ್ವಾಮಿಯ ಭಂಗಿಸೇವನೆ ಕೇವಲ ಹೊಗೆ ಬಿಡುವ ಕ್ರಿಯೆ ಅಲ್ಲ. ಸಮಸ್ತ ವ್ಯಾಪಾರಗಳೂ ಅದರಲ್ಲಿ ಅಡಗಿವೆ. ಖಂಡುಗ ಗಟ್ಟಲೆ ಭಂಗಿಯನ್ನು ಇಲ್ಲವಾಗಿಸಿ ವಾಲುತ್ತ ಜೋಲುತ್ತ ಇರುವಾಗ ಅವನಿಗೆ ಪರಿಹಾರಗಳು ಹೊಳೆಯುತ್ತವೆ. ಜ್ಞಾನೋದಯವಾಗುತ್ತದೆ. ಆ ಕ್ಷಣದಲ್ಲಿ ತೆಗೆದುಕೊಂಡ ತೀರ್ಮಾನಗಳು ಫಲಿಸುತ್ತವೆ."[೧೧]

ಮಂಟೇಸ್ವಾಮಿಯವರಂತೂ, ಶಿಷ್ಟಕಾವ್ಯದ ನಾಯಕ ಲಕ್ಷಣಗಳಿಂದ ವಿಭಿನ್ನವಾಗಿ ವಿಲಕ್ಷಣ ವ್ಯಕ್ತಿತ್ವದ ನಾಯಕರಾಗಿ ಹುಟ್ಟಿ ಬಂದವರು. ಶಿಷ್ಟ ಸಂಸ್ಕೃತಿ ಯಾವುದನ್ನು ತುಚ್ಛವೆಂದು ನಿರಾಕರಿಸಿತ್ತೋ ಅಂತಹ ವಸ್ತುಗಳನ್ನೇ ತನ್ನ ಪರಂಪರೆಯ ಧಾರ್ಮಿಕ ಸಂಕೇತಗಳಾಗಿ ಮಾರ್ಪಡಿಸಿಕೊಂಡವರು.

ಮಂಟೇಸ್ವಾಮಿಗಳಿಂದ ಪ್ರಾರಂಭವಾಗುವ ಮಂಟೇಸ್ವಾಮಿ ಕಥಾನಕ ಪ್ರಥಮ ಘಟ್ಟದಲ್ಲಿ ಮಂಟೇಸ್ವಾಮಿಗಳು ಕಥಾನಾಯಕರಾದರೆ ನಂತರದ ಭಾಗದಲ್ಲಿ ಶಿಶುಮಗ ಸಿದ್ದಪ್ಪಾಜಿ ಕೆಂಪಣ್ಣನಿಂದ ಹಲಗೂರು ಪವಾಡಗಳನ್ನು ಮಾಡಿಸುತ್ತಾರೆ. ಕತೆ ಮುಂದುವರಿಯುತ್ತದೆ. "ಹಲಗೂರಿನಿಂದ ನಗಗಳನ್ನು ಪಡೆದುದ್ದು, ಈ ಕಾವ್ಯದ ಅತ್ಯಂತ ಉಜ್ವಲವಾದ ಭಾಗ. ಸಿದ್ದಪ್ಪಾಜಿ ಈ ಕಾವ್ಯದಲ್ಲಿ ಶಕ್ತಿ ಸಾಮರ್ಥ್ಯದ ಸಾಕಾರಮೂರ್ತಿಯಾಗಿ, ಶಾಂತಿ ಸಂಯಮಗಳ ಸೊಬಗಿನ ಶಿಖರವಾಗಿ ಗೋಚರಿಸುತ್ತಾನೆ... ಇದು ಕಾವ್ಯದ ಎರಡನೆಯ ಘಟ್ಟ."[೧೩]

ಕೊನೆಗೆ ಧರೆಗೆ ದೊಡ್ಡವರೊಬ್ಬರೇ ಅಲ್ಲದೆ, ಕಾವ್ಯದ ಶರಣರೆಲ್ಲಾ ಪಾತಾಳ ಬಾವಿಯಲ್ಲಿ ಸೇರುವ ಮೂಲಕ ಕತೆ ಮುಗಿಯುತ್ತದೆ. ಈ ಕಥಾನಕದಲ್ಲಿ ಬರುವ ಅನೇಕ ಉಪನಾಯಕ ನಾಯಕಿಯರ ಪಾತ್ರಗಳಲ್ಲೆಲ್ಲಾ ಸೇರಿ ಧರೆಗೆ ದೊಡ್ಡವರ ಕತೆ ಮೈದಾಳಿದೆ.

ರಾಜಬೊಪ್ಪನಗೌಡನಪುರದಲ್ಲಿ ನೆಲೆ ನಿಂತ ಮೇಲೆ, ಸ್ವಯಂಭೂ ಜಗಜ್ಯೋತಿ ಧರೆಗೆ ದೊಡ್ಡಯ್ಯನವರು ಉರಿ ಗದ್ದುಗೆಯ ಮೇಲೆ ಕುಳಿತು ದೊಡ್ಡಮ್ಮತಾಯಿಗೆ ನರರು ಚಿಂತಿಸುವ ರೀತಿಯಲ್ಲಿ ಹೇಳುವ ಮಾತು ಕುತೂಹಲಕಾರಿಯಾದುದು. ದೊಡ್ಡಮ್ಮತಾಯಿ ನನಗೆ ಈಗ ಅರವತ್ತು ವರ್ಷ ಕಳೆಯುತ್ತಾ ಬಂತು, ಅರಳೋ ಮರಳೋ ಎನ್ನುವಂತೆ ಆಗಿದೆ. ನನಗೆ ಕಂಡಾಯ, ತಂಬೂರಿ ತೆಗೆದುಕೊಂಡು ಗ್ರಾಮಗಳಲ್ಲಿ ದಾನಕ್ಕೆ ಹೋಗಲು ಕಣ್ಣುಗಳು ಕಾಣದ ಹಾಗೆ ಆಗಿದೆ, ಕಿವಿ ಕೇಳುವುದಿಲ್ಲ, ಸೋಮವಾರ, ಶುಕ್ರವಾರ ನಮಗೆ ಪೂಜೆ ಮಾಡುವವರಿಲ್ಲ, ಪುಷ್ಪ ತರುವವರಿಲ್ಲ, ಇವೆಲ್ಲ ಕೆಲಸಗಳಿಗೆ ಒಬ್ಬ ಮಗನನ್ನು ಪಡೆಯಬೇಕಾಗಿದೆ ಎನ್ನುತ್ತಾರೆ. ಕೆಂಪಣ್ಣ ಎಂಬ ಅನುದಾನದಿಂದ ಮಳವಳ್ಳಿಯ ಹತ್ತಿರದ ನಿಡುಘಟ್ಟದಲ್ಲಿ ವಿಶ್ವಕರ್ಮ ಕುಟುಂಬದಲ್ಲಿ ಬಾಚಿ ಬಸವಯ್ಯ ಮುದ್ದಮ್ಮರ ಮಗನಾಗಿ ಬೆಳೆಯುತ್ತಿರುವ, ಕಲ್ಯಾಣದ ಕಡೆಯ ಬಾಗಿಲಲ್ಲಿದ್ದ ಬಸುವಲಿಂಗನನ್ನು ಶಿಷ್ಯನಾಗಿ ಪಡೆಯುವುದಾಗಿ ಹಿಂದೆ ಹೇಳಿದ್ದನ್ನು ನೆನಪಿಸಿಕೊಂಡು, ಅಲ್ಲಿ ಹೋಗುವುದಾಗಿ ದೊಡ್ಡಮ್ಮತಾಯಿಗೆ ಹೇಳುತ್ತಾರೆ. ಆಗ ದೊಡ್ಡಮ್ಮತಾಯಿ, ಹೆತ್ತಂತ ಮಗನ, ಸಾಕಿದ ಮಗನ ಯಾರು ತಾನೆ ದಾನ ಮಾಡಿಯಾರು ಸ್ವಾಮಿ ಎಂದಾಗ, ನಾನು ಅವರಿಗೆ ಭಾಗ್ಯ ಕೊಟ್ಟಿದ್ದೀನಿ, ಮಗನ ದಾನ ಕೊಟ್ಟರೆ ಇನ್ನೂ ಹೆಚ್ಚಿನ ಭಾಗ್ಯ ನೀಡಿವೆ ಎಂದಾಗ, 'ಮುತ್ತುರತ್ನಕ್ಕಿಂತ ಮಕ್ಕಳ ಮುತ್ತು ಬಹಳ ದೊಡ್ಡದು' ಎನ್ನುವ ದುಡವುಳ್ಳ ದೊಡ್ಡಮ್ಮ. ತಾಯಿಯ ತಾಯ್ತನದ ವಿಶಾಲದೃಷ್ಟಿಕೋನ ಉಲ್ಲೇಖನೀಯ. ದೊಡ್ಡಮ್ಮನಿಗೆ ಧರೆಗೆ ದೊಡ್ಡವರು ಆಶೀರ್ವದಿಸಿ ನಿಡುಘಟ್ಟದ ಮುದ್ದೋಜಿಯ ಬಳಿಗೆ ಹೊರಡುತ್ತಾರೆ.

ಮಂಟೇಸ್ವಾಮಿಯ ಕಾವ್ಯ ಉತ್ಕರ್ಷವನ್ನು ಎಟುಕಿಸಿ ಕೊಳ್ಳುವುದು ಕೆಂಪಣ್ಣ ಸಿದ್ದಪ್ಪಾಜಿಯಾಗಿ ಪ್ರವೇಶ ಪಡೆದ ನಂತರ, ಮುದ್ದಿನ ಮಗ ಏಳು ವರ್ಷದ ಕೆಂಪಣ್ಣನನ್ನು ದಾನವಾಗಿ ಕೊಡಲೊಪ್ಪದ ಮುದ್ದಮ್ಮಗೆ ಮಂಟೇಸ್ವಾಮಿ ಅವನ ಮನೆ ದೇವತೆ, ಮಾರಳ್ಳಿಯ ಕುರುಡು ಮಾರಿಯ ಮೂಲಕ ಮನೆ ಮಠ ಐಶ್ವರ್ಯವನ್ನು ನಾಶ ಮಾಡಿಸಿ, ದುರಹಂಕಾರಿಯಾದ ಕೆಂಪಣ್ಣನಿಗೆ ಹುಚ್ಚು ಬೆಪ್ಪು ಬರಿಸಿ, ಕುಂತೂರು ಬೆಟ್ಟದ ದಿಕ್ಕಿನಲ್ಲಿ ನಡೆಸಿಕೊಂಡು ಹೊರಟರು. 'ನಸುಗ್ಯಾನ' ಕೊಟ್ಟರೂ ಶಿಷ್ಯನಾಗಲು ನಿರಾಕರಿಸಿ, ಗುರುವನ್ನು ಅಣಕಿಸಿದಾಗ, ಧರೆಗೆ ದೊಡ್ಡವರು, ಕುಂತೂರು ಬೆಟ್ಟದ ಗವಿಗೆ ಕೂಡಿ ಮರಳಿದರು.

ಮಂಟೇಸ್ವಾಮಿ ಕಾವ್ಯದ ಉಜ್ವಲ ಭಾಗಗಳಲ್ಲಿ ಕುಂತೂರು ಬೆಟ್ಟದ ಪಾತಾಳ ಗವಿಯಲ್ಲಿ ಸಿದ್ದಪ್ಪಾಜಿಯನ್ನು ಹನ್ನೆರಡು ವರ್ಷ ಸೆರೆ ಹಾಕಿದ್ದ ಸನ್ನಿವೇಶ ಬಹಳ ಮುಖ್ಯವಾದುದು. ''ತನ್ನ ಪೂರ್ವಾಶ್ರಮದ ಲೌಕಿಕ ಜೀವನದ ಮಲಿನತೆಯನ್ನೆಲ್ಲ ತೊಳೆದುಕೊಂಡು ಹನ್ನೆರಡು ವರ್ಷಗಳ ಸುದೀರ್ಘ ತಪಸ್ಸಿನ ಅಗ್ನಿಯಲ್ಲಿ ಸಂಸ್ನಾತನಾಗಿ ದಿವ್ಯ ತೇಜಸ್ಸಿನಿಂದ ಕೆಂಪಣ್ಣ ಎಂಬ ತನ್ನ ಲೌಕಿಕ ಹೆಸರನ್ನು ಕಳೆದುಕೊಂಡು ಧರೆಗೆ ದೊಡ್ಡವರ ಶಿಷ್ಯನಾಗಿ, ಸಿದ್ದಪ್ಪಾಜಿಯಾಗಿ ಹೊರಬರುವ ಸುಮುಹೂರ್ತ ಅತ್ಯಂತ ಭವ್ಯತಮವಾಗಿ ರಮಣೀಯವಾಗಿ ವರ್ಣಿತವಾಗಿದೆ. ಇಲ್ಲಿ ಬರುವ ಸಿದ್ದಾಪ್ಪಾಜಿಯವರ ವರ್ಣನೆ ರಸರೋಮಾಂಚನವನ್ನು ತರುವಂಥದು, ಬೆರಗುಪಡಿಸುವಂಥದು.''[೭೩]

ಹನ್ನೆರಡು ವರ್ಷಕ್ಕೆ ಒಂದು ದಿನ ಕಡಿಮೆಯಾದಾಗ ದೀಕ್ಷೆ ಕೊಡಬೇಕೆಂದು, ದೊಡ್ಡಮ್ಮನಿಗೆ ಕೆಂಪಾಚಾರಿಯನ್ನು ಕರೆಯಲು ಧರೆಗೆ ದೊಡ್ಡವರು ಹೇಳುತ್ತಾರೆ. ಕೆಂಪಾಚಾರಿ ಎಂದಾಗ ಬರುವುದಿಲ್ಲ. ಆಚಾರಿ ಮಗನೇ ಬಾ ಎಂದಾಗ ಬರುವುದಿಲ್ಲ.

'ಅಯ್ಯಾ ಸಿದ್ದಪ್ಪಾಜಿ ಎಂದಾ ಮೇಲೆ
ದಡಾಬಡನೆ ಎದ್ದಾನಂತೆ ‖ಸಿದ್ದಯ್ಯಾ‖'

(ಮಂಟೇಸ್ವಾಮಿ, ಪುಟ ೫೯೩)

ಕಾಳಿಂಗನ ಗವಿಯ ಬಾಯಿಗೆ ಆನೆ ಗಾತ್ರದ ಗುಂಡು ಮುಚ್ಚಿತ್ತು ಏನು ಮಾಡಬೇಕೆಂದು ತೋಚದೆ ಸಿದ್ದಪ್ಪಾಜಿ ಎನ್ನುವ ಶಬ್ದ ಕಿವಿಗೆ ಬಿದ್ದ ಗಳಿಗೆಯಲ್ಲಿ, ಒಂದು ಭಯಂಕರ ಗುಟುರೆ ಹಾಕಿದ್ದಾರೆ, ಗವಿಯ ಬಾವಿಗೆ ಮುಚ್ಚಿದ್ದ ಗುಂಡು

'ಅದು ದೊಡ್ಡಮ್ಮತಾಯಿ ಏರಿ ಮೇಲೆ
ದಡ ದಡನೆ ಉರುಳುತಾದೆ ‖ಸಿದ್ದಯ್ಯ‖

ಅದು ಬುಗುರಿ ತಿರುಗಿದಂಗೆ ದೇವಾ
ಬುಗುಬುಗನೆ ತಿರುಗುತಾದೆ ‖ಸಿದ್ಧಯ್ಯ‖'

(ಮಂಟೇಸ್ವಾಮಿ, ಪುಟ ೫೯೪)

ತೋಪಿನ ದೊಡ್ಡಮ್ಮ ಮುತ್ತೈದೆ ಸ್ಥಾನದಲ್ಲಿ ಮುಟ್ಟಿ ಪೂಜೆ ಮಾಡಿದ ಬಳಿಕ ತಿರುಗುತ್ತಿದ್ದ ಪಡಗುಂಡು ಗರಕ್ಕನೆ ನಿಂತಿತು. ಗವಿಯಿಂದ ಸಿದ್ದಪ್ಪಾಜಿ ಎದ್ದು ಬರುವ ರೀತಿಯನ್ನು ನೀಲಗಾರರು ಅದ್ಭುತವಾಗಿ ಚಿತ್ರಿಸುತ್ತಾರೆ. ಆತನ ಭಯಂಕರ ರೂಪವನ್ನು ನೋಡಿ ದೊಡ್ಡಮ್ಮತಾಯಿ ಹೆದರಬಹುದೆಂದು, ಮಂಟೇಸ್ವಾಮಿಗಳು, ಆಕೆಗೆ ಎದುರಿಗೆ ಬರಬೇಡ, ಮರೆಯಾಗಿರು ಎನ್ನುತ್ತಾರೆ. ಯಾವ ಹೆಣ್ಣೇ ಆಗಲಿ, ತನಗೆ ಬೇಕಾದವರನ್ನು ಭಯಂಕರ ರೂಪದಲ್ಲಿ ನೋಡಲಿಚ್ಛಿಸುವುದಿಲ್ಲ. ಸಿದ್ದಪ್ಪಾಜಿಯವರಿಗೆ ವಿಧಿ ಬದ್ದವಾಗಿ ದೀಕ್ಷಾ ಆಚರಣೆಯನ್ನು ತಂದೆ ತಾಯಿಯ ಸ್ಥಾನದಲ್ಲಿ ನಿಂತು, ರಾಚಪ್ಪಾಜಿ-ದೊಡ್ಡಮ್ಮತಾಯಿ ನೆರವೇರಿಸುತ್ತಾರೆ. ಧಾರೆಯೆರೆದು ಕೊಡುವಾಗ ಕೆಂಪಾಚಾರಿ ತನ್ನ ಸಂಬಂಧಗಳನ್ನೆಲ್ಲಾ ನೆನಪಿಸಿಕೊಳ್ಳುತ್ತಾ ನನಗೆ ಸೋದರ ಹುಳಿ ಬಿಡುವ

ಮಾವ ಇಲ್ಲವಲ್ಲಾ ಎಂದು ಶೋಕ ಮಾಡುತ್ತಾನೆ. ಆಗ ದೊಡ್ಡಮ್ಮತಾಯಿ ಎಲ್ಲ ಸಂಬಂಧಗಳು ನಾವೇ ಎಂದು ಸಂತೈಸುತ್ತಾಳೆ. ಸಿದ್ದಪ್ಪಾಜಿಯವರಿಗಾದ ದೀಕ್ಷಾ ವಿಧಾನವನ್ನೇ ಮಂಟೇಸ್ವಾಮಿ ಒಕ್ಕಲಿನವರು ತಮ್ಮ ಮಕ್ಕಳಿಗೆ ದೀಕ್ಷೆ ಕೊಡುವಾಗ ಅನುಸರಿಸುತ್ತಾರೆ. "ಮಂಟೇಸ್ವಾಮಿಗಳು ಶಿಷ್ಯರನ್ನು ಪಡೆದ ಸಾಹಸ ಪ್ರಸಂಗ ಗಳಲ್ಲಿ ಅವರ ತಾಳ್ಮೆಗೆ ದೊಡ್ಡ ಸವಾಲಾಗಿ ನಿಂತ ಸನ್ನಿವೇಶ ಸಿದ್ದಾಪ್ಪಾಜಿಯನ್ನು ಗೆದ್ದುಕೊಂಡದ್ದು, ತಮ್ಮ ಮೆಚ್ಚಿನ ವ್ಯಕ್ತಿಯನ್ನು ಶಿಷ್ಯನನ್ನಾಗಿ ಪಡೆಯುವಾಗ ತುಸು ಕಠಿಣ ರೀತಿಯಲ್ಲೇ ಗುರು ವರ್ತಿಸುತ್ತಾರೆ. ಅದು ಅಪ್ರಕೃತವಲ್ಲ, ಅದು ಅನಿವಾರ್ಯವೂ ಆಗುತ್ತದೆ."[೧೪]

ಸಿದ್ದಪ್ಪಾಜಿಯ ಹನ್ನೆರಡು ವರ್ಷಗಳ ದೀರ್ಘ ತಪಸ್ಸು ತುಂಬಾ ಭಯಂಕರವಾದುದು. ಕೆಂಪಾಚಾರಿ ಯಾಗಿದ್ದವನು 'ಸಿದ್ದಪ್ಪಾಜಿ'ಯಾಗಿ ಪರಿವರ್ತಿತವಾಗುವ ಅವಧಿ ಮಂಟೇಸ್ವಾಮಿಯ ಸಾಧನೆಯ ಫಲ. ತಪಸ್ಸಿನ ಈ ಕಾಲ ಸಾಂಸ್ಕೃತಿಕವಾದ ಕಾಲ ಘಟ್ಟಗಳ ದೃಷ್ಟಿಯಿಂದ ಮುಂಬರುವ ಹಲಗೂರು ಪವಾಡಗಳಿಗೆ, ಸಾಂಕೇತಿಕ ಸಿದ್ಧತೆ.

ಒಮ್ಮೆ ಬೊಪ್ಪಣಪುರದ ಊರ ಅಂಕಣದಲ್ಲಿ ಕಲಿಯ ಆಗಮನದ ಕುರುಹು ಬಂದಿತು. 'ಹೆಗಲ ಮೇಲೆ ಹೆಂಡತಿ, ಕಾಲು ನಡಿಗೆಯಲ್ಲಿ ತಾಯಿ, ಆ ಅಜ್ಜಿಯ ಕೈಯಲ್ಲಿ ಹೆಂಡತಿಯ ಪಾದರಕ್ಷೆ' ಹೀಗೆ ಕಾಣಿಸಿಕೊಂಡ ಕಲಿಪುರುಷನನ್ನು ಮಡಿವಾಳ ಮಾಚಯ್ಯ, ಬೊಪ್ಪಗೌಡನ ಪುರದ ಊರ ಮುಂದೆ ಕಲ್ಲಾಗಿ ನಿಲ್ಲಿಸಿ ಗುರುವಿಗೆ ಬಂದು ಅರಿಕೆ ಮಾಡಿಕೊಂಡ. ಇಂಥ ಕಲಿಕಾಲ ಬಂದ ಮೇಲೆ ಆಗುವ ಅನ್ಯಾಯಗಳನ್ನು ಕಣ್ಣಿಂದ ನೋಡಲಾರೆ ನೆಂದರು, ಮಂಟೇಸ್ವಾಮಿ, ಸ್ವಯಂಭೂ ಜಗಜ್ಯೋತಿ ಧರೆಗೆ ದೊಡ್ಡವರು, 'ಈಗ ಎಲ್ಲಿಂದ ಎಲ್ಲಿಗೆ ನಾವು ಹೋಗಬೇಕು' ಎಂದು ಚಿಂತಿಸುತ್ತಾ, ಕೊನೆಯಲ್ಲಿ 'ನರಲೋಕದ ಆಟ ನನಗೆ ಇಂದಿಗೆ ಸಾಕಾಯ್ತು' ಎಂದು ಪಾತಾಳಭೂಮಿಗೆ ಹೊರಟು ಹೋಗುವುದಾಗಿ ಹೇಳುತ್ತಾರೆ. ದೈವೀಕರಣ-ಮಾನುಷೀಕರಣ ಈ ಎರಡು ಪ್ರಕ್ರಿಯೆಗಳ ನಡವೆ ಜನಪದ ನಾಯಕರು ಸದಾ ಓಲಾಡುವ ಕ್ರಿಯೆ ಇದು. ಪಾತಾಳಭೂಮಿಯಲ್ಲಿ ಪವಡಿಸಲು ಮಂಟೇಸ್ವಾಮಿಗಳು ನಿರ್ಧರಿಸಿದರು. ಅಂಥ ಬಾವಿಯೊಂದನು ಸಿದ್ಧಗೊಳಿಸಲು ಒಂಬತ್ತು ಬಗೆಯ ಸಲಕರಣೆಗಳು ಬೇಕಾದುದರಿಂದ, ಕಡೆಯ ಬಾಗಿಲಲ್ಲಿ ಮಲಗಿದ್ದ ಸಿದ್ದಪ್ಪಾಜಿಯನ್ನು ಏಳಿಸಿಕೊಂಡು ಬರಲು ಶಿಷ್ಯರನ್ನು ಕಳಿಸಿದರು. ಗುರುವಿನ ಆಶಯದಂತೆ ಶಿಷ್ಯ ಸಿದ್ದಪ್ಪಾಜಿ ಹಲಗೂರಿಗೆ ಹೋಗಿ ಪಾಂಚಾಳರಿಂದ ಕಬ್ಬಿಣ ಭಿಕ್ಷೆ ತರಬೇಕಾಯಿತು. ಪಾಂಚಾಳರಿಗೆ ಕಬ್ಬಿಣ ಎಂದರೆ ಕರಿಯ ಚಿನ್ನ. ಹಲಗೂರಿನಲ್ಲಿ ಏಳುನೂರ ಐವತ್ತು ಒಕ್ಕಲು. ಪಾಂಚಾಳರಿಗೆ ಏಳು ಮಂದಿ ದಣಿಗಳು. ಏಳು ಬೀದಿಗಳಿಗೆ ಒಬೊಬ್ಬರು ಒಡೆಯರು. ಅವರನ್ನು ಆಶ್ರಯಿಸಿ ಒಂಬತ್ತು 'ಲಗ' ತೆಗೆದುಕೊಂಡು, ಚಿನ್ನದ ತೊಟ್ಟಿಲು, ಬೆಳ್ಳಿಯ ನೇಕ ಮಾಡಿಸಿ, ಚಿನ್ನದ ತೂಗು ದೀವಿಗೆ, ಚಿನ್ನದ ಸರಪಣಿಯನ್ನು ತರಬೇಕೆಂದು ಗುರುವಿನ ಅಪ್ಪಣೆಯಾಯಿತು. ತನ್ನ ಕುಲಸ್ಥರ ಊರಿಗೆ ಶ್ರೀಮಂತಿಕೆಯ ಮದದಲ್ಲಿ ಮೆರೆಯುತ್ತಿರುವ ಪಾಂಚಾಳರ ಬಳಿಗೆ ಹೋಗಲು ಸಿದ್ದಪ್ಪಾಜಿ ಹಿಂದೆಗೆದರೂ ಗುರು ಧೈರ್ಯವನ್ನು ತುಂಬಿದರು. ಮೂರು ದಿನದಲ್ಲಿ ಹಲಗೂರಿನವರನ್ನು ಒಲಿಸಿಕೊಂಡು ಬರಬೇಕೆಂಬುದು ಗುರುವಿನ ಆದೇಶ. ಗುರುಪಾದಕ್ಕೆ ಅಡ್ಡ ಬಿದ್ದು ಕಣ್ಣೀರು ಮಿಡಿಯುತ್ತಾ ತೋಪಿನ ದೊಡ್ಡಮ್ಮನವರ ಹತ್ತಿರ ಬಂದರು. ಗುರುವಿನ ಅಪ್ಪಣೆ ತಿಳಿಸಿದರು. ಪಾಂಚಾಳರಿಗೆ ಕಬ್ಬಿಣ ಕೊಟ್ಟು ಬುಟ್ರೆ ನಮ್ಮ ಕಬ್ಬಿಣ ಭಿಕ್ಷೆ

ಪಡೆಯಲು ಸಾಧ್ಯವೇ ಅವ್ವಾ, ನೀನಾದರೂ ನನ್ನ ಪ್ರಾಣ ಉಳಿಸು ಎಂದು ಬೇಡುತ್ತಾರೆ. ದೊಡ್ಡಮ್ಮತಾಯಿ ಧರೆಗೆ ದೊಡ್ಡವರ ಸ್ಥಾನಮಾನಗಳನ್ನು ಜ್ಞಾಪಿಸುತ್ತಾಳೆ.

'ಧರೆಗೆ ದೊಡ್ಡವರು ಅಂದರೆ ಕಂದ
ನಿನಗೂ ದೊಡ್ಡವರು
ನಮಗೂ ದೊಡ್ಡವರು
ಈ ಭೂಮಿಗೆ ದೊಡ್ಡವರ ಮಾತ
ಮೀರುವುದು ಉಂಟಾ ಮಗನೇ ||ಸಿದ್ದಯ್ಯಾ||'

(ಮಂಟೇಸ್ವಾಮಿ, ಪುಟ ೬೬೮)

ಎನ್ನುತ್ತಾ,

ಸಿದ್ದಪ್ಪಾಜಿಯವರಿಗೆ ಧೈರ್ಯ ಹೇಳುತ್ತಾಳೆ. ಹೆದರದೆ ಹೋಗಿ ಬನ್ನಿ. ನಮ್ಮ ಧರೆಗೆ ದೊಡ್ಡವರಿಗೆ ಎಲ್ಲವೂ ಗೊತ್ತಿದೆ. ನಿಮಗೆ ಎಲ್ಲರ ಆಶೀರ್ವಾದವಿದೆ. ನಿಮ್ಮ ಮೈಯ ಕೂದಲು ಕೊಂಕುವುದಿಲ್ಲ. ಪಂಚಾಳರೆಲ್ಲರೂ ನಿಮ್ಮ ಒಕ್ಕಲಾಗುತ್ತಾರೆ. ನಿಮ್ಮ ಪಾದ ಸೇವೆ ಮಾಡುತ್ತಾರೆ. ನಮ್ಮ ಮಠಕ್ಕೆ ಕಪ್ಪಕಾಣಿಕೆ ಕೊಡುತ್ತಾರೆ. ಈ ತಾಯ ಧೈರ್ಯದ ನುಡಿಗಳು ಸಿದ್ದಪ್ಪಾಜಿಗೆ ಸ್ಫೂರ್ತಿ ತುಂಬಿತು. ಉತ್ಸಾಹದ ಕಾರಂಜಿ ಪುಟಿಯಿತು. ಗೆಲ್ಲುವೆನೆಂದು ಆತ್ಮವಿಶ್ವಾಸ ಉಂಟಾಯಿತು.

ದೊಡ್ಡಮ್ಮತಾಯಿ ಹಲಗೂರಿನ ಪವಾಡಕ್ಕೆ ಸಿದ್ದಾಪ್ಪಾಜಿ ಹೋಗುವ ಮೊದಲು ಮಠದ ಬಾಗಿಲ ಮುಂದೆ ಸಾರಿಸಿ, ರಂಗೋಲೆ ಬಿಟ್ಟು ಹಸೆಮಣೆ ಹಾಕಿ, ಸಿದ್ದಪ್ಪಾಜಿಯವರನ್ನು ಕೂರಿಸಿ, ಪನ್ನೀರು ಹಾಕಿ, ಮಂಗಳಾರತಿ ಎತ್ತಿ, ಪಾದಪೂಜಿಸಿ, ಬಸವಣ್ಣನ ಹೆಸರಿನಲ್ಲಿ ಬಸ್ಮಾಂಗ ಧರಿಸಿ, ಲಿಂಗ ಪೂಜೆ ಮಾಡಿ, ಹರಿಸಿ, ಮೊದಲ ಭಿಕ್ಷೆ ನೀಡಿ ಹರಸಿದ್ದಾರೆ. ದೈವತ್ವದ ನೆಲೆಯಲ್ಲಿ ಇರುವ ದೊಡ್ಡಮ್ಮತಾಯಿ, ಹಲಗೂರಿನಲ್ಲಿ ನಡೆಯುವ ಘಟನೆಗಳನ್ನು ಸೂಚಕವಾಗಿ ತಿಳಿಸುತ್ತಾರೆ. ಹಲಗೂರಲ್ಲಿ ಪಾಂಚಾಳದವರು ಒಂಬತ್ತು ಪವಾಡಗಳನ್ನು ಮಾಡಿಸುತ್ತಾರೆ.

'ಆ ಒಂಬತ್ತು ಪವಾಡಕ್ಕೂವೆ
ನಾನೆ ತಾನೆ ಬರುವುತೀನಿ ||ಸಿದ್ದಯ್ಯ||'

(ಮಂಟೇಸ್ವಾಮಿ, ಪುಟ ೬೬೮)

ನೀನು ಒಬ್ಬನೇ ಹೋಗುತ್ತಿರುವೆ ಎಂದು ತಿಳಿಯಬೇಡ, ನಿನ್ನ ಜೊತೆಯಲ್ಲಿ ಯಾರ‍್ಯಾರು ಬರ‍್ತಾರೆ ಅಂದರೆ,

ನಿನ್ನ ಬಸುಮಂಗದಲ್ಲಿ ಕಂದ
ಬಸುವಣ್ಣ ಬರುವುತಾರೆ ||ಸಿದ್ದಯ್ಯ||
ನಿನ್ನ ಕಪ್ಪಿನ ಸಾಧನೆವೊಳಗೆ
ರಾಚಪ್ಪಾಜಿ ಬರುವುತಾರೆ ||ಸಿದ್ದಯ್ಯ||

ನಿನ್ನ ರುದ್ರಾಕ್ಷಿ ಸರದಲ್ಲಿ
ಚನ್ನಾಜಮ್ಮ ಬರುವುತಾಳೆ ॥ಸಿದ್ದಯ್ಯ॥
ನಿನ್ನ ಹೃದಯ ಹೃದಯಾಕೆ ಕಂದ
ನಾನು ತಾನೆ ಬರುವುತೀನಿ ॥ಸಿದ್ದಯ್ಯ॥
ನಿನ್ನ ಉರಿಯ ಕಂಡಾಯದಲ್ಲಿ
ಮಂಟೇಸ್ವಾಮಿ ಬರುವುತಾರೆ ॥ಸಿದ್ದಯ್ಯ॥'

(ಮಂಟೇಸ್ವಾಮಿ, ಪುಟ ೬೬೯)

ಸಿದ್ದಪ್ಪಾಜಿಯ ದೇಹ-ಮನಸ್ಸುಗಳನ್ನು ಪುಟವಿಟ್ಟ ಚಿನ್ನದಂತೆ ಹದಗೊಳಿಸಿ, ಅವರನ್ನು ಕಬ್ಬಿಣ ಭಿಕ್ಷೆ ತರುವ ಮಹತ್ತರ ಜವಾಬ್ದಾರಿಗೆ ಸಿದ್ಧಪಡಿಸುವಲ್ಲಿ ದೊಡ್ಡಮ್ಮತಾಯಿಯ ಪಾತ್ರ ಹಿರಿದು.

ಕುಂತೂರು ಬೆಟ್ಟದ ಮೇಲೆ ನಿಂತು ಹಲಗೂರನ್ನು ನೋಡಿದ ಸಿದ್ದಪ್ಪಾಜಿಯವರಿಗೆ ಬಹಳ ಭಯವಾಗುತ್ತದೆ. ದೊಡ್ಡಮ್ಮತಾಯಿಗೆ ಮಂಟೇಸ್ವಾಮಿಗಳು, 'ನನ್ನ ನಿಸಾನಿ ದಳವನ್ನು ಆಕಾಸಕ್ಕೆ ಏರಿಸಲು' ಹೇಳುತ್ತಾರೆ. ನಿಸಾನಿ ದಳವನ್ನು ನೋಡಿ ಕೈ ಮುಗಿದರೂ, ಪಾಂಚಾಳರ ಹತ್ತಿರ ಹೋಗಿ ಧರ್ಮ ಕೇಳಲು ಶಕ್ತಿ ಬರುವುದಿಲ್ಲ. ಕೊನೆಗೆ ಬಳೆಗಾರನ ವೇಷದಲ್ಲಿ ಹಲಗೂರನ್ನು ಪ್ರವೇಶಿಸುತ್ತಾರೆ. ಹಲಗೂರಿನ ಪ್ರವೇಶದಲ್ಲಿ ಮಾರಿಯ ರೊಂದಿಗೆ ಘರ್ಷಣೆ, ಈತನಿಗೆ ಹೆದರಿ ಮಾರಿಯರ ಶರಣಾಗತಿ ಮಾಯದ ಮತ್ತು ರತುನದ ಬಳೆಗಳ ವರ್ಣನೆ ಇವೆಲ್ಲವೂ ಕಾವ್ಯದಲ್ಲಿ ಅದ್ಭುತವಾಗಿ ದಾಖಲಾಗಿದೆ. ಪಾಂಚಾಳದೊರೆಗಳ ಹೆಂಡತಿಯರಿಗೆ ಬಳೆ ತೊಡಿಸಿದ ನಂತರ, ಬಳೆಗಳಿಗೆ ತಗಲುವ ದುಡ್ಡಿನ ಬದಲಾಗಿ

'ಅಷ್ಟೂ ದುಡ್ಡುಗೆ ಕಬ್ಬಿಣವಾ
ಕೊಟ್ಬುಡ್ರಕ್ಕ ಎಂದಾರಲ್ಲ ॥ಸಿದ್ದಯ್ಯ॥'

(ಮಂಟೇಸ್ವಾಮಿ, ಪುಟ ೭೨೬)

"ಸಿದ್ದಪ್ಪಾಜಿ ಕೇಳುವ ಕಬ್ಬಿಣದ ಭಿಕ್ಷೆ ತೀರಾ ಸಾಂಕೇತಿಕವಾಗಿದೆ. ಕಾಡು ನಾಡಾಗಿ ಪರಿವರ್ತಿತವಾಗುತ್ತಿರುವ, ಆಹಾರ ಸಂಗ್ರಹಕಾರರು ಮತ್ತು ಪಶುಸಂಗೋಪಕರು ಕೃಷಿಯ ಕಡೆಗೆ ವಾಲುವ ಮತ್ತು ಈಗಾಗಲೇ ಕೃಷಿಕ ರಾಗಿದ್ದವರು ತಮ್ಮ ವ್ಯವಸಾಯಕ್ಕೆ ಕಬ್ಬಿಣದ ಉಪಯೋಗ ಮಾಡಿಕೊಳ್ಳುವ ಸಂಕ್ರಮಣ ಕಾಲದಲ್ಲಿ ಕಬ್ಬಿಣಕ್ಕೆ ಇದ್ದ ಬೇಡಿಕೆಯನ್ನು ಹಾಗೂ ಕಬ್ಬಿಣ ಉತ್ಪಾದಿಸುವವರಿಗೆ ಇದ್ದ ಹೆಚ್ಚುಗಾರಿಕೆಯನ್ನು ನಾವು ಗಮನಿಸ ಬೇಕಾಗುತ್ತದೆ. ಹೀಗಾಗಿಯೇ ಪಾಂಚಾಳರು ದೊರೆಗಳಾಗಿ ಮೆರೆಯುತ್ತಿರುತ್ತಾರೆ. ಇಂಥವರಿಂದ ಕಬ್ಬಿಣದ ಭಿಕ್ಷೆ ಪಡೆಯುವುದೆಂದರೆ ಅವರನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುವುದೆಂದೇ ಅರ್ಥ."[೧೫] ಇದೊಂದು ತನ್ನ ಕುಲದವರ ಆರ್ಥಿಕ ಚಟುವಟಿಕೆಯ ಮೇಲೆ ನಡೆಸುವ ದಂಗೆ.

ಹಣ ಬಿಟ್ಟು ಕಬ್ಬಿಣ ಕೊಡಲೊಪ್ಪುವುದಿಲ್ಲ ದೊರೆಸಾನಿಯರು. ಸಿದ್ದಪ್ಪಾಜಿ ರಾಜಬೀದಿಗೆ ಬಂದು ಕಪ್ಪುಧೂಳ್ತವ ಏಳುಮಂದಿ ದೊರೆಸಾನಿಗಿತ್ತಿರ್‍ಗೆ ಎರಚಿದರು. ಆಗ ತೋಡಿಸಿರುವ ಬಳೆಗಳೆಲ್ಲವೂ ಹಾವು ಚೇಳು, ಕಡಜನ ಮರಿ, ಹೆಜ್ಜೇನು, ಕಿರುಜೇನು ಆಗಿ ಸೀರೆ ಒಳಗೆ ಸೇರಿಕೊಂಡು ಕಡಿಯಿರಪ್ಪ ಎನ್ನುತ್ತಾರೆ. ದೊರೆಸಾನಿ

ಯರು ಕಡಿತವನ್ನು ತಾಳಲಾರದೆ ಬಾಯಿ ಬಡಿಯುತ್ತಾರೆ. ಕೊನೆಗೆ ಬಳೆಗಾರ ಶೆಟ್ಟಿಯನ್ನು ಹಿಡಿದು ವಿಚಾರಣೆಗೆ ಒಳಪಡಿಸಿದಾಗ ಕಬ್ಬಿಣದ ಭಿಕ್ಷೆಯ ಬಗ್ಗೆ ವೇಷಧಾರಿ ಸಿದ್ದಪ್ಪಾಜಿ ತಿಳಿಸುತ್ತಾನೆ. ಕಬ್ಬಿಣದ ಬಿಕ್ಷೆ ಬೇಡಿ ಬಂದ, ಸಿದ್ದಪ್ಪಾಜಿಗೆ "ಒಂಬತ್ತು ಬಗೆಯ ಘೋರತರವಾದ ಪವಾಡಗಳನ್ನು ನಡೆಸುವ ಸ್ಥಿತಿಯೊದಗುತ್ತದೆ."[೧೬] "ಚಿಲ್ಲಾಪುರದಲ್ಲಿರುವ ಬೃಹತ್ ಗಾತ್ರದ ಅಡಿಗಲ್ಲು, ಹಲಗೂರಿನಲ್ಲಿರುವ ಕಬ್ಬಿಣದ ತೊಲಗಂಬಗಳನ್ನು ಮಂಟೇಸ್ವಾಮಿಗಳು ಮಾಡಿದ ಪವಾಡಗಳೆಂದು ಜನರು ಪರಿಗಣಿಸಿದ್ದಾರೆ... ಇವೆಲ್ಲಾ ಪಳೆಯುಳಿಕೆಗಳು ಪಾಳೇಗಾರರ ಮತ್ತು ಸಿದ್ದಪ್ಪಾಜಿಯವರ ಸಂಘರ್ಷಗಳನ್ನು ತಿಳಿಸುತ್ತವೆ. ಆದರೆ ಈ ಸಾಂಸ್ಕೃತಿಕ ನಾಯಕರ ಹೋರಾಟವನ್ನು ಚರಿತ್ರೆ ದಾಖಲಿಸಲೇ ಇಲ್ಲ."[೧೭] ಎನ್ನುತ್ತಾರೆ ಡಾ.ವೆಂಕಟೇಶ ಇಂದ್ವಾಡಿಯವರು, ಈ ಎಲ್ಲ ಪವಾಡಗಳನ್ನು ದೊಡ್ಡಮ್ಮತಾಯಿ ಮತ್ತು ಗುರುಗಳ ತಪೋಬಲದಿಂದ, ಹರಕೆಯ ಬಲದಿಂದ ಹಾಗೂ ಸಿದ್ದಪ್ಪಾಜಿಯ ಆತ್ಮಬಲದಿಂದಾಗಿ ಅಪ್ರತಿಮ ಯಶಸ್ಸನ್ನು ಸಾಧಿಸುತ್ತಾರೆ. ನೀಲಗಾರರ ಈ ಪವಾಡಗಳನ್ನು ಪಾಂಚಾಳರ ಆರ್ಥಿಕ ಚಟುವಟಿಕೆಗಳ ವಿರುದ್ಧದ ಹೋರಾಟ ಎನ್ನಬಹುದು. ಮೂರು ತಿಂಗಳಾದರೂ ಕಬ್ಬಿಣದ ಭಿಕ್ಷೆಯನ್ನು ಪಾಂಚಾಳರು ಕೊಡಲಿಲ್ಲ. ಒಂಬತ್ತು ಪವಾಡಗಳನ್ನು ಗೆದ್ದರೂ ಸಹ, ಪಾಂಚಾಳರಿಗೆ ಸಿದ್ದಪ್ಪಾಜಿಯ ಮಹಿಮೆ ತಿಳಿಯದೆ ಊರಿನಿಂದ ಆಚೆ ಅಟ್ಟಿದರು. ಶಿಷ್ಯನಿಗಾದ ಈ ಅವಮಾನದಿಂದ ಮುನಿದ ಮಂಟೇಸ್ವಾಮಿಗಳು ಮಾರಿಯರನ್ನು ಹಲಗೂರಿಗೆ ಕಳಿಸಿದರು. 'ಒಂದು ವಾಂತಿ, ಒಂದು ಭೇದಿಯನ್ನು ಕೊಟ್ಟು ಏಳು ಮಂದಿ ರಾಜರನ್ನು ಹೊರತು, ಹಲಗೂರಿನ ಎಲ್ಲರೂ ಮರಣ ಹೊಂದಿದ ಮೇಲೆ ಪಾಂಚಾಳರು ಕಣಿ ಕೇಳಲು ಹೊರಟರು.' ಸಿದ್ದಾಪ್ಪಾಜಿಯವರೇ ಕಣಿಯ ವೇಷದಲ್ಲಿ ಬಂದು ಪರಿಹಾರವನ್ನು ಸೂಚಿಸುತ್ತಾರೆ. ಅದರಂತೆ ಪಾಂಚಾಳರು ಬೊಪ್ಪನಗೌಡನಪುರಕ್ಕೆ ಬಂದರು. ಆದರೆ ಧರೆಗೆ ದೊಡ್ಡವರು ದೊಡ್ಡಮ್ಮತಾಯಿ ಯಿಂದ ಮಾಡಿದ ಸಣ್ಣಕ್ಕಿ ಅನ್ನದ ಊಟವನ್ನು ಜರಿದು ಹಲಗೂರಿಗೆ ಮರಳಿ ಹೋದರು. ಅನಂತರ ನಡೆದ ಘಟನೆಗಳಿಂದ ಪಾಂಚಾಳರು ಪುನಃ ಬೊಪ್ಪೇಗೌಡನಪುರಕೆ ಬಂದು ಸ್ವಾಮಿಗಳಿಗೆ ಶರಣಾಗಿ, 'ಹುಚ್ಚುರ್ಕ' 'ಮುಗ್ಗುಲು ಹುರುಳಿ'ಯ ಊಟವನ್ನೇ ಸ್ವೀಕರಿಸಿ, ಸ್ವಾಮಿಗಳಿಗೆ ಪಾತಾಳ ಬಾವಿ, ಚಿನ್ನದ ತೊಟ್ಟಿಲು, ಬೆಳ್ಳಿಯನ್ಯಾಕೆ ಸಿದ್ಧಪಡಿಸಿದರು.

ಪಾತಾಳದಲ್ಲಿ ಸ್ವಾಮಿ ಪವಡಿಸುವ ಮುನ್ನ ಹಿಂದೆ ಹೇಳಿದ ಮಾತಿನಂತೆ ರಾಚಪ್ಪಾಜಿಯವರೊಡನೆ ದೊಡ್ಡಮ್ಮತಾಯಿಯ ಕಲ್ಯಾಣವನ್ನು ಮುಗಿಸಿ, ರಾಚಪ್ಪಾಜಿಯನ್ನು ಕಪ್ಪಡಿಯಲ್ಲಿ ನೆಲೆಸುವಂತೆಯೂ, ಸಿದ್ದಪ್ಪಾಜಿಯನ್ನು ಚಿಕ್ಕಲ್ಲೂರಿನಲ್ಲಿ, ಹಿರಿಯ ಗುರು ರಾಜೇಂದ್ರಸ್ವಾಮಿಗಳನ್ನು ಮಳವಳ್ಳಿಯಲ್ಲಿಯೂ, ಕಿರಿಯ ಗುರು ರಾಜಪಟ್ಟದ ವೀರಭದ್ರಸ್ವಾಮಿಗಳು ಬೊಪ್ಪಗೌಡನಪುರದಲ್ಲಿ ಮಠಗಳನ್ನು ಆಳಲು ಹೇಳಿದರೆ, ಫಲಾಹಾರದಯ್ಯನವರನ್ನು ಮುಟ್ಟಿನಹಳ್ಳಿ ತೋಪಿನಲ್ಲಿ ಉಳಿಯಲು ಹೇಳಿದರು. 'ನರರ ಹಂಗು ನಮಗೆ ಬೇಡ ನಮ್ಮ ಹಂಗಲ್ಲೇ ಆ ನನ್ನ ಮಕ್ಕಳೆಲ್ಲಾ ಇರಲಿ' ಎನುತ್ತಾ ಪಾತಾಳಕ್ಕೆ ಹೊರಟರು. ಸಿದ್ದಪ್ಪಾಜಿ ಹಿಂದೆ ಗವಿಯಿಂದ ಬರುವಾಗ ಒದ್ದಿದ್ದ ಬಾರಿ ಪಡಗುಂಡು ಬಾವಿಗೆ ಬಾಚಿಕೊಂಡಿತು.

ಸ್ವಾಮಿಗಳ ಆದೇಶದಂತೆ, ರಾಚಪ್ಪಾಜಿಯವರು ಮಡದಿ ದೊಡ್ಡಮ್ಮತಾಯಿಯನ್ನು ಕರೆದುಕೊಂಡು, ಕಪ್ಪಡಿಗೆ ಹೊರಡುತ್ತಾರೆ. ದೊಡ್ಡಮ್ಮತಾಯಿ ತೋಪು ಒಂದರಲ್ಲಿ ಮುಟ್ಟಾಗಿ ಬಿಡುತ್ತಾರೆ. ಆಗ ಆಕೆ ಏಳು

ಸಲ ಸ್ನಾನ ಮಾಡಿ, ಏಳು ಸಲ ಮಡಿಯನ್ನು ತೊಟ್ಟು, ದೇವರ ಹೆಸರೇಳಿ ಧೂಪ ಹಾಕುತ್ತಾರೆ. ಆದ್ದರಿಂದ ಆ ತೋಪಿಗೆ ಮುಟ್ಟಿನಹಳ್ಳಿ ತೋಪು ಎಂದು ಹೆಸರಾಗುತ್ತದೆ. ಮುಟ್ಟಿನ ಹಳ್ಳಿ ಒಳಗೆ ದೊಡ್ಡಮ್ಮ ತಾಯಿ ಆರಾಳುದ್ದ ಗುಂಡಿ ತೆಗಿಸಿಕೊಂಡು ಗುರು ಹೋದ ಸ್ಥಾನಕ್ಕೆ ನಾನು ಹೋ.ಗಬೇಕೆಂದು,

'ಆರಳೇದ್ದ ಗುಂಡಿ ಒಳಗೆ

ಅಡಕವಾಗಿ ಮಲಗಿದ್ದುರಂತೆ' ||ಸಿದ್ದಯ್ಯ||'

(ಮಂಟೇಸ್ವಾಮಿ, ಪುಟ ೮೯೯)

ಸುತ್ತಮುತ್ತ ಗ್ರಾಮದವರು ಒಕ್ಕಲಾದರು. ಇದು ದೊಡ್ಡಮ್ಮತಾಯಿಯ ಗೋರಿ ಎಂದು ಹೆಸರಾಯಿತು. ಫಲಹಾರದಯ್ಯ ಮುಟ್ಟನಹಳ್ಳಿ ತೋಪಿನಲ್ಲಿ ಹನ್ನೊಂದು ಆಳುದ್ದ ಬಾವಿ ತೆಗಿಸಿ ಅಲ್ಲಿ ಪವಡಿಸಿದರು.

ರಾಚಪ್ಪಾಜಿ ಬನ್ನೂರಿನ ಮಾರ್ಗವಾಗಿ ಮೈಸೂರಿಗೆ ಬಂದರು. ಮೈಸೂರಿನಲ್ಲಿ ಒಡೆಯರ ವಂಶ ಸ್ಥಾಪನೆಗೆ ಕಾರಣರಾಗುತ್ತಾರೆ. ಬಡಸ್ತನದಲ್ಲಿದ್ದ, ದೇವರಾಜ ಒಡೆಯರಿಗೆ ಸಕಲೈಶ್ವರ್ಯ ಕರುಣಿಸಿ ಹರಸಿ ಕಂಡಾಯ ಕೊಟ್ಟು ಮುಂದೆ ಸಾಗುತ್ತಾರೆ, ಕಪ್ಪಡಿ ಸೇರುತ್ತಾರೆ. ತಂಗಿ, ಚೆನ್ನಾಜಮ್ಮನವರು ಎಂಟಾಳುದ್ದ ಬಾವಿಯಲ್ಲಿ ಪವಡಿಸಿದರು.

ಸಿದ್ದಪ್ಪಾಜಿ ಚಿಕ್ಕಲ್ಲೂರಿನ ದಾರಿಯಲ್ಲಿ, ಏಳು ಮಂದಿ ಋಷಿಗಳ ಜೊತೆ ಸಾಹಸ ಮೆರೆದು ಅವರನ್ನು ಸೋಲಿಸುತ್ತಾರೆ. ಚಿಕ್ಕಲ್ಲೂರು ಗ್ರಾಮದಲ್ಲಿ ಚಿಕ್ಕೇಗೌಡನಿಂದ ಹನ್ನೊಂದು ಆಳುದ್ದ ಬಾವಿ ತೆಗೆಸಿ ಅದರಲ್ಲಿ ಪವಡಿಸಿದರು.

ದೊಡ್ಡಮ್ಮನವರು ಮುಟ್ಟನಳ್ಳಿ ತೋಪಿನಲ್ಲಿ ಮುಟ್ಟಾದುದನ್ನು ನೀಲಗಾರರು ಪವಿತ್ರಗೊಳಿಸುವ ಪರಿಕಲ್ಪನೆಯನ್ನು ಸೃಷ್ಟಿಸಿದ್ದಾರೆ. ಮಡಿವಾಳ ಮಾಚಯ್ಯನ ಪ್ರಸಂಗದಲ್ಲಿ ಮುಟ್ಟಿನ ಪರಿಕಲ್ಪನೆಯನ್ನು ದೊಡ್ಡವರು ವ್ಯಾಖ್ಯಾನ ಮಾಡುತ್ತಾರೆ. ಮುಟ್ಟಿನ ಬಟ್ಟೆ ಗುಡ್ಡಾಕಿದ ಜಾಗವನ್ನು ಗದ್ದುಗೆ ಮಾಡಲು ದಾನ ಕೇಳಿದಾಗ, ಇದು ಮುಟ್ಟಿನ ಜಾಗ, ಸೂತಕದ ಜಾಗ ಎನ್ನುತ್ತಾನೆ. ಆಗ ಧರೆಗೆ ದೊಡ್ಡವರು ಮುಟ್ಟುತಟ್ಟು ಎಂದು ಹೇಳುತ್ತಿಯಲ್ಲ ಮುಟ್ಟು ಇಲ್ಲದ ಜಾಗ ಎಲ್ಲಿದೆ ಹೇಳು, ಮುಟ್ಟಿನಿಂದಲೇ ಈ ಭೂಮಿ ಹುಟ್ಟಿತು, ಹಗಲು, ಇರುಳು ಆಯ್ತು, ಮುಟ್ಟಿನಿಂದಲೇ ಲೋಕ ಬೆಳೆಯಿತು. ಮುಟ್ಟಿನಿಂದಲೇ ಸೂರ್ಯ, ಚಂದ್ರರ ಹುಟ್ಟು, ಮುಟ್ಟಿನಿಂದಲೇ ನೀನು ಹುಟ್ಟಿದ್ದು, ಮಾಚಪ್ಪ ನಿನ್ನ ತಾಯಿ ಹೊಟ್ಟೆಯಿಂದ ನೀನು ಧರೆಗೆ ಬರುವಾಗ ಮುಟ್ಟು ತಟ್ಟು ನಿನಗೆ ಆಗಲಿಲ್ವ ಎಂದು ಹೇಳಿ, ನಿನ್ನಿಂದಲೇ ಮುಟ್ಟಿನ ಕಳೆ ಕಳೆಯಲಿ ಎಂದರು. ಶಿಷ್ಟ ಸಂಸ್ಕೃತಿಯಲ್ಲಿ ಅಪವಿತ್ರವೆಂದ ವಸ್ತುಗಳಿಂದ ಪವಿತ್ರತೆಯನ್ನು ಹುಟ್ಟು ಹಾಕುವುದು ಮಂಟೇಸ್ವಾಮಿಗಳ ಮುಖ್ಯ ಉದ್ದೇಶ. ಈ ಹೀನಾಯವಾದ ವಸ್ತುಗಳು ಈ ನಾಯಕರ ಆತ್ಮಗೌರವದ ಬಿರುದುಗಳು. "ಕಲ್ಯಾಣದಲ್ಲಿ ಮೊದಲು ಇವರು ಕಾಣಿಸಿಕೊಳ್ಳುವುದು ಕೊಳಕು ಜಂಗಮರಾಗಿ. ಬೊಪ್ಪೇಗೌಡನ 'ಕುರಿಕೊಟ್ಟ' ಉರಿಗದ್ದುಗೆ, ಮಾಚಯ್ಯನ ಕತ್ತೆಕೊಟ್ಗೆ ಚಂದ್ರಶಾಲೆ. ಮುಟ್ಟಿನ ಜಾಗದಲ್ಲಿ ಮಜ್ಜನಬಾವಿ ಬಸವಣ್ಣನ ದಾಸೋಹದ ಎಂಜಲು ಎಲೆ ಪರಂಪರೆ ಮಟ್ಟಿಕಪ್ಪು(ತಿಲಕ). ಇವರ ಗದ್ದುಗೆಗಳ ಪ್ರವೇಶವೆಲ್ಲಾ ಎಡದ ಬಾಗಿಲ ಕಡೆಯಿಂದ, ಹೀಗೆ ಅವಮಾನ ಸೂಚಕವಾದ, ಅಪವಿತ್ರವಾದ ವಸ್ತುಗಳು ಈ ಪರಂಪರೆಯ ಪವಿತ್ರ ಸಂಕೇತಗಳು."[೧೮]

ಮಂಟೇಸ್ವಾಮಿ ತನ್ನನ್ನು ಮೊರೆ ಹೊಕ್ಕವರನ್ನು ಆತುಕೊಂಡು ಅವರನ್ನು ಕಷ್ಟದಿಂದ ಪಾರುಮಾಡಿ, ಸಕಲೈಶ್ವರ್ಯವನ್ನು ಕೊಟ್ಟು ಉದ್ಧರಿಸುತ್ತಾನೆ. ಹಾಗೆಯೇ ತನ್ನನ್ನು ಧಿಕ್ಕರಿಸಿದವರನ್ನು, ಅಲಕ್ಷಿಸಿದವರನ್ನು ಶಿಕ್ಷಿಸುತ್ತಾನೆ. ವಿಜಯನಗರದ ಗಾರುಡಿಗರ ಹೆಂಡತಿಯರ ರಕ್ಷಣೆ, ಕಾಗಿನೆಲೆಯಲ್ಲಿ ದೊಡ್ಡಮ್ಮತಾಯಿಯ ತಂದೆ ತಾಯಿಯವರಿಗೆ ನೀಡುವ ಅಭಯ, ಕೆಂಪಾಚಾರಿ (ಸಿದ್ದಪ್ಪಾಜಿ) ತಂದೆತಾಯಿಯವರ ಸೊಕ್ಕು ಮುರಿದ ಈ ಕತೆಗಳು ಮೇಲಿನ ದೃಷ್ಟಿಯಿಂದ ಪರಿಶೀಲನಾರ್ಹ.

ಕಲ್ಯಾಣದಿಂದ ರಾಚಪ್ಪಾಜಿಯನ್ನು ಶಿಶುಮಗನಾಗಿ ಪಡೆದು ಹೊರಟ ಮಂಟೇಸ್ವಾಮಿಗಳು ವಿಜಯನಗರದ ಗಾರುಡಿಗರ ಸವಾಲಿಗೆ ಪ್ರತಿ ಸವಾಲನ್ನು ರಾಚಪ್ಪ ಹಾಕಿದಾಗ, ಏಳನೂರು ಗಾರುಡಿಗರಿಗೆ ಮೋಡಿ ಎತ್ತಲಾಗಲಿಲ್ಲ. ರಕ್ತಕಕ್ಕಿ ಸತ್ತರು. ಅವರ ಹೆಂಡತಿ ಮಕ್ಕಳು ದುಃಖ ಮಾಡಿದರು. ಇವರ ಗೋಳು ಧರೆಗೆ ದೊಡ್ಡವರಿಗೆ ಕೇಳಿಸಿತು. ಗಾಡಿಗರ ಹೆಂಡತಿಯರು ತಾಳಿ ಭಾಗ್ಯ ಉಳಿಸಲು ಬೇಡಿದರು. ಕಪ್ಪುಧೂಳ್ತವನ್ನ ಸತ್ತು ಬಿದ್ದಿದ್ದ ಗಾರುಡಿಗರ ಮೇಲೆ ಎರಚಿ ಬದುಕಿಸಿದರು. ಅವರೆಲ್ಲರೂ ಸ್ವಾಮಿಗಳ ಒಕ್ಕಲಾದರು.

ಕಾಗಿನೆಲೆಯಲ್ಲಿ ದೊಡ್ಡಮ್ಮತಾಯಿಯನ್ನು ಹೆತ್ತವರಿಗೆ "ದುಃಖ ಮಾಡಬೇಡಿ, ಈ ಹೆಣ್ಣು ಮಗ ನಾವು ದೇವರು ಮಾಡಿ ನಿಲ್ಲಿಸ್ತೀವಿ. ಇದಕ್ಕೆ ಕಟ್ಟಿದಂಥ ಕಾಣಿಕೆ, ಬಿಟ್ಟಂಥ ಜನ್ನಿಗೆ ಹೆಣ್ಣು ಮಕ್ಕಳ ಹಣ -ಈ ಹಣವನ್ನೆಲ್ಲ ನೀವೇ ಉಪಯೋಗಿಸಿಕೊಂಡು ನಮ್ಮ ಮಠದ ಕಡೇ ಬಾಗಿಲಲ್ಲಿ ಇದ್ದು ಕಳ್ಳಿ. ಈ ಮಗೀನ ಪೂಜೆಗೆ ನಿಮ್ಮನ್ನೇ ನೇಮಿಸ್ತೀನಿ."[೧೯] ಎಂದು ಅವರನ್ನು ಧರೆಗೆ ದೊಡ್ಡವರು ಜೊತೆಯಲ್ಲಿ ಕರೆದುಕೊಂಡರು.

ಸಬಿರಾಯ ಪಟ್ಟಣದ ರಾಜಕುಮಾರರನ್ನು ಶಿಷ್ಯರನ್ನಾಗಿ ಮಾಡಿಕೊಳ್ಳುವಾಗ ರಾಜಕುಮಾರರ ಹೆತ್ತವರು "ಏನ ಕೊಡ್ತೀರ ಧರ್ಮ ಗುರುವೇ? ಎಂದಾಗ, ಮರ್ತ್ಯಲೋಕಕ್ಕೆ ಹೋದಾಗ ಬಸವನಬೆಟ್ಟ ಬೆಳ್ಳಿ ಮಾಡಿ ಕೊಡ್ತೀವಿ, ಕುಂತೂರು ಬೆಟ್ಟ ಚಿನ್ನ ಮಾಡಿಕೊಡ್ತೀವಿ. ನನ್ನ ಮುಟ್ಟಿ ಪೂಜೆ ಮಾಡೋದಕ್ಕೆ ಗುರುಗಳ ಮಾಡುತ್ತೀನಿ"[೨೦] ಎಂದು ಭಾಷೆ ಕೊಡುತ್ತಾರೆ.

ಆದಿ ಹೊನ್ನಾನಾಯಕನ ಹಳ್ಳಿಯಲ್ಲಿ ಬಳೆ ಮುದ್ದಮ್ಮ ತಾಯಿಯ ಮನೆಗೆ ಭಿಕ್ಷೆಗೆ ಹೋದಾಗ, ಮುದ್ದಮ್ಮ ತಾಯಿ ಹಾಲು ಕರೆಯಲು ಕುಳಿತಿದ್ದಳು. ಗುರುಗಳ ಜಾಗಟೆ ಸದ್ದಿಗೆ ಹಸು ಬೆದರಿತು. ಅಡ್ಡ ಒದೆತ ಒದೆಯಿತು. ಮುದ್ದಮ್ಮನಿಗೆ ಕೋಪ ಬಂತು. ಸಿಟ್ಟಿನಿಂದ "ಹಾಳಾದ 'ಮಂಟೇದ ಒಡೆಯರೇ' ಮುಂದ್ಹಕ್ಕೋಗಿ ಎಂದರಂತೆ. ಇದನ್ನು ಕೇಳಿದ ಸ್ವಾಮಿಗಳಿಗೆ ಕೋಪ ಬರಲಿಲ್ಲ. ಬದಲಿಗೆ ಬಳೆಯ ಮುದ್ದಮ್ಮ. ಕೈಲಾಸದಿಂದ ಬರುವಾಗ ನನಗೆ ನೂರೆಂಟು ಹೆಸರಿಟ್ಟರು. ಏಳೇಳು ಲೋಕವ ಆಳಿ ಬಂದೆ. ಬಾಳಿ ಬಂದೆ ಆದರೆ ಯಾರುವೆ ಈ ರೀತಿಯ ಹೆಸರನ್ನ ಕರಿಲಿಲ್ಲ. ನೂರೊಂದು ಹೆಸರು ಚೆನ್ನಾಗಿಲ್ಲ 'ಮಂಟೇದಲಿಂಗಯ್ಯ' ಅನ್ನೋ ನೀ ಇಟ್ಟ ಹೆಸರೇ ಚೆನ್ನಾಗಿದೆ. ನೀನೆ ನನ್ನ ಹೆತ್ತ ತಾಯಿ"[೨೧] ಅಂದರಂತೆ.

ಧರೆಗೆ ದೊಡ್ಡವರು ಬಪ್ಪೇಗೌಡನಪುರದಿಂದ ನೀಲಘಟ್ಟಕ್ಕೆ ಬರುತ್ತಿರುವಾಗ, ಅರಳಿಕಟ್ಟೆಯ ಹೊನ್ನರಳಿಯ ಮರದ ಬುಡದಲ್ಲಿ ಬಸವಾಚಾರಿ, ಮಡದಿ ಮುದ್ದಮ್ಮನವರುಗಳು ಗುರುಗಳನ್ನು ಕಂಡರು.

'ಮಕ್ಕಳು ಕೊಟ್ಟಂತ ಶಿವಾ
ಅನ್ನ ನಮಗೆ ಕೊಡುನಿಲ್ಲ ||ಸಿದ್ದಯ್ಯ||'

(ಮಂಟೇಸ್ವಾಮಿ, ಪುಟ ೨೬೧)

ಇವರಿಗೆ ಆರು ಜನ ಗಂಡು ಮಕ್ಕಳು, ಆದರೆ ಬಹಳ ಬಡತನ. ತಿನ್ನಲಿಕ್ಕೆ ಅನ್ನವಿಲ್ಲ, ಉಡಲು ಬಟ್ಟೆ ಇಲ್ಲದಂತಹ ಭಂಗ ಬಡುಸ್ತಾನ ಗುರುವಿನ ಪಾದದ ಮೇಲೆ ಬಿದ್ದು ವಿಧವಿಧವಾಗಿ ದುಃಖಪಡುತ್ತಾರೆ. ಯಾವ ದೇವರೂ ನಮ್ಮ ಬಡತನ ನೀಗಿಸಲಿಲ್ಲ. ಹನ್ನೆರಡು ವರ್ಷದಿಂದ ಈ ಬಡತನದ ಬೇಗೆಯಲ್ಲಿ ಬದುಕುತ್ತಿದ್ದೇವೆ. ಕರುಣಿಸು ಎನ್ನುತ್ತಾರೆ. ಗುರು ಯೋಚಿಸಿದರು, ಕಲ್ಯಾಣ ಪಟ್ಟಣದ ಕಡೆ ಬಾಗಲಲ್ಲಿದ್ದ ಬಾಚಿ ಬಸವಯ್ಯನನ್ನು ಇವರಿಗೆ ಮಗನಾಗಿ ಕರುಣಿಸಿ ಬಡಸ್ತನ ನೀಗಿಸಬೇಕೆಂದು ಆ ಕಡು ಬಡವ ದಂಪತಿಗಳಿಗೆ ಗುರುಗಳು ಹೇಳುತ್ತಾರೆ. ಈ ದರಿದ್ರವೆಲ್ಲ ಕಳೆದು ಹೋಗಬೇಕಾದ್ರೆ ನೀಲಘಟ್ಟ ಬಿಟ್ಟುಬಿಟ್ಟು, ಮಳವಳ್ಳಿ ತಾಲ್ಲೂಕು ಮಾರವಳ್ಳಿ ಗ್ರಾಮಕ್ಕೆ ಹೋಗಿ, ನನ್ನ ವರದಲ್ಲಿ ಏಳನೇ ಮಗ ಕೆಂಪಾಚಾರಿ ಹುಟ್ಟುತ್ತಾನೆ. ಮಗ ಹುಟ್ಟಿದ ಏಳೇ ದಿವಸಕ್ಕೆ

'ನಿಮಗೆ ಹರುಬಿ ಹಣ ಮಾಡುತೀನಿ
ಮೊರದ ಬಂಗಾರ ಮಾಡುತೀನಿ ||ಸಿದ್ದಯ್ಯ||'

(ಮಂಟೇಸ್ವಾಮಿ, ಪುಟ ೨೬೯)

ಎನ್ನುತ್ತಾ ಅರಸುತ್ತಾರೆ.

ಧರೆಗೆ ದೊಡ್ಡವರು ಕರುಣಾಮಯಿ ಮಾತ್ರವಲ್ಲದೆ ಅವರಲ್ಲಿ ಮಾನವೀಯ ಕಳವಳಿ ಎಷ್ಟಿದೆ ಎಂಬುದನ್ನು ಈ ಪ್ರಸಂಗ ನಿಚ್ಚಳವಾಗಿ ತೋರಿಸುತ್ತದೆ. ಹಾಗೆಯೇ ಇದರ ಮುಂದುವರಿದ ಭಾಗದಲ್ಲಿ ಮಂಟೇಸ್ವಾಮಿಯ ಕರುಣೆಯಿಂದಲೇ ಮಗ ಕೆಂಪಚಾರಿಯನ್ನು, ಐಶ್ವರ್ಯವನ್ನು ಪಡೆದವರು. ಅದರ ಸೊಕ್ಕಿನಲ್ಲಿ ಮೈಮರೆತು ಇವುಗಳನ್ನು ಕರುಣಿಸಿದ ದೇವರಿಗೆ ಮಗ ಕೆಂಪಾಚಾರಿಯನ್ನು ಒಪ್ಪಿಸಲು ನಿರಾಕರಿಸುತ್ತಾರೆ. ಕೊನೆಗೆ ಧರೆಗೆ ದೊಡ್ಡವರು ಅವರ ಸೊಕ್ಕನ್ನು ಮುರಿಯುತ್ತಾರೆ. ಮಾರಳ್ಳಿ ಮಾರಿಯರನ್ನು ಮುದ್ದೋಜಿ ಮನೆಗೆ ನುಗ್ಗಿಸಿ, ದನಕರುಗಳ ಸಾಯಿಸಿ, ಚಿನ್ನದ ಅರಮನೆಯನ್ನು ಮಣ್ಣಿನ ಅರಮನೆ ಮಾಡಿದರು. ಆರು ಜನ ಅಣ್ಣಂದಿರೂ, ಸೊಸೆಯರೂ, ಪ್ರಾಣ ಬಿಟ್ಟರು. ಕೆಂಪಾಚಾರಿಯ ತಂದೆ ತಾಯಿಗಳು ಇದೇ ಕೊರಗಿನಿಂದ ಪ್ರಾಣ ಬಿಡುವ ಹಾಗಾಯಿತು. ಕೆಂಪಣ್ಣನಿಗೆ ಹುಚ್ಚು ಹಿಡಿಯಿತು. ಈ ರೀತಿಯಾಗಿ ದೈವ ನೀಡಿದ ಶ್ರೀಮಂತಿಕೆಯನ್ನು ಅನುಭವಿಸುತ್ತಾ, ಕೊನೆಗೆ ದೈವವನ್ನೇ ಮರೆಯುವವರ ಅಹಂಕಾರ/ಗರ್ವವನ್ನು ಇಲ್ಲವಾಗಿಸುತ್ತಾರೆ.

ಮೇಲಿನ ಪ್ರಸಂಗಗಳನ್ನು ಪರಿಶೀಲಿಸಿದಾಗ, ಮಾನವರು ಮಾನವೀಯ ಗುಣಗಳಿಗೆ ವಿರುದ್ಧವಾದ ಗುಣಗಳನ್ನು ಬೆಳೆಸಿಕೊಳ್ಳಬಹುದು ಹಾಗೆ ಮಾಡಿದರೆ ಬದುಕಿನಲ್ಲಿ ಅವರಿಗೆ ಅವಮಾನ, ಶಿಕ್ಷೆ, ದೂಷಣೆ ತಪ್ಪಿದ್ದಲ್ಲ ಎಂಬುದನ್ನು ಶ್ರುತಪಡಿಸುತ್ತದೆ.

ವೈರಾಗ್ಯದ ಮೂರ್ತಿಯಾದ ಮಂಟೇಸ್ವಾಮಿಗಳು ದುಃಖದಲ್ಲಿರುವ ಹೆಣ್ಣು ಮಕ್ಕಳ ದುಃಖ ಪರಿಹಾರಾರ್ಥವಾಗಿ, ಅವರ ಸಮೀಪ ಹೋಗುತ್ತಾರೆಯೇ ಹೊರತು ಮಿಕ್ಕಂತೆ ಅವರು 'ಹೆಣ್ಣು ಅಂದ್ರೆ ಹೆತ್ತ ತಾಯಿ

ಮಾಡ್ಕೊಂಡವರು.' ಹೆಣ್ಣು ಮಕ್ಕಳ ಮಂಡೆ ಬಾಡದ ಹಾಗೆ ಆಶೀರ್ವದಿಸುತ್ತಾರೆ. ಅವರ ಸಂಕಟವನ್ನು ಪರಿಹರಿಸಿ ಸುಖಸಾಗರದಲ್ಲಿ ತೇಲುವಂತೆ ಕೃಪೆ ಮಾಡುವರು. ಆದರೆ ಸಿರಿ ಕರುಣಿಸಿದವರನ್ನೇ ಮರೆತವರಿಗೆ ಉಗ್ರ ಶಿಕ್ಷೆ ವಿಧಿಸಿ, ಸಮಾಜಕ್ಕೆ ಈ ಮೂಲಕ ಎಚ್ಚರಿಕೆ ಕೊಡುವ ಮೋಡಿಕಾರ.

ಮಂಟೇಸ್ವಾಮಿಗಳು ವೈರಾಗ್ಯ ಮೂರ್ತಿಗಳು, ಹೆಣ್ಣಿನ ಮೋಹವನ್ನು ಸಂಪೂರ್ಣವಾಗಿ ತ್ಯಜಿಸಿದವರು. ಜನಪದರ ದೃಷ್ಟಿಯಲ್ಲಿ ಎಲ್ಲ ದೇವತೆಗಳಿಗಿಂತ ಮಿಗಿಲೆನಿಸಿಕೊಂಡವರು. ಹಲವು ದೇವತೆಗಳು ನಾಲ್ಕಾರು ಮಂದಿ ಹೆಂಡತಿಯರನ್ನು ಕಟ್ಟಿಕೊಂಡಿರುವುದನ್ನು ನೋಡುವಾಗ, ಹೆಣ್ಣನ್ನು ಕುರಿತಂತೆ ಮಂಟೇಸ್ವಾಮಿಗಳು ನಿಲುವಿನಲ್ಲಿ ಆತನಿಗೂ ಉಳಿದ ದೇವತೆಗಳಿಗೂ ಬಹಳ ವ್ಯತ್ಯಾಸವಿರುವುದನ್ನು ಕಾಣಬಹುದು.

ಹೆಣ್ಣು ಅಂದ್ರೆ ಇವರು 'ಹೆತ್ತತಾಯಿ'ಯ ಹಾಗೆ ಕಾಣುತ್ತಾರೆ. ಇವರ ಶಿಶು ಮಕ್ಕಳಾದ ದೊಡ್ಡಮ್ಮತಾಯಿ, ಚೆನ್ನಾಜಮ್ಮ, ಇವರುಗಳ ನಡುವಿನ ಸಂಬಂಧಗಳು, ದೈವ-ಭಕ್ತರ, ಗುರು-ಶಿಷ್ಯರ, ತಂದೆ-ಮಗಳ ಸಂಬಂಧಗಳಂತೆ ಕಾವ್ಯದುದ್ದಕ್ಕೂ ಮಿಂಚುತ್ತಿವೆ. ಮನೋ ನಿಗ್ರಹವನ್ನು ಸಾಧಿಸಿದ, ಮಾನವೀಯ ಗುಣಗಳಿಂದ ಕೂಡಿ, ಧರೆಗೆ ದೊಡ್ಡವರು, ಸ್ತ್ರೀ ಕುಲವನ್ನು ಸಂಭೋದಿಸುವಾಗ ಉಪಯೋಗಿಸುವ 'ನನಕಂದ' ಎಂಬ ಮಾತಿನಲ್ಲಿರುವ ಭಕ್ತವತ್ಸಲತೆ ಅಂತಃಕರಣವನ್ನು ತಟ್ಟುತ್ತದೆ, ತುಂಬುತ್ತದೆ. ಪುರುಷಶಾಹಿ ಸ್ತ್ರೀ ಕುಲಕ್ಕೆ ಹೊದಿಸಿದ ಸೂತಕದ ಪೊರೆಯನ್ನು ಕಿತ್ತೊಗೆದು, ಈ ಬಗ್ಗೆ ಸ್ತ್ರೀಯರ ವಿಷಯದಲ್ಲಿ ಸಾಮಾಜಿಕ ಚಿಂತನೆಗೆ ಹಚ್ಚುವ ಚಿಂತನಕಾರ.

"ಧರೆಗೆ ದೊಡ್ಡವರ ಕತೆ, ದೊಡ್ಡಮ್ಮತಾಯಿಯನ್ನು ಧೃಡವುಳ್ಳ ದೊಡ್ಡಮ್ಮ ಎಂದು ಕರೆದಿದೆ. ಸ್ತ್ರೀ ಕುಲದ ಸಂಕೇತವಾಗಿ ನೀಲಗಾರ ಪರಂಪರೆಯ ಸ್ತ್ರೀ ಪರವಾದ ಆಚರಣೆಗಳಲ್ಲೆಲ್ಲಾ ದೊಡ್ಡಮ್ಮನ ಪಾತ್ರ ಹಿರಿದು. ಸಿದ್ದಪ್ಪಾಜಿಗೆ ನೀಲಗಾರ ದೀಕ್ಷೆ ಕೊಡುವಾಗ ಇವರಿಬ್ಬರು ದಂಪತಿಗಳು ತಾಯಿ-ತಂದೆಯ ಸ್ಥಾನದಲ್ಲಿ ನಿಂತು ಧಾರೆಯೆರೆದು ಕೊಡುತ್ತಾರೆ. ಕೌಟುಂಬಿಕ ಕಷ್ಟಗಳ ಭಾಗದಲ್ಲಿ ದೊಡ್ಡಮ್ಮನ ಪಾತ್ರ ತಾಯ್ತನದಿಂದ ಸಂತೈಸುತ್ತದೆ."[೨೨] ಉಳಿದ ಸ್ತ್ರೀ ಪಾತ್ರಗಳು ಕಾವ್ಯದಲ್ಲಿ ಅಲ್ಲಲ್ಲಿ ಬಂದು ಮಿಂಚಿ ಮರೆಯಾಗುತ್ತವೆ.

ದೊಡ್ಡಮ್ಮತಾಯಿಯಲ್ಲಿನ ಅನನ್ಯವಾದ ಭಕ್ತಿ, ಭಾವುಕತೆ, ಆಕೆಯ 'ಜೀವ ಜೀವಾಳ' ಧಾರ್ಮಿಕ ಕಾರ್ಯಗಳಲ್ಲಿ ದೊಡ್ಡಮ್ಮತಾಯಿಯ ಪಾತ್ರ ಹಿರಿದು, ಮಂಟೇಸ್ವಾಮಿಯವರ ವ್ಯಕ್ತಿತ್ವದ ಬಹುಮುಖ್ಯವಾದ ಭಾಗವಾಗಿ ದೊಡ್ಡಮ್ಮತಾಯಿ ಇದ್ದರು ಹಾಗೂ ಅವರ ಒಟ್ಟು ಸಾಧನೆಯ ಹಿಂದಿರುವ ಅವರ ಸ್ಫೂರ್ತಿ ಅಪೂರ್ವವಾದುದು ಎನ್ನುವುದನ್ನು ಕಾವ್ಯದಲ್ಲಿ ಕಾಣಬಹುದು. ಹಲಗೂರಿನ ಪವಾಡದಲ್ಲಿ ಧರೆಗೆ ದೊಡ್ಡವರು ಸಿದ್ದಪ್ಪಾಜಿಯ ಮೂಲಕ ಬಲಿಷ್ಟ ಪಾಂಚಾಳರನ್ನು ಗೆಲ್ಲುವ ಕಾರ್ಯದಲ್ಲಿ ದೊಡ್ಡಮ್ಮತಾಯಿ ನಿರ್ವಹಿಸಿರುವ ಪಾತ್ರ ಹಿರಿದು.

ಕಾವ್ಯದಲ್ಲಿ ದೊಡ್ಡಮ್ಮತಾಯಿ, ಸ್ತ್ರೀ ದೈವದ ನೆಲೆಯಲ್ಲಿ ನಿಂತು, ತನ್ನ ಸ್ತ್ರೀ ಮೌಲ್ಯಗಳಾದ ವಾತ್ಸಲ್ಯ, ತಾಯ್ತನ, ಸಹನೆ, ಕರುಣೆ, ನಯ, ವಿನಯಗಳ ಸಂಕೇತವಾಗಿ ಅಭಿವ್ಯಕ್ತಿಗೊಳ್ಳುತ್ತಾಳೆ.

## ೪.೨. ಸ್ತ್ರೀ ದೇವತೆಗಳು ಮತ್ತು ಮಂಟೇಸ್ವಾಮಿ ಸ್ತ್ರೀ ಪರಿಭಾವನೆ

ಸೃಷ್ಟಿಯ ಪ್ರಾರಂಭದ ದಿನದಲ್ಲಿ ಮಾನವ ಆಹಾರದ ಅನ್ವೇಷಣೆಗಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋಗುತ್ತಿದ್ದ. ಅವನ ಬದುಕಿಗೆ ನಿರ್ದಿಷ್ಟವಾದ ನೆಲೆ ಇಲ್ಲದೆ ಅಲೆಮಾರಿಯಾಗಿದ್ದ. ನಿಸರ್ಗದಲ್ಲಿನ ಪೊರೆಯುವ ಮತ್ತು ನಾಶ ಮಾಡುವ ಚೈತನ್ಯಗಳು, ವಿಸ್ಮಯ, ಭಯವನ್ನು, ಮಾನವನಿಗೆ ಹುಟ್ಟಿಸಿರಬೇಕು. ಪ್ರಕೃತಿಯಲ್ಲಿನ ವಸ್ತು ವಿಶೇಷಗಳು, ಸಸ್ಯರಾಶಿ, ಪ್ರಾಣಿ ಸಮೂಹ, ಹುಟ್ಟು, ಕುತೂಹಲ ಕಾರಿಯಾದರೆ, ಸಾವು, ಬಿಸಿಲು, ಮಳೆ, ಚಳಿ, ಗುಡುಗು, ಮಿಂಚು, ಬಿರುಗಾಳಿ, ಪ್ರವಾಹ, ಭೂಕಂಪ, ಕಾಳ್ಗಿಚ್ಚು ಮೊದಲಾದವುಗಳು ಭಯ ಮಿಶ್ರಿತ ಭಾವನೆಯನ್ನು ಹುಟ್ಟಿಸಿ, ಇವುಗಳೊಂದಿಗೆ, ಹೋರಾಡುವ ಅನಿವಾರ್ಯ ಕಂಡು ಅವುಗಳನ್ನು ವಿನಯದಿಂದ ಒಲಿಸಿಕೊಳ್ಳುವ ಪ್ರಯತ್ನ ಮಾಡಿದ. ಪ್ರಕೃತಿಯಲ್ಲಿನ ಅಗೋಚರ ಶಕ್ತಿಯ ಬಗ್ಗೆ ಭಕ್ತಿಯ ಸ್ವರೂಪ ಒಡಮೂಡಿ, ನಿಸರ್ಗವನ್ನು ಪೂಜಿಸಲು ಪ್ರಾರಂಭಿಸಿದನು. ನಿಸರ್ಗದಲ್ಲಿ ಮತ್ತು ಭೂಮಿಯ ಅಂತರಾಳದಲ್ಲಿ ಯಾವುದೋ ಒಂದು ಚೈತನ್ಯ ಹುದುಗಿಕೊಂಡಿರುವುದನ್ನು ಗುರುತಿಸಿದ ಮಾನವ, ಅದಕ್ಕೊಂದು ದೈವತ್ವದ ನೆಲೆಯನ್ನು ಕೊಟ್ಟನು. ಹೀಗೆ ಮನುಷ್ಯನಲ್ಲಿದ್ದ ಭಯದಿಂದಾಗಿ, ಮಾನವನಲ್ಲಿ ದೇವರ ಕಲ್ಪನೆ ಮೂಡಿ ಬಂದಿತು.

ಆಹಾರ ಸಂಗ್ರಹಣೆ ಹಂತದಲ್ಲಿ ಮನುಷ್ಯ ಆಹಾರವನ್ನು ಅರಸುತ್ತಾ ಅಲೆಯುತ್ತಿದ್ದ ಕಾಲದಲ್ಲಿ ಒಂದು ಗುಂಪಿನ ಜನ ಗಂಡು ಹೆಣ್ಣುಗಳು ಒಟ್ಟಾಗಿ ವಾಸಿಸುವ ಮೂಲಕ ತಮಗೊಂದು ಅಸ್ತಿತ್ವವನ್ನು ಕಂಡುಕೊಳ್ಳ ತೊಡಗಿದರು. ಅವರಿಗೆ ಗಂಡ ಅಥವಾ ಹೆಂಡತಿ ಎಂಬ ಕಲ್ಪನೆ ಇರಲಿಲ್ಲ. ಸಮೂಹ ಜೀವನ ಅದು. ಮಕ್ಕಳನ್ನು ಹಡೆಯಬಲ್ಲ ಶಕ್ತಿ ಪಡೆದ ತಾಯಿ ಮಾತ್ರ ಅಲ್ಲಿ ಮುಖ್ಯ. ತಂದೆ ಸಮೂಹ ಜೀವನದಲ್ಲಿ ಅಮುಖ್ಯ. ತಾಯಿಯೇ ಸತ್ಯ. ಆಹಾರ ಸಂರಕ್ಷಿಸುವುದು, ಹೆತ್ತಮಕ್ಕಳನ್ನು ಪೋಷಿಸುವುದು ಮುಂತಾದಂತೆ ಸಮೂಹದ ಜವಾಬ್ದಾರಿ ತಾಯಿಯದೇ ಆಗಿತ್ತು. ಹೀಗಾಗಿ ಅವಳಿಗೆ ಮಾತೃ ಸ್ಥಾನದಲ್ಲಿ ಗೌರವಸ್ಥಾನ ಲಭಿಸಿ, ಆರಾಧಿಸುವ ಹಂತ ತಲುಪಿದಳು. ಇದು ಆ ಕಾಲದ ಮುಕ್ತ ಸ್ಥಿತಿ. ಪಶುಸಂಗೋಪನಾ ಕಾರ್ಯ ಕೈಗೊಂಡ ಹಂತದಿಂದ ಪುರುಷ ಪ್ರಾಧಾನ್ಯ ಹೆಚ್ಚಾಯಿತಲ್ಲದೆ, ಪುರುಷ ದೈವಗಳ ಸೃಷ್ಟಿಯೂ ಆಯಿತು. ಪುರುಷ ಹೊರಗೆ ಹೋದಾಗ ಮಕ್ಕಳ ಪೋಷಣೆ ಮಾಡುತ್ತಾ ಸ್ತ್ರೀ ಕೃಷಿಯ ಅನ್ವೇಷಣೆ ಮಾಡಿದಳು. "ಸ್ತ್ರೀಯ ಗರ್ಭಧಾರಣಾ ಶಕ್ತಿ ಮತ್ತು ಭೂಮಿಯ ಸಸ್ಯರಣಾ ಶಕ್ತಿಯನ್ನು ಗೌರವಿಸಿ ಮಾನ್ಯ ಮಾಡಿದ ಕೃಷಿ ಹಂತದ ಚಟುವಟಿಕೆಗಳು ಸ್ತ್ರೀಯನ್ನು, ಮತ್ತೆ ದೈವಸ್ಥಾನಕ್ಕೆ ಏರಿಸಿದವು. ಗ್ರಾಮದೇವತೆಗಳ ಸೃಷ್ಟಿ ಆರಂಭವಾದದ್ದು"[೨೩] ಹೀಗೆ ಎನ್ನುತ್ತಾರೆ ಡಾ.ಹಿ.ಚಿ. ಬೋರಲಿಂಗಯ್ಯನವರು.

ಮಾತೃ ದೇವತೆಗಳ ಆರಾಧನೆಯು ಬಹು ಪ್ರಾಚೀನವಾದುದು. ಮಾತೃವಿನ ಆರಾಧನೆ ಸುಮಾರು ಮೂವತ್ತು ಸಾವಿರ ವರ್ಷಗಳ ಹಿಂದೆ ಆರಂಭವಾಗಿರಬೇಕೆಂದು ತಜ್ಞರ ಅಭಿಪ್ರಾಯ. ಸಿಂಧೂ ಕಣಿವೆಯಲ್ಲಿ ದೊರೆತಿರುವ ಅನೇಕ ಸ್ತ್ರೀ ವಿಗ್ರಹಗಳು ಮಾತೃ ದೇವತಾ ಪಂಥಕ್ಕೆ ಸಂಬಂಧಿಸಿದವುಗಳು. "ಸಿಂಧೂ ಸಂಸ್ಕೃತಿಯಲ್ಲಿ ಮಾತೃ ದೇವತೆಯನ್ನು ಭೂಮಿಯ ತಾಯಿಯೆಂದೂ, ಮಾನವರ ಮಾತೆಯೆಂದೂ, ದೇವತೆಗಳ ತಾಯಿ ಎಂದೂ, ಅರಣ್ಯ, ಪ್ರಾಣಿ, ಧಾನ್ಯ, ಪಕ್ಷಿ ಇವುಗಳ ಮಾತೃವೆಂದೂ ಪೂಜಿಸಲಾಗಿದೆ."[೨೪]

ಹರಪ್ಪಾ ಸಂಸ್ಕೃತಿಯಲ್ಲಿ ಒಂದು ಕುತೂಹಲಕರವಾದ ಮುದ್ರೆಯು ಸಿಕ್ಕಿದ್ದು, ಇದು ಕೃಷಿ ದೃಶ್ಯಕ್ಕೆ ಸಂಬಂಧಿಸಿದ್ದಾಗಿದೆ. "ಈ ಮುದ್ರಿಕೆಯಲ್ಲಿ ಒಂದು ಸ್ತ್ರೀ ವಿಗ್ರಹವಿದ್ದು ಆಕೆಯ ಗರ್ಭದಿಂದ ಒಂದು ಸಸ್ಯವು ಹುಟ್ಟುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಇನ್ನೊಂದು ಬದಿಯಲ್ಲಿ ಸ್ತ್ರೀ ಪುರುಷರ ಚಿತ್ರಗಳಿವೆ. ಒಬ್ಬ ಮನುಷ್ಯನು ನೇಗಿಲಿನಂಥ ಆಯುಧವನ್ನು ಹಿಡಿದಿದ್ದಾನೆ. ಈ ಚಿತ್ರದಲ್ಲಿರುವ ಮನುಷ್ಯ ಉಳುಮೆ ಮಾಡುವ ರೈತನೆಂದು ಭಾವಿಸಲಾಗಿದೆ. ಗರ್ಭದಿಂದ ಸಸ್ಯವು ಹೊಯ್ಯುತ್ತಿರುವ ಸ್ತ್ರೀ ಚಿತ್ರವನ್ನು ಮಾತೃದೇವತೆಯೆಂದು ಹೇಳಲಾಗಿದೆ."[೨೫]

ಇಂದು ಭಾರತದಲ್ಲಿ ಸವಿಸ್ತಾರವಾಗಿ ಚಾಚಿಕೊಂಡಿರುವ ಮಾತೃ ಮೂಲ ಪರಂಪರೆಯನ್ನು ಕಾಣುತ್ತೇವೆ. ಬಹುಶಃ ದಕ್ಷಿಣ ಭಾರತದಲ್ಲಿ ಮಾತೃ ದೇವತೆ ಇಲ್ಲದಿರುವ ಹಳ್ಳಿಗಳೇ ಇಲ್ಲ. ಮಾತೃ ದೇವತೆಯೊಬ್ಬಳನ್ನು 'ಮನೆ ದೇವತೆ' ಎಂದು ಪೂಜಿಸದ ಶೂದ್ರ ಕುಟುಂಬಗಳೂ ಇಲ್ಲದಿಲ್ಲ. ಅಷ್ಟರ ಮಟ್ಟಿಗೆ ಈ ಮಾತೃ ಪರಂಪರೆ ದಕ್ಷಿಣದಲ್ಲಿ ತನ್ನ ಭದ್ರ ಬುನಾದಿಯನ್ನು ಕಂಡು ಕೊಂಡಿದೆ. ತಾಯಿಯನ್ನು ಸಾಕ್ಷಾತ್ ದೇವತೆ ಎಂಬ ಪರಿಕಲ್ಪನೆಯ ನಂಬಿಕೆಯಿಂದ ಗ್ರಾಮದೇವತೆಗಳ ಕಲ್ಪನೆ ಮೂಡಲಿಕ್ಕೆ ಮಾರ್ಗದರ್ಶಿಯಾಯಿತು.

ಮಾನವ ತನ್ನ ಹಾಗೂ ತನ್ನವರ ರಕ್ಷಣೆಗಾಗಿ ತಾನು ನೆಲಸಿದ ಪ್ರದೇಶದಲ್ಲಿ ತನ್ನ ಮನಸ್ಸಿಗೆ ಇಷ್ಟವಾದಂತಹ ಹೆಸರಿಟ್ಟು ದೇವತೆಯನ್ನು ಸ್ಥಾಪಿಸಿದ. ಗ್ರಾಮಸ್ಥರು ಆ ದೇವತೆಯನ್ನು ನಂಬಿ ಪೂಜಿಸುವುದರಿಂದ ಆಕೆ ಅವರ ಗ್ರಾಮದೇವತೆಯಾದಳು. ಅವಳನ್ನು ಮಾತೃ ದೇವತೆಯೆಂದು ಪೂಜಿಸಲಾಗುತ್ತದೆ. ಮಾತೃ ಪಂಥದ ಜನಪದ ರೂಪಗಳೇ ಗ್ರಾಮದೇವತೆಗಳು ಎಂದು ದೇವಿಪ್ರಸಾದ್ ಚಟ್ಟೋಪಾಧ್ಯಾಯರವರು ಅಭಿಪ್ರಾಯಪಡುತ್ತಾರೆ. "ಗ್ರಾಮದೇವತೆಗಳು ಗ್ರಾಮೀಣರ ಮಾನಸಿಕ ಅಗತ್ಯವೆನ್ನಬಹುದು. ಗ್ರಾಮೀಣ ಜೀವನದಲ್ಲಿ ಅನಾದಿ ಕಾಲದಿಂದಲೂ ಹಾಸುಹೊಕ್ಕಾಗಿ ಬೆರೆತು ಬಂದಿರುವ ಗ್ರಾಮದೇವತೆಗಳು ಜನಪದ ಬದುಕಿನ ಒಂದು ಭಾಗವಾಗಿದೆ."[೨೬]

ಗ್ರಾಮದೇವತೆಗಳು ಜನಪದ ದೇವತೆಗಳು. ಜನಪದದ ಇಷ್ಟಾರ್ಥಗಳನ್ನು ಪೂರೈಸುವುದಕ್ಕಾಗಿ ಸೃಷ್ಟಿಯಾದಂಥವು. ಗಂಡು ದೇವತೆಗಳ ಸೃಷ್ಟಿ ಬೇಟೆ ಮತ್ತು ಪಶುಪಾಲನೆಯ ಹಂತದಲ್ಲಾಗಿರಬಹುದು, ಆದರೆ ಸ್ತ್ರೀ ದೇವತೆಗಳ ಪ್ರಾಬಲ್ಯವೇ ಹೆಚ್ಚಾಗಿತ್ತು.

ಕರ್ನಾಟಕದಲ್ಲಿ ೧೦,೦೦೦ ಗ್ರಾಮದೇವತೆಗಳಿವೆ ಎಂದು ಶ್ರೀ ಡಿ.ಲಿಂಗಯ್ಯನವರು ಅಭಿಪ್ರಾಯಪಡುತ್ತಾರೆ. ಅವರ ಪೈಕಿ ಪ್ರಸಿದ್ಧ ದೇವತೆಗಳೆಂದರೆ, ದುರ್ಗ, ಕಾಳಿ, ಎಲ್ಲಮ್ಮ, ಮಾರಿ, ದೇವಿ, ಮೂಕಮ್ಮ, ಚೌಡಿ, ಕನ್ನಿಕಾಪರಮೇಶ್ವರಿ, ರಾಜರಾಜೇಶ್ವರಿ, ಚಾಮುಂಡಿ ಇತ್ಯಾದಿ. ದೇವತೆಗಳ ಗುಡಿಯು ಸಾಮಾನ್ಯವಾಗಿ ಊರಿನ ಗಡಿಯ ಹತ್ತಿರದಲ್ಲಿರುತ್ತದೆ. ಊರಿನ ಮಧ್ಯದಲ್ಲಿಯೂ, ಊರ ಮುಂಭಾಗದಲ್ಲಿಯೂ ಇರುವುದುಂಟು. ಗ್ರಾಮದೇವತೆ ಊರಿನ ರಕ್ಷಕ ದೇವತೆ. ದೇವತೆಯ ಮೂರ್ತಿ ಅತಿ ಸರಳ. ಸ್ತ್ರೀ ರೂಪದ ಆಕೃತಿಯಿರಬೇಕೆಂಬ ನಿಯಮವಿಲ್ಲ. ಕೆಲವು ಗುಡಿಗಳಲ್ಲಿ ಕೇವಲ ಗುಂಡುಕಲ್ಲು ಮಾತ್ರ ಇರುತ್ತದೆ. ನೆಲದ ಮೇಲೆ ನೆಟ್ಟ ಒಂದು ತ್ರಿಶೂಲ ಅಥವಾ ಈಟಿಯೇ ದೇವತೆ. ದೇವತೆಯು ಒಂದು ಹುತ್ತ ಅಥವಾ ಮಣ್ಣಿನ ಗದ್ದುಗೆ ಅಥವಾ ಕಲ್ಲಿನ ಮಂಚದ ರೂಪದಲ್ಲಿರಬಹುದು. "ಗ್ರಾಮದೇವತೆಗೆ ಗುಡಿಗೋಪುರಗಳಿರಬೇಕೆಂಬ ಕಟ್ಟಳೆ ಇಲ್ಲ.

ಚೆನ್ನಾಗಿ ನೆರಳು ಕೊಡುವ ಒಂದೆರಡು ಪವಿತ್ರವಾದ ಮರಗಳಡಿಯಲ್ಲಿ ಅಮ್ಮನವರ ಕಲ್ಲುಗಳು ಇರುವುದೂ ಇದೆ. ಕೆಲವೊಮ್ಮೆ ಗುಡಿಯನ್ನು ಸೂಚಿಸುವುದಕ್ಕೆ ಅಲ್ಲೇ ಹತ್ತಿರದಲ್ಲಿರುವ ಮರವೊಂದರ ಮೇಲೆ ಕೆಂಪು ಅಥವಾ ಕೇಸರಿ ಬಣ್ಣದ ಧ್ವಜ. ಪತಾಕೆಗಳನ್ನು ಕಟ್ಟಿರುತ್ತಾರೆ."[೨೬]

ಗ್ರಾಮದೇವತೆಯ ಒಂದು ಪ್ರಧಾನ ಲಕ್ಷಣವೆಂದರೆ "ಅವರು ಸ್ಥಳೀಯ ಮೂಲದಿಂದ ಬಂದವರು. ಅವರ ಪ್ರಭಾವ ಅವರ ಗ್ರಾಮದ ಗಡಿಗಳೊಳಗೆ. ಎರಡನೆಯದಾಗಿ ಮಾನವ ಮೂಲದಿಂದ ಬಂದವರು. ದೇವತೆಗಳಾಗುವ ಮೊದಲು ಮಾನವ ರೂಪದಲ್ಲಿರುವರು. ಮೂರನೆಯದಾಗಿ ಬ್ರಾಹ್ಮಣೇತರರಾದ ಕೆಳ ಜಾತಿಯವರು ಆರಾಧಿಸುವ ದೈವಗಳು, ನಾಲ್ಕನೆಯದಾಗಿ ಬ್ರಾಹ್ಮಣೇತರ ಜಾತಿಗಳಿಗೆ ಸೇರಿದ ಪೂಜಾರಿಗಳಿಂದ ಪೂಜಿಸಲ್ಪಡುವವರು. ಪ್ರಸಿದ್ಧವಾದ ದೇವಾಲಯಗಳಲ್ಲಿ ಬ್ರಾಹ್ಮಣರು ಪೂಜೆಗಾಗಿ ಬರಬಹುದು. ಐದನೆಯದಾಗಿ ಗ್ರಾಮದೇವತೆಗಳ ಭಕ್ತರು ಮಾತನಾಡುವ, ಅಂದರೆ ಸ್ಥಳೀಯ ಭಾಷೆಯಲ್ಲೇ ಅವರೂ ಮಾತನಾಡುತ್ತಾರೆ. ಆರನೆಯದಾಗಿ ಗ್ರಾಮ ದೇವತೆಗಳ ಪೂಜಾ ವಿಧಾನ ತುಂಬಾ ಸರಳ."[೨೮] "ಕೆಲವು ಗ್ರಾಮ ದೇವತೆಗಳಿಗೆ ಬೈಗುಳ ಅಶ್ಲೀಲ ಭಾಷೆಯೂ ಬಹಳ ಪ್ರಿಯ."[೨೯]

"ಗ್ರಾಮದೇವತೆಗಳ ಲಕ್ಷಣಗಳನ್ನು ವೈಟ್‌ಹೆಡ್‌ರವರು ಕೆಳಕಂಡಂತೆ ಸಂಗ್ರಹಿಸಿದ್ದಾರೆ.

೧. ಇವಳು ಭಯಂಕರ ಸ್ವರೂಪಳು. ಚತುರ್ಭುಜಗಳಿಂದ ಚಿತ್ರಿಸಲ್ಪಟ್ಟು ಯಮ, ಶೂಲ, ಕಪಾಲ, ಗದೆ, ಖಡ್ಗ ಹಸ್ತಳಾಗಿ, ಉದ್ದನೆಯ ನಾಲಗೆಯುಳ್ಳವಳಾಗಿ ವಿಕಟವಾದ ಹಲ್ಲುಗಳಿಂದ ಕೂಡಿ, ವಿಶಾಲ ನೇತ್ರಳಾಗಿ ಕರಾಳವದನಳಾಗಿ, ನೋಡಿದವರಿಗೆ ತಕ್ಷಣ ಭಯವನ್ನುಂಟು ಮಾಡುವಂತಿರುತ್ತಾಳೆ.

೨. ಬಲಿ ಪ್ರಿಯಳು, ನರಬಲಿಯನ್ನಿಷ್ಟಪಡುವವಳು, ರಕ್ತ, ಮದ್ಯ ಪಾನಾಸಕ್ತಳು, ಮಾಂಸಾಹಾರ ಪ್ರಿಯಳು.

೩. ಕೇಡನ್ನುಂಟು ಮಾಡುವಳೆಂಬ ಭಯದಿಂದಲೇ ಪೂಜಿಸಲ್ಪಡುವವಳು, ಭಕ್ತಿ ಗೌಣವಾಗಿದ್ದರೆ ಭಯ ಪ್ರಧಾನವಾಗಿರುತ್ತದೆ.

೪. ತನ್ನನ್ನೂ ಮರೆತವರಿಗೆ, ಅಲಕ್ಷಿಸಿದವರಿಗೆ ಕಷ್ಟ ಕೊಟ್ಟು, ರೋಗ ರುಜಿನಗಳನ್ನುಂಟು ಮಾಡುವುದು ಈಕೆಗೆ ಬಹು ಪ್ರಿಯವಾದ ಕೆಲಸ.

೫. ನಂಬಿದ ಭಕ್ತರಿಗೆ ಜನ್ಮ ನೀಡಿದ ತಾಯಿಯಂತೆ ಮಮತೆಯುಳ್ಳ ಜಗನ್ಮಾತೆಯೂ ಜಗದ್ರಕ್ಷಕಳೂ ಆಗುತ್ತಾಳೆ.

೬. ಸಾಂಕ್ರಾಮಿಕ ರೋಗಗಳನ್ನು ಹರಡುವವಳು, ನಿಯಂತ್ರಿಸುವವಳೂ ಇವಳೇ. ಜನರನ್ನು ಜಾನುವಾರುಗಳನ್ನು ಗ್ರಹಬಾಧೆ, ರೋಗ ರುಜಿನ, ಶತ್ರುಗಳ ಬಾಧೆಗಳಿಂದ ಕಾಪಾಡುತ್ತಾಳೆ. ಗ್ರಾಮಗಳನ್ನು ರಕ್ಷಿಸುತ್ತಾಳೆ, ಕೆರೆಕಟ್ಟೆ ಬಾವಿ, ಬೆಳೆಗಳನ್ನು ರಕ್ಷಿಸುತ್ತಾಳೆ.

೭. ಗ್ರಾಮದ ಹೊರಗೆ ಬೇವಿನ ಮರದ ಕೆಳಗೆ, ಹಳೆಯ ಹುತ್ತಗಳಲ್ಲಿ ಕೆರೆಕಟ್ಟೆಗಳ ಮಧ್ಯೆ ವಾಸಿಸುತ್ತಾಳೆ. ಹಾವಿನ ರೂಪದಲ್ಲಿರುತ್ತಾಳೆ."[೩೦]

ಗ್ರಾಮದೇವತೆಗಳು ಭಯಂಕರ ರೋಗಗಳನ್ನು ಹರಡುವಂಥವೂ ಎಂಬ ನಂಬಿಕೆ ಇದೆ. ಕೆಲವು ರೋಗಗಳಿಗೆ ಅಮ್ಮ ಎಂಬ ವಿಶೇಷಣವನ್ನು ಸೇರಿಸಿ ರೋಗಾದಿ ದೇವತೆಯನ್ನಾಗಿ ಕರೆದಿರುವುದುಂಟು. ಉದಾಹರಣೆಗೆ ಪ್ಲೇಗಿನಮ್ಮ, ಕಾಲರಮ್ಮ, ಸಿಡುಬಿನಮ್ಮ, ಸುಂಕಿನಮ್ಮ ಇತ್ಯಾದಿ. ಜೊತೆಗೆ ಆಯಾ ಊರುಗಳ ಹೆಸರಿನ ಕೊನೆಗೆ ಅಮ್ಮ ಎಂಬ ವಿಶೇಷಣವನ್ನು ಸೇರಿಸಿಕೊಂಡು ಅದು ಆ ಊರಿನ ದೇವತೆ ಎಂದು ಮಾರಿಯನ್ನು ಪೂಜಿಸುವ ಪದ್ಧತಿಯೂ ಇದೆ. ಉದಾ. ನಲ್ಲೂರಮ್ಮ, ಅಂತರಗಟ್ಟೆ ಅಮ್ಮ, ಆನೆಕೆರೆ ಮಾರಮ್ಮ, ಏಳೂರಮ್ಮ, ಕಬ್ಬಾಳಮ್ಮ, ಹೊಸೂರಮ್ಮ, ಕೂತಿನಾಡಮ್ಮ, ಕಂಚಿಕಾಳಾಸದಮ್ಮ, ಕೋಲಾರಮ್ಮ ಇತ್ಯಾದಿ. "ಈ ಎಲ್ಲ ಗ್ರಾಮದೇವತೆಗಳಲ್ಲಿ ಮಾರಿಯೇ ಪ್ರಬಲ ದೇವತೆ. ಯಾಕೆಂದರೆ ಆಕೆ ರೌದ್ರ ರೂಪವನ್ನು ಕುರಿತಂತೆ ಜನಪದ ಸಾಹಿತ್ಯದಲ್ಲಿ ಹಲವಾರು ಮಾಹಿತಿಗಳು ದೊರಕುತ್ತವೆ."[೩೧]

ಶಕ್ತಿಯೇ ಪಾರ್ವತಿ. ಪಾರ್ವತಿಯ ಬದಲಾದ ರೂಪವೇ ಮಾರಿಯಮ್ಮ. ಮಾರಿ ಎಂದರೆ ಹಿರಿದಾದ ಒಂದು ರೋಗ. ಆ ಹಿರಿದಾದ ರೋಗ ಎಂದರೆ ಕಾಲರ, ಪ್ಲೇಗು ಮತ್ತು ಕುಷ್ಟ ರೋಗ. ಈ ರೋಗದ ನಿವಾರಣೆ ಮಾರಮ್ಮನಿಂದಲೇ ಸಾಧ್ಯ ಎಂಬ ನಂಬಿಕೆ ಜನಪದರಲ್ಲಿದೆ. ದೇವಿಗೆ ಕೋಪ ಬಂದಾಗ ರೋಗ ಹರಡುವಳು. ಹಾಗೆ ದೇವಿ ಶಾಂತವಾದರೆ ರೋಗ ನಿವಾರಣೆಯಾಗುತ್ತದೆಂದು ತಿಳಿದರು. ಈಕೆ ಜನಪದರ ಗ್ರಾಮದೇವತೆಯಾದಳು. ಮುಂದುವರೆದು, ಗ್ರಾಮದೇವತೆಗಳು ಸಪ್ತಮಾತೃಕೆಯರಾದರು. ಅವರೆಂದರೆ, ದ್ಯಾವಮ್ಮ, ಮರಗಮ್ಮ, ಎಲ್ಲಮ್ಮ, ಪಾಲಕಮ್ಮ, ದುರುಗಮ್ಮ, ಕಾಳಮ್ಮ ಮತ್ತು ಚೌಡಮ್ಮ ಈ ಏಳು ಮಂದಿಯೂ ಅಕ್ಕ ತಂಗಿಯರು. ಇವರು ಹುಟ್ಟು, ನೆಲೆ, ಮಾನವ ಬೆಳೆಯುತ್ತ ಬಂದಂತೆ ಆದುದು. ಮೂಲದಲ್ಲಿ ಎಲ್ಲಾ ಗ್ರಾಮದೇವತೆಗಳು ಮಾಂಸಹಾರಿಗಳಾಗಿದ್ದರು. ಬೌದ್ಧ, ಜೈನರ ಪ್ರಭಾವದಿಂದ ಬ್ರಾಹ್ಮಣರು ಶಾಖಾಹಾರಿಗಳಾದಂತೆ, ಅವರು ಪೂಜಿಸುವ ದೇವತೆಗಳೂ ಶಾಖಾಹಾರಿಗಳಾದರು. ಗ್ರಾಮದೇವತೆಗಳನ್ನು ಊರಿನವರೆಲ್ಲರೂ ಪೂಜಿಸಿದರೂ, ಒಂದೊಂದು ಜನಾಂಗವೂ ಪೂಜಿಸುವುದು. ಗ್ರಾಮದೇವತೆಗಳ ಪೂಜಿಸುವ ಕ್ರಮದ ಮೇಲಿಂದ ಭಂಡಾರದ ದೇವತೆಗಳು, ಕುಂಕುಮದ ದೇವತೆಗಳೆಂದು ವಿಭಜಿಸಲಾಗಿದೆ. ಭಂಡಾರದ ದೇವತೆಗಳು ಮೂಲ ದ್ರಾವಿಡ ದೇವತೆಗಳು. ಉದಾ. ದ್ಯಾವಮ್ಮ, ಎಲ್ಲಮ್ಮ, ಮರಗಮ್ಮ, ದುರಗಮ್ಮ, ಪಾಲ್ಕಮ್ಮ, ಕುಂಕುಮ ದೇವತೆಗಳು. ಆರ್ಯರ ಸಂಪರ್ಕದಿಂದ ಶಿಷ್ಟರ ಕಡೆಗೆ ವಾಲಿದ ದೇವತೆಗಳು. ಉದಾ. ಕಾಳಮ್ಮ, ಚೌಡಮ್ಮ ಸ್ಥಳ ದೇವತೆಗಳ ಗುಡಿಗಳು ಮತ್ತು ಮೂರ್ತಿಗಳು ಚಿಕ್ಕವು.

ಮಾರಮ್ಮನ ಕುರಿತು ಕಥೆ ಪುರಾಣ, ಐತಿಹ್ಯಗಳನ್ನು ಗಮನಿಸಿದರೆ ಮಾರಮ್ಮ ಪದದ ನಿಷ್ಪತ್ತಿಯ ಕಡೆ ಗಮನ ಹರಿಸಿದರೆ, "ಆದಿ ಮಾನವ ಮೊದಲು ಪ್ರಕೃತಿಯಲ್ಲಿ ಮರವನ್ನು ಪೂಜಿಸುತ್ತಿದ್ದ. ಫಲ ನೀಡುವ ಪ್ರತಿಯೊಂದನ್ನು ಫಲವತ್ತತೆಯ ಸಂಕೇತವಾದ ಸ್ತ್ರೀ ಹೆಸರಿನಲ್ಲಿ ಕರೆಯುವುದು ವಾಡಿಕೆ."[೩೨] 'ಮರದಮ್ಮ'ನೇ ಮಾರಮ್ಮ ಆಗಿರಬಹುದು ಎಂದು ಕೆಲವರು ಊಹಿಸುತ್ತಾರೆ. "ರೋಗವನ್ನು ತರಬಲ್ಲವಳು ಮತ್ತು ಹೋಗಲಾಡಿಸಬಲ್ಲವಳೇ ಮಾರಮ್ಮ ಎಂದೂ ಜನ ನಂಬುತ್ತಾರೆ. ತಮಿಳಿನಲ್ಲಿ 'ಮಾರಿ' ಎಂದರೆ 'ದೊಡ್ಡಮಳೆ.' ತುಳು ಭಾಷೆಯಲ್ಲಿ 'ಮಾರಿ' ಪದಕ್ಕೆ ದೊಡ್ಡದು"[೩೩] ಎಂಬ ಅರ್ಥವಿದೆ.

ಎಲ್ಲ ಗ್ರಾಮದೇವತೆಗಳಿಗೂ ಇರುವಂತೆ ಮಾರಿಯನ್ನು ಕುರಿತು ಪುರಾಣ ಮೂಲ ಕಥೆಯಿದೆ. ಬ್ರಾಹ್ಮಣ ಹುಡುಗಿಯನ್ನು ಹೊಲೆಯ ಹುಡುಗನೊಬ್ಬ ಸುಳ್ಳು ಹೇಳಿ ಮದುವೆಯಾದ. ಒಮ್ಮೆ ಹೊಲೆಯ ಹುಡುಗನ ತಾಯಿ ಬಂದಾಗ, ಮನೆಯಲ್ಲಿ ಊಟ ಮಾಡುವಾಗ, ಊಟದ ರುಚಿ ಹೇಗಿದೆ ಎಂದು ತನ್ನ ತಾಯಿಯನ್ನು ಮಗ ಕೇಳಿದ ಆಕೆ "ನಮ್ಮದೊಂದು ಕೋಣನ ಕರುವಿನ ಕಾಲಿನ ಬೆಲೆಯಿಲ್ಲ."[೩೪] ಎಂದು ನುಡಿದು ಬಿಟ್ಟಳು. ಹೆಂಡತಿಗೆ ತನ್ನ ಗಂಡ ಹೊಲೆಯರವನು ಎಂದು ತಿಳಿದ ಕೂಡಲೇ ಗಂಡನ ಮೇಲೆ ಸಿಟ್ಟಾಗಿ ಸೇಡು ತೀರಿಸಿ ಕೊಳ್ಳಲು ಬೆಂಕಿಗೆ ಆಹುತಿಯಾದಳು. ನಂತರ ಮಾರಿಯಾಗಿ ಹುಟ್ಟಿ ಆಕೆ ಬೆನ್ನು ಹತ್ತಿ, ಕೋಣವಾಗಿ, ಕುರಿಯಾಗಿ ಓಡಿ ಹೋಗುವ ಮೋಸ ಮಾಡಿದ ತನ್ನ ಗಂಡನನ್ನು ಹಿಡಿದು ಕಡಿದಳು. ಅದಕ್ಕಾಗಿಯೇ ಮಾರಮ್ಮನಿಗೆ ಕೋಣ, ಕುರಿಯನ್ನು ಬಲಿ ಕೊಡುತ್ತಾರೆ. ಇದು ಮಾರಿಯ ಬಗೆಗಿರುವ ಕಥೆ. ಹೀಗೆ ಈಕೆಯ ಬಗ್ಗೆ ನಾನಾ ಕಥೆಗಳಿವೆ.

"ಇಂತಹ ಕಥೆಗಳ ಹಿಂದೆ ಭಾರತೀಯ ವರ್ಣ ಮತ್ತು ವರ್ಗ ಸಂಘರ್ಷದ ದುರಂತದ ಕುಟಿಲತೆ ಇತ್ಯಾದಿಗಳ ಇತಿಹಾಸ ಅಡಗಿದೆ."[೩೫] ಎಂದಿದ್ದಾರೆ ಡಾ.ಮಂಜುನಾಥ ಬೇವಿನಕಟ್ಟಿ.

"ಇಲ್ಲಿ ಕೋಣ ಬಲಿಯನ್ನು ಉದಾಹರಣೆಯಾಗಿ ತೆಗೆದುಕೊಂಡರೆ, ಇದು ಮೂಲತಃ ಜಾತಿಯ ಪಾವಿತ್ರ್ಯವನ್ನು ನಾಶಮಾಡಿದ ದಲಿತನ ಅಪರಾಧಕ್ಕಾಗಿ, ಪ್ರತಿ ವರ್ಷ ಅಭಿನಯವಾಗುತ್ತಿರುವ ಶಿಕ್ಷೆಯಾಗಿದೆ."[೩೬]

ಯಾವುದೇ ದೇವತೆಗೆ ಕುರಿ, ಕೋಣ ಮುಂತಾದ ಪ್ರಾಣಿಗಳ ಬಲಿ ಕೊಡುವಾಗ ಜನಪದರ ದೃಷ್ಟಿಯಲ್ಲಿ ಇದು ಕೇವಲ ಅರ್ಪಣೆ ಎನ್ನುವ ಭಾವನೆ ಮಾತ್ರ ಇರುವುದಿಲ್ಲ. ಬಲಿ ಪದ್ಧತಿಯ ಮೂಲಕ ಒಂದು ವೃಂದ ತನ್ನ ಅಸಂತೃಪ್ತ ದೇವತೆಯನ್ನು ಸಂತೃಪ್ತಗೊಳಿಸಿ ಆ ದೇವರೊಂದಿಗೆ ತಾನೂ ಬಂದಿದ್ದೇನೆ ಎಂದು ಭಾವಿಸುತ್ತಾ ಬಂದಿತು. ಬಲಿ ಪದ್ಧತಿಯಿಂದ ರಕ್ತವನ್ನು ಚೆಲ್ಲಿದಾಗ ಆ ದೇವತೆಗೂ ತಮಗೂ ಒಂದು ಅವಿನಾಭಾವ ರಕ್ತ ಸಂಬಂಧ ಏರ್ಪಡುತ್ತದೆ ಎನ್ನುವುದು ಇವರ ಆಳವಾದ ತಿಳುವಳಿಕೆ.

ಕಾಲರಾ ಬಂದಾಗ ಗ್ರಾಮದೇವತೆ ಅದರಲ್ಲೂ ಸ್ತ್ರೀ ದೇವತೆಗೆ ಮೊರೆಯಿಡುವುದು ಈ ದೇವತೆಗಿರುವ ಅಪರಿಮಿತ ಶಕ್ತಿಯನ್ನು ನಿರೂಪಿಸುತ್ತದೆ ಮತ್ತು ಜನಪದರು ಮಾತೃ ಮೂಲ ಕುಟುಂಬದಿಂದ ಬಂದುದರ ಸಂಕೇತವೆನ್ನುತ್ತಾರೆ ಡಾ.ವೈ.ಸಿ.ಭಾನುಮತಿಯರು. ಅವರು ತಿಳಿಸುವಂತೆ "ಚಾಮರಾಜನಗರ ಜಿಲ್ಲೆಯ ಕೆಲವು ದಲಿತ ಸಮುದಾಯದಲ್ಲಿ ದೊಡ್ಡಮ್ಮತಾಯಿ ಮತ್ತು ಮಂಟೇಸ್ವಾಮಿಯನ್ನು ಪೂಜಿಸಿ ಬೀದಿ ಬೀದಿಯಲ್ಲಿ ಉತ್ಸವ ಮಾಡುತ್ತಾರೆ. ಇವರು ಊರಿನ ರಕ್ಷಕ ದೇವತೆಗಳು. ಈ ಸಂದರ್ಭದಲ್ಲಿ ಪಾರ್ವತಿ ದೇವರ ಗುಡ್ಡರು, ಮಾದೇಶ್ವರ ದೇವರ ಗುಡ್ಡರು ಕಂಡಾಯ ಹೊತ್ತು ಸಂಚರಿಸುವರು. ತಮ್ಮಡಿಗಳು ರೋಗವನ್ನು ಹೊರಗೆ ಅಟ್ಟುವ ರೀತಿಯಲ್ಲಿ ಜೋರಾಗಿ ಕೂಗುತ್ತಾ ಕೇಳುಗರಲ್ಲಿ ಭಯ ಮೂಡಿಸುವರು. ಮನೆಗಳಲ್ಲಿ ಮಡಕೆ ಇಕ್ಕುವುದು ಎಂದು ಮನೆ ಶುಚಿಗೊಳಿಸಿ ಹಳೆಯದನ್ನೆಲ್ಲ ಹೊರ ಹಾಕಿ ಹೊಸ ಮಡಕೆ ಇಟ್ಟು, ಪುನರಾರಂಭಿಸುತ್ತಾರೆ. ಮಡಕೆ ತೆಗೆಯುವ ಸಂದರ್ಭದಲ್ಲಿ ದಾಸಯ್ಯನನ್ನು ಕರೆಸಿ ಮನೆಗೆ ಪುಣ್ಯಾರ್ಚನೆ ಮಾಡಿಸುವುದುಂಟು."[೩೭]

ಮಾರಿಯನ್ನು ಊರು ಮಾರಿ, ಬಿಸಿಲು ಮಾರಿ, ಗುಡಿ ಮಾರಿಗಳೆಂದು ಮೂರು ಬಗೆಯಲ್ಲಿ ಜಾನಪದರು ವಿಂಗಡಿಸಿದ್ದಾರೆ. ಊರು ಮಾರಿ, ಊರ ಒಳಗಿನ ಮಾರಿ. ತನ್ನ ಊರೊಳಗೆ ಅಥವಾ ಹಟ್ಟಿಗಳಲ್ಲಿ ಯಾವುದೇ ತೊಂದರೆಯಾಗದ ಹಾಗೆ ನೋಡಿಕೊಳ್ಳುತ್ತಾಳೆ. ಊರಿನಲ್ಲಿ ಕಾಲರಾ, ಪ್ಲೇಗ್ ಮತ್ತಿತರ ರೋಗ ರುಜಿನಗಳು ಬಂದರೆ ಊರಿನವರೆಲ್ಲಾ ಸೇರಿ ಊರು ಮಾರಿಯ ಹೆಸರಿನಲ್ಲಿ ಬಲಿ ಕೊಡುತ್ತಾರೆ. ಆಗ ಊರು ಮಾರಿ ಶಾಂತಳಾಗು ತ್ತಾಳೆ ಎನ್ನುವ ನಂಬಿಕೆ ಇದೆ. ಮಾರಿಯ ಭಂಡಾರವನ್ನು ಖಾಯಿಲೆ ಆದ ದನಕರುಗಳಿಗೆ, ಕೊಟ್ಟಿಗೆಗೆ ಚೆಲ್ಲಿದರೆ ಬೇನೆ ಕಡಿಮೆ ಆಗುತ್ತದೆಂಬ ನಂಬಿಕೆ, ಬಿಸಿಲು ಮಾರಿ ಊರ ಹೊರಗಿನ ಮಾರಿ. ಊರ ಹೊರಗಿನ ರೋಗರುಜಿ ನಗಳನ್ನು ತಮ್ಮ ಊರೊಳಗೆ ಬರದ ಹಾಗೆ ನೋಡಿಕೊಳ್ಳುತ್ತಾಳೆ. ಒಂದು ವೇಳೆ ಬೇನೆ ಕಾಣಿಸಿಕೊಂಡರೆ, ಬಿಸಿಲು ಮಾರಿಯ ಹೆಸರಿನಲ್ಲಿ ಹಬ್ಬದ ಕುರಿಯನ್ನು ಬಲಿ ಕೊಡುತ್ತಾರೆ.

ಗಡಿ ಮಾರಿಗೆ, ಸೀಮೆಯಮಾರಿ, ಊರ ಕಾವಲು ಮಾರಿ, ಏಳು ಮಕ್ಕಳ ತಾಯಿ ಎಂದು ಕರೆಯುತ್ತಾರೆ. ಈ ಮಾರಿಯು ಊರಗಡಿ ಸೀಮೆಯನ್ನು ಕಾವಲು ಮಾಡುತ್ತಾಳೆ. ಗಡಿ ಮಾರಿಯ ಹೊರ ಸೀಮೆಯ ರೋಗ ರುಜಿನಗಳನ್ನು ತನ್ನ ಸೀಮೆ ಒಳಗೆ ಬರಲಾರದ ಹಾಗೆ ಕಾಪಾಡಿ ಕೊಳ್ಳುತ್ತಾಳೆ. ದೊಡ್ಡ ಬ್ಯಾನಿ ಮತ್ತೇನಾದರೂ ಬಂದರೆ ಗಡಿ ಮಾರಿ ಹೆಸರಿನ ಮೇಲೆ, ಊರಲ್ಲಿಯ ಜನರು ಸೇರಿ ಮೂರೂರ ಸೀಮೆಯ ಕೂಡಿದಲ್ಲಿ ಹೋಗಿ, ಕೋಣವನ್ನು ಬಲಿ ಕೊಡುತ್ತಾರೆ.

ಕರ್ನಾಟಕದ ಹಲವಾರು ಹಳ್ಳಿಗಳಲ್ಲಿ ಗ್ರಾಮದೇವತೆಗಳು ಇನ್ನು ಜೀವಂತವಾಗಿವೆ. ಗ್ರಾಮದೇವತೆಗಳ ಹೆಸರಿನ ಮೇಲೆ ಪ್ರತಿ ವರ್ಷವೂ ಕುರಿ, ಮೇಕೆ, ಕೋಣಗಳನ್ನೂ ಬಲಿ ಕೊಡುವುದು ಇವತ್ತಿಗೂ ರೂಢಿಯಲ್ಲಿದೆ.

ಮಂಟೇಸ್ವಾಮಿ ಕಾವ್ಯದಲ್ಲಿ ವ್ಯಾಪಕವಾಗಿ ಮಂಟೇಸ್ವಾಮಿ ಮತ್ತು ಸಿದ್ದಪ್ಪಾಜಿಯ ಬಗ್ಗೆ ಮಾರಿಯರ ಪ್ರಸ್ತಾಪ ಬರುತ್ತದೆ. ಮಂಟೇಸ್ವಾಮಿ ಮತ್ತು ಮಾದೇಶ್ವರರು ಮಾರಿಯರನ್ನು ತಮ್ಮ ಕೈವಶ ಮಾಡಿಕೊಂಡು, ಅವರಿಂದ ಕೆಲಸ ತೆಗೆಯುತ್ತಾರೆ. ಮಾರಿ ಮಸಣಿ, ದುರ್ಗಿ, ಚೌಡಿಯನ್ನು ವಶಪಡಿಸಿಕೊಳ್ಳುವ ಬಗ್ಗೆ ತಿಳಿಯುವ ಮುನ್ನ ಈ ಇಬ್ಬರು ಧಾರ್ಮಿಕ ಪುರುಷರ ಪವಾಡಗಳ ಬಗ್ಗೆ ತಿಳಿಯುವುದು ಸೂಕ್ತ.

"ಜನಪದರ ದೈನಂದಿನ ಬದುಕಿನ ಬಹುಮುಖ್ಯ, ಲಕ್ಷಣಗಳಲ್ಲೊಂದು ದೈವ ಭಕ್ತಿ. ಜನಪದರು ದೈವ ಭಕ್ತಿ ಉಳ್ಳವರು. ತಮ್ಮ ಬದುಕಿಗೆ ಸಹಾಯವಾಗುವ ಎಲ್ಲ ವಸ್ತುಗಳಲ್ಲಿ ದೈವತ್ವವನ್ನು ಕಾಣುವ ದೃಷ್ಟಿ ಬೆಳೆಸಿ ಕೊಂಡಿದ್ದಾರೆ. ದೈವದ ಬಗ್ಗೆ ದೇವರ ಬಗ್ಗೆ ಜಿಜ್ಞಾಸೆ ಇಲ್ಲ. ಅಚಲವಾದ ನಂಬಿಕೆ. ಇದು ಅಲ್ಲಿಯ ಪವಾಡ ಮಹಿಮೆಯಿಂದ. ದೈವ, ಜನಪದರಿಗೆ ಹತ್ತಿರದ ಗೆಳೆಯ, ಒಡನಾಡಿ. ಹೀಗಾಗಿ ಜನಪದರಿಗೆ ಪವಾಡಗಳ ಬಗ್ಗೆ ಭಕ್ತಿ, ಪೂಜ್ಯತೆ ಇದೆ. ಅವುಗಳ ಬಗ್ಗೆ ಕುರಿತಾಗಲಿ, ಅದನ್ನು ಮಾಡುವವರ ಬಗ್ಗೆಯಾಗಲಿ ಪೂರ್ವ ವಿವೇಚನೆ ಮಾಡುವುದಿಲ್ಲ. ನಮ್ಮ ಧಾರ್ಮಿಕ ಸಂತರು, ಯೋಗಿಗಳು, ನಮ್ಮ ಜೀವನದ ಅವಿಭಾಜ್ಯ ಅಂಗ ವಾಗಿದ್ದು, ಅವರು ಮಾಡುವ ಪವಾಡಗಳು ಜನಪದರ ಸಮಸ್ಯೆಗಳಿಗೆ ಪರಿಹಾರವೆಂದು ಭಾವಿಸುತ್ತಾರೆ. ಧಾರ್ಮಿಕ ಮಹಾಪುರುಷರ ಪವಾಡಗಳು ಸಮಾಜದ ಮೇಲೆ ದುಷ್ಟ ಪರಿಣಾಮಕ್ಕಿಂತ ಸಾತ್ವಿಕ ಪರಿಣಾಮಗಳನ್ನುಂಟು ಮಾಡಿರುವುದನ್ನು ಮಹಾಕಾವ್ಯಗಳಲ್ಲಿ ಕಾಣಬಹುದು. ಅದರಲ್ಲೂ ಜನಪದ ಕಥಾ ಪ್ರಪಂಚದಲ್ಲಿ ಪವಾಡಗಳು ಬಹುಮುಖ್ಯ ಪಾತ್ರವನ್ನು ನಿರ್ವಹಿಸುತ್ತವೆ. ಜಗತ್ತಿನ ಎಲ್ಲಾ ಜನಪದ ಮಹಾಕಾವ್ಯಗಳಲ್ಲೂ ಪವಾಡಗಳು

ಕಡ್ಡಾಯವಾದ ಒಂದು ಸಾಮಾನ್ಯ ವಿಷಯ. ಜನಪದರಿಗೆ ಪವಾಡಗಳನ್ನು ಮೆರೆಯುವ ಧಾರ್ಮಿಕ ಮಹಾಪುರುಷರ ಬಗ್ಗೆ ವಿಶೇಷವಾದ ಆಸಕ್ತಿ. ಭಕ್ತಿ ಭಾವದಿಂದ ಅವರನ್ನು ನೋಡುವುದಲ್ಲದೆ ದೈವತ್ವಕ್ಕೂ ಅವರನ್ನೇರಿಸುತ್ತಾರೆ. ಜನಪದ ಸಾಹಿತ್ಯದಲ್ಲಿ ಪವಾಡಗಳಿಲ್ಲದೆ, ಕಥೆ ಕಾವ್ಯಗಳಿಗೆ ಜೀವಂತಿಕೆ ಇಲ್ಲ. ಪವಾಡಗಳ ಮೋಡಿಯೇ ಅದರ ಜೀವಾಳ ಪವಾಡಗಳೇ ಕಥೆಯ ಕೇಂದ್ರ ಬಿಂದು."[೩೮]

ಮಲೆಯಮಾದೇಶ್ವರ ಮತ್ತು ಮಂಟೇಸ್ವಾಮಿಗಳು, ಸಾಮಾನ್ಯರೊಡನೆ ಇದ್ದು, ಸಾಮಾನ್ಯರ ಕಷ್ಟ ಸುಖಗಳಲ್ಲಿ ಸಮಭಾಗಿಗಳಾಗಿ ಜನಪದರ ಬದುಕನ್ನು ಮೇಲೆತ್ತುವ ಪ್ರಯತ್ನದಿಂದ ಅವರಿಗೆ ಹತ್ತಿರವಾಗಿ ತಾವೂ ಆದರ್ಶ ವ್ಯಕ್ತಿಗಳಾದರು. ಪವಾಡಗಳ ಬಗ್ಗೆ ಆಸಕ್ತಿ ಇಲ್ಲದಿದ್ದರೂ, ದುಷ್ಟರನ್ನು ನಿಗ್ರಹಿಸಿ, ಶಿಷ್ಟರ ರಕ್ಷಣೆಗಾಗಿ, ಅವರನ್ನು ಒಳ್ಳೆಯ ದಾರಿಗೆ ತರುವಲ್ಲಿ ಪವಾಡಗಳು ಅವರಿಗೆ ಅನಿವಾರ್ಯವಾಗಿತ್ತು. ಮಾದೇಶ್ವರರ ಸಮಾಜ ಸೇವೆಯೇ ಒಂದು ರೀತಿಯ ಪವಾಡ ಎನ್ನಬಹುದು. ಮಾಟ, ಮಂತ್ರ, ಪವಾಡಗಳ ಬಗ್ಗೆ ಸರಳವಾಗಿ ಹೇಳುವುದಾದರೆ, ಮಾಟವೆಂದರೆ, ಮಾಡಿದ್ದು ಅಥವಾ ಮಾಡಿಸಿದ್ದು. ಇದರ ಹಿಂದೆ, ಅನಿಷ್ಟ ಉದ್ದೇಶವಿದೆ. ಮಂತ್ರವೆಂದರೆ ರಹಸ್ಯ ಆಲೋಚನೆ, ಇದರಲ್ಲಿ ಒಳ್ಳೆಯ ಮತ್ತು ಕುಹಕ ಮಂತ್ರ ವಿದ್ಯೆಗಳಿವೆ.

ಪವಾಡವು ಹೊರ ನೋಟಕ್ಕೆ ಬಹುಮಟ್ಟಿಗೆ- ಮಂತ್ರ ವಿದ್ಯೆಯಂತೆ ಕಂಡು ಬಂದರೂ ಪವಾಡವನ್ನು ಮಂತ್ರ ವಿದ್ಯೆಯೆಂದು ಪರಿಗಣಿಸಲಾಗುವುದಿಲ್ಲ. ಏಕೆಂದರೆ, ಇದರಲ್ಲಿ ಪವಾಡ ಪುರುಷನ ಸ್ವಾರ್ಥವಾಗಲಿ, ಮಂತ್ರ ವಿದ್ಯೆಗಳಲ್ಲಿರುವಂತೆ ಮಾಟದ ಅಂಶವಾಗಲಿ, ಆಚರಣೆಯ ನಿಯಮ ನಿಬಂಧನೆಗಳಾಗಲಿ ಇರುವುದಿಲ್ಲ. " 'ಪವಾಡ' ಎಂದರೆ ಧಾರ್ಮಿಕ ಅಥವಾ ಆಧ್ಯಾತ್ಮಿಕ ಕ್ಷೇತ್ರಕ್ಕೆ ಸೇರಿದ ವ್ಯಕ್ತಿಗಳು ಜನರ ಭಕ್ತಿ ಶ್ರದ್ಧೆಗಳನ್ನು ಗಟ್ಟಿಗೊಳಿಸುವ ಉದ್ದೇಶದಿಂದ ಮತ್ತು ಲೋಕಾನುಕಂಪನದಿಂದ ಪ್ರಾಸಂಗಿಕವಾಗಿ ಪ್ರದರ್ಶಿಸುವ ಕೆಲವು ಅಘಟಿತ ಘಟನೆಗಳು"[೩೯] ಎನ್ನುತ್ತಾರೆ ಡಾ.ಎನ್.ಎಸ್.ಸರಸ್ವತಿಯವರು. ಪವಾಡಗಳ ಹಿನ್ನೆಲೆಯಲ್ಲಿ ಸದ್ಭಾವನೆಗಳು ಕೆಲಸ ಮಾಡುತ್ತವೆ. "ಮಲೆಯಮಾದೇಶ್ವರ ಕಾವ್ಯವೆಂದರೆ ಅದೊಂದು ಮಾಯ ಮಾಟ ಮಂತ್ರಗಳ ಕಾವ್ಯ ಎಂದೇ ಹೇಳುವಷ್ಟರ ಮಟ್ಟಿಗೆ ಕಾವ್ಯದುದ್ದಕ್ಕೂ ಈ ಅಂಶಗಳು ತುಂಬಿಕೊಂಡಿವೆ. ಮಾದೇಶ್ವರು ತಾವು ಬಯಸಿದ್ದನ್ನು ಪಡೆಯುವ ಮತ್ತು ಅಂದುಕೊಂಡಿದ್ದನ್ನು ಮಾಡುವ ಮೂಲಕ ಸೋಲೇ ಇಲ್ಲದ ದೈವವಾಗುವುದು ಈ ಮಾಟದಿಂದಲೇ"[೪೦] ಎನ್ನುತ್ತಾರೆ ಪ್ರೊ.ಹಿ.ಚಿ.ಬೋರಲಿಂಗಯ್ಯನವರು.

"ಮಂಟೇಸ್ವಾಮಿಯನ್ನು 'ಧರೆಗೆ ದೊಡ್ಡವರು' ಎಂದು ಕರೆಯುವುದರಲ್ಲೇ ಒಂದು ತರ್ಕ ಅಡಗಿದೆ. ಸಾಮಾನ್ಯವಾಗಿ ಇಂಥ ಮಹಾತ್ಮರು ತ್ರಿಮೂರ್ತಿಗಳ ವರದಿಂದಲೋ ಇಲ್ಲ, ಅವರ ಶಾಪದಿಂದಲೋ, ಇಲ್ಲವೇ ಅದರ ಬೆವರಿಂದಲೋ ಹುಟ್ಟುವುದು ಸಾಂಪ್ರದಾಯಿಕ ಪುರಾಣಗಳ ವಾಡಿಕೆ. ಆದರೆ ಮಂಟೇಸ್ವಾಮಿ ಹುಟ್ಟಿನ ಪುರಾಣ ಇದೆಲ್ಲವನ್ನೂ ಮೀರಿದ್ದು. ಇವನೇ ಜಗತ್ತಿನ ಸೃಷ್ಟಿಕರ್ತ. ತ್ರಿಮೂರ್ತಿಗಳು, ಭೂಮಿ ತಾಯಿ, ಸೂರ್ಯ ಚಂದ್ರರನ್ನು ಸ್ವತಃ ಪಡೆದು ಇಡೀ ವಿಶ್ವದ ಸೃಷ್ಟಿಗೆ ಕಾರಣನಾಗುತ್ತಾನೆ. ಸಾಮಾಜಿಕವಾಗಿ ಎದುರು ನಿಂತಿರುವ ಒಂದು ಪ್ರತಿಷ್ಠಿತ ಧರ್ಮವನ್ನು ಎದರು ಹಾಕಿಕೊಳ್ಳಲು ಸಾಧ್ಯವಾಗದಾಗ ತಮ್ಮ ಸಾಂಸ್ಕೃತಿಕ ನಾಯಕನೊಬ್ಬ ನನ್ನು ಅತಿಮಾನುಷನನ್ನಾಗಿ ಸೃಷ್ಟಿಸಿ ಬಸವಣ್ಣನಿಗಿಂತ ಶಿವನಿಗಿಂತ ಅಥವಾ ಸೂರ್ಯ ಚಂದ್ರರಿಗಿಂತ ತಮ್ಮವನೇ ದೊಡ್ಡವನೆಂದು ಕರೆದುಕೊಳ್ಳುವ ಸಮಾಧಾನಕರ ಆಶಯ ಇಲ್ಲಿರುವಂತಿದೆ. ಆದ್ದರಿಂದಲೇ ಅವನು ಬ್ರಹ್ಮಾಂಡವನ್ನೇ ಸೃಷ್ಟಿಸಬಲ್ಲ ಮಾಯಕಾರನಾಗಿ ಅವನ ಭಕ್ತರಿಗೆ ತೋಚುತ್ತಾನೆ."[೪೧]

ಮಂಟೇಸ್ವಾಮಿಗಳು ಸ್ವಯಂಭೂ ಜಗತ್ತನ್ನೇ ಸೃಷ್ಟಿಸಬಲ್ಲ ಪವಾಡಗಾರ. ಮೋಡಿ, ಮಾಟ, ತಂತ್ರ ವಿದ್ಯೆಗಳನ್ನು ಉಪಯೋಗಿಸುವುದರಲ್ಲಿ ಚಾಣಾಕ್ಷ. ಸಮಾಜದಲ್ಲಿನ ದುರ್ನಡತೆಯನ್ನು ತಿದ್ದಿ, ಜನತೆಯನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಲು , ಧರ್ಮ, ದೈವಗಳ, ಗುರುಗಳ ಬಗ್ಗೆ ಸದ್ಭಾವನೆ, ಸದ್ಭಕ್ತಿ ಮೂಡುವಂತೆ ಮಾಡಲು ಪವಾಡಗಳಿಗೆ ನೆರವಾಗಲು ಮಾರಿ, ಮಸಣಿ, ದುರ್ಗಿ, ಚೌಡಿ ಮುಂತಾದ ಸ್ತ್ರೀದೇವತೆಗಳು ಜನಪದ ಮಹಾಕಾವ್ಯಗಳಲ್ಲಿ ಪ್ರಮುಖಪಾತ್ರ ವಹಿಸುತ್ತಾರೆ. 'ನರಮನುಷ್ಯ-ನರಮನುಷ್ಯನ ಬೊಗ್ಗದಿಲ್ಲಾ ಮಾರಿ ಉಯಿಲು ಅಂದ್ರ ಬೊಗ್ಗತಾನ' ಎಂದು ಹೇಳುವಲ್ಲಿ ಮಾರಿಯರು ಮನುಷ್ಯರಿಂದ ಪ್ರತ್ಯೇಕಿಸಲ್ಪಟ್ಟ ಶಕ್ತಿಗಳು ಎಂಬುದು ತಿಳಿಯುತ್ತದೆ.

ಮಂಟೇಸ್ವಾಮಿ ಮಹಾಕಾವ್ಯದಲ್ಲಿ ವಿಜಯನಗರದ ಗಾರುಡಿಗರ ಆರಾಧ್ಯ ದೇವತೆ ಕಾಳಿಕಾದೇವಿ. ಈಕೆ ರಾಚಪ್ಪಾಜಿಯನ್ನು ಮೋಡಿಯಲ್ಲಿ ಸೋಲಿಸಲು ನೆರವಾಗುತ್ತಾಳೆ. ಆದರೆ ಈ ದೇವತೆ ಮಂಟೇಸ್ವಾಮಿಗಳಿಗೆ ಸೋತು ಶರಣಾಗುತ್ತಾಳೆ.

ಮಂಟೇಸ್ವಾಮಿಗಳು ತಮ್ಮ ಗದ್ದುಗೆ ವರಿಸಲು, ಕಂಡಾಯ ಬೆಳಗಲು, ಮಠ ತೊಳೆಯಲು ಪೂಜೆಗೆ ಹೂ ತರಲು, ನಿಡುಘಟ್ಟ ಗ್ರಾಮದಲ್ಲಿರುವ ಬಸವಾಚಾರಿ ಮತ್ತು ಮುದ್ದಮ್ಮನವರ ಕಿರಿಯ ಮಗ ಕೆಂಪಣ್ಣನನ್ನು ಶಿಶುಮಗನನ್ನಾಗಿ ಮಾಡಿಕೊಳ್ಳಬೇಕೆಂದು ಆಲೋಚಿಸುತ್ತಾರೆ . ಈ ಕಿರಿಯ ಮಗ ಹುಟ್ಟಿದ ಮೇಲೆ ಆ ದಂಪತಿಗಳಿಗೆ ಶ್ರೀಮಂತಿಕೆ ಬಂದಿದೆ. ಗುರುಗಳು ಕ್ಯಾರಣ್ಯಕ್ಕೆ ಅವರ ಮನೆಗೆ ಬಂದಾಗ ಮಗನನ್ನು ಕೇಳುತ್ತಾರೆ. ಆ ದಂಪತಿಗಳು ಗುರುವಿಗೆ ಮಗನನ್ನು ಒಪ್ಪಿಸಲು ಒಪ್ಪುವುದಿಲ್ಲ, ಗುರು ನಾನು ಕೊಟ್ಟ ಮಗನನ್ನು, ನಾನೇ ಬಂದು ಭಿಕ್ಷೆ ಕೇಳಿದರೂ ಕೊಡಲು ಒಪ್ಪುತ್ತಿಲ್ಲವೆಂದುಕೊಂಡು ಕೆಂಪಣ್ಣನನ್ನು ಪರೀಕ್ಷೆ ಮಾಡೋಣವೆಂದು ಕುಲುಮೆ ಸ್ಥಳಕ್ಕೆ ಬರುತ್ತಾರೆ. ಆಗ, ಕೆಂಪಾಚಾರಿ ಅಯ್ಯೋ ಹುಚ್ಚುಕಾಡ ಪರದೇಶಿಯಾಗಿ ಬೇಡೋಕೆ ಕೇರಿ ಮನೆಗೆ ಹೋಗುವುದನ್ನು ಬಿಟ್ಟು ಕುಲುಮೆ ಸ್ಥಳದಲ್ಲಿ ನಿನಗೆ ಏನು ಕೆಲಸ ಎನ್ನಲಾಗಿ, ಮಂಟೇಸ್ವಾಮಿಗಳು ನನಗೆ, ಮುಪ್ಪಿನಕಾಲ, ಶಿಶುಮಗ ಇಲ್ಲವೆಂದು ಹೇಳುತ್ತಾ ಧೂಮಪಾನ ಮಾಡಲು ಬೆಂಕಿ ಕೆಂಡವನ್ನು ಕೇಳಿದರು. ದಪ್ಪದೊಂದು ಬೆಂಕಿ ಕೆಂಡವನ್ನು ಇಕ್ಕಲದಲ್ಲಿ ಹಿಡಿದುಕೊಂಡು ಗುರುವಿನ ಬಲದ ಹಸ್ತದ ಮೇಲೆ ಇರಿಸಿದನು. ಕೆಂಪಣ್ಣ ನೀಡಿದ ಬೆಂಕಿಯ ಕೆಂಡವನ್ನು ಹಸ್ತದೊಳಗೆ ಹಿಡಿದುಕೊಂಡು ಮೂರುಗಳಿಗೆ ಮೇಲೆ ಎರಡು ಕಣ್ಣುಗಳಿಗೆ, ಒತ್ತಿಕೊಂಡು ತಮ್ಮ ಜೋಳಿಗೆಗೆ ಬೆಂಕಿ ಕೆಂಡವನ್ನು ಹಾಕಿಕೊಂಡರು. ಈಗಲಾದರು ಶಿಶುಮಗ ಆಗುತ್ತೀಯಾ ಎನ್ನಲು ಆಗೋದಿಲ್ಲ ಎನ್ನುತ್ತಾನೆ ಕೆಂಪಣ್ಣ. ಆಗ ಮಂಟೇಸ್ವಾಮಿಗಳು ತಂದೆ , ತಾಯಿ, ಮಗ ಇವರೆಲ್ಲರ ದರ್ಪ ಮುರಿಯಬೇಕೆಂದು, ಅವರ ಮನೆಯ ಮಾರಿಯ ಮೂಲಕ ತನ್ನ ಕೆಲಸ ಸಾಧಿಸಬೇಕೆಂದು ಕುಂತೂರು ಬೆಟ್ಟದ ಕೊಡೇಕಲ್ಲಿನ ಮೇಲೆ ಕುಳಿತುಕೊಂಡು ಮಾರಿಯನ್ನು ಕೂಗುತ್ತಾರೆ.

ಮಾರಿಯರನ್ನು ಕೂಗುವ ರೋಮಾಂಚಕ ಸನ್ನಿವೇಶ ಮಂಟೇಸ್ವಾಮಿಗಳ ಉನ್ನತ ವ್ಯಕ್ತಿತ್ವವನ್ನು ತೋರುತ್ತದೆ. ''ಬನ್ರವ್ವ ಮಾರೀರೇ, ಬನ್ರವ್ವ ದುರ್ಗೀರೇ, ಬನ್ರವ್ವ ಚೌಡೀರೆ, ಎಂದೂ ನನ್ನ 'ಶಿವಸಮುದ್ರ'ದ ಮಾರವ್ವ ಎದ್ದು ಬಾವ್ವ, ನನ್ನ 'ಹೆಬ್ಬೆಟ್ಟರಿಯ ದೇವತೆ', ಓಡಿ ಬಾವ್ವ, ನನ್ನ ಕಟ್ಟುಕಟ್ಟುಗೆಲ್ಲ ಹಳ್ಳುಕದ ಮಾರಿ ಎದ್ದು ಬಾವ್ವ, ನನ್ನ ನಾಡಿನ ಮೇಲೆ ಬರುವ 'ನಾಗಳ ಮಾರಿ' ಎದ್ದು ಬಾವ್ವ, ನನ್ನ ಮೈಸೂರು

ಮನಸ್ಸನಕೆ 'ಬಸುಲು ಮಾರಿ' ಎದ್ದು ಬಾವ್ವ, ನನ್ನ 'ಕತ್ತಂಬಾಡಿ' ಬಾವ್ವ 'ಕೊಡಾಂಬಾಡಿ' ಬಾವ್ವ, ನನ್ನ 'ಗುತ್ತಿಗೆ ಗೂಳಿ ಮಾರಿ' ನನ್ನ 'ಮೂಗೂರು ಸಿದ್ದಿ ದೇವತೀ', ನನ್ನ 'ಬನ್ನೂರಿನ ಯಾಮಾದ್ರಿ' ಓಡಿ ಬಾರವ್ವ 'ಪಿರಿಯಪಟ್ಟಣದ ಮಾರಿ' ಎದ್ದು ಬಾವ್ವ ನನ್ನ ಕಂದಾ, ನನ್ನ 'ಮೂಗುರ ತಿಬ್ಬಾದೇವತೀ' ಬಾವ್ವ ನನ್ನ ಕಾಲು ಇಲ್ಲದ 'ಕುಂಟು ಮಾರಿ' ಬಾವ್ವ ಕೈಯಿಲ್ಲದ 'ಚೊತ್ತು ಮಾರಿ' ಬಾವ್ವ, ಮಾತಾಡದ 'ಮೂಗುಮಾರಿ' ಬಾವ್ವ, ಕಣ್ಣು ಇಲ್ಲದ 'ಕುಂಡುಮಾರಿ' ಬಾವ್ವ, ಕಿವಿಕೇಳ್ದ 'ಕಿವುಡಮಾರಿ' ಬಾವ್ವ, 'ಜರ್‍ದುಮಾರಿ' ಬಾವ್ವ, 'ಉಣ್ಣುಮಾರಿ' 'ಸಿಡುಬಿನ ಮಾರಿ' ಬಾವ್ವ, 'ವಾಂತ್ಬೇದಿ ಮಾರವ್ವ' ಬಾವ್ವ, ನಮ್ಮ ಹೆತ್ತಮ್ಮ 'ಎಲನಾತ್ತಿ' ನನ್ನ ಚಿಕ್ಕಮ್ಮ 'ಚಿಕ್ಕುದೇವಿ' ನನ್ನ ಅಕ್ಕಾಜೀ 'ದೊಡ್ಡಮ್ಮ' ನನ್ನ ದಂಡುನ ಮೇಲೆ ಬರುವ ದಂಡುವ ಮಾರಿ ಓಡಿ ಬಾವ್ವ, ಎಂದು ಸುತ್ತಾಳು ಮಾರಿಯರನ್ನು ಗುರುಗಳು ಪ್ರೇಮದಿಂದ ಕರೆಯುತ್ತಾರೆ.

ಮಂಟೇಸ್ವಾಮಿಗಳು ಮಾರಿಯರನ್ನು ಕೂಗುವುದೇ 'ನನ್ನ ಕಂದ ಬಾವ್ವ', ಎಂಬುವುದಾಗಿ. ಈ ಮಾತಿನಲ್ಲಿರುವ ಭಕ್ತವತ್ಸಲತೆ ಎಂತಹ ಮಾರಿಯರ ಅಂತಕರಣವನ್ನು ತಟ್ಟುತ್ತದೆ. "ಇಲ್ಲಿ ಶತ್ರುನಾಶವನ್ನು ಸೈನ್ಯಬಲದಿಂದ ಮಾಡುವುದರ ಬದಲು ರೋಗಗಳನ್ನು ಆವಾಹಿಸುವುದೆ ಇನ್ನೊಂದು ರೀತಿಯ ಶತ್ರುನಾಶ."[೪೨]

ದುರ್ಗಿ, ಚೌಡಿಯರು ಜನ ಕಲ್ಯಾಣಕ್ಕಾಗಿ ಹೋರಾಡಿದ ವೀರ ಮಾತೆಯರಾಗಿದ್ದಾರೆ. ಪ್ಲೇಗು, ಕಾಲರ, ಮುಂತಾದ ಮಹಾಮಾರಿಗಳು ಮನುಕುಲವನ್ನು ಸರ್ವನಾಶ ಮಾಡುವುದರಿಂದ ಅವುಗಳ ಬಗ್ಗೆ ಬಹಳಷ್ಟು ಹೆದರಿ ಪ್ಲೇಗಿನ ಹೆಸರಿನಲ್ಲಿ ಪ್ಲೇಗಮ್ಮ ಎಂಬ ದೇವತೆಗಳನ್ನು ಸೃಷ್ಟಿಸಿ ಅವುಗಳಿಗೆ ಪೂಜೆ ಸಲ್ಲಿಸುತ್ತಾರೆ. ಮೂಗೂರು ನರಸೀಪುರ ತಾಲ್ಲೂಕಿನಲ್ಲಿರುವ ಒಂದು ಗ್ರಾಮ. ಗ್ರಾಮದೇವತೆ ತಿಬ್ಬಾದೇವಿ ಪ್ರತಿವರ್ಷ ಜನವರಿ ತಿಂಗಳಲ್ಲಿ ಈ ದೇವತೆಗೆ ಬಂಡಿಹಬ್ಬ ನಡೆಯುತ್ತದೆ. ಈ ದೇವತೆಯ ಹೆಬ್ಬರಗಳು ಊರೂರು ಅಲೆದು ಎಣ್ಣೆ ಧಾನ್ಯಗಳನ್ನು ಭಿಕ್ಷೆಯಾಗಿ ಪಡೆದು ಬಂದು ಈ ಹಬ್ಬ ಮಾಡುತ್ತಾರೆ, ಮಂಟೇಸ್ವಾಮಿಗಳು ಪ್ರೀತಿಯಿಂದ ಕರೆಯುವ ನೂರೊಂದು ಮಾರಿಯರಲ್ಲಿ ಮೂಗೂರು ತಿಬ್ಬಾದೇವಿಯೂ ಒಬ್ಬಳು.

ಸುತ್ತೇಳು ಮಾರಿಯರನ್ನು ಪ್ರೀತಿಯಿಂದ ಕರೆದರು. ಸುತ್ತೇಳು ಮಾರಿಯರಿಗಿಂತ ಹೆಚ್ಚಿನ ಮಾರಿ ಅಂದರೆ ಸಾಮಾನ್ಯ ಮಾರಿಯಲ್ಲ ಮಾರಿಯರಿಗಿಂತ 'ಕೆಟ್ಟಾಮಾರಿ ದೃಷ್ಟಮಾರಿ' ಅಂದರೆ 'ಆಚಾರರ' ಮನೆದೇವರಾದ ಕುಲುಮೆಕಾಳಮ್ಮ ಏಳುನೂರು ಮಾರಿಗಿಂತ ಕೆಟ್ಟ ದೇವತೆ ಕಾಳಮ್ಮ, ಇವಳ ಇರುವಿಕೆಯನ್ನು ನೀಲಗಾರರು, ಬಹು ಸೊಗಸಾಗಿ ಚಿತ್ರಿಸುತ್ತಾರೆ.

ಅವಳೆ ಬೆಟ್ಟದ ಗಾತ್ರ ಮಾರೀs
ಹೊಟ್ಟೆಯ ಬುಟ್ಟಗಂಡು
ಗುಡ್ಡೇಗಾತ್ರ ಮಾರಿ
ತಲೆಯನ್ನೇ ಬುಟ್ಟುಗಂಡು
ತೊಂಡೆಗಾತ್ರ ಮಾರಿ
ಮೂಗನ್ನೇ ಬುಟ್ಟಗಂಡು
ಎರಡು ವಂದ್ರೀಯಗಲ ಮಾರಿ

ಕಣ್ಣನೇ ಬುಡ್ಗಂಡು
ಗವಿಲಿಗಲ ಮಾರವ್ವ
ಬಾಯನ್ನೆ ಬುಟ್ಟಗಂಡು
ಅವಳು ಎಪ್ಪತ್ತುಮೊಳದ ಸೀರೆ
ಒಂದೆ ಸುತ್ತಿಗೆ ಸುತ್ತಿಗಂಡು ||ಸಿದ್ದಯ್ಯ||

ಗುರುವೇ ಎಪ್ಪತ್ತು ಮೊಳದ ಸೀರೆ
ಒಂದೇ ಒಂದು ಸುತ್ತಗೆ
ಸುತ್ತಗಂಡು ಮಾರಮ್ಮ
ಅವಳು ಒಂದ್ಕಂಡ್ಗ ಕುಂಕುಮವಾ
ಹಣೆಗಚ್ಚಿಕೊಂಡು
ಒಂದ್ಕಂಡ್ಗ ಅರಿಶಿಣವಾ
ಮೊಕ ತುಂಬ ಬಳಕಂಡು
ಅವಳು ಅರುವತ್ತಾರು ಹೆಣವಾ
ಅಂಗೈಲಿ ಇಡಕ್ಕಂಡು
ಮುವತ್ತುಮೂರೆಣವ ಮುಳ್ಳಲ್ಲಿ ಕಟ್ಟಿಗಂಡು
ಒಂಬಂಬತ್ತು ಹೆಣವ ಅವಳು
ಹಲ್ಲಲೀ ಕಚ್ಚಗಂಡು
ವಕ್ಕಡೆ ಕಿವಿಯ ಆಸ್ಗಂಡು ಮಲಗವಳೇ
ಅಮ್ಮ ವಕ್ಕಡೆ ಕಿವಿಯ ಮಾರಿ
ವದಿಕಂಡು ಮಲಗವಳೇ
ಅವಳು ಹನ್ನೆರಡಂಕಣ ಗುಡಿವಳಗೆ
ಒಬ್ಬಳೇ ಒಳ್ಳಾಡುತ್ತಾಳೆ ||ಸಿದ್ದಯ್ಯ||

(ಮಂಟೇಸ್ವಾಮಿ, ಪುಟ ೪೧೬, ೪೧೭)

ಒಬ್ಬಳೇ ಹೊರಳುತ್ತಾ ಮಲಗಿದ್ದ ಕಾಳಮ್ಮ, ಎಡದಿಂದ ಬಲಕೆ ಏಳಬೇಕಾದರೆ ಮುರ್ಕಂಡು ಏಳುತ್ತಾಳೆ ಎದ್ದು,

ಗುರುವೇ ತ್ಯಾಗದ ಮರವ ಕಿತ್ತು
ಉರುದೊಣ್ಣೆ ಮಾಡಿ
ಅಡಕೆ ಮರವ ಕಿತ್ತೂ
ಅವಳು ಹಲ್ಲನ್ನೇ ಚುಚ್ಚುದಕೆ

ಹಲ್ಲು ಕಡ್ಡಿಯ ಮಾಡಿ
ಬೇವನ ಮರವ ಕಿತ್ತು
ಬುಡುವು ಸಹಿತ ಮಾರವ್ವ
ಬೇರು ಸಹಿತ ಮಾರಿ
ಅವಳು ಹಲ್ಲನ್ನೇ ಉಜ್ಜುತಾಳೆ
ನಾಲಗೆಯ ತೀಡುತಾಳೆ ||ಸಿದ್ದಯ್ಯ||

(ಮಂಟೇಸ್ವಾಮಿ, ಪುಟ ೪೧೮)

ಆಗ, ಕಾಳಮ್ಮನಿಗೆ ಜಗತ್‌ಗುರು ಧರೆಗೆ ದೊಡ್ಡವರು ಕೂಗಿದ ಶಬ್ದ ಕೇಳಿ,

ಅಮ್ಮ ಬಿಚ್ಚಿದಮಂಡೆ ತಾಯಿ
ಅವಳು ಕಟ್ಟನಿಲ್ಲ ಮಾರವ್ವ
ಅವಳು ಧರೆಗೆ ದೊಡ್ಡವರ ಕೂಗ
ಕಿವಿಯಾರ ಕೇಳಕ್ಕಂಡು
ನನ್ನ ಗುರು ಕೂಗುತಾರೆ
ಮಂಟೇದ ಲಿಂಗಪ್ಪ ಇವತ್ತು ಕರೀತಾರೆ
ಅಯ್ಯಾ ಗುರುಕರ್ದ ಮಾತುಗೆ
ನಾ ಹೋಗಬೇಕು ಎಂತ
ಆಚಾರ್ರು ಮನೆದೇವತೆ ಕುಲುಮೆ ಕಾಳಮ್ಮ
ನನ್ನ ಧರೆಗೆ ದೊಡ್ಡವರ ಒಳಗೆ
ಬಿದ್ದು ಕೆಡದು ಬರುವುತಾಳೆ ||ಸಿದ್ದಯ್ಯ||

(ಮಂಟೇಸ್ವಾಮಿ, ಪುಟ ೪೧೮,೪೧೯)

ಮಾರಮ್ಮ ಓಡಿ ಬರುತ್ತಿರುವಂತ 'ರೋಸಿಗೆ' ಹಾದಿಕಲ್ಲು, ಬೀದಿಕಲ್ಲು, ಆನೆಗಾತ್ರಕಲ್ಲು, ಕತ್ತೆಗಾತ್ರಕಲ್ಲು, ಒಂಟೇಗಾತ್ರಕಲ್ಲುಗಳು, ಮಾರಿಯ ಕಾಲಿಗೆ ಸಿಕ್ಕಿ ಭೂಮಿನೆ ಕಿತ್ತುಕೊಂಡು ಆಕಾಶಕ್ಕೆ ಹಾರಿ ಬುಗುರಿ ತಿರುಗಿದಂತೆ ತಿರುಗುತ್ತಾ ಮೈಲಿ ದೂರ ಹೋಗಿ ಕಲ್ಲುಗಳು ತಪು ತುಪ್ಪನೆ ಬೀಳುತ್ತವೆ. 'ಕುಲುಮೆ ಕಾಳಮ್ಮ' ಧರೆಗೆ ದೊಡ್ಡವರ ಮುಂಭಾಗಕ್ಕೆ ಬಂದು ನಿಲ್ಲುತ್ತಾಳೆ. ಗುರುಗಳ ಮುಖವನ್ನು ಕಣ್ಣಾರೆ ನೋಡು ಬಿಟ್ಟು ಕುಲುಮೆ ಕಾಳಮ್ಮ, ಕಾಳಿಕಾದೇವಿ. ಗುರುವೆ ಇವತ್ತು ಮಟ್ಟ ಮಂಗಳವಾರವಲ್ಲ, ಸುಟ್ಟು ಶುಕ್ರವಾರವಲ್ಲ, ತುಂಬಿದ ಸೋಮವಾರವಲ್ಲ ಬುದ್ದಿ, ಯಾತಕ್ಕೆ ಕರೆದಿರಿ ಗುರುವೇ, ಹನ್ನೆರಡು ವರ್ಷದಿಂದ ನನ್ನ ಕರಿಯಲಿಲ್ಲ, ಕೋಣದ ಬಲಿ ಇಲ್ಲ, ಇವತ್ತು ಕರೆದಿದ್ದೀರಿ ಎಲ್ಲಿಗೆ ಹೋಗಬೇಕು.

ಅಪ್ಪ ತೋರಪ್ಪ ನಿನ್ನ ವೈರಿಗಳ
ಒಂಟೋಯ್ತಿನಿ ಎಂದಾಳಂತೆ ||ಸಿದ್ದಯ್ಯ||

(ಮಂಟೇಸ್ವಾಮಿ, ಪುಟ ೪೨೧)

ಯಾರಟ್ಟಿ ಯಾರ ಮನೆಗೆ ಹೋಗಬೇಕು, ನೀವು ಹೇಳಿದ ಮನೆ ಬಿಡುವುದಿಲ್ಲ.

'ನೀನು ಬೆಟ್ಟು ತೋರ್ದ ಮನೆಗೆ
ನಾ ಒಂಟೋಯ್ತೀನಿ ಎಂದಳಂತೆ ||ಸಿದ್ದಯ್ಯ||'

(ಮಂಟೇಸ್ವಾಮಿ, ಪುಟ ೪೨೧)

ಗುರುದೇವ ಹೊಟ್ಟೆ ಹಸಿದು ಬಂದಿದ್ದೀನೆ ತಡೆಯಲಾರೆ ಹೇಳಿ ಎಂದಾಗ, ಗುರುಗಳು ಮಾರಮ್ಮ, ಮಾರುವಳ್ಳಿ ಮನಸ್ತಾನಕ್ಕೆ ನೀನು ಹೋಗಬೇಕು ಎಂದಾಗ, ಆ ಊರಲ್ಲಿ ಯಾರ ಮನೆಗೆ ಹೋಗಬೇಕಪ್ಪಾ ಎಂದು ಕೇಳಿದಾಗ,

'ಅಮ್ಮ ಬಸವಚಾರಿ ಮನೆಗೆ
ಹೋದೆಯ ನನ್ನ ಕಂದಾ
ಮುದ್ದಮ್ಮನ ಮನೆಗೆ
ಹೋದೆಯ ನನ್ನ ಮಗಳೇ
ಅವ್ವ ಹೋದೆಯೊ ಹೋಗೋದಿಲ್ಲವೊ
ಹೇಳುಬುಡು ಎಂದಾರಲ್ಲ ||ಸಿದ್ದಯ್ಯ||'

(ಮಂಟೇಸ್ವಾಮಿ, ಪುಟ ೪೨೨,೪೨೩)

ಗುರುದೇವ, ನೀವು ಎಲ್ಲುಗೇಳುದ್ರು ಹೋಯ್ತಿನೀ ಆದರೆ ನಾನು ಅಲ್ಲಿಗೆ ಮಾತ್ರ ಹೋಗೋದಿಲ್ಲ ಎನ್ನುತ್ತಾಳೆ. ಬಸವಾಚಾರಿ ಮನೆ ಎಂದರೆ ನನ್ನ ಮನೆಯಪ್ಪ, ಮುದ್ದಮ್ಮನ ಮಕ್ಕಳು ಎಂದರೆ ನನ್ನ ಮಕ್ಕಳು ಗುರುವೆ, ಪಾಂಚಾಳರ ಮನೆದೇವತೆ ನಾನು, ಅವರು, 'ತಮಗೆ ಬರುವ ಸಾವು ನೋವು ರೋಗರುಜಿನ ನಿವಾರಿಸುವ ಶಕ್ತಿ ದೇವತೆ ಎಂದು ನನ್ನನ್ನು ಆರಾಧಿಸುತ್ತಾರೆ' ಎನ್ನುವಳು.

'ಅಪ್ಪಾ ನನ್ನ ಮನೆಗೆ ನಾನು ಹೋಗಿ
ಬೆಂಕಿಯಾಗೆ ತೋರಬೇಕು ||ಸಿದ್ದಯ್ಯ||'

(ಮಂಟೇಸ್ವಾಮಿ, ಪುಟ. ೪೨೩)

ನನ್ನ ಮನೆಯ ಮಕ್ಕಳನ್ನು ನಾನು ಹೇಗೆ ತಿನ್ನಲಿ ಗುರುವೆ, ನಾನು ನೆಟ್ಟಗಿಡವ ನಾನು ಹೇಗೆ ಕಿತ್ತಾಕಿ ಬರುವುದು ಗುರುವೆ ಬೇರೆ,

ನೀವು ಎಲ್ಲಿಗೇಳುದ್ರು ಹೋಗುತ್ತಿನೀ
ನಾನು ಅಲ್ಲಿಗೆ ನಾ ಹೋಗಲಾರೆ ||ಸಿದ್ದಯ್ಯ||

(ಮಂಟೇಸ್ವಾಮಿ, ಪುಟ ೪೨೪)

ಎಂದಳು, ಧರೆಗೆ ದೊಡ್ಡಪ್ಪ, ನೀವು ಯಾವ ಊರು, ಯಾವ ಗ್ರಾಮ, ಯಾವ ಹಟ್ಟಿಗೋಗು ಅಂದರೆ ಹೋಗುತ್ತೇನೆ. ಆದರೆ ಬಸವಾಚಾರಿ, ಮುದ್ದಮ್ಮನ ಮನೆಗೆ ನಾನು ಖಂಡಿತವಾಗಿಯೂ ಹೋಗುವುದಿಲ್ಲ ಗುರುದೇವ, ಬಸವಾಚಾರಿ ಮಕ್ಕಳು ನನಗೆ ವರುಷಕ್ಕೊಂದು ಸತಿ 'ಹಬ್ಬ ಮಾಡುವರು' ಖಂಡಿತವಾಗಿಯೂ ನಾನು ಹೋಗುವುದಿಲ್ಲ ಎಂದಾಗ, ಗುರುಗಳು ನೀನು ಹೋಗದಿದ್ದರೆ ಪರವಾಗಿಲ್ಲ ಹೋಗುವಂತೆ ಮಾರಿಯರನ್ನು ಕಳುಹಿಸುತ್ತೇನೆ ಎಂದಾಗ, ಅಕ್ಕ ಹೋಗದ ಮನೆಗೆ ತಂಗೀರು ಯಾರು ತಾನೇ ಹೋಗುತ್ತಾರೆ.

ಹೋಗುವಂತಹ ಮಾರಿಯರನ್ನು ನಾನು ಖಂಡಿತವಾಗಿ ಹೋಗಲು ಬಿಡುವುದಿಲ್ಲ ಗುರುದೇವ ಎಂದಾಗ, ಗುರುಗಳು ಪಿಸುಮಾತ ಹೇಳುತ್ತೇನೆ ಬಾರವ್ವ ಎಂದು ಕರೆದು, ಮಾರವ್ವನ,

"ಮುಂದಲೆಯ ಗುರುವು
ಎಡಗೈನ ಒಳಗೆ
ಹಿಡಿದು ದೇವಾ
ಇಡ್ಕಂದ್ರು ನನ್ನಪ್ಪ
ಗುರುವೇ ಮುತ್ತಿನ ಜೋಳಿಗೆ
ಕೈಹಾಕಿ ನನ್ನಪ್ಪ
ಉರುಸಿಂಗೀ ಕೊರಡಾವ
ಬೊಳ್ಳು ಬೊಳ್ಳನೇ ಎಳದು
ಅಯ್ಯಾ ಮಾರವ್ವನ ಕುಂಡಿ ಮೇಲೆ
ಮೂರು ಏಟು ಹೊಡೆದರಲ್ಲ ||ಸಿದ್ದಯ್ಯ||

ಅಪ್ಪಾ ಉರುಗಣ್ಣ ಬುಡಬ್ಯಾಡ
ಉರ್ದ್ಹೋಯ್ತೀನಿ ಎಂದಾಳಲ್ಲ ||ಸಿದ್ದಯ್ಯ||

ಅಪ್ಪಾ ಕೆಂಡ್ಗಣ್ಣ ಬುಡಬ್ಯಾಡ
ಕೆಟ್ಹೋಯ್ತಿನಿ ಎಂದಾಳಲ್ಲೋ ||ಸಿದ್ದಯ್ಯ||"

(ಮಂಟೇಸ್ವಾಮಿ, ಪುಟ ೪೨೬)

ನೀವು 'ಕೆಟ್ಟ ದೇವರು' ಎಂಬುವುದು ನನಗೆ ತಿಳಿಯಲಿಲ್ಲ ಗುರುವೆ ನಾನು ಬಸವಾಚಾರಿ ಮನೆಗೆ ಹೋಗುತ್ತೇನೆ. ನಿಮಗೆ ಬೇಡವಾದ 'ಒಕ್ಕಲು' ನನಗೆ ಯಾಕೆ ಎಂದಳು. ಮೊದಲು ಹೋಗಲು ತಿರಸ್ಕರಿಸಿದ ನೀನು ಅನಂತರ ಹೋಗಲು ಒಪ್ಪಿದ ಕಾರಣವೇನು ಎಂದು ಗುರುಗಳು ಕೇಳಿದಾಗ, ಅವರು ವರ್ಷಕ್ಕೆ ಒಂದು ಸಾರಿ ನನಗೆ ಹಬ್ಬ ಮಾಡುತ್ತಿದ್ದರು, ಹಬ್ಬ ಮಾಡೋರ ಮನೆಗೆ ಹೋಗಬಾರದು ಎಂದೆ. ಆದರೆ ನೀವು ಹೊಡೆದೇಟಿಗೆ ನನಗೆ ಭಯ ಬಂದಿದೆ ಎಂದಳು. ಗುರುಗಳು ಅವರು ನಿನಗೆ ಯಾವ ರೀತಿ ಹಬ್ಬ ಮಾಡುತ್ತಿದ್ದರು ಎಂದು ಕೇಳಿದಾಗ ಅವರು ಹಾದಿ ಬೀದಿ ರಜ ಒಡೆದು, ನೀರಾಗಿ ರಂಗೋಲೆ ಬಿಟ್ಟು, ಸ್ನಾನಮಾಡಿ ಮಡಿಯನ್ನು ಉಟ್ಟುಕೊಂಡು ಒಳಕೆರೆಯಿಂದ ಮನೆದೇವತೆ ಮಾರಮ್ಮನ ತರಬೇಕೆಂದು ಹೇಳಿ, ಯಾಲಕ್ಕಿ ಪಾಲಾರದಲ್ಲಿ ಬಂದು, ಹಸಿಮಣ್ಣಿನಿಂದ ಕಾಳಮ್ಮನ ಮೂರ್ತಿ ತಯಾರಿಸಿ, ಅರಿಶಿಣದ ಸೀರೆ ಉಡಿಸಿ, ಅಲಂಕಾರ ಮಾಡುತ್ತಿದ್ದರು. ನಂದಿ ಬೆಳಕಿನಲ್ಲಿ ಡಂಗುರ, ಡೊಳ್ಳು, ಚಿತ್ತಜಿಜ್ಞಿಕೆ ತಾಳ, ತಮಟೆಯೊಂದಿಗೆ ನನ್ನನ್ನು ಊರಿಗೆ ಕರೆತರುತ್ತಿದ್ದರು. ಬಸವಾಚಾರಿ ಮಕ್ಕಳು ಊರ ಮಧ್ಯದಲ್ಲಿ ಚಪ್ಪರ ಹಾಕಿಸಿ ಮನೆದೇವತೆ ಕಾಳಮ್ಮನಿಗೆ ಆಹಾರ ಕೊಡಬೇಕೆಂದು ಕುರಿಮರಿಯನ್ನು ಹೊಡೆದು, ಮರಿಯನ್ನಬೇಯಿಸಿ, 'ಅನ್ನಕ್ಕೆ ರಗುತಾ ಕಲೆಸಿ' ಊರು ಸುತ್ತ ನನಗೆ ರಸ ಮುದ್ದೆ ಇಡುತ್ತಿದ್ದರು. ಮತ್ತು,

'ನನಗೆ ಮಂಗಳವಾರ ಮಡೆ ಉಯ್ಸಿ
ಬುದುವಾರ ಕೊಂಬು ತರಿಸಿ
ಅಪ್ಪ ಬೇಸ್ತುವಾರದ ಕುಣುತ ನನಗೆ
ಜಗ್ಗುಣ ಗುಣುತ ಕುಣಿಯುತಿದ್ರು ||ಸಿದ್ದಯ್ಯ||'

(ಮಂಟೇಸ್ವಾಮಿ, ಪುಟ ೪೩೧)

ಎಂದಳು. ಬೇಸ್ತವಾರ ಯಾವ ರೀತಿ ಕುಣಿತಿದ್ರು ಕಂದಾ, ನೀನು ಆ ಕುಣಿತವ ನನ್ನ ಮುಂದೆ ಕುಣಿ ಮಾರಮ್ಮ, ಎಂದಾಗ,

'ಅವಳು ಜಗ ಜಗನೇ ಕುಣಿತಾಳೆ
ತೈ ತೈನೆ ನಗೆಯುತಾಳೆ ||ಸಿದ್ದಯ್ಯ||

ಗುರುವೇ ತೈಯಾ ತೈಯಾನೆ ಗುರುವು
ನೆಗಿವಂತ ಮಾರಮ್ಮನ ಕಣ್ಣಾರೆ ದೇವಾ
ನೋಡಕಂಡು ನನ್ನಪ್ಪ ಧರೆಗೆ ದೊಡ್ಡಯ್ಯ
ಅವರು ಒಳಗೊಳಗೆ ನನ್ನ ಗುರುವು
ಉಸುನಗುವ ನಗಿಯುತಾರೆ ||ಸಿದ್ದಯ್ಯ||'

(ಮಂಟೇಸ್ವಾಮಿ, ಪುಟ ೪೩೨)

ಇವಳ ಕುಣಿತದಿಂದ ಓಡಿ ಹೋಗುತ್ತಿದ್ದ ಮಾರಿಯರನ್ನೆಲ್ಲಾ ಕರೆದುಕೊಂಡು ಬರಲು ಹೇಳಿದರು. ಎಲ್ಲರನ್ನು ಕರೆ ತಂದಳು ಕಾಳಮ್ಮ. ಕಾವ್ಯದಲ್ಲಿ ಕಾಳಮ್ಮನ ವರ್ಣನೆ ಮತ್ತು ಅವಳಿಗೆ ಅವಳ ಭಕ್ತವರ್ಗದವರು ಸಲ್ಲಿಸುವ ಭಕ್ತಿ ಪೂರ್ವಕವಾದ ಸೇವೆಯ ವರ್ಣನೆ ಅದ್ಭುತವಾಗಿ ಚಿತ್ರಿತವಾಗಿದೆ. ಈ ಸಂದರ್ಭದಲ್ಲಿ ಭಕ್ತರು ಭಯ ಭಕ್ತಿಯಿಂದ ತಮ್ಮ ಮನವಿಯನ್ನು ಸಲ್ಲಿಸುತ್ತಾರೆ. ಮುಂದಿನ ಹಬ್ಬದ ತನಕ ಈ ಮಾರಿ ಅವರ ರಕ್ಷಕ ದೇವತೆಯಾಗಿ ನಿಲ್ಲುವಳೆಂಬ ನಂಬಿಕೆಯಿಂದ ಮಾರವಳ್ಳಿ ಹೊಂಗೆ ತೋಪಿನಲ್ಲಿ ಎಲ್ಲ ಮಾರಿಯರನ್ನು ಇರಿಸಿ, ನಾನು ಕೂಗಿದಾಗ ಬರುವಂತೆ ಹೇಳಿ ಗುರುಗಳು ಬಸವಾಚಾರಿ ಮನೆಗೆ ಬಂದರು. ಬಸವಾಚಾರಿ ಮನೆಯಲ್ಲಿ ಇದ್ದ ಏಳು ಜನಲಕ್ಷ್ಮಿಯರನ್ನು ಪ್ರೇಮದಲ್ಲಿ ಕರೆದರು. ಏಳು ಜನ ಲಕ್ಷ್ಮಿಯರು ಗುರುಗಳಿಗೆ ವಂದಿಸಿ, ಕರೆದ ಕಾರಣ ಕೇಳಿದರು. ನಿಮಗೆ ಬಸವಾಚಾರಿ ಮನೆಯ ಋಣ ತೀರಿತು ಎಂದು ಹೇಳಿ, ಬೇರೆ ರಾಜ್ಯಗಳ ಮೇಲೆ ಹೋಗಲು ಹೇಳಿ ದರಿದ್ರ ಲಕ್ಷ್ಮಿಯರನ್ನು ಕರೆದು ಬಸವಾಚಾರಿ ಮನೆಗೆ ಬಿಟ್ಟರು. ಕುಂತೂರು ಬೆಟ್ಟಕ್ಕೆ ಬಂದು ಏಳು ನೂರು ಜನ ಮಾರಿಯರನ್ನು ಬಸವಾಚಾರಿ ಮನೆಗೆ ನುಗ್ಗಲು ಹೇಳುತ್ತಾರೆ. ಎಲ್ಲಾ ಮಾರಿಯರು ಸುತ್ತಾಡಿ ಬರುವಾಗ,

'ಅವರ ಸಾಲಟ್ಟಿ ದನಗಳಿಗೆ
ದೊಡ್ಡ ರೋಗ ಕೊಟ್ಟವರೆ
ಸಾಲಟ್ಟಿ ಕರುಗೊಳಗೆ

ಉಣ್ಣು ರೋಗ ಕೊಟ್ಟವರೆ
ಸಾಲಟ್ಟಿ ಆಡುಗಳಿಗೆ ದೇವಾ
ಕಸರೆ ರೋಗ ಕೊಟ್ಟು
ಅವರು ದೊಡ್ಡಿಯ ರಾಸುಗಳಿಗೆ
ದೊಡ್ಡು ರೋಗ ಕೊಟ್ಟಾರಲ್ಲ ||ಸಿದ್ಧಯ್ಯ||

ಅವರ ಆರು ಮಂದಿ ಜೀತುಗಾರ್ರ
ಊರು ಮುಂದೆ ಉಟ್ಟುಗಲ್ಲಾ ಗುರುವೇ
ಉಟ್ಟುಗಲ್ಲ ದೇವಾ ಮಾಡವರೆ ನನ್ನಪ್ಪ
ಅವರ ಮುತ್ತು ರತುನಾನೆಲ್ಲ ಗುರುವೇ
ಮಣ್ಣು ಪಾಲು ಮಾಡುತಾರೆ ||ಸಿದ್ಧಯ್ಯ||'

(ಮಂಟೇಸ್ವಾಮಿ, ಪುಟ ೪೪೦)

ಮಾರಿಯರ ಎಲ್ಲಾ ಆಟವನ್ನು ಕುಂತೂರು ಬೆಟ್ಟದ ಕೊಡೇಕಲ್ಲಿನ ಮೇಲೆ ಕುಳಿತು ನೋಡುತ್ತಿದ್ದಾರೆ ಮಂಟೇಸ್ವಾಮಿಗಳು. ಮಾರಿಯರು ಬಸವಾಚಾರಿ ಮನೆಯ ದವಸ, ಧಾನ್ಯ, ಐಶ್ವರ್ಯ ಎಲ್ಲವನ್ನು,

'ಅವರ ಏಳುಗುಳಿಯ ಅಕ್ಕಿ
ಅಣ್ಣೆ ಬೀಜಾ ಮಾಡಿ
ಏಳುಗುಳಿ ಬೇಳೆ
ಅತ್ತಿ ಬೀಜ ಮಾಡಿ
ಅವರ ಏಳುಕೊಪ್ಪರಿಕೆ ದೌಭಾಗ್ಯ
ಇಜ್ಜುಲು ಮಸಿ ಮಾಡುತಾರೆ ||ಸಿದ್ಧಯ್ಯ||

ಅವರ ಚಿನ್ನ ಬೆರಳಿ ಕಂಬಸಾಲು
ಮರುದ ಕಂಬಾ ಮಾಡುತಾರೆ ||ಸಿದ್ಧಯ್ಯ||'

(ಮಂಟೇಸ್ವಾಮಿ, ಪುಟ ೪೪೦,೪೪೧)

ಅನಂತರ ಆರು ಜನ ಗಂಡು ಮಕ್ಕಳಿಗೆ ಹುಚ್ಚು ಬೆಪ್ಪಿನ ಗ್ಯಾನ ನೀಡಿದರು. ಆರು ಜನ ಸೊಸೆಯರು ಪ್ರಾಣ ಬಿಟ್ಟರು. ತಂದೆ ತಾಯಿ ಇದೇ ಕೊರಗಿನಲ್ಲಿ ಅಸುನೀಗಿದರು. ಕೆಂಪಣ್ಣನಿಗೆ ಹುಚ್ಚು ಹಿಡಿಯಿತು. ಆಗಲೂ ಅವನು ಗುರುಗಳಿಗೆ ಶಿಶು ಮಗನಾಗಲು ಒಪ್ಪುವುದಿಲ್ಲ. ಕೊನೆಗೆ ಕುಂತೂರು ಬೆಟ್ಟದ ಕಾಳಿಂಗ ಕಲ್ಲು ಗವಿಗೆ ನೂಕುತ್ತಾರೆ. ಹನ್ನೆರಡು ವರ್ಷ ಕ್ರೂರ ಪ್ರಾಣಿಗಳೊಂದಿಗೆ ಇದ್ದು, ತಪಸ್ಸು ಮಾಡಿ ನರರ ಗ್ಯಾನ ತಪ್ಪಿ, ಗುರು ಗ್ಯಾನವಾಗುತ್ತದೆ. ಹೀಗೆ ಮಂಟೇಸ್ವಾಮಿಗಳು ಅನಾಹುತವನ್ನುಂಟು ಮಾಡುವುದರ ಮೂಲಕ ಅವನ ಅಹಂಕಾರ ವನ್ನು ನಾಶಪಡಿಸಿದರು. ಕೊನೆಗೆ ಮಂಟೇಸ್ವಾಮಿಗಳ ಶಿಷ್ಯನಾಗಿ, ಸಿದ್ದಪ್ಪಾಜಿ ಎಂಬ ಹೊಸ ನಾಮಧೇಯದಿಂದ ಮುಂದೆ ಪಾಂಚಾಳರ ಸೊಕ್ಕು ಮುರಿದು, ಅವರನ್ನು ಧರೆಗೆ ದೊಡ್ಡವರ ಶಿಶು ಮಕ್ಕಳನ್ನಾಗಿ ಮಾಡುವ ಪ್ರಸಂಗ,

ಕಾವ್ಯದಲ್ಲಿ ಒಂದು ರೋಮಾಂಚಕ ಪ್ರಸಂಗ. ಮುಂದೆ ದೆವ್ವ, ಪಿಶಾಚಿ, ಮಾರಿಯರು ಈತನಿಗೆ ಹೆದರಿ ಶರಣಾಗುತ್ತಾರೆ.

ಮಂಟೇಸ್ವಾಮಿಗಳು ಗ್ರಾಮದೇವತೆಗಳಿಗೆ ಬುದ್ಧಿ ಕಲಿಸಿ, ಅವರನ್ನು ಗೆದ್ದು ತಮ್ಮ ಹಿಡಿತಕ್ಕೆ ಒಳಪಡಿಸಿ ಕೊಳ್ಳುತ್ತಾರೆ. ನೀಲಗಾರ ಪರಂಪರೆಯಲ್ಲಿ ಹೆಣ್ಣು ದೈವಗಳು ಮನೆತನದ ದೈವಗಳಾಗಿದ್ದು, ಅವುಗಳು ಕುಟುಂಬದ ಕಷ್ಟನಷ್ಟಗಳನ್ನು ಸುಧಾರಿಸುತ್ತವೆಂಬ ನಂಬಿಕೆ ಆ ಸಮುದಾಯದಲ್ಲಿದೆ. ಆದರೆ ಮನೆತನದ ದೇವತೆ ಗುರುಗಳ ಮಾತಿಗೆ ಹೆದರಿ ಜನ, ಪ್ರಾಣಿ, ದವಸ, ಧಾನ್ಯ ಎಲ್ಲವನ್ನು ನಾಶ ಮಾಡುತ್ತಾಳೆ. ನೀಲಗಾರರಲ್ಲಿ ಕೆಲವು ರೋಗಗಳು ಪ್ರಕೃತಿಯಲ್ಲಿ ಸಹಜವಾಗಿ ಬರುವ ರೋಗಗಳಾಗಿ ಕಂಡು ಬಂದರೆ, ಇನ್ನು ಕೆಲವು ರೋಗಗಳು ತಮ್ಮ ಸಮುದಾಯದ ದೈವಗಳ ಸಾಮೂಹಿಕ ತಪ್ಪಿನಿಂದಾಗಿ ಬಂದ ಪಿಡುಗೆಂದೆ ಭಾವಿಸುತ್ತಾರೆ.

ಮಂಟೇಸ್ವಾಮಿಗಳ ಶಿಶು ಮಗನಾದ ಕೆಂಪಣ್ಣ ಸಿದ್ದಪ್ಪಾಜಿ ಎಂದು ನಾಮಕರಣವಾದ ಮೇಲೆ, ಗುರುವು ಉರುಸಿಂಗಿ ಕೊಡರನ್ನು ಸಿದ್ದಪ್ಪಾಜಿಗೆ ನೀಡಿ ಮಾರಿ ದೇವತೆಗಳಿಗೆ ಗಂಡನನ್ನಾಗಿ, ಮಾಡಿ ದುರ್ಗಿ ಮುಂತಾದ ದೇವತೆಗಳು ಮಾತು ಮೀರಿದರೆ, ಉರುಸಂಗಿ ಕೊರಡಲ್ಲಿ ಬರೆ ಎಳೆ ಎಂದು ಚಂಡಿಗೆ ಗಂಡನಾಗಿ, ಚಾಮುಂಡಿಗೆ ಬಲದವನಾಗಿ ಬಾಳೆಂದು ಹರಸಿ ಗುರುವನ್ನಾಗಿ ಮಾಡಿ ನಿಲ್ಲಿಸುತ್ತಾರೆ.

ಕಲಿಯ ಆಗಮನದ ಸೂಚನೆ ದೊರಕಿ, ಕಲಿ ಕಾಲ ಬಂದ ಮೇಲೆ ಆಗುವ ಅನ್ಯಾಯಗಳನ್ನು ನೋಡಲಾರೆ ನೆಂದು, ಮಂಟೇಸ್ವಾಮಿಗಳು ಪಾತಾಳ ಬಾವಿಯಲ್ಲಿ ಪವಡಿಸಲು ನಿರ್ಧರಿಸಿದರು. ಅಂಥ ಬಾವಿಯೊಂದನ್ನು ಸಿದ್ದಗೊಳಿಸಲು ಒಂಬತ್ತು ಬಗೆಯ 'ಲಗಾ'ಗಳು ಬೇಕಾದುದರಿಂದ ಗುರುಗಳು ಸಿದ್ದಪ್ಪಾಜಿಯನ್ನು ಹಲಗೂರು ಪಂಚಾಳಗೇರಿಯಿಂದ ಕಬ್ಬಿಣದ ಭಿಕ್ಷೆ ತರಲು ಕಳುಹಿಸುತ್ತಾರೆ. ಸಿದ್ದಪ್ಪಾಜಿ ಹಲಗೂರಿಗೆ ಹೋಗುವ ಮೊದಲು ಅಲ್ಲಿದ್ದ ಮಾರಿಯರ ವಿರುದ್ಧ ಹೋರಾಡ ಬೇಕಾಗುತ್ತದೆ. ಆಗ ಮುತ್ತತ್ತಿರಾಯ ನೆರವಾದನೆಂದು ಕತೆ ಹೇಳುತ್ತದೆ. ಸಿದ್ದಪ್ಪಾಜಿ ಹಲಗೂರ ಬಾಗಿಲಿಗೆ ಗುರುಗಳ ಆದೇಶದಂತೆ, ಬಳೆಗಾರನ ವೇಷದಲ್ಲಿ ಬಂದಿದ್ದಾನೆ. ಪಂಚಾಳರು ಬಾಗಿಲಲ್ಲಿ ಕುಲ ದೇವತೆಗಳಾದ ಮಾರಿಯರನ್ನು ಕಾವಲು ಮಡಗಿದ್ದಾರೆ.

'ಅಯ್ಯಾ ಮೂಡಲಂಕಣದ ಒಳಗೆ
ಮೂಡು ಮಾರಿ ಕವಲು
ತೆಂಕಣಂಕದ ಒಳಗೆ
ತೆಂಕ ಮಾರಿ ಕವಲು
ಗುರುವೆ ಪಡುವಲಂಕಣದ ಒಳಗೆ
ಪಡುವ ಕಾಳಿ ಕವಲು
ಅಯ್ಯಾ ಬಡಗಲಂಕಣದ ಒಳಗೆ
ಮಂಡೇ ಮಾರಿ ಕವಲು
ಗುರುವೆ ಊರು ಮಧ್ಯದ ಒಳಗೆ
ಕಾಳಿಕ ದೇವತೆ ಕವಲು ಗುರುವು ||ಸಿದ್ದಯ್ಯ||

(ಮಂಟೇಸ್ವಾಮಿ, ಪುಟ ೬೮೪)

ಮಾತೇ ಬಾರದ 'ಮೂಗು ಮಾರಮ್ಮ' ಸಿದ್ದಪ್ಪಾಜಿಯು ಬರುವುದನ್ನು ನೋಡುತ್ತಾಳೆ. ಯಾರೋ ಎಳೆಯ ಹುಡುಗ ಬರುತ್ತಿದ್ದಾನೆ. ನನಗೆ ಒಳ್ಳೆಯ ಆಹಾರ ಆಯಿತು. ಇವನ ನೋಡಿದರೆ ಕಿತ್ತುಕೊಂಡು ತಿನ್ನುವ ಆಸೆ ಆಗುತ್ತದೆ ಎಂದು ಬರುವಂತ ಸಿದ್ದಪ್ಪಾಜಿಯನ್ನು ನೋಡಿದಳು. ಸಿದ್ದಪ್ಪಾಜಿ ಈ ಕೆಟ್ಟ ಮಾರಿ ಮುಂಡೆಯನ್ನು ಹೇಗೆ ಗೆಲ್ಲಲಪ್ಪ ಎಂದು ಧರೆಗೆ ದೊಡ್ಡವರ ಪಾದವನ್ನು ನೆನೆದುಕೊಂಡು ರಾಜ ಬೊಪ್ಪೇಗೌಡನಪುರಕ್ಕೆ ಕೈಯೆತ್ತಿ ಮುಗಿದು, ಮುತ್ತಿನ ಜೋಳಿಗೆಯಲ್ಲಿ ಇರುವ ಉರ್ಸಿಂಗೀ ಕೊರಡ ನೋಡಿ ಮುಂದಕ್ಕೆ ಬಂದರು. ಮಾರಿ ದಡ ಭಡನೆ ಎದ್ದು ಸಿದ್ದಪ್ಪಾಜಿಯ ಬಳಿಗೆ ಬಂದು,

'ನಿನ್ನ ಕಂತೆ ಬೊಂತೆ ನೀನು
ಇಟ್ಟುಬುಡ್ಲ ಪರದೇಶಿ
ನಿನ್ನ ತಿನ್ನಬೇಕು ಎಂದವಳೇ
ಮೂಗು ಮಾರಿ ಗುರುವು
ಅಯ್ಯಾ ತಿನ್ಕಂಡಿಯ ತಾಯಿ
ತಿನ್ಕಂಡಿಯ ಮಾರವ್ವ
ಅವ್ವ ಗುರುಗ್ಯಾನ ಮಾಡ್ಕತ್ತಿನಿ
ಸ್ವಲ್ಪ ನಿಲ್ಲು ಎಂದಾರಲ್ಲ ||ಸಿದ್ಧಯ್ಯ||

(ಮಂಟೇಸ್ವಾಮಿ, ಪುಟ ೬೯೭)

ಗುರುಪಾದ ನೆನೆದು ಸಿದ್ದಪ್ಪಾಜಿ, ಮಾರವ್ವನ ಮಂಡೆಯ ಮುಂಗೈಲಿ ಹಿಡಿದುಕೊಂಡು ಜೋಳಿಗೆಯಲ್ಲಿದ್ದ ಉರುಸಿಂಗಿ ಕೊರಡನ್ನು ತೆಗೆದು ಮೂಗುಮಾರಿಗೆ ಮೂರೇಟ ಹೊಡೆದರು.

'ನೀವು ಹೊಡೆದೇಟಿಗೆ ನನಗೆ ದೇವಾ
ಮಾತೇ ಬಂದೋದವವಲ್ಲೋ ||ಸಿದ್ಧಯ್ಯ||'

(ಮಂಟೇಸ್ವಾಮಿ, ಪುಟ ೬೯೮)

ಎಂದು ಕಿಲಕಿಲನೆ ನಗ್ತ ಮಾರಮ್ಮ ಸಿದ್ದಪ್ಪಾಜಿ ಪಾದಕ್ಕೆ ಬಿದ್ದು ಶರಣ ಮಾಡುತ್ತಾಳೆ ಹಾಗೂ ಹಲಗೂರು ಪಾಂಚಾಳಕೇರಿಗೆ ಕಬ್ಬಿಣ ಭಿಕ್ಷೆಗೆ ಹೋಗಲು ಮಾರಮ್ಮ ದಾರಿ ತೋರಿಸುತ್ತಾಳೆ. ನಾನು ಮುಂದೆ ಚಿಕ್ಕಲ್ಲೂರಿನಲ್ಲಿ ನೆಲಸಿದಾಗ,

'ಉಗಾದಿಯಿಂದ ಈಚೇ
ಕಂದ ಶಿವರಾತ್ರಿಂದ ಆಚೆ
ನಿನಗೆ ಮಾರಿಹಬ್ಬ ಅನುತೇಳಿ
ನಿನಗೊಂದಬ್ಬ ಮಾಡ್ಸುತೀನಿ ||ಸಿದ್ಧಯ್ಯ||'

(ಮಂಟೇಸ್ವಾಮಿ, ಪುಟ ೬೯೯)

ಎಂದು ಮಾರಿಗೆ ಹೇಳಿ ಸಿದ್ದಪ್ಪಾಜಿ ತೆಂಕಲ ಬಾಗಿಲಿಗೆ ಬರುತ್ತಾರೆ.

'ತೆಂಕದ ಬಾಗಲೊಳಗೆ ಒಬ್ಬ
ಸುಂಕುದು ಮಾರವ್ವ
ಅವಳು ಬರುತ್ತಿದ್ದ ಸಿದ್ದಪ್ಪಾಜಿಯವರ
ಮಹಾ ಮದನೆ ನೋಡುತಾಳೆ ||ಸಿದ್ಧಯ್ಯ||'

(ಮಂಟೇಸ್ವಾಮಿ. ಪುಟ ೭೦೦)

ಬಳೆಗಾರ ಎಷ್ಟು ಚೆನ್ನಾಗಿ ಇದ್ದಾನೆ ಎಂದು ಓಡಿ ಬಂದು ಮುಂದುಗಡೆ ನಿಂತಿದ್ದಾಳೆ. ನಿನ್ನ ತಿಂದ್ಬುಡಬೇಕು ಎಂದಾಗ, ನಮ್ಮ ತಾಯಿ, ತಂದೆ, ಗುರುಪಾದ ನೆನೆಯುತ್ತೇನೆ ಎನ್ನುತ್ತಾನೆ. ಅವರ ಹೆಸರನ್ನು ಕೇಳುತ್ತಾಳೆ. ನಮ್ಮ ತಂದೆ ರಾಚಪ್ಪಾಜಿ, ತಾಯಿ ತೋಪುನ ದೊಡ್ಡಮ್ಮ, ಗುರು ಅಂದರೆ ಧರೆಗೆ ದೊಡ್ಡವರು ಎಂದಾಗ ಸುಂಕುದ ಮಾರಮ್ಮ

'ಎಲೋ ರಾಚಪ್ಪಾಜಿ ಅಂದ್ರೆ ಅವನು
ರಾಜ್ಯಕ್ಕೆ ದೊಡ್ಡವನೇನೋ ||ಸಿದ್ದಯ್ಯ||

ಲೋ ದೊಡ್ಡಮ್ಮ ತಾಯಿ ಎಂದರೇ
ಅವಳು ದೊಡ್ಡಾಗಿ ನಿಂತಿದ್ದಾಳೊ ||ಸಿದ್ಧಯ್ಯ|

ಲೋ ಧರೆಗೆ ದೊಡ್ಡವನು ಅಂದ್ರೆ
ಅವನು ಧರೆಗಾತ್ರ ಇದ್ದನೇನೋ ||ಸಿದ್ಧಯ್ಯ||'

(ಮಂಟೇಸ್ವಾಮಿ. ಪುಟ ೭೦೨)

ಎನ್ನುತ್ತಾ, ಅವನನ್ನು ತಿನ್ನಲು ಓಡಿ ಬಂದಳು. ಓಡಿ ಬಂದ ಸುಂಕುದ ಮಾರಮ್ಮನ ಮುಂದೆಲೆ ಇಡ್ಕಂಡು, ಉರುಸಿಂಗಿ ಕೊರಡ ಬಲಗೈಲಿ ಹಿಡಿದು, ರಾಜ ಬೊಪ್ಪಗೌಡನ ಪುರಕ್ಕೆ ಕೈ ಎತ್ತಿ ಮುಗಿದು.

'ಗುರುವೆ ಮಾರಿಗೆ
ಮೂರೇಟ ಗುರುವೇ
ಹೊಡ್ನರು ಗುರುವು
ನೀಲುಗಾರುರ ಗಂಡ
ನನ್ನ ಮೇಲೆ ಸಿದ್ದಪ್ಪಾಜಿ
ಅಯ್ಯಾ ಒಂದೇಟ ಹೊಡ್ನವರೆ
ಅಯ್ಯಪ್ಪ ಅಂದವಳೆ
ಎರಡೇಟ ಹೊಡ್ದವ್ರೆ
ಅಯ್ಯವ್ವಾ ಅಂದವ್ಳೆ
ಅವಳ ಮೂರೇಟ ಹೊಡಿವಾಗ
ಕಣ್ಣೀ ಬಿದ್ದೂದವಲ್ಲ ||ಸಿದ್ಧಯ್ಯ||'

(ಮಂಟೇಸ್ವಾಮಿ, ಪುಟ ೭೦೩)

ಮಾರಮ್ಮನಿಗೆ ಕಣ್ಣು ಕಾಣದ ಹಾಗೆ ಮಾಡಿ ತೆಂಕದಂಕ ಬಿಟ್ಟು ಸಿದ್ದಪ್ಪಾಜಿ ಬಡಗಲಂಕಣದ ಒಳಗೆ ಬರುತ್ತಾರೆ.

ಪಡುಮಕಾಳಿ ಕಾದು ಕೂತಿದ್ದಾಳೆ. ಇವಳು ಬಲವಾದ ಮಾರಿ. ನಾನು ಇದ್ದರೂ ಇಷ್ಟು ಧೈರ್ಯವಾಗಿ ಬರುತ್ತಿರುವ ಸುಂದರವಾದ ಬಳೆಗಾರನ ನೋಡಿದಳು.

'ಲೋ ಇಲ್ಲೆ ನಿಂತ್ಕೋ ಬಳೆಗಾರ
ನುಂಗ್ಬುಟ್ತಿನಿ ಎಂದಾಳಲ್ಲ ||ಸಿದ್ಧಯ್ಯ||'

(ಮಂಟೇಸ್ವಾಮಿ, ಪುಟ ೭೦೪)

ಈ ಕೆಟ್ಟ ಮಾರಿಯ ಬಿಡಬಾರದು ಎಂದು ಹೇಳಿ ಹತ್ತಿರ ಬರುತ್ತಿರುವ ಮಾರವ್ವನಿಗೆ "ನನ್ನ ಮುಟ್ಟಿ ಮುಟ್ಟು ತಟ್ಟು ಮಾಡಬೇಡ". ನನ್ನ ತಂದೆ ತಾಯಿ ನೆನೆಯುತ್ತೇನೆ ಅಲ್ಲೇ ನಿಂತ್ಕೊ ಎಂದರು. ಇಂತಹ ಕೆಟ್ಟ ಮಾರಿ ಮುಂಡೆದುನಾ ಹೆಂಗೆ ತಾನೆ ಗೆಲ್ಲಲಪ್ಪ ಎಂದು ರಾಜಬೊಪ್ಪಣಪುರಕ್ಕೆ ಕೈಯೆತ್ತಿ ಮುಗಿದು ಮಾಯ ಎಡಗೈನ ಒಳಗೆ ಮಾರಮ್ಮನ ಮಂಡೆ ಇಡ್ಕಂಡು

'ಗುರುವೆ ಬಲ್ದ ಪಾದದ ಒಳಗೆ
ಒಂದೊದೆತ ದೇವ
ಒದ್ದಾರು ನನ್ನಪ್ಪ
ನೀಲಿ ಸಿದ್ದಪ್ಪಾಜಿ
ಅಯ್ಯಾ ಬಲ್ಮಕಾಳವ್ವ
ಒದ್ದಂತ ಒದೆತಕ್ಕೆ
ಅವಳು ಭೂಮಿ ಮ್ಯಾಲೆ ಬಿದ್ದಾಕ್ಕಂಡು
ಬುಡುಬುಡುಬುಡನೆ ಓಡುತಾಳೆ ||ಸಿದ್ಧಯ್ಯ||'

(ಮಂಟೇಸ್ವಾಮಿ, ಪುಟ ೭೦೬)

ಅಪ್ಪ 'ಇನ್ನೊಂದಪ್ಪ ಒದೀ ಬ್ಯಾಡಿ ಸತ್ತೋಯ್ತಿನಿ' ಎಂದು ಹೇಳಿ ನಿಮಗೆ ಗೊತ್ತಿಲ್ಲದವರ ಮನೆಯನ್ನು ನಾನು ತೋರಿಸುತ್ತೇನೆ ಎಂದಳು. ಈಗ 'ಮೂರ್ಜನ ಮಾರೀರ ಕಂಡಂಗೆ ಆಯ್ತು ಇನ್ಯಾರ್‍ಯಾರು ಮಾರೀರು ಇದರವ್ವ' ಎಂದರು. ಪಡುಬಾಗಲಲ್ಲಿ ಮಂಡೆ ಮಾರಿ ಇದ್ದಾಳೆ. ಆ ಮಾರಿ ನನಗಿಂತ ದೊಡ್ಡವಳು ಎಂದು ಹೇಳಿ ಕರೆದುಕೊಂಡು ಬಂದಳು.

ಸಿದ್ದಪ್ಪಾಜಿ ಬರುವುದನ್ನು ನೋಡಿ ಮೇಲಕ್ಕೆ ಎದ್ದಳು ಮಂಡೆ ಮಾರಿ. ಎದ್ದ ಮಾರಿಯನ್ನು ಉರಿಸಿಂಗಿ ಕೊರಡನ್ನು ಬಲಗೈಲಿ ಹಿಡಿದು ಮಾರಿಯ ಮೈಮೇಲೆ ಮೂರು ಏಟು ಹೊಡೆದರು.

'ಗುರುವೆ ಸಿದ್ಧಪ್ಪಾಜಿಯವರು
ವಡೆದಂತ ಏಟುಗೆ
ಅವಳಿಗೆ ಮೈ ಉರಿಬಂದು ಬುಡ್ತು
ಮೈ ಜ್ವಾಲೆ ಬಂದು ಬುಡ್ತು

ಅಯ್ಯೋ ಉರಿಯೋ ಉರಿಯೇ ಅಂತ
ತೈ ತೈನೆ ಕುಣೆಯುತಾಳೆ ||ಸಿದ್ಧಯ್ಯ||
ಅವಳು ಮೇಲ್ಕೆ ಹಾರುತಾಳೆ
ಭೂಮಿ ಅಗಲ ಬೀಳುತಾಳೆ ||ಸಿದ್ಧಯ್ಯ||

(ಮಂಟೇಸ್ವಾಮಿ, ಪುಟ ೭೦೮)

ಉರಿ ಜ್ವರ ತಡೆಯಲಾರದೆ ನೀವು ಯಾರಪ್ಪ ಎಂದಳು. ಧರೆಗೆ ದೊಡ್ಡವರ ದತ್ತು ಮಗ ಸಿದ್ದಪ್ಪಾಜಿ ಎಂದರು. ನೀವು ಹೇಳಿದಂಗೆ ಕೇಳುತೇನೆ. ಉರಿಜ್ವರ ತೆಗೆದುಕೊಂಡು ಬಿಡಿ ಎಂದಳು. ಮುತ್ತಿನ ಜೋಳಿಗೆಯಿಂದ ಕಪ್ಪುಧೂಳ್ತ ತೆಗೆದು ಗುರುಗಳ ಪಾದ ನೆನೆದು ಮಂಡೆಮಾರಿಯ ಮೇಲೆ ಉರ್ಬುದ್ರು. ಉರಿ ಜ್ವರ ಹೋಯಿತು. ಸಿದ್ದಪ್ಪಾಜಿಯನ್ನು ಪಾಳೆಗಾರರ ಮನೆಗೆ ಕರೆದುಕೊಂಡು ಬಂದಳು.

ಹೀಗೆ ಸಿದ್ದಪ್ಪಾಜಿ ಎಲ್ಲ ಮಾರಿಯರ ಸೊಕ್ಕನ್ನು ಮುರಿದರು. ಊರಿಗೇನಾದರು ಕಾಲರ, ಪ್ಲೇಗು ಮೊದಲಾದ ಅಂಟುರೋಗಗಳು ಬಂದಾಗ 'ಸಿದ್ದಪ್ಪಾಜಿ ದಾಳ ಏರಿಸುವುದು' ಎಂಬ ಒಂದು ಆಚರಣೆಯನ್ನು ನಡೆಸುತ್ತಾರೆ. ಸಿದ್ದಪ್ಪಾಜಿ ಸಾಮಾನ್ಯವಾಗಿ 'ಮಾರಿ ಮಸಣಿಯರ ಸೊಕ್ಕನ್ನು ಮುರಿಯುವ ಧೀರ' ಎಂದು ಭಾವಿಸುತ್ತಾರೆ. ಆದುದರಿಂದ ಅವನ ಹೆಸರಿನಲ್ಲಿ ಪೂಜೆಯನ್ನು ನಡೆಸಿ ಅವನ ನಿಶಾನೆಯನ್ನು ಊರ ನಡುವಿನ ಮರದ ನೆತ್ತಿಯಲ್ಲಿ ಕಟ್ಟುತ್ತಾರೆ.

ಪಾಂಚಾಳರ ಹತ್ತಿರ ಕಬ್ಬಿಣ ಭಿಕ್ಷೆ ಪಡೆಯಲು ಸಿದ್ದಪ್ಪಾಜಿ ಬಂದಾಗ ಪಾಂಚಾಳರು ಕಬ್ಬಿಣ ಭಿಕ್ಷೆ ನೀಡಬೇಕಾದರೆ ನಾವು ಹೇಳಿದ ಒಂಬತ್ತು ಪವಾಡ ಮಾಡಬೇಕೆಂದು ಹೇಳುತ್ತಾರೆ. ಆ ಪವಾಡಗಳಲ್ಲಿ ಒಂದು ಪವಾಡದಲ್ಲಿ ಪಾಂಚಾಳರ ಮನೆ ದೇವತೆ ಕಾಳಿಕಾದೇವಿ ಮಠಕ್ಕೆ ಇವನನ್ನು ಆ ರಾತ್ರಿ ಬಿಡುತ್ತೇವೆ. ಬೆಳಗಾದ ಮೇಲೆ ನೀನು ಹೊರಗೆ ಬರಬೇಕು ಎಂದರು. ಅದಕ್ಕೆ ಒಪ್ಪಿ ಸಿದ್ದಪ್ಪಾಜಿ ಮಠಕ್ಕೆ ಬಂದು ಮಾರಿಗೆ ನಾನು ಬೆಳ್ಳಿ ಮೂಡಿ ಬೆಳಕಂಡು ಬರೋಗಂಟ ಮಠಬುಟ್ಟು ಹೊರಗೋದ್ರೆ ಸರಿ ಇಲ್ಲವಾದರೆ,

'ನಿನ್ನ ಮೂಗು ಮುಂದಾಲೆ ಉಳಿಯೋದಿಲ್ಲ
ಮೈಯಿನ ಚರ್ಮ ಉಳಿಯೋದಿಲ್ಲ ||ಸಿದ್ಧಯ್ಯ||'

(ಮಂಟೇಸ್ವಾಮಿ, ಪುಟ ೭೫೪)

ಎಂದರು ಭಯಂಕರ ರೂಪದ ಮಾರಮ್ಮನ ಗವಿಯಗಲ ಬಾಯಿ ಬುಟ್ಟುಗಂಡು ಸಿದ್ದಪ್ಪಾಜಿಯವರ ಹತ್ತಿರ ಬಂದಳು. ಬಂದ ಮಾರಿಯನ್ನು ಸಿದ್ದಪ್ಪಾಜಿ ಎಡಗಾಲಿನಲ್ಲಿ ಜಾಡ್ಸಿ ಒದ್ದಂತ ಓತ್ತಕ್ಕೆ ಮಾರಿ ನಡು ಬೀದಿಲಿ ಬಿದ್ದಳು. ಕೆಟ್ಟಮಾರಿ ಹೋದಳೆಂದು ಹೇಳಿ ಸಿದ್ದಪ್ಪಾಜಿ ಮಠದಲ್ಲಿ ಒರಗುತ್ತಾರೆ. ಪಾಂಚಾಳರು, ಮನೆದೇವ್ರು ಕಾಳಮ್ಮ ಬೀದಿಯಲ್ಲಿ ಬಿದ್ದಿರುವುದನ್ನು ಕಂಡು ಇವಳು ಕಲ್ಲುದೇವರು,

'ಈ ಕೆಟ್ಟಾ ಮಾರಿ ಮುಂಡೆಯ ನಾವು
ನೆಚ್ಚಬಾರದು ಎಂದರಲ್ಲಾ ||ಗಂಗಾಧರ||'

(ಮಂಟೇಸ್ವಾಮಿ, ಪುಟ ೭೫೬)

ಕಬ್ಬಿಣ ಭಿಕ್ಷೆ ಪಡೆಯುವ ಪವಾಡಗಳಲ್ಲಿ ಸಿದ್ದಪ್ಪಾಜಿಗೆ ಪಾಂಚಾಳರು ಕೊಡುವ ಕಷ್ಟಗಳನ್ನು ಕಣ್ಣಿಂದ ನೋಡಲಾಗದೆ ನಮ್ಮ ಮಗನ ಭವ ಬಂಧನವನ್ನು ತಪ್ಪಿಸದಿದ್ದರೆ ನಿಮ್ಮ ಪಾದದಲ್ಲಿ ಬಿದ್ದು ಪ್ರಾಣ ಬಿಡುತ್ತೇವೆ ಎಂದು ಶಿಶುಮಕ್ಕಳಾದ ರಾಚಪ್ಪಾಜಿ, ದೊಡ್ಡಮ್ಮತಾಯಿ, ಚೆನ್ನಾಜಮ್ಮರವರು ಗುರುಗಳ ಮುಂದೆ ದುಃಖ ವನ್ನು ತೋಡಿಕೊಳ್ಳುತ್ತಾರೆ. ಪಾಂಚಾಳರು ನನ್ನ ಶಿಶುಮಗ ಸಿದ್ದಪ್ಪಾಜಿಗೆ ಹೊಟ್ಟೆ ಉರಿಸಿದ್ದಾರೆ. ಈಗ ನನ್ನ ಕಪ್ಪುಧೂಳ್ತದ ಮಹಿಮೆ ತೋರಿಸುತ್ತೇನೆ ಎಂದ ಗುರುಗಳು,

'ಏಳು ನೂರು ಜನರು
ಮಾರಿರ ನನ ಗುರುವೆ ಅವರು
ಜೋಳುಗೆಲಿ ಮಡಗಿದ್ದುರು
ಅಪ್ಪ ಜೋಳುಗೇಲಿದ್ದ ಮಾರಿರಾ
ಅವರು ಭೂಮಿ ಮೇಲೆ ಬುಟ್ಟರಂತೆ ||ಸಿದ್ದಯ್ಯ||'

(ಮಂಟೇಸ್ವಾಮಿ, ಪುಟ ೭೮೮)

ಮಾರಿಯರಿಗೆ ಗುರುಗಳು ಹೇಳುತ್ತಾರೆ, ಏಳು ಜನ ಪಾಳೆಗಾರರನ್ನು ಬಿಟ್ಟು ಹಲಗೂರಿನ ಗ್ರಾಮದ ಬೀದಿಗಳನ್ನು ಹಾಳು ಮಾಡಬೇಕು. ಇವರಿಗೆ ನೀವು ಬೇಕಾದ ಕಷ್ಟವನ್ನು ಕೊಟ್ಟು ಬಿಡಿ. ಆದರೆ ಅಕ್ಕಪಕ್ಕದ ಊರಿಗೇ ದೃಷ್ಟಿಯ ಮಡಗಿ ನೋಡಬ್ಯಾಡಿ, ಅಕ್ಕಪಕ್ಕದ ಊರಿಗೇನಾದ್ರು ಹೊರಟೋಗಿ ಬಿಟ್ರೆ

'ನೀವು ಒಕ್ಕೊಕ್ಕಿದ ಮೂಲೆಗೆ
ನಾ ಹೊಗೆಯಾಕ್ತೀನಿ ಎಂದಾರಲ್ಲಾ ||ಸಿದ್ಧಯ್ಯ||'

(ಮಂಟೇಸ್ವಾಮಿ, ಪುಟ ೭೮೯)

ಹಲಗೂರಿನ ಏಳು ಬೀದಿಯ ನೀವು ಹಾಳು ಮಾಡಿ. ನಿಮಗೆ ದೊಡ್ಡಬ್ಬ, ಚಿಕ್ಕಬ್ಬ, ಮರಬ್ಬ ಆಗುತ್ತದೆ ಎಂದು ಹೇಳಿ ಪಾಂಚಾಳರ ಕೇರಿಗೆ ಕಳುಹಿಸಿದರು.

ದೊಡ್ಡಬ್ಬ ಎನ್ನುವುದು "ಮಾರಿಗೆ ಮಾಡುವ ವಿಶೇಷ ಹಬ್ಬ ಸಾಮಾನ್ಯವಾಗಿ ಈ ಹಬ್ಬ ಹನ್ನೆರಡು ವರ್ಷಕ್ಕೆ ಒಮ್ಮೆ ನಡೆಯುತ್ತದೆ. ಈ ಮಾರಿಯ ಶಕ್ತಿ ಅಪಾರವಾದ್ದರಿಂದ ಬಹಳ ಕಟ್ಟುನಿಟ್ಟಾಗಿ ಈ ಹಬ್ಬ ಮಾಡುತ್ತಾರೆ. ಕೊಳ್ಳೇಗಾಲ ತಾಲೂಕಿನ ಮಂಗಲ ಗ್ರಾಮದಲ್ಲಿ."[೪೩]

ಧರೆಗೆ ದೊಡ್ಡವರ ಅಪ್ಪಣೆಯಾಗಿ ಬಿಟ್ಟಿದೆ ಎಂದು ಹೇಳಿ ಅನ್ನ ಇಲ್ಲದ ಮಾರಿ, ನಿದ್ರೆ ಇಲ್ಲದ ಮಾರಿ, ಕಣ್ಣು ಕಾಣದ ಮಾರಿ, ಕಿವಿ ಕೇಳದ ಮಾರಿ ಎಲ್ಲ ಮಾರಿಯರು ಹಲಗೂರಿಗೆ ನುಗ್ಗುತ್ತಾರೆ.

'ಅಯ್ಯಾ ಮಾರಿನುಗ್ಗಿದ ಮನೆ ಒಳುಗೆ
ಇಲಿ ಹೆಗ್ಗಣ ಸಾಯುತಾವೆ ||ಗಂಗಾಧರ||

ಅಯ್ಯಾ ಇಲಿ ಹೆಗ್ಗಣ ಸತ್ತಂಗೆ
ಸಾಲು ಹೆಣವ ಕೆಡವುತಾರೆ ||ಗಂಗಾಧರ||'

(ಮಂಟೇಸ್ವಾಮಿ, ಪುಟ ೭೯೦)

ಮಾರಿಯರು ಎಷ್ಟು ಕ್ರೂರಿಗಳೆಂದರೆ,

'ಗುರುವೆ ದೊಡ್ಡ ದೊಡ್ಡವರಿಗೆಲ್ಲ
ಹಿಂದೆ ಬೇದಿಯ ಕೊಟ್ಟವರೆ
ಮುಂದು ಬೇದಿಯ ಕೊಟ್ಟವರೆ
ಒಂದು ವಮನದಲ್ಲಿ
ಒಂದೆ ಬೇದಿ ಒಳಗೆ
ಅವರು ಪಕ ಪಕನೆ ಗುರುದೇವಾ
ಪ್ರಾಣವನ್ನೆ ಬಿಡುವುತಾರೆ ||ಸಿದ್ಧಯ್ಯ||'

(ಮಂಟೇಸ್ವಾಮಿ, ಪುಟ ೭೯೦)

ಮಾರಮ್ಮಂದಿರು ಮುನಿದರೆ ಒಂದೊಂದು ರೋಗವಾಗಿ ಕಾಡುತ್ತಾರೆ. ಮುಂದುವರೆದು ಮಾರಿಯರು

'ಗುರುವೇ ಮುದುಕಿರು ಮೋಟೀರು
ಎಡಾಯಸದೋರು ಗುರುವು
ಹೆಂಗಸರಿಗೆ ನನ್ನಪ್ಪ
ಕಂಕುಳು ಒಳಗೆ ದೇವಾ
ಶಂಕುದಾಳಿ ಕೊಟ್ಟು
ಗುರುವೆ ಒಂದು ಮೂಡಿಸವರೆ
ದೇವಾ ಒಂಭತ್ತು ಹೊಡಿಸವರೆ
ಗುರುವೆ ಶಂಕುನ ಬಾದೆ ದೇವಾ
ತಡಿನಾರುದೆ ದೇವಾ
ಅವರು ಕೊರಗಿ ಕೊರಗಿ
ಪಕ್ಕನೆ ಪ್ರಾಣ ಬಿಡುವುತಾರೆ ||ಸಿದ್ಧಯ್ಯ||'

(ಮಂಟೇಸ್ವಾಮಿ, ಪುಟ ೭೯೦)

ಹೀಗೆ ಮುದುಕರು, ದೊಡ್ಡವರು, ಹೆಂಗಸರು ಎಲ್ಲರು ಪ್ರಾಣ ಬಿಡುತ್ತಾರೆ. ಮಾರಿಯರು ಇನ್ನೂ ಮುಂದುವರೆದು ಹಾಲು ಕುಡಿದ ಮಕ್ಕಳಿಗೆ ರಕ್ತಭೇದಿ ಕೊಟ್ಟರು. ಬೀದಿಲಾಡೊ ಮಕ್ಕಳಿಗೆ ಹುಣ್ಣು ರೋಗ ಕೊಟ್ಟರು, ಹಾದಿಲಾಡೋ ಮಕ್ಕಳಿಗೆ ಗ್ಯಾರು ರೋಗ ಕೊಟ್ಟರು. ಲಾಲಿ ಹಾಡೋ ಮಕ್ಕಳು ಲಾಲಿ ಒಳಗೆ ಸಾಯುತ್ತಾರೆ. ಹೀಗೆ ಹಲಗೂರನ್ನು ನಾಶ ಮಾಡಿದ ನಂತರ, ಹಲಗೂರು ಪಾಂಚಾಳಗೇರಿಗೆ ಮಾರಿಯನ್ನು ಕೂಡುಬಿಟ್ಟು ಗುರುಗಳು 'ಹಲಗೂರು ಹಾಳಾಗಲಿ' ಎಂದು ಶಾಪ ಕೊಟ್ಟು ರಾಜಬಪ್ಪಗಣಕ್ಕೆ ಬರುತ್ತಾರೆ. ಕೊನೆಗೆ, ಸಿದ್ದಪ್ಪಾಜಿಯವರು ಕಣಿ ವೇಷದಲ್ಲಿ ಸೂಚಿಸಿದ ಪರಿಹಾರದಂತೆ, ಪಾಂಚಾಳರು ಹೃದಯ ಪಶ್ಚಾತ್ತಾಪದಿಂದ ಮಂಟೇಸ್ವಾಮಿಗೆ ಶರಣಾಗಿ, ಪಾಂಚಾಳರ ಕುಲವನ್ನೆಲ್ಲ ಬದುಕಿಸಿಕೊಳ್ಳುತ್ತಾರೆ.

ಮಂಟೇಸ್ವಾಮಿಗಳು ಕುಲದೇವತೆಯರನ್ನು ಕೈ ಬೀಸಿ ಕರೆದ ಕೂಡಲೇ ಅವರ ಆಜ್ಞೆಗಾಗಿ ಕಾಯುವುದು ಹಾಗೂ ಅವರು ಆದೇಶಿಸಿದ ಎಲ್ಲಾ ಕೆಲಸಗಳನ್ನು ಯಶಸ್ವಿಯಾಗಿ ನಿರ್ವಹಿಸುವುದು ಮಂಟೇಸ್ವಾಮಿಗಳು ದೇವತೆಗಳಿಗೆ ಅಧಿದೇವತೆ ಎನ್ನುವ ಆಶಯವನ್ನು ಕಾವ್ಯ ಸೂಚಿಸುತ್ತದೆ.

ಮಲೆಯಮಾದೇಶ್ವರ ಮತ್ತು ಮಂಟೇಸ್ವಾಮಿ ಪರಂಪರೆಯಲ್ಲಿ ಬಹುಮುಖ್ಯವಾಗಿ ಕಾಣುವ ಅಂಶವೆಂದರೆ ಅತಿಮಾನುಷ ಪವಾಡಗಳನ್ನು ಮೆರೆಯುವುದು. ಮಾಟ, ಮಂತ್ರಗಳ ಮೂಲಕ ಎದುರಾಳಿಯನ್ನು ಗೆಲ್ಲುವ, ಈ ಕ್ರಿಯೆಯಲ್ಲಿ ಗ್ರಾಮದೇವತೆಗಳ ಪಾತ್ರ ಗಣನೀಯವಾಗಿದೆ.

'ಮಲೆಯಮಾದೇಶ್ವರ,' ಜನಪದ ಮಹಾಕಾವ್ಯದಲ್ಲಿ, ಮಲೆಯಮಾದೇಶ್ವರರು ಆದಿ ಶಕ್ತಿಯಿಂದಲೇ ಎಲ್ಲಾ ವಿದ್ಯೆಗಳನ್ನು ಕಲಿತು ಆಕೆಯನ್ನು ತನ್ನ ಪವಾಡದ ಮೂಲಕ ಭಸ್ಮ ಮಾಡುವ ಸಂದರ್ಭದಲ್ಲಿ 'ನರ ಮನುಷ್ಯರಿಗೆ' ಏಳಿಗೆ ಮಾಡಲು ಮಾರಿ, ಮಸಣಿ, ದುರ್ಗಿ, ಚೌಡಿಯರು, ಮುನ್ನೂರು ಕೋಟಿ ದೇವರು ಇವರೆಲ್ಲರನ್ನು ಪಡೆಯುವಂತಹ ವಿದ್ಯೆಯನ್ನು ಆಕೆಯಿಂದ ಕಲಿಯುತ್ತಾರೆ. ನಂತರ ಆಕೆಗೆ ನೀನು ನನ್ನ ತಾಯಿ, ವಿದ್ಯೆ ಕಲಿಸಿದವಳು, ತಾಯಿಯನ್ನು ಮದುವೆ ಆಗುವುದು ಅರ್ಧದ ಹಾದಿ ಹಿಡಿದ ಹಾಗಾಗುತ್ತದೆ' ಎಂದು, ಯುಕ್ತಿಯಿಂದ ಅವಳ ಕೈ ಅನ್ನು ಅವಳೇ ನೆತ್ತಿಯ ಮೇಲೆ ಇಟ್ಟುಕೊಂಡು, ಸುಟ್ಟು ಭಸ್ಮವಾಗುವ ಹಾಗೆ ಮಾಡುತ್ತಾರೆ.

ಮಂಟೇಸ್ವಾಮಿ ಕಾವ್ಯದಲ್ಲಿ ಮಂಟೇಸ್ವಾಮಿಗಳು ಮಾರಿಯರನ್ನು ನಡೆಸಿಕೊಳ್ಳುವ ರೀತಿಗೂ ಮಾದೇಶ್ವರ ಕಾವ್ಯದಲ್ಲಿ ಮಾದೇಶ್ವರರು ಮಾರಿಯನ್ನು ನಡೆಸಿಕೊಳ್ಳುವ ರೀತಿಗೂ ಬಹಳ ವ್ಯತ್ಯಾಸಗಳನ್ನು ಕಾಣಬಹುದು. ಮಂಟೇಸ್ವಾಮಿ ಮಾರಿಯಿಂದ ಕೆಲಸ ತೆಗೆಯುತ್ತಾರೆ. ಆದರೆ ಮಾದೇಶ್ವರರು ಮಾರಿಯರನ್ನು ಪೀಡಿಸುತ್ತಾರೆ. ಇಬ್ಬರೂ ಮಾರಿಯರಿಗೆ ಬುದ್ಧಿ ಕಲಿಸುತ್ತಾರೆ ಮತ್ತು ಕಟ್ಟಿ ಆಳುತ್ತಿದ್ದರಂತೆ. ಅವರ ಅಪ್ಪಣೆಯ ಮೇರೆಗೆ ಇವರೆಲ್ಲ ಬೇರೆ ಬೇರೆ ಊರುಗಳನ್ನು ಸೇರಿದರಂತೆ. ಈ ಮಾರಿಯರೆಲ್ಲ ಉತ್ತರದಿಂದ ಬಂದವರೆಂಬುವುದು ಅತ್ಯಂತ ಪ್ರಚಲಿತವಾದ ಆಶಯ ಇವರ ಸಂಖ್ಯೆ ಪ್ರಾರಂಭದಲ್ಲಿ ೭ ಇದ್ದು ಅನಂತರದಲ್ಲಿ ೭೦೦, ೭,೦೦೦ ಆಗಿದೆ ಎಂಬುವುದು ನಂಬಿಕೆ.

ಗ್ರಾಮದೇವತೆಗಳು ರಕ್ಷಕ ದೇವತೆಗಳು, ಏನಾದರೂ ಆ ದೇವತೆಗಳು ಕೋಪಗೊಂಡು 'ಸ್ಫೋಟಗೊಂಡರೆ ಅವರೆಲ್ಲ ಒಂದೊಂದು ರೋಗವಾಗಿ' ಕಾಡುವ ಶಕ್ತಿ ಹೊಂದಿರುವುದರಿಂದ ಇಡೀ ಮನುಕುಲವನ್ನೇ ನಾಶ ಮಾಡುತ್ತಾರೆ. ಒಟ್ಟಿನಲ್ಲಿ ಮಾದೇಶ್ವರ, ಮಂಟೇಸ್ವಾಮಿ ಇಬ್ಬರೂ ದೊಡ್ಡ ದೇವತೆಗಳಾದುದರಿಂದ ಮಾರಿ ಮಸಣಿಯರು ಅವರ ಮಾತುಗಳನ್ನು ಕೇಳಿ, ಅವರು ಹೇಳಿದ ಕಾರ್ಯವನ್ನು ಮಾಡುತ್ತಾರೆ.

ತೊಂದರೆಗಳು ಮನುಷ್ಯನನ್ನು ಕಾಡಿದಾಗ, ಗ್ರಾಮದೇವತೆಗೆ ಅದರಲ್ಲೂ ಸ್ತ್ರೀ ದೇವತೆಗೆ ಮೊರೆ ಹೋಗು ವುದು. ಈ ದೇವತೆಗಿರುವ ಅಪರಿಮಿತ ಶಕ್ತಿಯನ್ನು ಅಭಿವ್ಯಕ್ತಗೊಳಿಸುವುದಲ್ಲದೆ, ಜನಪದರು ಮಾತೃಮೂಲ ಕುಟುಂಬದಿಂದ ಬಂದುದರ ಸಂಕೇತವಾಗಿದೆ.

;

## ಅಡಿಟಿಪ್ಪಣಿಗಳು

೧. ಪ್ರೊ.ಹಿ.ಚಿ.ಬೋರಲಿಂಗಯ್ಯ; ವಿಸ್ಮೃತಿ ಮತ್ತು ಸಂಸ್ಕೃತಿ, ೨೦೦೧, ಪುಟ ೭೧

೨. ಡಾ.ಜೀ.ಶಂ.ಪರಮಶಿವಯ್ಯ; ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೧೫೫

೩. ಡಾ.ರಾ.ವೆಂಕಟೇಶ ಇಂಡ್ವಾಡಿ; ಮಂಟೇಸ್ವಾಮಿ ಪರಂಪರೆ, ೧೯೯೯, ಪುಟ ೭೭

೪. ಡಾ.ಬಸವಲಿಂಗ ಸೊಪ್ಪಿಮಠ (ಸಂ); ಕೊಡೇಕಲ್ಲ ವಚನ ಕಾವ್ಯ ಸಂಪುಟ-೧, ೧೯೯೮, ಪ್ರಸ್ತಾವನೆ ೧೧

೫. ಅದೇ, ಪ್ರಸ್ತಾವನೆ ೧೫

೬. ಅದೇ, ಪ್ರಸ್ತಾವನೆ ೧೧

೭. ಡಾ.ರಾ.ವೆಂಕಟೇಶ ಇಂಡ್ವಾಡಿ; ಮಂಟೇಸ್ವಾಮಿ ಪರಂಪರೆ, ೧೯೯೯, ಪುಟ ೭೭

೮. ಡಾ.ಜೀ.ಶಂ.ಪರಮಶಿವಯ್ಯ; ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೧೩೪

೯. ಡಾ.ರಹಮತ್ ತರೀಕೆರೆ; ಕರ್ನಾಟಕದ ಸೂಫಿಗಳು, ೨೦೦೧, ಪುಟ ೮೮

೧೦. ಡಾ.ರಾ.ವೆಂಕಟೇಶ ಇಂಡ್ವಾಡಿ; ಮಂಟೇಸ್ವಾಮಿ ಪರಂಪರೆ, ೧೯೯೯, ಪುಟ ೩೬,೩೭

೧೧. ಪ್ರೊ.ಹಿ.ಚಿ.ಬೋರಲಿಂಗಯ್ಯ; ಮಂಟೇಸ್ವಾಮಿ, ೧೯೯೭, ಪ್ರಸ್ತಾವನೆ xvi

೧೨. ಡಾ. ಜೀ.ಶಂ.ಪರಮಶಿವಯ್ಯ; ಶ್ರೀ ಮಂಟೇಸ್ವಾಮಿ, ೧೯೭೯, ಪ್ರಸ್ತಾವನೆ xvii

೧೩. ಡಾ. ಜೀ.ಶಂ.ಪರಮಶಿವಯ್ಯ; ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೧೬೩

೧೪. ಅದೇ, ಪುಟ ೧೫೫

೧೫. ಪ್ರೊ.ಹಿ.ಚಿ.ಬೋರಲಿಂಗಯ್ಯ; ಮಂಟೇಸ್ವಾಮಿ, ೧೯೯೭, ಪ್ರಸ್ತಾವನೆ ಪುಟ xvii

೧೬. ಟಿಪ್ಪಣಿಗಳು

ಒಂಬತ್ತು ಪವಾಡಗಳ ವಿವರಗಳು

೧. ಮೂರು ಜನ ಪಂಚಾಳ ದೊರೆಗಳು ಸಿದ್ದಪ್ಪಾಜಿಗೆ ಹೊಡೆದಂತಹ ಏಟುಗಳೆಲ್ಲಾ ಪುಷ್ಪಗಳಾಗುವುದು.

೨. ಕಾದ ಗಳದಲ್ಲಿ ಸಿದ್ದಪ್ಪಾಜಿಗೆ ಎಳೆದ ಒಂಬತ್ತು ಬರೆಗಳು ಜನಿವಾರಗಳಾಗುವುದು.

೩. ಕಬ್ಬಿಣದ ಕೊಪ್ಪರಿಗೆ ನೀರಾಗಿ ಹರಿದು ಹೋಗುವುದು.

೪. ಕಾಳಿಕದೇವಿ ಮಠದಲ್ಲಿ ಮಾರಿ ಬಾಯಿಗೆ ಹಾಕುವ ಪವಾಡ.

೫. ಕಾದಿರುವ ಎಣ್ಣೆ ಕೊಪ್ಪರಿಗೆಗೆ ಹಾಕಿ ಮುಚ್ಚಿದಾಗ ಅದು ತಣ್ಣೀರ ಕೊಳವಾಗುವುದು.

೬. ಕಾದಿರುವ ನೊಗದ ಗಾತ್ರದ ಕಬ್ಬಿಣ ಹೆಗಲ ಮೇಲೆ ಮಡಗಿದ್ದಾಗ ಕಂಡಾಯವಾಯ್ತು.

೭. ಕಾದ ಸುಣ್ಣದ ಒಳಗೆ ಮೂರು ಗಾಡಿ ಮೆಣಸಿನಕಾಯಿ, ಮೂರು ಗಾಡಿ ನೀರು ಕಾಯಿಸಿ ಸಿದ್ದಪ್ಪಾಜಿಯನ್ನು ಮುಳುಗಿಸಿದಾಗ, ಸುಣ್ಣ ಮಲ್ಲಿಗೆ ಹೂವಾಗಿ, ನೀರು ಪನ್ನೀರಾಗಿ, ಮೆಣಸಿನಕಾಯಿ ಕೆಂಡಸಂಪಿಗೆಯಾಗುವುದು.

೮. ಅಂಗೈ ಮೇಲೆ ಮಡಗಿದ ಕಾದಗಟ್ಟಿ ತಾವರೆ ಪುಷ್ಪವಾಗುವುದು.

೯. ಉಕ್ಕಿನ ಕುದುರೆಗೆ ಜೀವ ಬರುವಂತೆ ಮಾಡುವುದು.

೧೦. ಕಾಯಿಸಿದ ಆನೆ ಗಾತ್ರದ ಪಡಗಂಡು ನೀರಾಗಿ ಹರಿಯುತ್ತದೆ. ಕಾವ್ಯದಲ್ಲಿ ೯ ಪವಾಡಗಳೆಂದು ಉಲ್ಲೇಖಿಸಲಾಗಿದೆ. ಆದರೆ ಒಟ್ಟು ಪವಾಡಗಳು ೧೦.

೧೭. ಡಾ.ರಾ.ವೆಂಕಟೇಶ ಇಂದ್ವಾಡಿ; ಮಂಟೇಸ್ವಾಮಿ ಪರಂಪರೆ, ೧೯೯೯, ಪುಟ ೯೧

೧೮. ಅದೇ, ಪುಟ ೭೯

೧೯. ಡಾ.ಜೀ.ಶಂ.ಪರಮಶಿವಯ್ಯ; ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೧೩೬

೨೦. ಅದೇ, ಪುಟ ೧೩೭

೨೧. ಪರಮಶಿವ ನಡುಬೆಟ್ಟು; ಧರೆಗೆ ದೊಡ್ಡವರು, ೧೯೮೪, ಪುಟ ೨೧

೨೨. ಡಾ.ರಾ.ವೆಂಕಟೇಶ ಇಂದ್ವಾಡಿ; ಮಂಟೇಸ್ವಾಮಿ ಪರಂಪರೆ, ೧೯೯೯, ಪುಟ ೭೭

೨೩. ಡಾ.ಹಿ.ಚಿ.ಬೋರಲಿಂಗಯ್ಯ; ಉಜ್ಜಿನ ಚೌಡಮ್ಮ, ೨೦೦೧ (ಎರಡನೇ ಮುದ್ರಣ), ಪುಟ ೪

೨೪. ಡಾ.ಸಿದ್ಧಲಿಂಗಯ್ಯ; ಗ್ರಾಮ ದೇವತೆಗಳು, ೧೯೯೭, ಪುಟ ೨೨

೨೫. ಅದೇ, ಪುಟ ೨೨

೨೬. ಉಲ್ಲೇಖ: ಡಾ.ಹಿ.ಚಿ.ಬೋರಲಿಂಗಯ್ಯ; ಬುಡಕಟ್ಟು ದೈವಾರಾಧನೆ, ೨೦೦೦, ಪುಟ ೧೦೫

೨೭. ಎಚ್.ವಿ.ನಾಗೇಶ್; ಜಾನಪದ ಸಾಹಿತ್ಯ ದರ್ಶನ-೮, ೧೯೯೦, ಪುಟ ೨೧೬

೨೮. ಅದೇ, ಪುಟ ೨೧೮

೨೯. ಡಾ.ಮಂಜುನಾಥ ಬೇವಿನಕಟ್ಟಿ; ಜಾನಪದ ೧೯೯೩, ಪುಟ ೧೦೬

೩೦. Village goddess of south India, H.White Head, ಉಲ್ಲೇಖ: ಪ್ರೊ.ಎನ್.ಚಂದ್ರಪ್ಪ, ಎಲ್ಲಮ್ಮ-ಒಂದು ಜಾನಪದೀಯ ಅಧ್ಯಯನ, ೨೦೦೨, ಪುಟ ೫೨,೫೩

೩೧. ಡಾ.ಜಿ.ಆರ್.ತಿಪ್ಪೇಸ್ವಾಮಿ; ಕೋಲಾರಮ್ಮ, ೧೯೯೬, ಪುಟ ೧೨

೩೨. ಡಾ.ಕೇಶವನ್ ಪ್ರಸಾದ್; ಜಾನಪದ ಕರ್ನಾಟಕ, ಜೂನ್ ೨೦೦೨, ಸಂಪುಟ-೧, ಸಂಚಿಕೆ-೨, ಪುಟ ೮೪

೩೩. ಡಾ.ಹಿ.ಚಿ.ಬೋರಲಿಂಗಯ್ಯ; ಕರ್ನಾಟಕ ಜನಪದ ಕಲೆಗಳ ಕೋಶ, ೧೯೯೬, ಪುಟ ೮

೩೪. ಅದೇ, ಪುಟ ೩

೩೫. ಡಾ.ಮಂಜುನಾಥ ಬೇವಿನಕಟ್ಟಿ; ಜಾನಪದ ಸಂಸ್ಕೃತಿ, ೧೯೯೩, ಪುಟ ೧೦

೩೬. ಡಾ.ರಹಮತ್ ತರೀಕೆರೆ; ಜಾನಪದ ೧೯೯೩, ಪುಟ ೩೧೭

೩೭. ಡಾ.ವೈ.ಸಿ.ಭಾನುಮತಿ; ಜಾನಪದ ಜಗತ್ತು, ಜುಲೈ-ಡಿಸೆಂಬರ್ ೨೦೦೧, ಜನವರಿ-ಮಾರ್ಚ್ ೨೦೦೨, ಸಂಪುಟ- ೨೨-೨೩, ಸಂಯುಕ್ತ ಸಂಚಿಕೆ- ೩-೪ ಮತ್ತು ೧, ಪುಟ ೬೬-೬೭

೩೮. ಡಾ.ಎನ್.ಎಸ್.ಸರಸ್ವತಿ; ಜನಪದ ಸಾಹಿತ್ಯದಲ್ಲಿ ಪವಾಡಗಳು - ಒಂದು ಅಧ್ಯಯನ (ಅಪ್ರಕಟಿತ) ೧೯೯೭, ಪುಟ ೩, ೩೫

೩೯. ಅದೇ, ಪುಟ ೨೧

೪೦. ಡಾ.ಹಿ.ಚಿ.ಬೋರಲಿಂಗಯ್ಯ; ಕಾಡು ಕಾಂಕ್ರೀಟ್ ಮತ್ತು ಜಾನಪದ, ೧೯೯೫, ಪುಟ ೬೩

೪೧. ಡಾ.ಹಿ.ಚಿ.ಬೋರಲಿಂಗಯ್ಯ; ಮಂಟೇಸ್ವಾಮಿ, ೧೯೯೭, ಪ್ರಸ್ತಾವನೆ XIV-XV

೪೨. ಡಾ.ವೆಂಕಟೇಶ ಇಂದ್ವಾಡಿ; ಮಂಟೇಸ್ವಾಮಿ ಪರಂಪರೆ, ೧೯೯೯, ಪುಟ ೯೨

೪೩. ಡಾ.ವೆಂಕಟೇಶ ಇಂದ್ವಾಡಿ; ಸಾಂಸ್ಕೃತಿಕ ಪದಕೋಶ ನೀಲಗಾರರು, ೨೦೦೦, ಪುಟ ೨೨

# ಅಧ್ಯಾಯ ೫

## ಜುಂಜಪ್ಪನ ಕಾವ್ಯ

೫.೧. ಪಶುಪಾಲಕರ ಸ್ತ್ರೀ ಆರಾಧನೆ

೫.೨. ಜುಂಜುಪ್ಪನ ಕಾವ್ಯದಲ್ಲಿ ತಾಯಿಯ ಸ್ಥಾನಮಾನ

## ಅಧ್ಯಾಯ ೫

# ಜುಂಜಪ್ಪನ ಕಾವ್ಯ

### ೫.೧. ಪಶುಪಾಲಕರ ಸ್ತ್ರೀ ಆರಾಧನೆ

ಬುಡಕಟ್ಟು ಸಮುದಾಯಗಳಲ್ಲಿ, ಬೇಟೆ ಮೊದಲ ಹಂತವಾದರೆ ಪಶುಪಾಲನೆ ಎರಡನೆಯ ಹಂತ, ಕೃಷಿಯನ್ನು ಮೂರನೆಯ ಹಂತದಲ್ಲಿ ಕಾಣಬಹುದು. ಬೇಟೆ ಹಂತದಲ್ಲಿ ಗೆಡ್ಡೆಗೆಣಸು ತಿಂದು ಜೀವಿಸುತ್ತಿದ್ದರು. ಕ್ರಮೇಣ ಪ್ರಾಣಿ, ಪಕ್ಷಿಗಳನ್ನು ಬೇಟೆಯಾಡಿ, ಅದರ ಹಸಿ ಮಾಂಸವನ್ನು ಬೇಯಿಸಿಕೊಂಡು ತಿನ್ನಲು ಪ್ರಾರಂಭಿಸಿದರು. ಇದು ನಾಗರಿಕತೆಯ ಮೊದಲ ಹಂತ. ಇಂದು ಸಹ ಬೇಟೆ ಉಪಕಸುಬಾಗಿ ಕಂಡು ಬರುತ್ತದೆ. ಬೇಟೆಯ ನಂತರದ ಪಶುಪಾಲನೆಯ ಹಂತದಲ್ಲಿ "ಪ್ರಾಣಿಗಳನ್ನು ಪಳಗಿಸಿ ಪಶುಸಂಗೋಪನಾ ಕಾರ್ಯ ಕೈಗೊಂಡ ಹಂತದಿಂದ ಪುರುಷ ಪ್ರಾಧಾನ್ಯ ಹೆಚ್ಚಾಯಿತು. ಪುರುಷ ಪ್ರಧಾನ್ಯತೆಯ ಜೊತೆಗೆ ಪುರುಷ ದೈವಗಳ ಸೃಷ್ಟಿಯೂ ಆಯಿತು. ಆಯಾ ಸಮುದಾಯದ ವೀರರು ದೈವಗಳಾಗಿ ರೂಪಾಂತರಗೊಂಡ ಸ್ಥಿತಿಯಲ್ಲಿ ಅವರ ಆರಾಧನೆಯೂ ವಿವಿಧ ರೀತಿಯಲ್ಲಿ ಆರಂಭಗೊಂಡಿತು."[೧] ಕೃಷಿ ಚಟುವಟಿಕೆಯನ್ನು ಕಂಡು ಹಿಡಿದ ಸ್ತ್ರೀ, ಗಂಡಸರು ಬೇಟೆಗಾಗಿ ಹೊರಗೆ ಹೋದಾಗ ಮಕ್ಕಳ ಪೋಷಣೆ ಮಾಡಿಕೊಂಡು, ಬೀಜದಿಂದ ಸಸಿಯಾಗುವುದನ್ನು ಕಂಡಳು. ಅನಂತರ ಕೈಗುದ್ದಲಿಯಿಂದ ತೋಟದ ಕೃಷಿಯನ್ನು ಪ್ರಾರಂಭಿಸಿದಳು. "ಸ್ತ್ರೀಯ ಗರ್ಭಧಾರಣಾ ಶಕ್ತಿ ಮತ್ತು ಭೂಮಿಯ ಸಸ್ಯಧಾರಣಾ ಶಕ್ತಿಯನ್ನು ಮತ್ತೆ ದೈವಸ್ಥಾನಕ್ಕೆ ಏರಿಸಿದವು. ಗ್ರಾಮದೇವತೆಗಳ ಸೃಷ್ಟಿ ಆರಂಭವಾದದ್ದು ಹೀಗೆ."[೨]

ಪಶುಪಾಲನೆ ಪುರುಷರ ಕೈಗೆ ಸೇರಿದ ಮೇಲೆ ಕೃಷಿ ಒಂದು ಆರ್ಥಿಕ ಚಟುವಟಿಕೆಯಾಗಿ ಅಭಿವೃದ್ಧಿ ಹೊಂದಿದಂತೆ ಭೂಮಾಲಿಕತ್ವವೂ ತನ್ನ ನೆಲೆಕಂಡ ಮೇಲೆ ಸ್ತ್ರೀ ಪ್ರಾಧಾನ್ಯತೆ ಕಡಿಮೆಯಾಗಿ ಪುರುಷ ಪ್ರಾಧಾನ್ಯತೆ ಹೆಚ್ಚಿತ್ತು. "ಶತ್ರುಗಳ ಜೊತೆ ಹೋರಾಡಲು ಪುರುಷರು ಸ್ತ್ರೀಗಿಂತ ಹೆಚ್ಚು ಶಕ್ತಿವಂತರು. ಶಕ್ತಿಯುತ ಕೆಲಸಗಳನ್ನು ಮಾಡಲು ಪುರುಷರೇ ಸಮರ್ಥರು ಎಂಬೆಲ್ಲಾ ಅಂಶಗಳಿಂದಲೇ ಪಿತೃಪ್ರಧಾನ ದೇವತೆಗಳ ಆಚರಣೆಯೂ ಪ್ರಾರಂಭವಾಯಿತು."[೩]

"ಕಾಡುಗೊಲ್ಲರ ದೇವತೆಗಳನ್ನು ಪ್ರಮುಖ ದೇವತೆಗಳು, ಸಾಮಾನ್ಯದೇವತೆಗಳು ಎಂದು ವರ್ಗೀಕರಿಸಬಹುದು. ಎತ್ತಪ್ಪ, ಜುಂಜಪ್ಪ, ಕಾಟಮದೇವರು, ಚಿತ್ತದೇವರು, ಪಾತೇದೇವರು, ಕೇತೇದೇವರು, ನರಸಿಂಹ, ತಿಮ್ಮಪ್ಪ, ರಂಗಪ್ಪ ಇವು ಪ್ರಮುಖ ದೇವತೆಗಳು. ಎತ್ತಪ್ಪ ದೇವತೆಯ ಕೇಂದ್ರಗಳು ಹಿರಿಯೂರು ತಾಲ್ಲೂಕಿನ ವೆನ್ಕಲ್ ಗುಡ್ಡದಲ್ಲಿ ಮತ್ತು ಚಿತ್ರದುರ್ಗ ತಾಲೂಕಿನ ತಳುಕಿನ ಗುಡ್ಡದಲ್ಲಿ ಇವೆ. ಜುಂಜಪ್ಪನ ಕೇಂದ್ರಗಳು

ಸಿರಾ ತಾಲೂಕಿನ ಬೇವಿನಹಳ್ಳಿಯಲ್ಲಿ ಮತ್ತು ಗುಬ್ಬಿ ತಾಲೂಕಿನ ಹಾಗಲವಾಡಿಯಲ್ಲಿವೆ. ಚಿತ್ರದೇವರ ಕೇಂದ್ರಗಳು ಮಡಕ ಸಿರಾ ತಾಲೂಕಿನ ಮದನಕುಂಟೆಯಲ್ಲಿ ಪಾವಗಡ ತಾಲೂಕಿನ ಪಾಲೇನಹಳ್ಳಿಯಲ್ಲಿ ಮತ್ತು ಹೊಳಲ್ಕೆರೆ ತಾಲೂಕಿನ ಚಿತ್ರಹಳ್ಳಿಯಲ್ಲಿ ಇವೆ. ಈ ಮೂರು ದೇವತೆಗಳನ್ನು ಮಾರನವರ ಗೊಲ್ಲರು ಮಾತ್ರ ಪೂಜೆ ಮಾಡುತ್ತಾರೆ. ಅನಂತಪುರ ಜಿಲ್ಲೆಯ ಕದರಿಯ ನರಸಿಂಹಸ್ವಾಮಿಯ ಕೇಂದ್ರ. ತಿರುಪತಿಯು ತಿಮ್ಮಪ್ಪ ದೇವರ ಕೇಂದ್ರ, ಹಿರಿಯೂರು ತಾಲೂಕಿನ ನಂದೀಹಳ್ಳಿಯ ರಂಗಪ್ಪದೇವರ ಕೇಂದ್ರದಲ್ಲಿನ ಈ ದೇವತೆಗಳನ್ನು ಕರಡಿಗೊಲ್ಲರು ಮಾತ್ರ ಪೂಜಿಸುತ್ತಾರೆ. ಮಾರನವರ ಗೊಲ್ಲರು ಪೂಜಿಸುವುದಿಲ್ಲ. ಹಿರಿಯೂರು ತಾಲೂಕಿನ ಎರಬಳ್ಳಿಯೂ ತಾಳವಟ್ಟ ಕಟ್ಟೇಮನೆಗೆ ಸೇರುತ್ತದೆ. ಇಕ್ಕನೂರು ರಾಮನಹಳ್ಳಿ ಕಟ್ಟೇಮನೆಗೆ ಸೇರುತ್ತದೆ. ಸೋಮನವರ ಗೊಲ್ಲರು, ಬೊಮ್ಮನವರ ಗೊಲ್ಲರು, ಕೋಣನವರ ಗೊಲ್ಲರು -ಇಷ್ಟು ಬೆಡಗುಗಳನ್ನು ಬಿಟ್ಟು ಉಳಿದ ಎಲ್ಲಾ ಗೊಲ್ಲರು ಕಾಟುಮದೇವರನ್ನು ಪೂಜಿಸುತ್ತಾರೆ. ಚಳ್ಳಕೆರೆ ತಾಲೂಕಿನ ಚೆನ್ನಮ್ಮ ನಾಗತಿಹಳ್ಳಿಯಲ್ಲಿ ಕೇತೇದೇವರ ಕೇಂದ್ರವಿದೆ. ಪೋಲನವರ ಗೊಲ್ಲರು ಮಾತ್ರ ಈ ದೇವತೆಗೆ ನಡೆದು ಕೊಳ್ಳುತ್ತಾರೆ."[೪]

ಈ ಗಂಡು ದೇವತೆಗಳು ಮಾತ್ರವಲ್ಲದೆ ಕಾಡುಗೊಲ್ಲರು ಒಂದು ಹೆಣ್ಣು ದೇವತೆಯನ್ನು ಪೂಜಿಸುತ್ತಾರೆ. ಈ ದೇವತೆ ಮಾಯೆಯ ಸ್ವರೂಪದವಳು. ಭಾಗವತದಲ್ಲಿ ವಸುದೇವ ಶ್ರೀಕೃಷ್ಣನನ್ನು ಯಶೋದೆಯ ಬಳಿಯಲ್ಲಿ ಮಲಗಿಸಿ, ಅವಳ ಮಗುವಾದ ಮಾಯೆಯನ್ನು ಎತ್ತಿಕೊಂಡು ಬಂದು ದೇವಕಿಯ ಬಳಿಯಲ್ಲಿ ಮಲಗಿಸುತ್ತಾನೆ. ಕಂಸ ಆ ಮಾಯೆಯನ್ನು ಬಂಡೆಗೆ ಅಪ್ಪಳಿಸಲು ಹೋದಾಗ ಅವಳು ಅವನ ಕೈಯಿಂದ ತಪ್ಪಿಸಿಕೊಂಡು ಆಕಾಶಮಾರ್ಗದಲ್ಲಿ ಹಾರಿ ಮಾಯವಾಗುತ್ತಾಳೆ. ಈ ಮಾಯೆಯನ್ನೇ ಕಾಡುಗೊಲ್ಲರು ಗೌರಸಂದ್ರದಮಾರಕ್ಕ, ಬೇವಿನಹಳ್ಳಿ ಕರಿಯಮ್ಮ, ಕರೇಓಬೇನಹಳ್ಳಿ ಮಾರಮ್ಮ, ಗೊಲ್ಲರ ಹಳ್ಳಿಯಮ್ಮ ಎಂಬ ಬೇರೆ ಬೇರೆ ಹೆಸರು ಗಳಿಂದ ಬೇರೆ ಬೇರೆ ಪ್ರದೇಶಗಳಲ್ಲಿ ಪೂಜೆ ಮಾಡುತ್ತಾರೆ. ಈ ಸ್ತ್ರೀದೇವತೆಗಳನ್ನು ಶಕ್ತಿ ದೇವತೆಗಳೆಂದು ಹೇಳಬಹುದು. "ಇವರು ಸ್ತ್ರೀ ದೇವತೆಗಳನ್ನು ಪೂಜಿಸುವುದು ಕಡಿಮೆ. ಹಾಗೆ ಇದ್ದರೆ ಮಹಾಸತಿಯರು ಮಾತ್ರ."[೫]

ಕಾಡುಗೊಲ್ಲರ ಬದುಕಿನಲ್ಲಿ ದೇವಾನುದೇವತೆಗಳು, ಅದರಲ್ಲೂ ಸ್ತ್ರೀದೇವತೆಗಳು ವಹಿಸುವ ಪಾತ್ರ ತುಂಬಾ ಪ್ರಮುಖ ಸಂಗತಿ. ಇವರ ಕಲ್ಪನೆಯ ಪ್ರಕಾರ ಈ ಎಲ್ಲಾ ಮಾರಿಯರೂ ಈಶ್ವರನ ಮಕ್ಕಳು, ಕಾವ್ಯ ದಲ್ಲಿ ಬರುವ ಗೌರಸಂದ್ರದ ಮಾರಿಯ ಪಾತ್ರವಂತೂ ಅನೇಕ ಸಂದರ್ಭಗಳಲ್ಲಿ ಜುಂಜಪ್ಪನ ರಕ್ಷಣೆ ಗಾಗಿಯೇ ಬರುವಂತಿದೆ. ಹಾಗೆಯೇ ಇವತ್ತಿಗೂ ಕೂಡ ಕಾಡುಗೊಲ್ಲರು ಮಾರಿಯ ಆರಾಧನೆಯನ್ನು ಅಷ್ಟೇ ನಿಷ್ಠೆಯಿಂದ ಮಾಡುತ್ತಾರೆ.

ಹಿಂದೆ ಕಾಡುಗೊಲ್ಲರ ವೃತ್ತಿ ಪ್ರಧಾನವಾಗಿ ಪಶುಪಾಲನೆಯಾಗಿತ್ತು. ಸಾಕಷ್ಟು ಹುಲ್ಲುಗಾವಲು ಇದ್ದ ಆ ಕಾಲದಲ್ಲಿ ಪಶುಪಾಲನೆ ಇವರ ಬದುಕಿಗೆ ಒಂದು ಸವಾಲಾಗಿತ್ತು. ದನಕರುಗಳನ್ನು ಕದಿಯುವುದನ್ನೇ ಮುಖ್ಯ ವೃತ್ತಿಯನ್ನಾಗಿಸಿಕೊಂಡಿದ್ದ ಒಂದು ವರ್ಗದವರಿಂದ, ಹಾಗೂ ಕಾಡು ಪ್ರಾಣಿಗಳಿಂದ, ರೋಗರುಜಿನ ಗಳಿಂದ ದನಗಳನ್ನು ಸಂರಕ್ಷಣೆ ಮಾಡಿಕೊಳ್ಳಲು ಹೋರಾಡಿ ಮಡಿದವರು ಆ ಜನಾಂಗದ ಸಾಂಸ್ಕೃತಿಕ ವೀರರೂ,

ಆರಾಧ್ಯ ದೈವಗಳು ಆಗಿರುವುದುಂಟು. ಗೋವು ಪೂಜನೀಯವಾದುದಲ್ಲದೆ ಕಳೆದು ಕೊಳ್ಳಲಾಗದ ಆಸ್ತಿ. ಇಂತಹ ಸಂಪತ್ತನ್ನು ಉಳಿಸಿಕೊಳ್ಳಲು ತಮ್ಮ ದೈವಗಳಿಗೆ ಮೊರೆ ಹೋಗುತ್ತಿದ್ದುದು ಸಹಜವಾದುದು. ಅದರಲ್ಲೂ "ಕಾಡುಗೊಲ್ಲರ ಎತ್ತಪ್ಪ-ಜುಂಜಪ್ಪ ಎಂಬ ಸಾಂಸ್ಕೃತಿಕ ವೀರರ ಜನಪದ ಮಹಾಕಾವ್ಯಗಳಲ್ಲಿ ಮಾರಿಯ ಮಹಿಮೆ ಹಾಸುಹೊಕ್ಕಾಗಿ ಮೂಡಿ ಬಂದಿದೆ."[೬]

ಗೌರಸಂದ್ರದ ಮಾರಮ್ಮನ ಕತೆ ಗ್ರಾಮದೇವತೆಗಳ ಕತೆಗಿಂತ ಭಿನ್ನವಾಗಿದ್ದು, ವಿಶಿಷ್ಟವಾಗಿದೆ. ಈಕೆಯನ್ನು ಹುತ್ತದ ರೂಪದಲ್ಲಿ ಆರಾಧಿಸುವ ಸಂಪ್ರದಾಯ ಇದೆ. 'ತುಮ್ಮಲು'ನಲ್ಲಿ ಮಾರಮ್ಮನೆಂದು ಹುತ್ತವನ್ನು ಪೂಜಿಸುತ್ತಾರೆ. ಈ ಬಗ್ಗೆ ಸ್ವಾರಸ್ಯಕರವಾದ ಕತೆ ಇದೆ. "ಈಕೆಯ 'ಮೂಲ ವಸ್ತು'ಗಳು ಇರುವ ಪೆಟ್ಟಿಗೆಯನ್ನೇ ದೇವರೆಂದು ಪೂಜಿಸುತ್ತಾರೆ. ಹೀಗಾಗಿ ಇದೊಂದು ಪೆಟ್ಟಿಗೆ ದೇವರು. ಈ ಪೆಟ್ಟಿಗೆಯೊಳಗಿರುವ ಮೂಲವಸ್ತುಗಳನ್ನು ಇದುವರೆಗೂ ಯಾರೂ ನೋಡಿಲ್ಲ. ಹಬ್ಬದ ಹಿಂದಿನ ದಿನ (ಸಾಮಾನ್ಯವಾಗಿ 'ಗುಗ್ಗರಿ ಹಬ್ಬ'ದ ಹಿಂದಿನ ದಿನ), ಗರ್ಭಗುಡಿಯೊಳಗೆ ಸ್ವತಃ ಪೂಜಾರಿಯೊಬ್ಬನೇ ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಈ ಮೂಲವಸ್ತುಗಳನ್ನು ಶುಚಿಮಾಡುವ ಸಂಪ್ರದಾಯ ರೋಚಕವಾಗಿದೆ."[೭] ಗೌರಸಂದ್ರದ ಮಾರಕ್ಕ ಕಣಿ ಹೇಳುವುದಕ್ಕೆ ಮತ್ತು ಕಾಟಮದೇವರು ಶಾಸ್ತ್ರ ಹೇಳುವುದಕ್ಕೆ ಕಾಡುಗೊಲ್ಲರಲ್ಲಿ ಪ್ರಸಿದ್ಧವಾಗಿರುವ ದೇವತೆಗಳು. ಗೌರಸಂದ್ರದ ಮಾರಕ್ಕನ ಕೇಂದ್ರವಾದ ಚಳ್ಳಕೆರೆ ತಾಲೂಕು ಗೌರಸಂದ್ರ ಮತ್ತು ಕಾಟುಮದೇವರ ಕೇಂದ್ರವಾದ ಹಿರಿಯೂರು ತಾಲ್ಲೂಕು ಇಕ್ಕನೂರುಗಳು ಕಣಿ ಹೇಳುವ ಪ್ರಮುಖ ಕೇಂದ್ರಗಳು. ಗೌರಸಂದ್ರದ ಮಾರಕ್ಕನಂತೆಯೇ ಬೇವಿನಹಳ್ಳಿ ಕರಿಯಮ್ಮ ಮೊದಲಾದ ಮಾರಿ ದೇವತೆಗಳೂ ಕಾಡುಗೊಲ್ಲರ ನಂಬಿಕೆಯ ಪ್ರಕಾರ ಕೊರವಂಜಿಯರ ಕೆಲಸ ಮಾಡುತ್ತಾರೆ. ಗೌರಸಂದ್ರದ ಮಾರಕ್ಕ ಎತ್ತಪ್ಪನ ಪುರಾಣದಲ್ಲಿ ಅಂಬೇರಾಯ ಮತ್ತು ತುಂಬೇರಾಯರು ಏಳುಗೂಡಿನ ದನಗಳನ್ನು ಕಾಯಲು ಹುತ್ತದಿಂದೊಬ್ಬ ಹುಡುಗನನ್ನು (ಎತ್ತಯ್ಯ) ಎತ್ತಿಕೊಡುವುದನ್ನು ಕಾಣಬಹುದು.

ಗೌರಸಂದ್ರದ ಮಾರಮ್ಮ ಜುಂಜಪ್ಪನ ಮೂರು ತಲೆಮಾರಿನವರಿಗೆ ಹೆಜ್ಜೆಹೆಜ್ಜೆಗೂ ಮಾಡಿರುವ ಸಹಾಯ ಕುರಿತು ಜುಂಜಪ್ಪನ ಕಾವ್ಯದಲ್ಲಿ ಕಾಣಬಹುದು. ಗೌರಸಂದ್ರದ ಮಾರಕ್ಕನನ್ನು ಜುಂಜಪ್ಪನ ಅಕ್ಕನೆಂದು ಭಾವಿಸುತ್ತಾರೆ.

ಮೂರು ತಲೆಮಾರುಗಳ ಕಥೆಯನ್ನು ಒಳಗೊಂಡ ಜುಂಜಪ್ಪ ಕಾವ್ಯದ ಮೊದಲ ತಲೆಮಾರಿನಲ್ಲಿ ಬರುವ ದ್ಯಾವರ ದೈಮಾರನೆಂಬುವನಿಗೆ ಕರಿಯಲ್ಲಿ, ಕೆಂಪಲ್ಲಿ ಎಂಬ ಇಬ್ಬರು ಗಂಡು ಮಕ್ಕಳು. ಅದರಲ್ಲಿ ಕರಿಯಲ್ಲಿ ಎಂಬುವನಿಗೆ ಒಬ್ಬನೇ ಮಗ 'ಮಾರು ಮುತ್ತಣ್ಣ' ಕೆಂಪಲ್ಲಿ. ಎಂಬುವನಿಗೆ ಆರು ಜನ ಗಂಡು ಮಕ್ಕಳು. ಮಾರುಮುತ್ತಣ್ಣ ಕಾಡಿನಲ್ಲಿ ನೂರಾರು ದನಗಳನ್ನು ಕಾಯುತ್ತಾ ಕಾಡಿನೊಳಗೆ ವಾಸ ಮಾಡುತ್ತಿದ್ದನು. ಕೆಂಪಲ್ಲಿಯ ಆರು ಜನ ಗಂಡು ಮಕ್ಕಳಿಗೂ ಮದುವೆಯಾಗಿತ್ತು. ಆದರೆ ವಂಶ ಬೆಳೆಯೋದಕ್ಕೆ ಮಕ್ಕಳು ಇರಲಿಲ್ಲ. ಆಗ ಅವರು ಗೌರಸಂದ್ರದ ಮಾರಮ್ಮನ ಹತ್ತಿರ ಕಣಿ ಕೇಳಿದಾಗ,

'ಮಾರುಮುತ್ತಣ್ಣನಿಗೆ
ಮದುವೆ ಮಾಡಿದುರೆ, ನಿಮ್ಮ ವಂಶ ಬೆಳೆಯುತ್ತದೆ'

ಎಂದು ಹೇಳಿದಳು. ಆರು ಜನರೂ ಸೇರಿ ಮಾರುಮುತ್ತಣ್ಣನನ್ನು ಮದುವೆಗೆ ಒಪ್ಪಿಸಿ, ಸನ್ನೊರುಗೊಲ್ಲರು ಸಾತೆಮ್ಮನಿಗೂ, ಮಾರು ಮುತ್ತಣ್ಣನಿಗೂ ಮದುವೆ ನಿಶ್ಚಿಯಿಸಿದರು. ನಾನು ಹುಟ್ಟಿದಾಗಿನಿಂದ ನರಮನುಷ್ಯರನ್ನು ನೋಡಿಲ್ಲ. ನಾನು ಬಂದು ಲಗ್ನಕ್ಕೆ ನಿಂತುಕೊಳ್ಳುವುದಿಲ್ಲ. ನನ್ನ ಕೈಯಗೆ ಬಾಕೈತೆ ಆ ಬಾಕ್‌ಗೆ ಕೊಟ್ಟು ಧಾರೆ ಮೂರ್ತ ಮಾಡಿ ಎಂದು ಮಾರು ಮುತ್ತಣ್ಣ ಹೇಳಿದನಂತೆ. ಬಾಕಿಗೂ ಸಾತೆಮ್ಮನಿಗೂ ಮೂರ್ತ ಮಾಡುತ್ತಾರೆ. ಗಂಡನ ಮನೆಯಲ್ಲಿ ಸಾತೆಮ್ಮನನ್ನು ಹಲವಾರು ದಿನ ಚೆನ್ನಾಗಿ ಇಟ್ಟುಕೊಂಡಿದ್ದ ಆರು ಜನ ವಾರಿಗಿತ್ತಿರು, ಬರ್‍ತಾ ಬರ್‍ತಾ ಕೊಡಬಾರದ ಕಷ್ಟ ಕೊಡಲು ಪ್ರಾರಂಭಿಸಿದರು. ಗಂಡ ಮನೆಯೊಳಗಿಲ್ಲ, ಕಾಡಿನಲ್ಲಿ ವಾಸ ಗಂಡನನ್ನು ಹುಡುಕಿಕೊಂಡು ಸಾತಮ್ಮ ಕಾಡಿಗೆ ಹೋಗುತ್ತಾಳೆ. ಆ ಕಾಡಿನಲ್ಲಿ ಗೌರಸಂದ್ರದ ಮಾರಕ್ಕ ಕಣಿ ಹೇಳುವ ಕೊರವಂಜಿಯಾಗಿ ಬರುತ್ತಿದ್ದಾಳೆ. ಅವಳ ವೇಷಭೂಷಣದ ಚಿತ್ರಣವನ್ನು ಜನಪದ ಕವಿ ವರ್ಣಿಸುವ ರೀತಿ ಆಕರ್ಷಕವಾದುದು.

'ಮೂಗುತಿ ಮುಂಬಾರ
ಎಣಿಗಂಟೂ ಹಿಂಬಾರ
ತಲೆಮೇಲೆ ಪುಟ್ಟಿಗೆಮ್ಮ
ಕೈಯೊಳಗೆ ನಾಗುದುಬೆತ್ತ
ತೋಳಿಗೂ ಸೆಲಿಗೆಯಮ್ಮ
ಕೈಯಿಗೂ ಬಂಧಿಯಣ್ಣ
ಬುಗುಡಿಸಿಂತಾಕುದು ಕೊರಳೂಳು
ಗೌರಸಂದ್ರದುಮಾರಮ್ಮ
ಕಣಿ ಹೇಳೋ ಕೊರವಂಜಿಯಾಗಿ
ಬರುತಾಳೊ ಶಂಕರನೆ
ಕಾಡಿನೊಳಗಯ್ಯೋಗಳಿಗಾಗೋ'

(ಜುಂಜಪ್ಪ, ಪುಟ ೫೭)

ಕಾಡಿನಲ್ಲಿ ಬರುತ್ತಿರುವ ಗೌರಸಂದ್ರದ ಮಾರಮ್ಮನನ್ನು ನೋಡಿ ಸಾತೆಮ್ಮ ಓಡಿ ಬಂದು ಅವಳ ಕಾಲನ್ನ ಹಿಡಿದು ಮೂರುಮಾತು ಕಣಿ ಹೇಳುವಂತೆ ಕೇಳುತ್ತಾಳೆ. ನರ ಮನುಷ್ಯನನ್ನು ತಲೆ ಎತ್ತಿಯೂ ಸಹ ನೋಡದ ನಿನ್ನ ಗಂಡ ಕಾಡಿನೊಳಗೆ ಇದ್ದುಕೊಂಡು ಗೆಡ್ಡೆ ಗೆಣಸು, ಹಣ್ಣು ಹಂಪಲು ತಿನ್ನುತ್ತಾ ಕಾಲ ಕಳೆಯುತ್ತಿದ್ದಾನೆ. ಹುಲಿಯಂತೆ ಇದ್ದಾನೆ. ಹೋಗಿ ಎದುರಿಗೆ ನಿಲ್ಲಬೇಡ. ದನದ ರೊಪ್ಪದ ಮುಂದೆ ಬುತ್ತಿಗೂಡೆ ಇಳಿಸಿ, ನೀನು ಬೇಲಿ ಪೊದೆಯೊಳಗೆ ಮರೆಯಾಗಿ ನಿಂತುಕೊ, ನಿನ್ನ ಗಂಡ ಬುತ್ತಿ ತೆಗೆದುಕೊಂಡು ಹೋಗುತ್ತಾನೆ. ಊಟ ಮಾಡಿ ತಾಂಬೂಲ ಹಾಕಿಕೊಂಡು ದನಗಳನ್ನು ಒಡೆದುಕೊಂಡು ಮೇಸಲು ಹೋಗುತ್ತಾನೆ. ಆಗ ನೀನು ಅವನ ಬೆನ್ನ ನೋಡಿ ಸಂತೋಷಪಟ್ಟುಕೊಂಡು ಮನೆಗೆ ಬಾರಮ್ಮ ಎಂದು ಗೌರಸಂದ್ರದ ಮಾರಮ್ಮ ಕಣಿ ಹೇಳಿ, ಇದೇ ದಾರಿಯಲ್ಲಿ ದನಗಳ ರೊಪ್ಪಕ್ಕೆ ಹೋಗು ಎಂದು ಸಾತೆಮ್ಮನಿಗೆ ದಾರಿ ತೋರಿಸಿದಳು. ಗೌರಸಂದ್ರದ

ಮಾರಮ್ಮನ ಆದೇಶದಂತೆ ಸಾತೆಮ್ಮ ನಡೆದಾಗ, ಒಂದು ದಿನ ಗಂಡ ಹೆಂಡತಿಯರು ಒಂದಾದರು. ಸಾತೆಮ್ಮ ಒಂದು ಗಂಡು ಮಗುವಿಗೆ ಜನ್ಮ ನೀಡಿದಳು. ಬಹಳ ಬಡತನದಲ್ಲಿದ್ದ ಅವರು ಒಂದು ದಿನ ಹಸಿವಿನ ಬಾಧೆ ತಾಳಲಾರದೆ ಹಣ್ಣು ಹುಡಕಲು ಅರಣ್ಯಕ್ಕೆ ಹೋದರು. ಹಣ್ಣುಗಳನ್ನು ಹುಡುಕುತ್ತಾ ಮಗುವನ್ನು ಮರೆತರು. ಕತ್ತಲಾದ ಮೇಲೆ ಮಗುವಿನ ಜ್ಞಾಪಕ ಬಂದು ಮಗುವನ್ನು ಬಿಟ್ಟು ಬಂದಿದ್ದ ಸ್ಥಳಕ್ಕೆ ಹೋಗುತ್ತಿರುವಾಗ, ಅಮವಾಸ್ಯೆಯ ಕತ್ತಲಾದ್ದರಿಂದ ದಾರಿ ಕಾಣದೆ ಬೆಟ್ಟದಿಂದ ಬಿದ್ದು ಪ್ರಾಣ ಕಳೆದುಕೊಂಡರು. ಸಂಚಾರ ಬಂದಿದ್ದ ಪಾರ್ವತಿ ಪರಮೇಶ್ವರರು ಆ ಮಗುವನ್ನು ನೋಡಿ ಅದಕ್ಕೆ ಕೆಂಗರು ಮಲ್ಲೇಗೌಡ ಎಂದು ಹೆಸರಿಟ್ಟು, ಒಂದು ಮರಕ್ಕೆ ಮಗುವನ್ನು ಕಟ್ಟಿ ಏಳೆಡೆ ಸರ್ಪವನ್ನು ಕಾವಲಿರಿಸಿ, ಇದರ ಬಾದ ಕತ್ಯ ಬಂದರೆ ಅವರಿಗೆ ದಾರಿ ಬಿಟ್ಟು ನೀವು ಬನ್ನಿ ಎಂದು ಹೇಳಿ ಆಕಾಶ ಮಾರ್ಗವಾಗಿ ಹೊರಟು ಹೋದರು.

ಒಂದು ದಿನ ಗೌರಸಂದ್ರದ ಮಾರಮ್ಮ ಅಲ್ಲಿಯೇ ಆಯ್ದು ಹೋಗುವಾಗ ಮಗು ಅಳುವ ಶಬ್ದ ಕೇಳಿ ಅಲ್ಲಿಗೆ ಹೋಗಿ ನೋಡಿದಳು. ಕೆಂಗರು ಮಲ್ಲೇಗೌಡನನ್ನು ಅವರ ದೊಡ್ಡಪ್ಪನಿಗೆ ಒಪ್ಪಿಸಿದರೆ ಅವರಿಗೂ ಮಕ್ಕಳಿಲ್ಲ ಒಳ್ಳೆಯದಾಗುತ್ತದೆ ಎಂದು ಅವರ ಮನೆಯಲ್ಲಿದ್ದ ಮೂಗ ಮಗುವಿನ ಮೇಲೆ ಗೌರಸಂದ್ರದ ಮಾರಮ್ಮ ಹೋದಳು. ಆ ಮಗು ಬಿದ್ದು ಉಳ್ಳಾಡಿ ಬಿಟ್ಟಿತ್ತು. ಆಗ ಆರು ಜನ ಅಣ್ಣತಮ್ಮಗಳು ದೆವ್ವ ಪೀಡೆ ಹಿಡಿದಿದೆ ಎಂದುಕೊಂಡು ಪರಕೆಯಲ್ಲಿ ಹೊಡೆದುದ್ದಕ್ಕೆ ಸಿಟ್ಟುಗೊಂಡು ಗೌರಸಂದ್ರದ ಮಾರಮ್ಮ ಊರಿನ ಜನಕ್ಕೆಲ್ಲ ವಾಂತಿ ಬೇದಿಯನ್ನು ಕೊಟ್ಟಳು. ಆಗ ಗೌಡ, ಪೂಜಾರಿ ಕಣೆಯನ್ನು ಕೇಳಲು ಗೌರಸಂದ್ರದ ಮಾರಮ್ಮನ ಹತ್ತಿರ ಹೋದರು. ಮಾರಮ್ಮ ಮಾತು ಬಾರದ ಮಕ್ಕಳ ಮೇಲೆ ಬಂದುದು ನಾನೇ. ದೆವ್ವ, ಪೀಡೆ, ಪಿಶಾಚಿ, ಅಲ್ಲ ಎಂದು ಹೇಳಿ ಮಗು ಕೆಂಗರು ಮಲ್ಲೇಗೌಡ ಇರುವ ಜಾಗವನ್ನು ತಿಳಿಸಿ ಅದನ್ನು ಸಾಕಿಕೊಳ್ಳುವಂತೆ ಹೇಳಿದಳು. ಮೂರು ವರ್ಷ ಚೆನ್ನಾಗಿ ನೋಡಿಕೊಂಡರು. ದೊಡ್ಡಪ್ಪಗಳಿಗೆ ಮಕ್ಕಳಾದ ಮೇಲೆ ಕೆಂಗರ ಮಲ್ಲೇಗೌಡನನ್ನು ಪೇಟೆಗೆ ಕರೆದುಕೊಂಡು ಹೋಗಿ ಅವನನ್ನು ಅಲ್ಲಿಯೇ ಬಿಟ್ಟು ಬಂದರು. ಕೊನೆಗೆ ಹೊನ್ನಟ್ಟಿ ಆಲೇಗೌಡ ಆ ಮಗುವನ್ನು ಸಾಕಿಕೊಂಡನು. ಕೆಂಗರು ಮಲ್ಲೇಗೌಡ ದನಗಳನ್ನು ನೋಡಿಕೊಂಡು ಕಾಡಿನಲ್ಲಿಯೇ ವಾಸ ಮಾಡಲು ಪ್ರಾರಂಭಿಸಿದ. ಹೊನ್ನಟ್ಟಾಲೆ ಗೌಡನಿಗೆ ಮಕ್ಕಳಿರಲಿಲ್ಲ. ಆದರೆ ಕೆಂಗರು ಮಲ್ಲೇಗೌಡನನ್ನು ಪಡೆದ ಮೇಲೆ ಮಕ್ಕಳಾದವು. ಅವರ ಮದುವೆ ಮಾಡಬೇಕಾದರೆ ಮೊದಲ ಅಣ್ಣನಾದ ಕೆಂಗರು ಮಲ್ಲೇಗೌಡನ ಮದುವೆಯಾಗಬೇಕೆಂದು ನಿರ್ಧರಿಸಿ, ಅವನನ್ನು ಹುಡುಕಿಕೊಂಡು ಬರುವಂತೆ ಮಕ್ಕಳಿಗೆ ಹೇಳಿದ. ಎಲ್ಲಿ ಹುಡುಕಿದರು ಸಿಗಲಿಲ್ಲ. ಗೌರಸಂದ್ರದ ಮಾರಮ್ಮ ಹೊನ್ನಟ್ಟಾಲೆ ಗೌಡನ ಕನಸಿನಲ್ಲಿ ಬಂದು ಮಗ ಇರುವ ಜಾಗ ತೋರಿಸುತ್ತೇನೆ. ನಿನ್ನ ಮಕ್ಕಳಿಗೆ ಬುತ್ತಿ ಕಟ್ಟಿಕೊಂಡು ನಾಳೆ ಬೆಳಿಗ್ಗೆ ಬುಡುಗಲು ದೇಶದ ದಿನ್ನೆಗೆ ಬಂದರೆ ನಾನೇ ಅವರನ್ನು ಕರೆದುಕೊಂಡು ಹೋಗುತ್ತೇನೆ ಎಂದು ಹೇಳುತ್ತಾಳೆ. ಬೆಳಿಗ್ಗೆ ಹೊರಡುತ್ತಾರೆ. ಗೌರಸಂದ್ರದ ಮಾರಮ್ಮ ಒಂದು ಸಣ್ಣ ಹುಡುಗಿಯಾಗಿ ಎದುರಿಗೆ ಬರುತ್ತಾಳೆ. ನಮ್ಮ ಜೊತೆ ಯಾಕಮ್ಮ ಬರುತ್ತೀಯಾ ನಿನ್ನ ಕೆಲಸ ನೀನು ನೋಡಿಕೊಂಡು ಹೋಗು ಎಂದು ಹೇಳಿದಾಗ, ಅವಳು ಭಯಂಕರ ರೂಪ ತಾಳಿ ಅವರನ್ನು ಅಟ್ಟಿಸಿಕೊಂಡು ಹೋಗುತ್ತಾಳೆ. ಅವರು ಓಡಿ ಹೋಗಿ ಕೊಂಕಿ ಜರಿಮಲೆ ಸೀಮೆಯ ಉಂಡಾಡೋ ಪದುಮಣ್ಣನ ಹೊಲ ಸೇರಿದರು. ಕೆಂಗರು ಮಲ್ಲೇಗೌಡ ಇರುವ ಸ್ಥಳ ಅದು. ಹೊನ್ನಟ್ಟಾಲೆ ಗೌಡನ ಮಕ್ಕಳಿಗೆ ಮಾರಿ,

"ಹೋಗಿ ಅವುನಾ ಪಾದ ಹಿಡುಕಳಿರಣ್ಣ
ಯಾರೋ ಮುಟಗಂಡು ಬಂದು
ಭತುವನ್ನ ಕೆಡಿಸಿದುದರೆಂದು
ಆಗಲೆ ಗಂಡುಗೊಡಲಿ ಎತಿಗಂಡು
ಎದ್ದೇಳುತಾನಣ್ಣ
ಆವಾಗ ಜಾಗೃತಿ ಅಣ್ಣಯ್ಯ
ನಾವು ನಿನ್ನ ತಮ್ಮಗುಳು
ಆಲೆಗೌಡುನ ಮಕ್ಕಳೆಂದು
ಏಳಿದುರೆ ಸುಮ್ಮನಾಗುತಾನೆ
ಎಚ್ಚರಿಕೆ ಇರುಲೆಂದು
ಇವುರಿಗೂ ಬುದ್ಧಿ ಹೇಳಿ"

(ಜುಂಜಪ್ಪ, ಪುಟ ೧೧೬)

ಹೊರಟು ಹೋಗುತ್ತಾಳೆ. ಆಲೇಗೌಡನ ಮಕ್ಕಳು ಕೊನೆಗೂ ಕೆಂಗರು ಮಲ್ಲೇಗೌಡನನ್ನು ಮದುವೆಗೆ ಒಪ್ಪಿಸುತ್ತಾರೆ.

ಕಂಬೇರ ಗೊಲ್ಲರ ಸಿನ್ನಮ್ಮನನ್ನು ಕೆಂಗರು ಮಲ್ಲೇಗೌಡನಿಗೆ ಕೊಡಲು ಒಪ್ಪಿರಲಿಲ್ಲ. ಒಂದು ದಿನ ಗೌರಸಂದ್ರದ ಮಾರಮ್ಮ, ಸಿನ್ನಮ್ಮನ ಹಿರೇ ಅಣ್ಣನ ಕನಸಿಗೋಗಿ, ನಾಗಬೆತ್ತದಲ್ಲಿ ಹೊಡೆದು ಎಬ್ಬಿಸಿ ಹೇಳುತ್ತಾಳೆ. ಆಲೇಗೌಡ ಸತ್ಯವಂತ, ಅವನು ಮಾರ್ನೂರು ಗೊಲ್ಲರ ಹುಡುಗನನ್ನು ಸಾಕಿಕೊಂಡವನೆ, ಅವನನ್ನು ಹಿರಿಯ ಮಗನೆಂದೇ ತಿಳಿದಿದ್ದಾನೆ. ಕೆಂಗರು ಮಲ್ಲೇಗೌಡನಿಗೆ ಹೆಣ್ಣು ಕೊಟ್ಟು ಮದುವೆ ಮಾಡಿ, ಅವನಿಗೆ ಹೆಣ್ಣು ಕೊಡಲಿಲ್ಲ ಅಂದ್ರೆ ನಿಮ್ಮ ಊರಿಗೆಲ್ಲಾ ರಕ್ತ ವಾಂತಿ ಭೇದಿ ತಂದು ನಾಶ ಮಾಡುತ್ತೇನೆ ಎಂದು ಗೌರಸಂದ್ರದ ಮಾರಮ್ಮ ಎಚ್ಚರಿಸಿದಳು.

ಮಾರಿಯರು ಕೋಪಗೊಂಡರೆ ಅವರು ಊರಿಗೆ ಬೇನೆಯನ್ನು ನೀಡಿ ಇಡೀ ಊರನ್ನು ನಾಶ ಮಾಡುತ್ತಾರೆ. ಬೇನೆಯನ್ನು ನೀಡುವವಳೂ ಮಾರಿಯೇ. ಕೊನೆಗೆ ಕಾಡಿದ ಬೇನೆಗೆ ಪರಿಹಾರವನ್ನು ನೀಡವವಳೂ ಮಾರಿಯೇ. ಆದ್ದರಿಂದ ಜನರು ಅವಳು ಹೇಳಿದ ಕೆಲಸ ಕಾರ್ಯವನ್ನು ಶ್ರದ್ಧಾಭಕ್ತಿಯಿಂದ ನೆರವೇರಿಸುತ್ತಾರೆ.

/ ಕೆಂಗರು ಮಲ್ಲೇಗೌಡ ಸಿನ್ನಮ್ಮನನ್ನು ಮದುವೆಯಾದ ಕೂಡಲೇ ಅವಳನ್ನು ಬಿಟ್ಟು ದನಗಳನ್ನು ನೋಡಿ ಕೊಳ್ಳಲು ಹೊರಟು ಹೋಗುತ್ತಾನೆ. ಮದುವೆಯಾಗಿ ಹನ್ನೆರಡು ವರ್ಷ ಕಳೆದರೂ ಮನೆಗೆ ಬರಲಿಲ್ಲ. ಅತ್ತಿಗೆಯರು ಸಿನ್ನಮ್ಮನನ್ನು ಬಂಜೆಯೆಂದು ಹಂಗಿಸಲು ಆರಂಭಿಸಿದರು. ಈ ದುಃಖವನ್ನು ತಾಳಲಾರದೆ ಸಿನ್ನಮ್ಮ ಶಿವಶೋಕ ಮಾಡಿ, ಅರಣ್ಯದಲ್ಲಿನ ಮಡುವಿನಲ್ಲಿ ಬಿದ್ದು ಪ್ರಾಣ ಬಿಡಬೇಕೆಂದು ಕಾಡಿಗೆ ಹೋಗುತ್ತಾಳೆ. ಗಂಗಮ್ಮ ತಾಯಿ ಇಂಗಿ ಹೋಗುತ್ತಾಳೆ. ಹೀಗೆ ಯಾವ ರೀತಿಯಲ್ಲೂ ಸಹ ಪ್ರಾಣ ಕಳೆದುಕೊಳ್ಳಲು ಸಾಧ್ಯವಾಗ ದಿದ್ದಾಗ, ಗೌರಸಂದ್ರದ ಮಾರಮ್ಮ ಕಣಿ ಹೇಳುವ ಕೊರವಂಜಿಯಾಗಿ ಅಲ್ಲಿಗೆ ಬರುತ್ತಾಳೆ. ಸಿನ್ನಮ್ಮ ಅವಳ

ಪಾದವನ್ನು ಹಿಡಿದು ಮೂರು ಮಾತು ಕಣಿ ಹೇಳುವಂತೆ ಕೇಳುತ್ತಾಳೆ. ಗೌರಸಂದ್ರದ ಮಾರಮ್ಮ ಕಣಿ ಹೇಳುತ್ತಾಳೆ. ನೀನು ಹುಟ್ಟುತ್ತಾ ಅಷ್ಟೈಶ್ವರ್ಯ ಬೇಡಿ ಬಂದಿದ್ದೀಯ. ನಿನಗೆ ಮಕ್ಕಳ ಫಲವಿಲ್ಲ. ನೀನು ಪತಿವ್ರತೆಯಾದುದರಿಂದ ನಿನಗೆ ಕೈಲಾಸದ ಪದವಿ ಇದೆ. ನಿನಗೆ ಮಕ್ಕಳು ಬೇಡ ಎಂದಳು. ನೀನು ಮಕ್ಕಳ ಫಲ ನೀಡದಿದ್ದರೆ ನಿನ್ನ ಮುಂದೆ ನಾಲಗೆ ಇರಿದುಕೊಂಡು ಪ್ರಾಣ ಬಿಡುತ್ತೇನೆ ಎಂದಾಗ, ಗೌರಸಂದ್ರದ ಮಾರಮ್ಮ ಇದೇ ಜಾಗದಲ್ಲಿ ಕುಳಿತು ತಪಸ್ಸು ಮಾಡಿದರೆ ನಿನಗೆ ಶಿವ ಪಾರ್ವತಿಯರು ಬಂದು ವರ ಕೊಡುತ್ತಾರೆ ಎನ್ನುತ್ತಾಳೆ. ಚಿನ್ನಮ್ಮ ತಪಸ್ಸು ಮಾಡುತ್ತಾಳೆ. ಗೌರಸಂದ್ರದ ಮಾರಮ್ಮ ಮತ್ತು ಎತ್ತಪ್ಪ ಅವಳಿಗೆ ಕಾವಲಾಗಿ ನಿಲ್ಲುತ್ತಾರೆ. ಶಿವ ಪಾರ್ವತಿಯರು ಚಿನ್ನಮ್ಮನಿಗೆ ಮಕ್ಕಳ ಫಲದಿಂದಾಗಬಹುದಾದ ಎಲ್ಲಾ ಕಷ್ಟಗಳನ್ನು ತಿಳಿಸಿದರೂ ಮಕ್ಕಳ ಫಲ ಬೇಕೆ ಬೇಕೆಂದಾಗ ಮೂರು ಗಂಡಿನ ನಂತರ ಒಂದು ಹೆಣ್ಣು ಮಗುವನ್ನು ಕರುಣಿಸುತ್ತಾರೆ.

ಒಂದು ಕಥೆಯಂತೆ, "ಚಿನ್ನಮ್ಮನ ಪರವಾಗಿ ಕೈಲಾಸಕ್ಕೆ ಪುತ್ರ ಸಂತಾನದ ವರ ಕೇಳಲು ಹೋದ ಗೌರಸಂದ್ರದ ಮಾರಿ ಕೈಲಾಸದ ಬಾಗಿಲನ್ನೇ ಕಳ್ಳೆಯಿಂದ ಕಟ್ಟಿಬಿಡುತ್ತಾಳೆ. ಇದು ಕಾಡುಗೊಲ್ಲರಲ್ಲಿ ಪ್ರಚಲಿತವಿರುವ ಹೆತ್ತ ಸೂತಕ, ಸತ್ತ ಸೂತಕವನ್ನು ಆಚರಿಸಲು ದೇವಸ್ಥಾನದ ಬಾಗಿಲಿಗೆ ಕಳ್ಳೆ ಬಡಿಯುವುದನ್ನು ನೆನಪಿಗೆ ತರುತ್ತದೆ."[೮] ಕೆಲವು ವಕ್ತೃಗಳ ಕತೆಗಳಲ್ಲಿ ಚಿನ್ನಮ್ಮನನ್ನು ಆಕೆಯ ಗಂಡ ಮುಟ್ಟುವುದೇ ಇಲ್ಲವೆಂಬಂತೆ ಚಿತ್ರಿಸಿದರೆ, ಇನ್ನು ಕೆಲವು ವಕ್ತೃಗಳ ಕತೆಯಲ್ಲಿ ಸಮಾಗಮ ಸನ್ನಿವೇಶವನ್ನು ಸೃಷ್ಟಿಸುತ್ತಾರೆ.

ದಕ್ಷಿಣ ಸಂಪ್ರದಾಯದ ಪಾಠದಲ್ಲಿ "ಶಿವಗಂಗೆ ಬೆಟ್ಟಕ್ಕೆ ಕರೆದುಕೊಂಡು ಹೋಗಿ, ಚಿನ್ನಮ್ಮನ ಶಿರಚ್ಛೇದನ ಮಾಡಬೇಕೆಂದಾಗ ಗೌರಸಂದ್ರ ಮಾರಿ ಪ್ರತ್ಯಕ್ಷವಾಗಿ ತಾನೇ ವರ ಕೊಟ್ಟಿರುವುದಾಗಿ ಸಮಜಾಯಿಷಿ ನೀಡುವ ಪ್ರಸಂಗ ಸೃಷ್ಟಿಸುತ್ತಾರೆ."[೯]

ಸಿನ್ನಮ್ಮನಿಗೆ ಜುಂಜಪ್ಪ, ಮಾರಣ್ಣ, ಮೈಲಣ್ಣ ಎಂಬ ಮಕ್ಕಳು ಹುಟ್ಟಿದವು. ಜುಂಜಪ್ಪನ ತಾತ ಆಲೇಗೌಡ, ರಾಯನ ಕಳುವಾರಳ್ಳಿ ಪೇಟೆಗೆ ಬಂದು ಮಾದರ ಚೆನ್ನಣ್ಣನಿಗೆ ಒಂದು ತೊಟ್ಟಿಲು ಮಾಡಿಕೊಡುವಂತೆ ಹೇಳಿದ. ಬೆಟ್ಟದಿಂದ ಕಡಿದುಕೊಂಡು ಬಂದ ದಬ್ಬೆಯನ್ನು ಹೆಣೆಯಲು ಹೋದರೆ ಒಂದಕ್ಕೊಂದು ಕೂಡಿಕೊಳ್ಳದೆ ಬಿಟ್ಟು ಹೋಗುತ್ತಿದ್ದವು. ಇದಕ್ಕೆ ಕಾರಣವೇನಿರಬಹುದು ಎಂದುಕೊಂಡು, 'ಕಾಲಲ್ಲಿ ತುಣುದುಕೊಂಡು' ತೊಟ್ಟಿಲು ಹೆಣೆಯಲು ಹೋದಾಗ ಎರಡು ಕಣ್ಣು ಕಾಣದಂಗಾದವು. ಮಾದರ ಚೆನ್ನಣ್ಣ ಇದಕ್ಕೆ ಕಾರಣವೇನು ಎಂದು ಯೋಚಿಸುತ್ತಿರುವಾಗ, ಗೌರಸಂದ್ರದ ಮಾರಮ್ಮ ಕೊರವಂಜಿ ವೇಷ ಧರಿಸಿ ಬಂದು ನೀನು ಮನೆ ಹೊರಗೆ ಉಚ್ಚೆ ಉಗುಳಿನೊಳಗೆ ಸೂತಕ ಸಂಬಂಧದಲ್ಲಿ ಹೆಣೆದರೆ ತೊಟ್ಟಿಲು ಬರುವುದಿಲ್ಲ. ಅದು ದೇವರ ತೊಟ್ಟಿಲು. ಒಂದು ದಿನ ಉಪವಾಸವಿದ್ದು, ತಣ್ಣೀರು ಬಟ್ಟೆಯಲ್ಲಿ ಬೆಟ್ಟಕ್ಕೆ ಹೋಗಬೇಕು. ಅಲ್ಲಿ ಬಿದಿರು ಕಡದು ಅಲ್ಲೇ ದಬ್ಬೆ ತೆಗೆದು, ಅಲ್ಲಿಯೇ ತೊಟ್ಲು ಹೆಣೆದು ಬಾಯಿ ಕಟ್ಟಿಕೊಂಡು ಕಳುವಾರಳ್ಳಿ ದಿನ್ನೆಗೆ ತೆಗೆದುಕೊಂಡು ಹೋಗು ಎನ್ನುತ್ತಾ, ಕಣ್ಣು ಕಾಣುವುದಕ್ಕೆ ಮೀಸಲು ಕಟ್ಟಿಕೊಳ್ಳಲು ಸಹ ಗೌರಸಂದ್ರದ ಮಾರಿ ಹೇಳುತ್ತಾಳೆ.

ಜನ್ನಿಗೆ ಹಾಕಿಸಿಕೊಳ್ಳುವ ಸಂದರ್ಭದಲ್ಲಿ ಪೂಜಾರಿ ಸಿದ್ದಯ್ಯನ ಮಗಳು ಸೀತಮ್ಮ ಮಗುವನ್ನು ನೋಡಲಾಗಿ, ಅವಳ ಕಣ್ಣು ಹೋದುದನ್ನು ಕಂಡು, ಊರ ಜನರು, ನಾವು ಸತ್ಯವಂತರು, ಇಂತಹವರನ್ನೆಲ್ಲಾ

ನೋಡಿದರೆ ಇನ್ನು ಯಾರು ಯಾರಿಗೆ ಏನೇನು ಆಗುತ್ತದೋ ಎಂದು ಸಿನ್ನಮ್ಮನನ್ನು ಹಾಗೂ ತನ್ನ ಸೊಸೆ ದೇವರಿಂದ ವರ ಪಡೆದು ಮಗು ಹಡೆದಿದ್ದಾಳೆಂದು ಹೇಳಿದ ಆಲೇಗೌಡನನ್ನೂ, ಊರಿನಿಂದ ಓಡಿಸಿದರು. ಊರಿನ ಹೊರಗೆ ದಿಣ್ಣೆಯ ಬಳಿ ಬರುವಾಗ ಜುಂಜಪ್ಪ ತಾಯಿಗೆ ತೊಟ್ಟಿಲನ್ನು ಇಳಿಸಲು ಕೇಳಿಕೊಂಡ. ತೊಟ್ಟಿಲನ್ನು ಇಳಿಸಿದ ಕೂಡಲೇ ತೊಟ್ಟಿಲೊಳಗೆ ಏಳು ವರ್ಷದ ಮಗುವಾಗಿ ನಿಂತುಕೊಂಡು ಜುಂಜಪ್ಪ ಮಾರಮ್ಮಗಳನ್ನೆಲ್ಲ ಕರೆದ,

"ಕರದ್ರಂಬ್ರಳಿಮಾರಿ
ಕರಿಬೇವಿನಳ್ಳಿ ಮಾರಿ
ಗೌರು ಸಂದುರುದಮ್ಮ
ಶೀರೆದುಸಿರುವಂತಿ
ಗಾದಿನ ಗೂಡಿನಾಗ್ ಹುಟ್ಟಿದವಳೆ
ಸ್ವಾರೆ ಕುಂಟೆ ಕರಿಯಮ್ಮ
ಬೇವಿನಹಳ್ಳಿ ಕರಿಯಮ್ಮ
ಆಗಲುವಾಡಿ ಕರಿಯಮ್ಮ
ದಂಡಿನ ಮಾರಮ್ಮ
ಮನೆದೇವುತಿ ಗೌರು ಸೆಂದುರುದಮ್ಮ
ಏಳಟ್ಟಿ ಸುಟ್ಟಂತ
ಹಟ್ಟಿ ಮಾರಮ್ಮ
ಸಿಕ್ಕನಳ್ಳಿ ಕರಿಯಮ್ಮ
ಶಿಟ್ಟಹಳ್ಳಿ ಮಾರಮ್ಮ
ನೂರೇಳು ಮಂದಿ ಮಾರೇರೆ
ಬರಬೇಕು ಅಂದನು ಜುಂಜಪ್ಪ" ||ಶಿವನಿಗೋ||

(ಜುಂಜಪ್ಪ, ಪುಟ ೧೬೫)

ಎಲ್ಲಾ ಮಾರಿಯರು

"ಮಲ್ಲಿಗೆ ಹೂವಿನ ಪುಷ್ಪದಂತೆ ಮಾರ್‍ಯೆರು
ತಲೆ ಕೆದರಿಗೊಂಡು
ಬಿಳೇ ಸೀರಿಗಳುಟುಕ್ಕೊಂಡ್
ಇಳಿದರು ಮೂರೇಳು ಮಂದಿ ಮಾರೀರು
ಜುಂಜಪ್ಪ ಇರುವ ಸ್ಥಳಕೆ ಇಳಿದು"

(ಜುಂಜಪ್ಪ, ಪುಟ ೧೬೫)

ಬಂದು, ಹಿರಿಯಣ್ಣ ನಮ್ಮನ್ನು ಕರೆಸಿದ ಕಾರಣವೇನೆಂದು ಮಾರಮ್ಮಗಳು ಕೇಳಿದರು. ನೀವು ಜಾಗ್ರತೆ ನಮ್ಮ ಮನೆದೇವ್ರು ಹಟ್ಟಿ ಊರಿನಲ್ಲಿರುವ ಪೂಜಾರಪ್ಪ, ಗೌಡ, ದಳವಾಯಿ, ಈ ಮೂವರನ್ನು ಬಿಟ್ಟು ಉಳಿದವರಿಗೆಲ್ಲ, ಸಿಡಿಬು, ವಾಂತಿ, ಭೇದಿಗಳಿಂದ ನಾಶವಾಗುವಂತೆ ಮಾಡಿರೆಂದು ಆದೇಶಿಸಿದ. ಜುಂಜಪ್ಪನ ಆದೇಶದಂತೆ ಮಾರಿಯರು ಊರಿನ ಜನರನ್ನೆಲ್ಲ ನಾಶ ಮಾಡಿದರು. ಇಲ್ಲಿ ಮಾರಿಯರಿಗೆ ಜುಂಜಪ್ಪ ಅಧಿಪತಿ. ಅವರೆಲ್ಲರೂ ಇವನ ಆಜ್ಞಾನುವರ್ತಿಗಳಾಗಿದ್ದರು. ಉಳಿದುಕೊಂಡಿದ್ದ ಗೌಡ, ಪೂಜಾರಿ, ದಳವಾಯಿ, ಮೂರು ಜನರು ಇದಕ್ಕೆ ಕಾರಣವನ್ನು ತಿಳಿಯಲು ಗೌರಸಂದ್ರದ ಮಾರಮ್ಮನಲ್ಲಿಗೆ ಶಾಸ್ತ್ರ ಕೇಳಲು ಬರುತ್ತಾರೆ. ಮೂರು ಜನರ ಕಣ್ಣಿಗೆ ಗೌರಸಂದ್ರದ ಮಾರಮ್ಮ ಕಾಣಿಸದಂತೆ ಸ್ವಲ್ಪ ಹೊತ್ತು ಇದ್ದು, ಅನಂತರ ಕಾಣಿಸಿಕೊಳ್ಳುತ್ತಾಳೆ. ಶಾಸ್ತ್ರಕ್ಕೆ ಮೂರು ಪಾವಲಿ ಕೇಳುತ್ತಾಳೆ. ಕಣಿ ಹೇಳುವಾಗ ಅನುಸರಿಸುವ ವಿಧಾನ ಆಕರ್ಷಕವಾಗಿದೆ.

"ಮೂಡೇಗಾತ್ರ ಬೆಂಕಿನ
ಬಿದ್ರು ಪೆಟ್ಟಿಗೆಗಿಕ್ಕೊಂಡು ಬಂದ್‌ವುಳೆ
ಗೌರಸಂದ್ರದ ಮಾರಮ್ಮ
ಕೆಂಡ ತೆಗೆದು
ನೆಲದ ಮ್ಯಾಲೆ ಹಾಕ್ಯಾವುಳೆ
ನೀರು ಸಗಣಿ ಅವುರ ಕೈಗೆ ಕೊಟ್ಟವ್ಳೆ
ಬ್ಯಾಟೆ ಗಿಡುದಡಿಗೆ ಸಾರಿಸವ್ರಣ್ಣ
ಸಾರಿಸಿದು ಜಾಗದೊಳಗೋಗಿ
ಪಟ್ಟುಕ್ಕುಕುಂತವುಳೋ ಮಾರಮ್ಮ"

(ಜುಂಜಪ್ಪ, ಪುಟ ೧೭೦)

ಕಣಿ ಹೇಳಲು ಕುಳಿತುಕೊಂಡಾಗ ಆಕೆಯಿಂದ ಮನೆದೇವರು ಮುನಿಸಿಕೊಂಡಿರುವ ವಿಷಯ ತಿಳಿಯುತ್ತದೆ. ಇದಕ್ಕೆ ಪರಿಹಾರವಾಗಿ ಜುಂಜಪ್ಪನಿಗೆ ಮೀಸಲು ಕಟ್ಟಿ, ಜುಂಜಪ್ಪನಿಗೆ ನೂರೊಂದು ಸಲ ನೀವು ಮೂರು ಜನ ಅಡ್ಡ ಬಿದ್ದರೆ, ನಿಮ್ಮ ಹಟ್ಟಿ ಜನಗಳೆಲ್ಲ ಎದ್ದಿರುತ್ತಾರೆ ಎಂದು ಹೇಳಿದಳು. ಗೌರಸಂದ್ರದ ಮಾರಮ್ಮ ಹೇಳಿದಂತೆ ಸಿನ್ನಮ್ಮನಲ್ಲಿ ಮೂವರು ಕ್ಷಮೆ ಯಾಚಿಸಿ, ಊರಿಗೆ ಬರಬೇಕೆಂದು ಕೇಳಿಕೊಳ್ಳುತ್ತಾರೆ. ನಂತರ ಜನಿಗೆ ಹಾಕಿ, ಸೂತಕವನ್ನು ಕಳೆಯುತ್ತಾರೆ. ಹೆಣ್ಣು ಮಗು ಮಾರಕ್ಕ ಜನಿಸಿದ ನಂತರ ತಂದೆ ಕೆಂಗರು ಮಲ್ಲೇಗೌಡ ಸಾವನ್ನಪ್ಪುತ್ತಾನೆ.

ಜುಂಜಪ್ಪ ಪುರಾಣದಲ್ಲಿ ಮಾರಿ ಹಬ್ಬದಲ್ಲಿ 'ಬಲಿ' ಕೊಡುವ ಪ್ರಸಂಗದಲ್ಲಿ ಜುಂಜಪ್ಪನ ತಂದೆ ಕೆಂಗುರಿ ಮಲ್ಲೇಗೌಡ ಬಲಿಯಾಗುವ ಅನಿವಾರ್ಯತೆಯನ್ನು ತೀ.ನಂ.ಶಂಕರನಾರಾಯಣರು ಈ ರೀತಿ ವಿವರಿಸಿದ್ದಾರೆ:

ಹೊನ್ನಹಟ್ಟಿ ಆಲೇಗೌಡ ಮಾರಿ ಹಬ್ಬ ಮಾಡಲು ಎಲ್ಲ ಸಿದ್ಧತೆ ಮಾಡಿಕೊಂಡಿರುತ್ತಾನೆ. ಆದರೆ ಮಾರಿಗೆ ಬಲಿ ಕೊಡಲು ಅವನಿಗೆ ಗೊಲ್ಲ ಗೌಡನಿಂದ ಬಾನಗುರಿ ಬೇಕಾಗುತ್ತದೆ. ಎಲ್ಲಿಯೂ ಸಿಗದಿದ್ದಾಗ, ಜುಂಜಪ್ಪನ ತಂದೆ ಕೆಂಗುರಿ ಮಲ್ಲೇಗೌಡ ಬಾನಗುರಿಯನ್ನು ಕೊಡಲು ಒಪ್ಪಿದರು. ಇದಕ್ಕೆ ಒಪ್ಪಬಾರದೆಂದೂ, ಒಪ್ಪಿದರೇ

ತಾನೇ ಬಲಿಯಾಗಬೇಕಾದ ಪ್ರಸಂಗ ಬರುತ್ತದೆ ಎಂದು ಚಿನ್ನಮ್ಮ ತಿಳಿಸಿದರೂ ಸಹ, ಬಲಿಯಾದರೂ ಚಿಂತೆ ಇಲ್ಲವೆಂದೂ ತನಗೆ ಮತ್ತು ತನ್ನ ಸಂತತಿಗೆ ಗೌರವ ಬರುವುದೆಂಬ ಕಾರಣದಿಂದ ಕೆಂಗುರಿ ಮಲ್ಲೇಗೌಡ ಬಾನಗುರಿಯನ್ನು ಕೊಡುತ್ತಾನೆ. ಬಾನಗುರಿ ಕೊಟ್ಟದ್ದಕ್ಕೆ ಆಲೇಗೌಡ ಪ್ರತಿಯಾಗಿ ಕೆಂಗುರಿ ಮಲ್ಲೇಗೌಡನಿಗೆ ಬೆಳ್ಳಿಯ ಉಡಿದಾರ, ಬೆಳ್ಳಿಯ ಬುರುಗು ಇಷ್ಟನ್ನೂ ಕೊಟ್ಟು, ಅವನು ಮಾಡಿದ ಶ್ರೇಷ್ಠ ಕೆಲಸವನ್ನು ಪ್ರಶಂಸೆ ಮಾಡಿ, ತಾಮ್ರದ ಜಯರೇಖೆಯನ್ನು ಬರೆಸಿಕೊಟ್ಟ. ಬಾನಗುರಿಯನ್ನು ಬಲಿಕೊಡಲು ಮಾರಿಯ ಬಳಿ ಬಂದಾಗ ಹನ್ನೆರಡು ಕೈವಾಡದವರು ಅವನನ್ನು ಗೌರವದಿಂದ ನಡೆಮುಡಿಯ ಮೇಲೆ ಕರೆದುಕೊಂಡು ಬಂದರು. ವಾದ್ಯ ಸಮೇತ ಕಳುವಾರಹಳ್ಳಿಯ ಬೀದಿಯಲ್ಲಿ ಬರುವಾಗ ಪ್ರತಿಯೊಂದು ಮನೆಯ ಹೆಣ್ಣುಮಕ್ಕಳು ಅವನಿಗೆ ಆರತಿ ಬೆಳಗಿದರು. ಊರಿನ ಬೇವಿನ ಮರದ ಬಳಿಗೆ ಬಾನಗುರಿಯನ್ನು ಕರೆದುಕೊಂಡು ಬಂದರು. ಬೇವಿನ ಮರದ ನೆರಳಿನಲ್ಲಿ ಸಗಣಿಯಿಂದ ನೆಲವನ್ನು ಸಾರಿಸಿ, ಅದರ ಮೇಲೆ ಮಾರಮ್ಮನನ್ನಿಟ್ಟು ಹೂವುಗಳಿಂದ ಪೂಜೆ ಮಾಡಿ, ದೀಪ ಹಚ್ಚಿಟ್ಟಿದ್ದರು. ಮಾರಮ್ಮನಿಗೆ ಬಾನದ ಎಡೆಯನ್ನು ಹಾಕಿ, ಪೂಜೆ ಮಾಡಿದರು. ಬಾನಗುರಿಯನ್ನು ಮಾರಮ್ಮನ ಎದುರಿಗೆ ಕರೆತಂದು ಪೂಜೆ ಮಾಡಿ ನಾಮ ಇಟ್ಟರು. ಹೂವು ಮುಡಿಸಿದರು. ಆ ಕುರಿಯನ್ನು ಕಡೆಯ ಬೇಕಾದ ತಳವಾರ ನಾಯಕ ಒಂದು ಹೊತ್ತು ನೇಮದಿಂದ ಉಪವಾಸ ಇರಬೇಕು. ಕುರಿ ಕಡಿಯುವ ಮಚ್ಚನ್ನು ಮೇಲಕ್ಕೆ ಎತ್ತಿದಾಗ, ಅದು ಬಾಯಿಬಿಟ್ಟು ನಾಲಿಗೆ ಹೊರಹಾಕಲಿಲ್ಲ. ಅದನ್ನು ಕಡಿದರೂ ಮಾರಿಗೆ ತೃಪ್ತಿಯಾಗಲಿಲ್ಲ. ಕೆಂಗುರಿ ಮಲ್ಲೇಗೌಡ ಮತ್ತೊಂದು ಕುರಿಯನ್ನು ರೊಪ್ಪದಿಂದ ತರಿಸಿದ. ಅದು ಬಲಿಯಾಗುವಾಗ ನಾಲಗೆಯನ್ನು ಹೊರ ಹಾಕಲಿಲ್ಲ. ಕೊನೆಗೆ ಕೆಂಗುರಿ ಮಲ್ಲೇಗೌಡ ನಾಲಿಗೆ ಚಾಚಿಕೊಂಡು ಬಲಿಗೆ ಸಿದ್ಧನಾದ. ತಳವಾರ ನಾಯಕ ಮಾರಿಗೆ ಅವನನ್ನು ಕಡಿದ. ಚಿನ್ನಮ್ಮನಿಗೆ ಮೂರು ಗಂಡು ಮಕ್ಕಳ ಹಿಂದೆ ಮಾರಿಯಂತೆ ಒಂದು ಹೆಣ್ಣು ಮಗು ಹುಟ್ಟಿದ್ದು, ತಂದೆಯ ಮರಣಕ್ಕೆ ಕಾರಣ ಎಂದು ಕಾಡುಗೊಲ್ಲರು ನಂಬುತ್ತಾರೆ.

ಜುಂಜಪ್ಪನ ಕಾವ್ಯದಲ್ಲಿ ಗೌರಸಂದ್ರ ಮಾರಕ್ಕ ಹಲವು ಪ್ರಸಂಗಗಳಲ್ಲಿ ಜುಂಜಪ್ಪನಿಗೆ ಮತ್ತು ಅವರ ಮನೆತನದವರಿಗೆ ಸಹಾಯಕಿಯಾಗಿ ಕಾಣಿಸಿಕೊಂಡ ಸಂದರ್ಭಗಳನ್ನು ಮೇಲಿನ ಪ್ರಸ್ತಾಪದಲ್ಲಿ ನೋಡಲಾಗಿದೆ. ಇಷ್ಟಾದರೂ ಮಾರಿ ಜುಂಜಪ್ಪನ ತಂದೆ ಕೆಂಗುರಿ ಮಲ್ಲೇಗೌಡನನ್ನು ಬಲಿ ತೆಗೆದುಕೊಳ್ಳುವುದು ವಿಪರ್ಯಾಸ.

ಕಾಡುಗೊಲ್ಲರಿಗೆ ವಿಶಿಷ್ಟವಾಗಿರುವ ಯಾವ ಹಬ್ಬವೂ ಇಲ್ಲ. ಇವರು ದೀಪಾವಳಿ, ಬಸವನ ಹಬ್ಬ, ಶಿವರಾತ್ರಿ ಹಬ್ಬ, ನಾಗರ ಹಬ್ಬಗಳನ್ನು ಆಚರಿಸುತ್ತಾರೆ. ಎಲ್ಲ ಜನಗಳಂತೆಯೇ ಕಾಡುಗೊಲ್ಲರ ಹಬ್ಬಗಳೂ ಇರುತ್ತವೆ. ಗೂಡಿನ ಹಬ್ಬ ಕಾಡುಗೊಲ್ಲರ ಸಂಸ್ಕೃತಿಯನ್ನು ರೂಪಿಸಿದ ಮೊಟ್ಟಮೊದಲ ಸಾಂಸ್ಕೃತಿಕ ವೀರ ಎತ್ತಯ್ಯನ ನೆಲೆಗಳಿರುವಲ್ಲಿ ಹಾಲು ಹೊಯ್ಯುವ ಹಬ್ಬವೆಂದೂ ಕರೆಯುತ್ತಾರೆ. ಕಾರ್ತೀಕ ಮಾಸದಲ್ಲಿ 'ದೀಪ ಏರಿಸುವ' ಆಚರಣೆ, ಜುಂಜಪ್ಪನ ಅನೇಕ ನೆಲೆಗಳಲ್ಲಿ ಆಚರಿಸುತ್ತಾರೆ. ''ಜುಂಜಪ್ಪನದು 'ದೀಪ ಏರಿಸುವ ಹಬ್ಬ'ವಾದರೆ, ಎತ್ತಪ್ಪನದು 'ಫಲಸಮೃದ್ಧಿಯ ಹಾಲಿನ ಹಬ್ಬ'ವಾದಂತೆ ಕಾಣುತ್ತದೆ. ಎತ್ತಪ್ಪನ ಹಾಲು (ಶಕ್ತಿ), ಜುಂಜಪ್ಪನ ಬೆಳಕು (ಜ್ಞಾನ) ಸೇರಿ 'ಹಾಲು ಬೆಳಕು', ಶಕ್ತಿ ಜ್ಞಾನಗಳ ಅರ್ಥಪೂರ್ಣ ಸಮ್ಮಿಲನವನ್ನು ಸಂಕೇತಿಸುವಂತಿದೆ.''[೧೦] ಆದರೆ ಜಾತ್ರೆಗಳಲ್ಲಿ ಕಾಡುಗೊಲ್ಲರಿಗೆ ವಿಶಿಷ್ಟವಾದ ಅಂಶಗಳಿವೆ.

ಜುಂಜಪ್ಪ, ಎತ್ತಪ್ಪ ಚಿತ್ರದೇವರು, ಪಾತೇದೇವರು, ಕೇತೇದೇವರು, ಗೌರಸಂದ್ರದ ಮಾರಮ್ಮ, ಬೇವಿನಹಳ್ಳಿ ಕರಿಯಮ್ಮ, ಪುರ್ಲಹಳ್ಳಿ ಭೂತಪ್ಪ ಈ ದೇವತೆಗಳ ಜಾತ್ರೆಗಳು ಮುಖ್ಯವಾದವು. "ಪುರ್ಲಳ್ಳಿ ಭೂತಪ್ಪ, ಹೆಣ್ಣು ದೈವಗಳು ಬಿಟ್ಟರೆ ಕಾಡುಗೊಲ್ಲರ ಗಂಡು ದೈವಗಳು ಬಲಿ ಕೇಳುವುದಿಲ್ಲ! ಬೇಯಿಸದ ನೆನೆಯಕ್ಕಿ ನೆನೆಗಡಲೆ ಕೇಳುತ್ತವೆ."[೧೧] ಪಿತೃಪ್ರಧಾನ ಸಮಾಜವಾದ್ದರಿಂದ ಗಂಡುದೇವರ ಜಾತ್ರೆಗಳು ಹೆಚ್ಚಾಗಿವೆ. ನಮಗೆ ಸ್ತ್ರೀ ಸಂಬಂಧಿ ಜಾತ್ರೆಗಳು ಇಲ್ಲಿ ಪ್ರಸ್ತುತವಾಗಿದೆ.

"ಕಾಡುಗೊಲ್ಲರು ಗೌರಸಂದ್ರ ಮಾರಕ್ಕ, ಬೇವಿನಹಳ್ಳಿ ಕರಿಯಮ್ಮ, ಕರೇಓಬೇನಹಳ್ಳಿ ಅಮ್ಮ ಮೊದಲಾದ ಮಾರಿ ದೇವತೆಗಳನ್ನು ಪೂಜಿಸುವುದು ಮಾತ್ರವಲ್ಲದೆ ಜಾತ್ರೆಗಳನ್ನೂ ಕೂಡ ನಡೆಸುತ್ತಾರೆ. ಈ ಜಾತ್ರೆಗಳಲ್ಲಿ ಕುರಿ ಮತ್ತು ಮೇಕೆಗಳನ್ನು ಬಲಿ ಕೊಡುವುದು ಪ್ರಮುಖವಾದ ಕಾರ್ಯಕ್ರಮ. ಕೆಲವು ಕಡೆಗಳಲ್ಲಿ ಕೋಣಗಳನ್ನು ಬಲಿ ಕೊಡುವ ಪದ್ಧತಿಯೂ ಇದೆ. ಜಾತ್ರೆಗಳ ಸಂದರ್ಭದಲ್ಲಿ ಕಾಡುಗೊಲ್ಲರು ಮಾಂಸಹಾರವನ್ನು ಊಟ ಮಾಡುತ್ತಾರೆ. ಮೇಲೆ ಉಲ್ಲೇಖಿಸಿರುವ ಮಾರಿ ದೇವತೆಗಳು ಜುಂಜಪ್ಪ, ಎತ್ತಪ್ಪ ಮೊದಲಾದ ಕಾಡುಗೊಲ್ಲರ ಪ್ರಧಾನ ದೇವತೆಗಳ ಸಹಾಯಕರೆಂಬ ನಂಬಿಕೆಯಿದೆ. ಈ ಕಾರಣದಿಂದಾಗಿ ಈ ದೇವತೆಗಳ ಜಾತ್ರೆಯಲ್ಲಿ ಜುಂಜಪ್ಪ ಮೊದಲಾದ ದೇವತೆಗಳನ್ನೂ ಪೂಜಿಸುವುದುಂಟು. ಗೌರಸಂದ್ರದ ಮಾರಕ್ಕ, ಬೇವಿನಹಳ್ಳಿ ಕರಿಯಮ್ಮ, ಕರೇಓಬೇನಹಳ್ಳಿ ಅಮ್ಮ ಈ ಮಾರಿದೇವತೆಗಳು ಕಾಡುಗೊಲ್ಲರ ಪುರಾಣಗಳಲ್ಲಿ ಕೊರವಂಜಿಯರ ಪಾತ್ರವನ್ನು ವಹಿಸಿವೆ. ಹೀಗಾಗಿ ಈ ದೇವತೆಗಳ ಜಾತ್ರೆಗಳಲ್ಲಿ ಕಣಿ ಕೇಳುವ ಸಂಪ್ರದಾಯದಂತೆ ಹಲವಾರು ಜನ ಕೊರಚರ ಹೆಂಗಸರು ಜಾತ್ರೆಗೆ ಬರುತ್ತಾರೆ. ಈ ಕೊರವಂಜಿಯರನ್ನು ಭಕ್ತಾದಿಗಳು ಕಣಿ ಕೇಳುತ್ತಾರೆ. ಈ ಜಾತ್ರೆಗಳಲ್ಲಿ ಬೇವಿನ ಉಡುಗೆ, ಘಟಪೂಜೆ ಮೊದಲಾದ ಹರಕೆಗಳನ್ನು ಭಕ್ತರು ತೀರಿಸುತ್ತಾರೆ. ಬೇವಿನ ಉಡುಗೆಯನ್ನು ಉಡುವುದು ದಕ್ಷಿಣ ಭಾರತದಲ್ಲೆಲ್ಲಾ ಪ್ರಚಲಿತವಾಗಿರುವ ಹರಕೆಯ ಸಂಪ್ರದಾಯ. ಹಾಲಿನಿಂದ ತುಂಬಿದ ಗಡಿಗೆಯನ್ನು ಪೂಜೆ ಮಾಡುವುದನ್ನೇ ಘಟಪೂಜೆ ಎನ್ನುತ್ತಾರೆ. ಇದೂ ಕೂಡ ಕಾಡುಗೊಲ್ಲರಿಗೆ ವಿಶಿಷ್ಟವಾದುದೇನೂ ಅಲ್ಲ. ಇತರ ಜನಗಳಲ್ಲಿಯೂ ಬಳಕೆಯಲ್ಲಿದೆ."[೧೨] ಕಾಡುಗೊಲ್ಲರ ಈ ಗೌರಸಂದ್ರದ ಮಾರಮ್ಮ ಉಪ್ಪಾರರಿಗೂ ಒಲಿದು 'ತುಮ್ಮಲಿ'ನಲ್ಲಿ ಹುತ್ತದ ರೂಪದಲ್ಲಿ ಪೂಜೆಗೊಳ್ಳುತ್ತಾಳೆ.

ಗೌರಸಂದ್ರದ ಮಾರಮ್ಮನ ಜಾತ್ರೆ ಪ್ರತಿವರ್ಷ ಸೆಪ್ಟೆಂಬರ್ ೧೩ರಂದು ಚಳ್ಳಕೆರೆ ತಾಲೂಕಿನ ಗೌರಸಂದ್ರದಲ್ಲಿ ನಡೆಯುತ್ತದೆ. ಕರೇಓಬೇನಹಳ್ಳಿಯಲ್ಲಿ ಪ್ರತಿ ವರ್ಷ ಅಕ್ಟೋಬರ್ ಹತ್ತರಿಂದ ಹನ್ನೆರಡನೆಯ ತಾರೀಖಿನ ವರೆಗೆ ಕರೇಓಬೇನಹಳ್ಳಿ ಅಮ್ಮನ ಜಾತ್ರೆ ನಡೆಯುತ್ತದೆ. ಪ್ರತಿ ವರ್ಷ ದೀಪಾವಳಿಯ ಸಂದರ್ಭದಲ್ಲಿ ಬೇವಿನಹಳ್ಳಿಯಲ್ಲಿ ಜುಂಜಪ್ಪನ ಜಾತ್ರೆಯೊಡನೆಯೆ ಬೇವಿನಹಳ್ಳಿ ಕರಿಯಮ್ಮನನ್ನು ಪೂಜಿಸುತ್ತಾರೆ. ಇಷ್ಟು ಮಾತ್ರವಲ್ಲದೆ ಎರಡು ಮೂರು ವರ್ಷಗಳಿಗೊಂದು ಸಲ ಅನುಕೂಲವಾದ ಸಂದರ್ಭದಲ್ಲಿ ಬೇವಿನಹಳ್ಳಿ ಕರಿಯಮ್ಮನ ಜಾತ್ರೆಯನ್ನು ಮಾಡುತ್ತಾರೆ.

ಪ್ರಮುಖವಾದ ಈ ಮಾರಮ್ಮಗಳು ಮಾತ್ರವಲ್ಲದೆ ಒಂದೊಂದು ಹಟ್ಟಿಯವರೂ ತಮಗೆ ಹತ್ತಿರದಲ್ಲಿರುವ ಯಾವುದಾದರೂ ಮಾರಮ್ಮಗಳನ್ನು ಪೂಜಿಸುತ್ತಾರೆ. ಅಥವಾ ಆಯಾ ಹಟ್ಟಿಯಲ್ಲಿಯೇ ಒಂದೊಂದು ಮಾರಮ್ಮನನ್ನು ಇಟ್ಟು ಪೂಜೆ ಮಾಡುತ್ತಾರೆ. ಹಲವಾರು ಹಟ್ಟಿಗಳಲ್ಲಿ ಮಾರಮ್ಮನಿಗೆ ಪ್ರತ್ಯೇಕವಾದ

ದೇವಸ್ಥಾನವಿರುತ್ತದೆ. ''ಸಪ್ತಮಾತೃಕೆಯರು ಪಶುಪಾಲಕ ಬುಡಕಟ್ಟುಗಳ ಆರಾಧ್ಯ ದೈವವಾಗಿದ್ದವು ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.''[೧೩]

''ತುರುಗಾಹಿಗಳು ಮತ್ತು ಕುರಿಗಾಹಿಗಳು ಸಾಮಾನ್ಯವಾಗಿ ಆಕಾಶ ದೇವತೆಗಳಾದ ಪುರುಷ ದೇವರುಗಳನ್ನು ಪೂಜಿಸುತ್ತಾರೆ. ಆದರೆ ತುರುಗಾಹಿಗಳಾದ ಕಾಡುಗೊಲ್ಲರು ಕಾವಲಮ್ಮ ದೇವಿಗೆ ಭಕ್ತಿಪೂರ್ವಕವಾಗಿ ನಿಷ್ಠೆಯಿಂದ ನಡೆದುಕೊಳ್ಳುತ್ತಾರೆ. ಈ ದೇವಿಯ ಪೂಜೆಗೂ ನಿಮಗೂ ಏನೋ ಸಂಬಂಧವೆಂದು ಕೇಳಿದರೆ ಕಾವಲ್ಲಮ್ಮನಿಗೆ ಕಾಡುಗೊಲ್ಲರು ಸೋದರ ಮಾವಗಳಾಗಬೇಕೆಂದು ಹೇಳುತ್ತಾರೆ. ಕಾವಲಮ್ಮನನ್ನು ಗೊಲ್ಲರ ಬೊಮ್ಮಣ್ಣ ತನ್ನ ಮಗನ ಮದುವೆಗೆ ಕರೆಯುವ ಪ್ರಸಂಗವನ್ನು ತುಂಬಾ ಸೊಗಸಾಗಿ ಹಾಡಿನ ರೂಪದಲ್ಲಿ ಹೇಳುತ್ತಾರೆ. ಆದರೆ ಕಾವಲು ಎಂದರೆ ಬಯಲು, ದಿಗಂತ ಎಂಬ ಅರ್ಥಗಳು ಇವೆ. ಆದ್ದರಿಂದ ಬಯಲು ದೇವತೆಯೂ ಆಗಿರಬಹುದು ಅದೇ ಕಾರಣದಿಂದ ಗೊಲ್ಲರು ಈ ದೇವಿಯನ್ನು ಪೂಜಿಸುತ್ತಿರಬಹುದು. ಈ ದೇವಿಯ ಉತ್ಸವ ಸಂದರ್ಭದಲ್ಲಿ ಇವರು ಮಾಡುವ ಪಂಜಿನ ಸೇವೆ ಮತ್ತು ಕೋಲಾಟಗಳು ಮನರಂಜಕ ವಾಗಿವೆ. ಎಲ್ಲಾ ದೇವಿಯರ ಪೂಜೆ ಮಂಗಳವಾರ ಮತ್ತು ಶುಕ್ರವಾರ ನಡೆದರೆ ಈ ದೇವಿಯ ಪೂಜೆ ಸೋಮವಾರ ನಡೆಯುವುದು ವಿಶೇಷವಾಗಿದೆ.''[೧೪]

'' 'ಕೊಂಡದ ಕಾಟವ್ವ' ಒಂದು ಅನುಗಮನ ಸಂಪ್ರದಾಯವನ್ನು ಹೇಳುತ್ತದೆ. ಸಹಗಮನ ಅನುಗಮನ ಕುರಿತಂತೆ ಹಲವಾರು ಐತಿಹಾಸಿಕ ದಾಖಲೆಗಳನ್ನು ಒಳಗೊಂಡಿದೆ. ಕೊಂಡದ ಕಾಟವ್ವ ಕಾಡುಗೊಲ್ಲ ಬುಡಕಟ್ಟಿಗೆ ಸೇರಿದವಳು ಎಂಬುದು ಮುಖ್ಯ ಸಂಗತಿ. ಈಗ ಈಕೆ ಚಿತ್ರದುರ್ಗದ ಸುತ್ತಿನ ಚಳ್ಳಕೆರೆ ತಾಲೂಕಿನ ಪೂರ್ವ ಭಾಗದ ಬೆಳಗೆರೆ ಗ್ರಾಮದ ಕಾಡುಗೊಲ್ಲರ ನಡುವಣ ದೇವತೆಯಾಗಿದ್ದಾಳೆ.''[೧೫]

ಕಾಡುಗೊಲ್ಲರು ಬೇವಿನಹಳ್ಳಿ ಕರಿಯಮ್ಮ, ಗೌರಸಂದ್ರದ ಮಾರಮ್ಮ, ಮೊದಲಾದ ಮಾರಿ ದೇವತೆಗಳಿಗೆ ಮೊಸರನ್ನವನ್ನು ಎಡೆ ಮಾಡುತ್ತಾರೆ. ಹಾಗೆಯೇ ಮಾಂಸಾಹಾರವನ್ನೂ ಎಡೆ ಹಾಕುವ ಪದ್ಧತಿಯೂ ಉಂಟು. ಗೌರಸಂದ್ರದ ಮಾರಮ್ಮನ ವಾರ ಮಂಗಳವಾರ.

''ಕಾಡುಗೊಲ್ಲರ ಪ್ರಕಾರ ಈಶ್ವರನ ಮಗಳಾದ ಗೌರಸಂದ್ರದ ಮಾರಮ್ಮ ಕಣಿ ಹೇಳುವ ರೀತಿ ಬಹು ಸ್ವಾರಸ್ಯಕರ. ಬಿಳಿಯ ಸೀರೆ ಉಟ್ಟು, ಕೊರವಂಜಿಯ ಬುಟ್ಟಿಯನ್ನು ನೆತ್ತಿಯ ಮೇಲೆ ಇಟ್ಟುಕೊಂಡು ಕಂಬಳಿ ಕೋಣಗಳ ರಥವೇರಿ ಬರುತ್ತಾಳೆ. ಯಾರಾದರೂ ತನ್ನನ್ನು ಕಣಿ ಕೇಳಿದಾಗ ತನಗೆ ಕೊರವಂಜಿ ಬುಟ್ಟಿಯ ತುಂಬ ಮುತ್ತುಕೊಟ್ಟರೆ ಕಣಿ ಹೇಳುವುದಾಗಿ ತಿಳಿಸುತ್ತಾಳೆ. ಕಣಿ ಕೇಳುವವರು ಅವಳಿಗೆ ಮೊದಲು ಮೂಗಳ ಧೂಪ, ಮೂಡೆ ಗಾತ್ರದ ಕೆಂಡ, ನಾಲ್ಕು ಮೂಲೆಗೂ ನಾಲ್ಕು ಹಣ, ಕರಿಚಿಪ್ಪಿನ ಕಾಯಿ, ಮೂಡಲ ದಿಕ್ಕಿಗೆ ಬಾಗಿರುವ ಒಂದು ಬಾಳೆಯ ಗೊನೆ ಮತ್ತು ಬಸವನ ಸಗಣಿ ಇಷ್ಟನ್ನೂ ಅವಳಿಗೆ ಕೊಡಬೇಕು. ಆಗ ಅವಳು ಒಂದಿಷ್ಟಗಲ ನೆಲ ಸಾರಿಸಿ, ರಂಗೋಲಿ ಇಟ್ಟು, ಅಲ್ಲಿ ಕುಳಿತು, ಮುಂದೆ ಇಟ್ಟಿರುವ ಕೆಂಡಕ್ಕೆ ಧೂಪ ಹಾಕು ತ್ತಾಳೆ. ನಾಲ್ಕು ಮೂಲೆಗೂ ನಾಲ್ಕು ಹಣ ಇಟ್ಟು ಬಾಳೆಹಣ್ಣನ್ನು ನೈವೇದ್ಯಕ್ಕೆ ಇಟ್ಟು, ಅನಂತರ ಅವಳು ಕಣಿ ಹೇಳುತ್ತಾಳೆ. ಅವಳು ಕಣಿ ಹೇಳಿದ್ದಕ್ಕೆ ಪ್ರತಿಯಾಗಿ ಅವಳಿಗೆ ಕೊರವಂಜಿಯ ಬುಟ್ಟಿಯ ತುಂಬ ಮುತ್ತನ್ನು ಕೊಡುತ್ತಾರೆ. ಇದು ಪುರಾಣದ ಕಥೆ.''[೧೬]

"ಜುಂಜಪ್ಪ ಮೈಲಾರನ ಸಂಪ್ರದಾಯದಲ್ಲಿ ಕಾಣಿಸಿಕೊಳ್ಳುವುದು ಕುತೂಹಲಕರವಾಗಿದೆ. ದಕ್ಷಿಣ ಕರ್ನಾಟಕ ದಲ್ಲಿ ಈತನ ಪ್ರಾಬಲ್ಯವಿರುವುದರಿಂದಲೋ ಏನೋ ಮೈಲಾರನ ದೇವಸ್ಥಾನಗಳಲ್ಲಿ ಈತನ ವಿಗ್ರಹಗಳಿವೆ"[೧೭] ಎನ್ನುತ್ತಾರೆ ಡಾ.ಬಸಲಿಂಗ ಸೊಪ್ಪಿಮಠರವರು.

"ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ ಒಂದು ಕೊರಚರಹಟ್ಟಿಯಲ್ಲಿ ಪ್ರತಿವರ್ಷ ಮಾಡುವ ಮಾರಮ್ಮನ ಜಾತ್ರೆಯನ್ನು ಕೊರಚರು ಗೌರಸಂದ್ರದ ಮಾರಮ್ಮನ ಜಾತ್ರೆ ಎಂದೇ ಕರೆಯುತ್ತಾರೆ. ಗೌರಸಂದ್ರದ ಮಾರಮ್ಮ ತಮ್ಮ ಕುಲದೇವತೆ ಎಂದು ಕೊರಚರ ನಂಬಿಕೆ. ಗೌರಸಂದ್ರಕ್ಕೆ ಹೋಗಲಾರದವರು ಈ ಜಾತ್ರೆಯಾದ ನಂತರ ತಮ್ಮ ಹಟ್ಟಿಗಳಲ್ಲಿ (ಊರುಗಳಿಗೆ ಇವರು ಹಟ್ಟಿ ಎನ್ನುವರು, ಸಾಮಾನ್ಯವಾಗಿ ಇವುಗಳಿಗೆ ಹೆಸರಿರು ವುದಿಲ್ಲ.) ಜಾತ್ರೆ ಮಾಡುವರು. ಕಾಡುಗೊಲ್ಲರಂತೆ ಕೊರಚರೂ ಪಶುಪಾಲಕ ಅಲೆಮಾರಿ ಜನಾಂಗ. ಇವರೀರ್ವರಿಗೂ ಮಾರಮ್ಮನೆ ಮುಖ್ಯ ಹೆಣ್ಣುದೇವರು ಎಂಬುದು ಇವರಿಬ್ಬರೂ ಒಂದು ಮೂಲದವರೆಂಬು ದಕ್ಕೆ ಸಾಕ್ಷಿ ಯಾಗುತ್ತದೆ. ಇದೊಂದೆ ಆಧಾರವಲ್ಲ ಹಲವಾರು ಸಮಾನಾಂಶಗಳು ಒಟ್ಟಾರೆ, ದ್ರಾವಿಡ ನಾಡುಗಳ ಪಶುಪಾಲಕ ದ್ರಾವಿಡರಲ್ಲಿ ಕಂಡು ಬರುತ್ತವೆ. ಮಾರಮ್ಮ ಕೃಷಿಕರ ಅಮ್ಮನಲ್ಲ, ಪಶುಪಾಲಕರ ಸಂಸ್ಕೃತಿಗೆ ಸೇರಿದವಳು."[೧೮]

ಮಾಟದ ಬಗ್ಗೆ ಆದಿವಾಸಿಗಳಿಗೆ ಅಚಲವಾದ ನಂಬಿಕೆ. ಕಾಡುಗೊಲ್ಲರ ಜೀವನದಲ್ಲಿ ಮಾಟಕ್ಕೆ ಹೆಚ್ಚಿನ ಮಹತ್ವವಿಲ್ಲ. ಆದರೆ ಅವರಿಗೆ ಮಾಟದ ಶಕ್ತಿಯಲ್ಲಿ ನಂಬಿಕೆಯುಂಟು. ಹುಲಿಕುಂಟೆ ಕೆರೆಯ ನೀರಿಗೆ ಜುಂಜಪ್ಪನ ಸೋದರ ಮಾವಂದಿರು ಜುಂಜಪ್ಪನ ದನಗಳನ್ನು ಸಾಯಿಸಲು ನೀರಿಗೆ ಮಾಟ ಮಾಡಿಸಿದ್ದು ತಿಳಿದು, ದನಗಳಿಗೆ ನೀರು ಕುಡಿಸುವಷ್ಟರಲ್ಲಿಯೇ ಜುಂಜಪ್ಪ ಗೌರಸಂದ್ರದ ಮಾರಕ್ಕನ ನೆರವಿನಿಂದ ಮುತ್ತಿನ ಕಡೆಗೋಲಿನಿಂದ ಕೆರೆ ನೀರನ್ನು ಕಡೆಸಿದ ಮೇಲೆ ಕೆರೆಯ ನೀರು ಮಾಟದ ಪ್ರಭಾವವನ್ನು ಕಳೆದುಕೊಂಡು ತಿಳಿಯಾಯಿತು.

ಕಾಡುಗೊಲ್ಲರು ತಮಗೆ ಏನಾದರೂ ತೊಂದರೆ ಉಂಟಾದಾಗ ಅದರ ನಿವಾರಣೆಗಾಗಿ ದೈವಕ್ಕೆ ಹರಿಸಿಕೊಳ್ಳು ವುದುಂಟು. ನಂತರ ಹರಕೆಯನ್ನು ತೀರಿಸುತ್ತಾರೆ. ಹರಕೆಯಿಂದಲೇ ನಡೆಯುವ ಜಾತ್ರೆಗಳಿವೆ. ಜುಂಜಪ್ಪ ದೇವರೂ ತನ್ನ ಕಷ್ಟ ಕಾಲದಲ್ಲಿ ಹರಕೆ ಮಾಡಿಕೊಂಡು ಅದನ್ನು ತೀರಿಸಿದ್ದನು. ಜುಂಜಪ್ಪ ದೇವರನ್ನು ಸೀರ್‍ಯದ ರಂಗಣ್ಣನ ಹೂವಿನ ತೋಟದಲ್ಲಿದ್ದ ಗುಂಗೆಹುಳುಗಳ ಪೆಂಟೆಯಲ್ಲಿ ಹಾಕಿದ ಪ್ರಸಂಗ ಇದಕ್ಕೆ ಉತ್ತಮ ಉದಾಹರಣೆ. "ಗೌರಸಂದ್ರದ ಮಾರಕ್ಕ, ಬೇವಿನಹಳ್ಳಿ ಕರಿಯಮ್ಮ ಮೊದಲಾದ ಮಾರಿ ದೇವತೆಗಳ ಜಾತ್ರೆಯಲ್ಲಿ ಹೆಂಗಸರು ಮತ್ತು ಗಂಡಸರು ಬೇವಿನ ಉಡುಗೆಯನ್ನು ತೊಟ್ಟು ದೇವರ ಮುಂದೆ ಕುಣಿಯುತ್ತಾರೆ. ಅಮ್ಮ ಎದ್ದಾಗ ಅಥವಾ ಬೇರೆ ಏನಾದರೂ ಕಾಯಿಲೆಯಾದಾಗ ಈ ಹರಕೆಯನ್ನು ಮಾಡಿಕೊಳ್ಳುತ್ತಾರೆ. ಈ ಸಂಪ್ರದಾಯ ದಕ್ಷಿಣ ಭಾರತದಲ್ಲೆಲ್ಲ ಪ್ರಚಲಿತವಾಗಿದೆ. ಮಾರಿ ಜಾತ್ರೆಗಳಲ್ಲೆಲ್ಲಾ ಇದು ಸಾಮಾನ್ಯವಾಗಿ ಬಳಕೆಯಲ್ಲಿದೆ."[೧೯]

ದೇವರಿಗೆ ದೀಕ್ಷೆ ಪಡೆದು ಬೇಡುವುದು ಪುರುಷರು ಮಾತ್ರ. ಕುಲದೈವ ಜುಂಜಪ್ಪನ ದೀಕ್ಷೆ ಪಡೆದು ಗಣೆ ಹೊತ್ತ ಪುರುಷರು ಗಣೆಯವರು ಅಥವಾ ಕಾಣಿಕೆಯವರು. ಹೆಣ್ಣು ದೇವರ ಹೆಸರಿನಲ್ಲಿ ದೀಕ್ಷೆ ಕೊಡುವ ಪದ್ಧತಿ ಕಾಡುಗೊಲ್ಲರಲ್ಲಿಲ್ಲ.

ಜುಂಜಪ್ಪ, ಸೋದರ ಮಾವಗಳನ್ನು ನಾಶ ಮಾಡಿದ ಸಮಯದಲ್ಲಿ ತಂಗಿ ಮಾರಕ್ಕ ಗರ್ಭಿಣಿಯಾಗಿದ್ದ ಕಾರಣ ನಿನ್ನ ಮಗ ಪ್ರಬುದ್ಧಮಾನಕ್ಕೆ ಬಂದ ಮೇಲೆ ನೀನು ಹಟ್ಟಿ ಮಾರಮ್ಮಳಾಗಿ ಪೂಜೆಗೊಳ್ಳುವಂತೆ ಜುಂಜಪ್ಪ ವರ ನೀಡುತ್ತಾನೆ.

"ಮಾನವ ತನ್ನ ಪಂಚೇಂದ್ರಿಯಗಳ ಮೂಲಕ ತಿಳಿಯಲು ಸಾಧ್ಯವಾಗದ, ಆದರೆ ಅತೀಂದ್ರಿಯ ಶಕ್ತಿಯಿಂದ ತಿಳಿಯಲು ಸಾಧ್ಯವಾಗುವ ಕ್ರಮವನ್ನೇ ಕಣಿ ಎಂದು ಕರೆಯಲಾಗಿದೆ. ಅತೀಂದ್ರಿಯ ಶಕ್ತಿಯಿಂದ ಬೇರೊಬ್ಬ ವ್ಯಕ್ತಿಯ ಮನಸ್ಸಿನಲ್ಲಿರುವ ಆಲೋಚನೆಗಳನ್ನು ತಿಳಿಯುವುದು, ಕಳೆದು ಹೋಗಿರುವ ವಸ್ತುವನ್ನು ಪತ್ತೆ ಹಚ್ಚುವುದು, ಮುಂದೆ ನಡೆಯುವುದನ್ನು ಮೊದಲೇ ತಿಳಿದುಕೊಳ್ಳುವುದು. ಈ ಎಲ್ಲ ಕೆಲಸಗಳೂ ಕಣಿ ಹೇಳುವುದರಲ್ಲಿ ಸೇರಿಹೋಗುತ್ತವೆ. ಕಣಿ ಎಂಬುದು ವ್ಯಾಪಕವಾದ ಪದ. ಕಾಡುಗೊಲ್ಲರ ಪುರಾಣಗಳಲ್ಲಿ ಕಣಿ ಹೇಳುವ ಶಕ್ತಿಯನ್ನು ಮುಖ್ಯವಾಗಿ ಕಾಟುಮದೇವರಿಗೆ ಮತ್ತು ಗೌರಸಂದ್ರದ ಮಾರಕ್ಕನಿಗೆ ಆರೋಪಿಸಲಾಗಿದೆ."[೨೦]

"ಗೌರಸಂದ್ರ ಮಾರಮ್ಮ, ತಾಳ್ಯೇದ ದುರುಗಿಯಂತಹ ಅತಿಮಾನವ ಸ್ತ್ರೀ ವ್ಯಕ್ತಿತ್ವಗಳೊಂದಿಗೆ, ಈ ನೆಲದ ಎಲ್ಲ ಸತ್ವ ಸಾಮರ್ಥ್ಯ, ದೌರ್ಬಲ್ಯಗಳ ಮುದ್ದೆಯಂತಿರುವ ಕಂಬಕ್ಕ, ಚಿನ್ನಮ್ಮ, ಜಾನಕಲ್ಲು ದೊಡ್ಡಕ್ಕ, ಬಡಚಿತ್ತಮ್ಮನ ವ್ಯಕ್ತಿತ್ವಗಳೂ ಪರಿಣಾಮಕಾರಿಯಾಗಿ ಮೂಡಿ ಬಂದಿವೆ. ಜುಂಜಪ್ಪನ ಕಷ್ಟಕ್ಕೆ ಮಾನವೀಯವಾಗಿ ಸ್ಪಂದಿಸಿದ ಪುರ್ಲಳ್ಳಿ ಭೂತಪ್ಪನ ಪಾತ್ರಗಳು ಬಹಳ ಕಾಲ ಮನಸ್ಸಿನಲ್ಲಿ ನಿಲ್ಲುತ್ತವೆ."[೨೧]

ಗೌರಸಂದ್ರದ ಮಾರಮ್ಮ, ಓಬೇನಹಳ್ಳಿ ಕರಿಯಮ್ಮ ಅತಿಮಾನುಷ ಸ್ತ್ರೀಯರಾಗಿದ್ದರೂ ಸಹ, ಜನರ ಕಷ್ಟಗಳಿಗೆ ಸ್ಪಂದಿಸಿ ಜನರಿಗೆ ಪರಿಹಾರವನ್ನು ಸೂಚಿಸುವುದನ್ನು ಗೌರಸಂದ್ರದ ಮಾರಿಯೂ ಹಲವಾರು ಸಂದರ್ಭಗಳಲ್ಲಿ ಜುಂಜಪ್ಪನ ಗೋವುಗಳ ರಕ್ಷಣೆಗಾಗಿ ಮತ್ತು ಜುಂಜಪ್ಪನ ಸಹಾಯಕ್ಕಾಗಿ ಬರುವುದನ್ನು ನಾವು ಕಾವ್ಯದಲ್ಲಿ ಕಾಣಬಹುದು. ಮಾರಿಯಂತಹ ದೇವತೆಗಳು ಜುಂಜಪ್ಪನ ಆಜ್ಞಾನುವರ್ತಿಗಳಾಗಿದ್ದರು. ಮತ್ತು ಅವನ ಕಷ್ಟಕ್ಕೆ ಮಾನವೀಯವಾಗಿ ಸ್ಪಂದಿಸುವ ಗೌರಸಂದ್ರದ ಮಾರಕ್ಕನ ಪಾತ್ರ ಬಹುಕಾಲ ಮನಸ್ಸಿನಲ್ಲಿ ನಿಲ್ಲುವುದಲ್ಲದೆ, ಕಾಡುಗೊಲ್ಲರ ಜೀವನದಲ್ಲಿ ಸ್ತ್ರೀ ದೇವತೆಗಳು ವಹಿಸುವ ಕಾರ್ಯವಿಧಾನ ತುಂಬ ಮಹತ್ವಪೂರ್ಣವಾಗಿದೆ.

### ೫.೨. ಜುಂಜಪ್ಪನ ಕಾವ್ಯದಲ್ಲಿ ತಾಯಿಯ ಸ್ಥಾನಮಾನ

ಜನಪದ ಮಹಾಕಾವ್ಯ ಮೂಲತಃ ಬುಡಕಟ್ಟುಗಳ ಒಬ್ಬ ಸಾಂಸ್ಕೃತಿಕ ವೀರನ ಅಥವಾ ಧಾರ್ಮಿಕ ನಾಯಕನ ಮತ್ತು ಬುಡಕಟ್ಟುಗಳ ಸಂಸ್ಕೃತಿಯ ಇತಿಹಾಸವನ್ನು ತನ್ನ ಸುತ್ತ ಹೆಣೆದುಕೊಂಡು ತನ್ನ ವಿಸ್ತಾರ ಮತ್ತು ವ್ಯಾಪ್ತಿಗಳಿಂದ ಅನೇಕ ಮಜಲುಗಳಲ್ಲಿ ಸಾಗುತ್ತದೆ. ಇಲ್ಲಿ ಒಬ್ಬ ನಾಯಕನಿದ್ದರೂ ಹತ್ತಾರು ಪ್ರತಿ ನಾಯಕರು ಉದ್ದಕ್ಕೂ ಕಾಣಿಸಿಕೊಂಡು ತಮ್ಮ ಸೋಲನ್ನು ಅನುಭವಿಸುತ್ತಾ ಸಾಗುತ್ತಾರೆ. ಅವರು ನಾಯಕನಿಗೆ ಶರಣಾಗಿ ಅವನ ಅನುಯಾಯಿಗಳಾಗುತ್ತಾರೆ. ಇಲ್ಲವೆ ಸರ್ವನಾಶವನ್ನು ಅನುಭವಿಸುತ್ತಾರೆ. ಆ ಯುಗದ ಜೀವನ ಧರ್ಮ ಸಾಂಸ್ಕೃತಿಕ ಪರಿಸರ ಜನರ ಆಶೋತ್ತರ ಕಾವ್ಯದಲ್ಲಿ ಅಭಿವ್ಯಕ್ತಿ ಪಡೆದುಕೊಳ್ಳುತ್ತವೆ. ಕಾವ್ಯದುದ್ದಕ್ಕೂ ಕಥಾನಾಯಕನೊಬ್ಬನೇ ವಿಜೃಂಭಿತನಾಗಿ ಕಂಡುಬರುತ್ತಾನೆ.

''ಜುಂಜಪ್ಪನ ಕಾವ್ಯ ಮಂಟೇಸ್ವಾಮಿ ಕಾವ್ಯಕ್ಕಿಂತ ಅಚ್ಚುಕಟ್ಟಾದ ಸುಸಂಬದ್ಧವಾದ ಕಾವ್ಯ. ಮೂರು ತಲೆಮಾರುಗಳ ಕಾವ್ಯವಾಗಿ ಹರಿದು ಕೊನೆಯ ಭಾಗದಲ್ಲಿ ಕಲಿವೀರ ಜುಂಜಪ್ಪನೇ ಪ್ರಕಾಶಮಾನವಾಗಿ ಬೆಳಗುತ್ತಾನೆ. ಹೆಚ್ಚು ಮಾನವೀಯ ಸಂವೇದನೆಗಳಿಂದ ಕೂಡಿದ ಈ ಕಾವ್ಯದಲ್ಲಿ ಜುಂಜಪ್ಪ ಕೊನೆಯವರೆಗೂ ತನ್ನ ಸೋದರಮಾವಂದಿರ ಜೊತೆ ಹೋರಾಟವನ್ನು ನಡೆಸುತ್ತಲೇ ಸಾಗಿ, ಅವರ ವಿಷ ಜಾಲಕ್ಕೆ ಬಲಿಯಾಗಿ ಅಸುನೀಗಿ, ಕೊನೆಗೆ ಸತ್ತ ಏಳು ದಿನಕ್ಕೆ ಮತ್ತೆ ಎದ್ದು ಸೋದರಮಾವಂದಿರನ್ನು ನಾಶ ಮಾಡುತ್ತಾನೆ. ಇವನ ವ್ಯಕ್ತಿತ್ವ ರಾಮನಂತೆ, ಕೃಷ್ಣನಂತೆ ಅಸದೃಶವಾಗಿ ಕಾವ್ಯದುದ್ದಕ್ಕೂ ಬೆಳೆದು, ಮಹಾಕಾವ್ಯದ ಎಲ್ಲ ಲಕ್ಷಣಗಳನ್ನೂ ಹೊಂದಿ,''[೨೨] ಜನಪದ ಮಹಾಕಾವ್ಯದ ಒಂದು ಅನರ್ಘ್ಯ ರತ್ನದಂತೆ ಕಂಗೊಳಿಸುತ್ತಿದೆ. ಜನಾಂಗದ ಹುಟ್ಟು ಸಾಹಸಿಯಾಗಿದ್ದ ಒಬ್ಬ ವ್ಯಕ್ತಿ ಹಂತಹಂತವಾಗಿ ಪುರಾಣ ಪುರುಷನ ಸ್ಥಾನಮಾನಗಳನ್ನು ಪಡೆದು ಸಾಂಸ್ಕೃತಿಕ ವೀರನಾಗಿ ಜನಾಂಗದ ಆರಾಧ್ಯ ದೇವತೆಯಾಗಿ ವಿಕಾಸಗೊಂಡಿರಬಹುದು.

''ಕಾಡುಗೊಲ್ಲರು ಸಾಮಾಜೀಕರಣ, ಸಾಂಸ್ಕೃತಿಕರಣಗೊಂಡು ಪಶುಪಾಲನೆ ಹಾಗೂ ಕೃಷಿಯ ನಡುವಣದ ಹಂತದಲ್ಲಿರುವ ಬುಡಕಟ್ಟಾದರು, ಗ್ರಾಮದಿಂದ ದೂರದ ಕಾಡುಗಳಲ್ಲಿ ವಾಸಿಸುತ್ತಾ ಪಶುಪಾಲನೆಯನ್ನೇ ಮುಖ್ಯ ಕಸುಬಾಗಿಸಿಕೊಂಡು ಒಂದು ಬುಡಕಟ್ಟು ಬೇಡರು, ಕುರುಬರು, ಸಹ ಕಾಡಿನವರೇ ಕಾಡುಗೊಲ್ಲರಿಗೆ ಇವರೊಡನೆ ಬಳಕೆ ಹೆಚ್ಚು. ಇವರೆಲ್ಲ ಭಂಡಾರ, ಬೇವು, ಪ್ರಾಣಿ-ಪಕ್ಷಿ, ಗಿಡ-ಮರ ಸೂರ್ಯ ಚಂದ್ರರ ಆರಾಧಕರು.''[೨೩]

ಕಾಡುಗೊಲ್ಲರ ಅತ್ಯಂತ ಜನಪ್ರಿಯ ಪ್ರಮುಖ ಆರಾಧ್ಯ ದೈವ ಜುಂಜಪ್ಪ. ಗೊಲ್ಲ ಸಂಸ್ಕೃತಿಯನ್ನು ರೂಪಿಸಿದ ಸಾಂಸ್ಕೃತಿಕ ವೀರ. ''ಕಾಡುಗೊಲ್ಲರಿಗೊಂದು ವೀರ ಪರಂಪರೆಯನ್ನು ಪೌರುಷ ಮೂಲವನ್ನು ಕಟ್ಟಿಕೊಟ್ಟ ಸ್ವಾಭಿಮಾನಿ. ಗೊಲ್ಲನಾಗಿ ಹುಟ್ಟಿ ಗೊಲ್ಲನಾಗಿಯೇ ಬದುಕಿದ ಛಲಗಾರ.''[೨೪] ಅವತಾರ ಪುರುಷ. ಲೋಕದಲ್ಲಿ ಅನೇಕ ದುಷ್ಟರನ್ನು ಶಿಕ್ಷಿಸಿ ಮಹಿಮೆಯನ್ನು ಮೆರೆದವನು.

ಜುಂಜಪ್ಪನ ಕಾವ್ಯ ಮೂರು ತಲೆಮಾರುಗಳ ಕತೆ. ಮೊದಲ ತಲೆಮಾರಿನಲ್ಲಿ ಮಾರುಮುತ್ತಣ್ಣ ಮತ್ತು ಸಾತೆಮ್ಮ. ಎರಡನೇ ತಲೆಮಾರಿನಲ್ಲಿ ಕೆಂಗರು ಮಲ್ಲೇಗೌಡ ಮತ್ತು ಸಿನ್ನಮ್ಮ ಹಾಗೂ ಮೂರನೆಯ ತಲೆಮಾರಿನಲ್ಲಿ ಜುಂಜಪ್ಪ. ಈ ಕಾವ್ಯ ಜನಪದ ಪುರಾಣ ಲಕ್ಷಣಗಳಿಂದ ಶೋಭಿಸುತ್ತಿದೆ. ಪಶುಪಾಲನೆಯನ್ನೇ ಮುಖ್ಯ ಕಸುಬಾಗಿಸಿಕೊಂಡ ಅಲೆಮಾರಿ ಜನಾಂಗದ ಕಾಡುಗೊಲ್ಲರ ನಾಯಕರು ಹುಲ್ಲುಗಾವಲುಗಳನ್ನು ರಕ್ಷಿಸಿಕೊಳ್ಳಲು ನಿರಂತರ ಹೋರಾಡಿದವರು.

''ಜುಂಜಪ್ಪನ ಕಥೆ ಗಣೆಯವರು ಊರಾಡಲು ಹೋದಾಗ ಹೇಳುವ ಪದ್ಯ ಹಾಗೂ ಗದ್ಯಯುಕ್ತ ಕಾವ್ಯಗಳಿಂದ, ಗೊಲ್ಲಗೌಡರು ಗಣೆಯೊಡನೆ ಹಾಡುವ ತ್ರಿಪದಿ ಸಾಹಿತ್ಯದಿಂದಲ್ಲದೆ, ಹೆಣ್ಣು ಮಕ್ಕಳು ಹಾಡುವ ತ್ರಿಪದಿ ಸಾಹಿತ್ಯ ಎಂಬ ಮೂಲಗಳಿಂದ ದೊರೆಯುತ್ತದೆ. ಜುಂಜಪ್ಪ ಕಾವ್ಯದಲ್ಲಿ ಎರಡು ಸಂಪ್ರದಾಯಗಳಿವೆ ಎಂಬುದನ್ನು ಜೀ.ಶಂ.ಪ.ಅವರು ಗುರುತಿಸಿದ್ದಾರೆ. ಇವುಗಳನ್ನು ಉತ್ತರ ಸಂಪ್ರದಾಯ ಮತ್ತು ದಕ್ಷಿಣ ಸಂಪ್ರದಾಯ ಎಂದು ಕರೆದಿದ್ದಾರೆ. ಸಿರಾ, ಹಿರಿಯೂರು. ಚಳ್ಳಕೆರೆ ಮುಂತಾದ ಭಾಗಗಳಲ್ಲಿ ಪ್ರಚಲಿತವಾಗಿರುವ ಸಂಪ್ರದಾಯವನ್ನು ಉತ್ತರ ಸಂಪ್ರದಾಯ ಎಂದೂ ಗುಬ್ಬಿ, ತಿಪಟೂರು, ತುರವೇಕೆರೆ, ಚನ್ನರಾಯಪಟ್ಟಣ

ಮುಂತಾದ ಪ್ರದೇಶಗಳಲ್ಲಿ ಪ್ರಚಲಿತವಾಗಿರುವ ಸಂಪ್ರದಾಯವನ್ನು ದಕ್ಷಿಣ ಸಂಪ್ರದಾಯವೆಂಬ ಕರೆದಿದ್ದಾರೆ. ಉತ್ತರ ಸಂಪ್ರದಾಯದವರು ಕಳುವಾರಹಳ್ಳಿ ಕ್ಷೇತ್ರಕ್ಕೂ ದಕ್ಷಿಣ ಸಂಪ್ರದಾಯದವರು ಹಾಗಲವಾಡಿ ಕ್ಷೇತ್ರಕ್ಕೂ ನಡೆದುಕೊಳ್ಳುತ್ತಾರೆ. ದಕ್ಷಿಣ ಸಂಪ್ರದಾಯದ ಕಾವ್ಯವನ್ನು ಡಾ.ಜೀ.ಶಂ.ಪರಮಶಿವಯ್ಯರವರು ಸಂಗ್ರಹಿಸಿದ್ದಾರೆ. ಉತ್ತರ ಸಂಪ್ರದಾಯದ ಕಾವ್ಯವನ್ನು ಡಾ.ತೀ.ನಂ.ಶಂಕರನಾರಾಯಣರವರು ಸಂಗ್ರಹಿಸಿದ್ದಾರೆ. ಉತ್ತರ ಸಂಪ್ರದಾಯದ ಕಾವ್ಯ ಧಾರ್ಮಿಕ ವಿವರಗಳಿಂದ ಕೂಡಿದ್ದು, ಕಾಡುಗೊಲ್ಲರ ಸಂಸ್ಕೃತಿಯ ಅಧ್ಯಯನಕ್ಕೆ ತುಂಬ ಉಪಯುಕ್ತವಾಗಿದೆ; ದಕ್ಷಿಣ ಸಂಪ್ರದಾಯದ ಕಾವ್ಯದಲ್ಲಿ ಧಾರ್ಮಿಕ ಅಂಶಗಳು ಜಾಳುಜಾಳಾಗಿದ್ದು, ಉತ್ತಮ ಕಾವ್ಯಾತ್ಮಕ ಭಾಗಗಳಿಂದ ಕೂಡಿದೆ."[೨೫] "ಡಾ.ಜೀ.ಶಂ.ಪ.ರವರು ಈ ಎರಡು ಸಂಪ್ರದಾಯಗಳಿಗೂ ಇರುವ ಕಥಾವ್ಯತ್ಯಾಸಗಳನ್ನು ಪಟ್ಟಿಮಾಡಿದ್ದಾರೆ. ಇದಕ್ಕೆ ಕಾರಣಗಳನ್ನೂ ವಿವರಿಸಿದ್ದಾರೆ. ಇವುಗಳ ಸಾಮ್ಯವನ್ನು ಪರಿಶೀಲಿಸಿದರೆ ಮೂಲದಲ್ಲಿ ಅದು ಒಂದೇ ಕಾವ್ಯವಾಗಿದ್ದು ಎರಡು ದಿಕ್ಕಿನಲ್ಲಿ ಪ್ರಸರಣಗೊಂಡ ರಚನೆ ಪ್ರತ್ಯೇಕವಾಗಿಯೇ ಉಳಿದು ಸಾಕಷ್ಟು ಬದಲಾವಣೆಗಳನ್ನು ಸಾಧಿಸಿಕೊಂಡಿದೆ. ಧಾರ್ಮಿಕ ವಿವರಗಳು, ದೈವಿಕ ಅಂಶಗಳು ಉತ್ತರದ ಪಾಠದಲ್ಲಿ ದಟ್ಟವಾಗಿ ಉಳಿದುಕೊಂಡು ಬಂದರೆ, ದಕ್ಷಿಣಕ್ಕೆ ಬಂದಂತೆಲ್ಲಾ-ಧಾರ್ಮಿಕ ಅಂಶಗಳು ಜಾಳು ಜಾಳಾಗಿ ಕಾವ್ಯದ ಸ್ವಾರಸ್ಯ ಭಾಗಗಳು ಮಾತ್ರ, ಕಲಾತ್ಮಕ ಸನ್ನಿವೇಶಗಳು ಮಾತ್ರ ಉಳಿದು ಬಂದಿರುವುದು ಗೋಚರಿಸುತ್ತದೆ. ಉತ್ತರದ ಹಿರಿಯೂರು, ಸಿರಾ, ಚಳ್ಳಕೆರೆ ಭಾಗದಲ್ಲಿ ಕಾಡುಗೊಲ್ಲರು ದಟ್ಟವಾಗಿರುವುದರಿಂದಲೂ, ಕಳುವಾರಹಳ್ಳಿ, ಬೇವಿನಹಳ್ಳಿ, ಮುಂತಾದ ಕೇಂದ್ರಗಳು ಅಲ್ಲಿಯೇ ಇರುವುದರಿಂದಲೂ ಪುರಾಣದ ಚೌಕಟ್ಟು ಉತ್ತರದ ಪಾಠದಲ್ಲಿ ಆಧಿಕ್ಯವನ್ನು ಪಡೆದುಕೊಂಡಿದೆ."[೨೬]

ಉತ್ತರ ಸಂಪ್ರದಾಯ ಮತ್ತು ದಕ್ಷಿಣ ಸಂಪ್ರದಾಯದ ಕಥೆಗಳಲ್ಲಿ ಜುಂಜಪ್ಪನ ಹುಟ್ಟಿನ ಬಗ್ಗೆ ವಿವಿಧ ರೀತಿಯ ವ್ಯಾಖ್ಯಾನಗಳಿವೆ.

ದಕ್ಷಿಣ ಸಂಪ್ರದಾಯದ ಕತೆಯಲ್ಲಿ ಪೂಜಾರಿ ಕೆಂಡಪ್ಪ ಜುಂಜಪ್ಪನ ಮುತ್ತಾತ. ಅವನ ಮಗ ಕೆಂಗುರಿ ಮಲ್ಲೇಗೌಡ ದನಗಳನ್ನು ಕಾದುಕೊಂಡು ಕಾಡಿನಲ್ಲೇ ಅಲೆದುಕೊಂಡು ಇದ್ದು ಬಿಡುತ್ತಾನೆ. ಹಟ್ಟಿಯ ಹುಡುಗರೊಡನೆ ಸೀಮೆಯ ಮೇಲೆಲ್ಲ ದನಕಾಯುವ ಕೆಂಗುರಿ ಮಲ್ಲೇಗೌಡನ ರೂಪವನ್ನು ನೋಡಿ ಬೇಡರ ಹುಡುಗಿಯೊಬ್ಬಳು ಅವನನ್ನು ತಡೆದಿದ್ದಳು. ಗೊಲ್ಲ ಕುಲಕ್ಕೆ, ಕೆಟ್ಟ ಹೆಸರು ಬರುತ್ತದೆಂದು ಹಟ್ಟಿಯ ಗೌಡರೆಲ್ಲ ಮುನಿದ ಮೇಲೆ ಮಗನಿಗೆ ಮದುವೆ ಮಾಡಲು ಪೂಜಾರಿ ಕೆಂಡಪ್ಪ ನಿರ್ಧರಿಸಿದ.

ಅಜ್ಜೇರ ಕಂಬವ್ವನನ್ನು ತರದಂತೆ ದಾರಿಯಲ್ಲಿ ಬೇಕಾದಷ್ಟು ಅಪಶಕುನಗಳಾದವು. ಮನೆಸ್ವಾಮಿ ಚಿತ್ರದೇವರೇ ಕಾಣಿಸಿಕೊಂಡು ಅಜ್ಜೇರ ಕಂಬವ್ವನನ್ನು ತಂದರೆ ಬಡತನ ಬರುವುದೆಂದು ಅಡ್ಡಿಪಡಿಸಿದ. ಕೆಂಡಪ್ಪ ಕೇಳದೆ ಮದುವೆಯ ಏರ್ಪಾಡನ್ನು ನಡೆಸಿದಾಗ ಅವನ ತಲೆ ಸಿಡಿದು ಸಾವಿರ ಹೋಳಾಯಿತು. ಆದರೆ ಅಜ್ಜೇರ ಕಂಬವ್ವನ ಜೊತೆ ಕೆಂಗುರಿ ಮಲ್ಲೇಗೌಡನ ಮದುವೆ ಮುಗಿದಿತ್ತು.

ಮದುವೆಯಾದ ಮೇಲೆ ತಮ್ಮ ಹಟ್ಟಿಗೆ ಮರಳಿದ ದಂಪತಿಗಳಿಗೆ ಇನ್ನಿಲ್ಲದ ಬಡತನ ಬಂದಿತು. ಗೌರಸಂದ್ರದ ಅಕ್ಕಮಾರಿ ಭಿಕ್ಷೆಗೆ ಬಂದು ಮೂಲೆಯ ಬಾಗದ ಸಾಲಿನಲ್ಲಿದ್ದ ಸ್ವಲ್ಪ ಧವಸವನ್ನು ತೂರಿ ಹೋದಳು. ಅದು ಮುಗಿದ ಮೇಲೆ ಕೆಂಗುರಿ ಮಲ್ಲೇಗೌಡನು ಜೋಳಿಗೆ ಹಿಡಿದು ಭಿಕ್ಷೆ ಮಾಡತೊಡಗಿದ.

ಊರಿನಲ್ಲಿ ಮಾರಿಯ ಹಬ್ಬ ಬಂದಿತು. ಎಲ್ಲರ ಮನೆಗೂ ಸಾರಿ ಹೋದ ಪೂಜಾರಿ, ಕಡು ಬಡವರಾದ ಕೆಂಗುರಿ ಮಲ್ಲೇಗೌಡ-ಕಂಬವ್ವರವರಿಗೆ ಸಾರಲಿಲ್ಲ. ಎಲ್ಲಿಯಾದರೂ ಉಂಡು ಕೊಂಡಾರು ಎಂದು. ಈ ಅವಮಾನವನ್ನು ಸಹಿಸದೆ ಕಾವೇರಿ ಹೊಳೆಯಲ್ಲಿ ಹಾರಿಕೊಳ್ಳಲು ಕೆಂಗುರಿ ಮಲ್ಲೇಗೌಡ ಹೊರಟನು, ಹಿಂದೆಯೇ ಗರ್ಭಿಣಿ ಕಂಬವ್ವನೂ ಹೊರಟಳು. ದಾರಿಯಲ್ಲಿ ಅವರಿಗೆ ಗಂಡುಮಗು ಜನಿಸಿತು. ಹೆಬ್ಬಾಲದ ಮರಕ್ಕೆ ತೊಟ್ಟಿಲನ್ನು ಕಟ್ಟಿ ಮಗುವನ್ನು ಮಲಗಿಸಿ 'ಕಪಿನಿ ಕಾವೇರಿ'ಯ ದಿಕ್ಕಿನಲ್ಲಿ ಅವರು ಹೊರಟು ಹೋದರು. ಮಗುವಿಗೆ ಶಿವಪಾರ್ವತಿಯೇ ರಕ್ಷೆಯಾದರು. ಅವನೇ ಕೆಂಪನ ಮಲ್ಲೇಗೌಡ. ಕೊನೆಗೆ ಆಲೇಗೌಡ ಇವನನ್ನು ಸಾಕಿಕೊಂಡು, ಏಳು ಗೂಡಿನ ದನಗಳನ್ನು ಮಾಡಿಕೊಟ್ಟು ವಿವಿಧ ಕಾವಲುಗಳಲ್ಲಿ ದನಗಳನ್ನು ಕಾಯಲು ಕಳಿಸಿಕೊಟ್ಟ.

ಏಳು ಗೂಡಿನ ದನಗಳಲ್ಲಿ ಇಲ್ಲದ ಐಶ್ಚರ್ಯ ಬಂದಿತು. ಸೀರ್‍ಯದ ರಂಗಣ್ಣ ಏಳು ಕೋಣನ ಮೇಲೆ ಹಣವನ್ನು ಏರಿಕೊಂಡು ಬಂದು ಹೋರಿಗಳನ್ನು ಕೊಂಡನು. ಕಣದಲ್ಲಿ ರಾಶಿಯಾಗಿ ಬಿದ್ದ ಹಣವನ್ನು ನೋಡಿ ಆಲೇಗೌಡ ಹಿಗ್ಗಿ ಕಂಬೇರಹಟ್ಟಿಯ ಚಿನ್ನಮ್ಮನನ್ನು ತಂದು ಕೆಂಪನ ಮಲ್ಲೇಗೌಡನಿಗೆ ಮದುವೆ ಮಾಡಿದ. ಕಳವೇರಹಳ್ಳಿಯಲ್ಲಿ ಅರಮನೆ ಕಟ್ಟಿಕೊಟ್ಟು ಏಳುಗೂಡಿನ ದನಗಳನ್ನು ಅವನಿಗೇ ಬಿಟ್ಟು ಕೊಟ್ಟನು. ಮದುವೆಯಾದ ಮೂರು ದಿನಕ್ಕೆ ಕೆಂಪನಮಲ್ಲೇಗೌಡ ತನ್ನ ಏಳುಗೂಡಿನ ದನಗಳ ಜೊತೆಗೆ ಮದಗದ ಗಿರಿಗೆ ಹೊರಟಾಗ ಮಡದಿಯನ್ನು ಕರೆದು ಹರೆಯದ ಹೆಣ್ಣು ಚಿನ್ನಮ್ಮ ತಾನು ಮರಳಿದಾಗಲೂ ನೀನು ಏಳುಮಲ್ಲಿಗೆ ತೂಕವಿರಬೇಕು, ಬಂದಾಗ ನಿನ್ನ ಸತ್ಯವನ್ನು ಕಾಣಬೇಕೆಂದು ಬುದ್ಧಿ ಹೇಳಿದನು. ಯಾರು ಬಂದರೂ ಮನೆ ಬಾಗಿಲು ತೆರೆಯದಿರಲೆಂದು ಹನ್ನೆರಡು ಅಂಕಣದ ಅರಮನೆಯ ಬಾಗಿಲಿಗೆ ಶಾಪಹಾಕಿ ದನಗಳ ಜೊತೆ ಹೊರಡುತ್ತಾನೆ. ಹೊಸದಾಗಿ ಮದುವೆಯಾದ ಹೆಣ್ಣು ಚಿನ್ನವ್ವ ಅರಮನೆಯಲ್ಲಿ ಒಂಟಿ ಬಾಳು ಬದುಕಬೇಕಾಗಿ ಬಂದು ನಲುಗಿದಳು. ನೋವಿನ ದಿನಗಳನ್ನು ಸಹಿಸುವುದು ಕಷ್ಟವಾಗುತ್ತದೆ. ಅವಳಿಗೇ ಅರಿವಿಲ್ಲದಂತೆಯೇ ಏನೋ ತಳಮಳ ಯಾವುದೋ ಕಾತರ,

"ಅನ್ನದ ಬಾದಿಲ್ಲ ಅನ್ಯಾಯದ ಬಾದಿಲ್ಲ
ಯೌವನದ ಬಾದಿ ತಾಳಲಾರೇ........"

(ಜನಪದ ಕಾವ್ಯ ಕಥೆಗಳು, ಪುಟ ೩೦೨)

ಎಂದು ಗೋಳಾಡುತ್ತಾಳೆ.

ಚಿನ್ನಮ್ಮನ ಅಂತರಂಗದ ಕೂಗು ಶಿವ ಮತ್ತು ಪಾರ್ವತಿಯರಿಗೆ ಅರಿವಾಗಿ ಶಿವ ಕರುಣೆಯಿಂದ ಮೂರು ಹೂಗಳನ್ನು ಕೊಟ್ಟು ಅವುಗಳನ್ನು ಸೇವಿಸಲು ಹೇಳಿ 'ಯೌವ್ವನ ಬಾಧೆ' ಹರಿಯುವ ಬಗೆಯನ್ನು ಸೂಚಿಸುತ್ತಾನೆ. ಹೂವನ್ನು ಸೇವಿಸಿದ ಚಿನ್ನಮ್ಮ ನೋವನ್ನು ಮರೆಯುತ್ತಾಳೆ. ದಿನಗಳುರುಳಿದವು. ಮೂರು ತಿಂಗಳು, ಆರು ತಿಂಗಳು, ಹೀಗೆ ದಿನ ಕಳೆದಂತೆ ಮಾಯದ ಗರ್ಭ ಬೆಳೆಯುವುದನ್ನು ಗಮನಿಸಿ ಬೆದರಿದಳು. ಒಂಬತ್ತು ತಿಂಗಳು ತುಂಬುತ್ತಿದ್ದಂತೆಯೇ ಹೆಚ್ಚಿನ ಭಯ, ಆತಂಕಗಳಲ್ಲಿ ಮುಳುಗಿದಳು. ತಾಯಿಯ ಗರ್ಭದಲ್ಲಿ ಬೆಳೆಯುತ್ತಿದ್ದ ಮಕ್ಕಳು ತಾಯಿಯ ಕಳವಳವನ್ನು ಕಂಡು ದುಃಖ ಮಾಡಬಾರದೆಂದು ಧೈರ್ಯ ಹೇಳುತ್ತಾರೆ. ನಾವು ದೆವ್ವವಲ್ಲ, ಪೀಡೆಯಲ್ಲ ನೀನು.

"ಹೆದರಬೇಡ ನನ ತಾಯಿ ಬೆದರಬೇಡ ನನ ತಾಯಿ
ದೆವ್ವವೂ ಅಲ್ಲ ಪೀಡಲ್ಲ ಕಾಣಮ್ಮ
ನಿನ ಜನ್ಮದಲ್ಲಿ ನಾವು ಇರುತೀವಿ- ಕಾಣಮ್ಮ
ತಂದೀಗೆ ಬುದ್ಧಿ ಹೇಳುತೀವಿ"

(ಜನಪದ ಕಾವ್ಯ ಕಥೆಗಳು, ಪುಟ ೩೦೩)

ಎಂದು ಗರ್ಭದಲ್ಲಿ ಮಾತಾಡಿದ ಮಕ್ಕಳ ದನಿಯನ್ನು ಕೇಳಿ ಚಿನ್ನಮ್ಮ ಬೆಚ್ಚಿದಳು.

ಕೆಂಪನಮಲ್ಲಯ್ಯ ಏಳುಗೂಡಿನ ದನಗಳನ್ನು ಹೊಡೆದುಕೊಂಡು ಮನೆಗೆ ಬಂದನು. ಹೆಂಡತಿಯನ್ನು ನೋಡಿ ಬೆಚ್ಚಿದ್ದಲ್ಲದೆ, ಶಂಕಿಸಿದನು. ಜುಂಜಪ್ಪ ತಂದೆಯಾಡಿದ ಅನುಮಾನಗಳಿಗೆ ತಾಯಿಯ ಗರ್ಭದಿಂದಲೇ ಉತ್ತರಿಸುತ್ತಾನೆ.

"ಬೆಚ್ಚ ಬೇಡ ನನ ತಂದೆ ಬೆದರ ಬೇಡ ನನ ತಂದೆ
ಆಡಬೇಡ ಅನ್ಯಾಯದ ನುಡಿಗಳ ನನ ತಂದೆ
ನಾವು ನಿನ್ನ ಮಕ್ಕಳಾಗಿರುತೀವಿ"

(ಜನಪದ ಕಾವ್ಯ ಕಥೆಗಳು, ಪುಟ ೩೦೪)

ಜುಂಜಪ್ಪ, ಮಾರಣ್ಣ, ಮೈಲಣ್ಣ ಮತ್ತು ತಂಗಿ ಮಾರಕ್ಕ ಹೀಗೆ ನಾಲ್ಕು ಜನ ಚಿನ್ನವ್ವನ ಗರ್ಭದಲ್ಲಿ ಇರುವ ಮಕ್ಕಳು. ಆ ಮೂರು ಜನ ಗಂಡು ಮಕ್ಕಳು ಹುಟ್ಟಿ, ಒಂದು ವರ್ಷ ಕಳೆದ ಮೇಲೆ, ಮಾರಕ್ಕ ತಾಯಿಯ ಗರ್ಭದಿಂದ ಹೊರ ಬರುತ್ತಾಳೆ. ಮಾರಕ್ಕ ಮಾತ್ರ ಕುಲಕ್ಕೆ ಕಂಟಕ ಪ್ರಾಯಳು. ಹುಟ್ಟಿದ ಗಳಿಗೆಯಲ್ಲೆ ಚೆಂಡು ಮುರಿಯುವಂತೆ ತಾಯಿಗೆ ಜುಂಜಪ್ಪ ತಿಳಿಸಿದ. ಇಲ್ಲವಾದರೆ ತಂದೆಗೆ ಮರಣ ಎಂದಿದ್ದ.

ಮಕ್ಕಳು ತಮ್ಮ ತಮ್ಮ ದಾರಿಯಲ್ಲಿ ಹೊರ ಬರುತ್ತಾರೆ. ಹಿರಿಯವನಾದ ಜುಂಜಪ್ಪ ತಾಯಿಯ ಬೆನ್ನಿನಲ್ಲಿ ಹುಟ್ಟುತ್ತಾನೆ. ಮಾರಣ್ಣ, ಮೈಲಣ್ಣ ಕಿವಿಗಳಿಂದ ಜನಿಸುತ್ತಾರೆ. ಮಾರಕ್ಕ ಲೋಕದ ದಾರಿಯಲ್ಲಿ ಹುಟ್ಟುತ್ತಾಳೆ. ಚಿನ್ನಮ್ಮ ಹಡೆದ ಮಗಳೆಂದು ಪ್ರೀತಿಯಿಂದ ಮಾರಕ್ಕನನ್ನು ಸಾಕಿದಳು. ಇದು ತಾಯಿಯ ವಾತ್ಸಲ್ಯಕ್ಕೆ ಉದಾಹರಣೆ. ಮೂರು ಗಂಡುಗಳ ಬೆನ್ನಲ್ಲಿ ಬಂದ ಮಗಳು ಮಾರಕ್ಕನ ಮುಖ ನೋಡಿದರೆ ತಂದೆಯ ತಲೆ ಸಿಡಿದು ಮರಣ ಹೊಂದುತ್ತಾನೆ. "ತಾವೆಲ್ಲ ತಬ್ಬಲಿಗಳಾಗುತ್ತೇವೆಂಬ ಭಯ ಜುಂಜಪ್ಪನನ್ನು ಕಾಡತೊಡಗಿತು. ತಂದೆಯನ್ನು ಮೂವತ್ತು ಮಾರುದ್ದ ಸರಪಣಿಯಲ್ಲಿ ಗಾಜಿನ ಕಂಬಕ್ಕೆ ಕಟ್ಟಿ ಮೂವರು ಮಕ್ಕಳು ಕಾವಲು ಕಾಯುತ್ತಾರೆ. ಆದರೆ ಒಂದೂವರೆ ತಿಂಗಳ ನಂತರದಲ್ಲಿ ಜುಂಜಪ್ಪನಿಗೆ 'ಅರೆಗಣ್ಣು' ನಿದ್ದೆ ಬಂದು, ಎಚ್ಚರ ದಿಂದಿರುವಂತೆ ತಮ್ಮಂದಿರಿಗೆ ಹೇಳಿ ಮಲಗುತ್ತಾನೆ. ಎರಡುವರೆ ತಿಂಗಳು ತಂದೆಯನ್ನು ಕಾದ ಹಸುಳೆಗಳಾದ ಮಾರಣ್ಣ, ಮೈಲಣ್ಣರಿಗೂ 'ಕಾಲುಗಣ್ಣು ನಿದ್ರೆ' ಹತ್ತಿ ಅಣ್ಣನ ಬಳಿಯಲ್ಲೇ ಕಣ್ಮುಚ್ಚಿ ಮಲಗಿದರು.

ದುರ್ವಿಧಿ ಕಾದಿತ್ತು ಕೆಂಪನ ಮಲ್ಲೇಗೌಡನಿಗೆ. ಸರಪಣಿ ತಾನಾಗಿಯೇ ಹರಿದು ಹೋಯಿತು. ಮಕ್ಕಳು ಮಲಗಿದ ಸಮಯವನ್ನು ಸಾಧಿಸಿ ಊರ ಮುಂದಣ ಮಾರಿಯ ಪೂಜೆಗೆ ಹೋಗಿ ಪೂಜೆ ಮುಗಿಸಿ ಮೇಲೇಳುವ ವೇಳೆಗೆ ಕೆಂಪನ ಮಲ್ಲೇಗೌಡನ ತಲೆ ಸಿಡಿದು ಸಾವಿರ ಹೋಳಾಯಿತು."[೨೨]

ತೀ.ನ.ಶಂಕರನಾರಾಯಣರವರು ಉತ್ತರ ಸಂಪ್ರದಾಯದ ಕಥೆಯನ್ನು ಸಂಗ್ರಹಿಸಿದ್ದು, ಅದರಲ್ಲಿ ಜುಂಜಪ್ಪನ ಹುಟ್ಟಿನ ರೀತಿ ಹೀಗಿದೆ,

ಚಿತ್ರದೇವರ ಹಟ್ಟಿಯ ಏಳುಮಂದಿ ಗುರಿಕಾರ ಸೋದರರಲ್ಲಿ ಜುಂಜಪ್ಪನ ತಾತ ಒಬ್ಬ. 'ದೇವರ ದಯಮಾರ' ಕಿರಿಯವನು. ಎಲ್ಲ ಅಣ್ಣಂದಿರೂ ಮದುವೆಯಾಗಿದ್ದರೆ, ದೇವರ ದಯಮಾರ ಮದುವೆಯಾಗದೆ ದನಗಳನ್ನು ಕಾದುಕೊಂಡು ಕಾಡಿನಲ್ಲೇ ಇರುತ್ತಾನೆ. ಅಣ್ಣಂದಿರು ಮದುವೆಯಾಗಿ ಹನ್ನೆರಡು ವರ್ಷವಾಗಿದ್ದರೂ ಮಕ್ಕಳಿರಲಿಲ್ಲ. ವಂಶ ಬೆಳಗಲ್ಲೆಂಬ ಆಸೆಯಿಂದ ಕೊನೆಯ ತಮ್ಮನಾದ ದೇವರ ದಯಮಾರನಿಗೆ ತಂಗಿಯ ಮಗಳು ಕಂಬಕ್ಕನೊಡನೆ ಮದುವೆ ಮಾಡಲು ನಿರ್ಧರಿಸಿದರು. ಮದುವೆಯ ಸಂದರ್ಭದಲ್ಲಿ ಇವನಿಗೆ ದನಗಳ ನೆನಪಾಗಿ, ತನ್ನ 'ಬಾಕ'ನ್ನು ಮರೆತು ಅಲ್ಲೆ ಇಟ್ಟು ಓಡಿ ಹೋದ. ಬಾಕಿಗೆ ಕಂಬಕ್ಕನನ್ನು ಧಾರೆ ಎರೆದರು. ಕಂಬಕ್ಕ ಮಾವಂದಿರ, ಅತ್ತಿಗೆಯ ಸೇವೆ ಮಾಡಿಕೊಂಡಿದ್ದಳು. ಆದರೆ ಅವರ ಹಿಂಸೆ ತಾಳಲಾರದೆ, ಗಂಡನನ್ನು ಅರಸುತ್ತಾ ಕಾಡಿನ ದಾರಿ ಹಿಡಿದಳು. ದೇವರ ದಯಮಾರನನ್ನು ಕೂಡಿ ಗರ್ಭಿಣಿಯಾದಳು. ಗಂಡು ಮಗುವೊಂದು ಜನಿಸಿತು. ಅವರಿಗೆ ಬಡತನ. 'ಉಣ್ಣಲು ಊಟವಿಲ್ಲದೆ, ಕುಡಿಯಲು ನೀರಿಲ್ಲದೆ' ಬೇಸತ್ತು ಮಗುವನ್ನು ತೂಗಲಿ ಮರಕ್ಕೆ ಕಟ್ಟಿದ ತೊಟ್ಟಿಲಲ್ಲಿ ಮಲಗಿಸಿ, ಹೊಳೆಯಲ್ಲಿ ಬಿದ್ದು ಇಬ್ಬರೂ ತೀರಿ ಹೋದರು. ಪಾರ್ವತಿ ಪರಮೇಶ್ವರರೇ ಆ ಮಗುವಿನ ರಕ್ಷಕರಾದರು. ವಿಧವೆಯಾದ ಬಡಚಿತ್ತಮ್ಮ ಅಣ್ಣನ ಮನೆ ಸೇರಿದಳು. ಅವಳ ಕನಸಿನಲ್ಲಿ ಗೌರಸಂದ್ರದ ಮಾರಿ ಕಾಣಿಸಿಕೊಂಡು ನಿಮ್ಮ ಭಿನ್ನಕ್ಕೆ ಸೇರಿದ ಮಗು ಕಾಡಿನಲ್ಲಿದೆ ಎಂದು ಹೇಳಿದಳು. ಅಣ್ಣಂದಿರನ್ನು ಕರೆದುಕೊಂಡು ಕಾಡನ್ನೆಲ್ಲ ಸುತ್ತಿದರು ಮಗು ಸಿಗಲಿಲ್ಲ. ಕೊನೆಗೆ ಗೌರಸಂದ್ರದ ಮಾರಿಯೇ ಮಗುವಿರುವ ಜಾಗವನ್ನು ತೋರಿಸಿದಳು. ಮಗುವನ್ನು ತಂದು ಸಾಕಿದರು. ಅವರ ಬಡತನ ಬಯಲಾಯಿತು. ಎಲ್ಲರಿಗೂ ಮಕ್ಕಳಾದವು. ದೇವರ ದಯಮಾರ ಮಗುವಿಗೆ ಚಿತ್ರಹಿಂಸೆ ಕೊಡಲು ಪ್ರಾರಂಭವಾಯಿತು. ಮಗು ಹಟ್ಟಿಯನ್ನು ತೊರೆದು ಕಳುವಾರಹಳ್ಳಿಗೆ ಬಂದು ಆಲೇಗೌಡನನ್ನು ಆಶ್ರಯಿಸಿತು. ಇವನು ಬಂದ ಗಳಿಗೆಯಲ್ಲಿ ಆಲೇಗೌಡ ಶ್ರೀಮಂತನಾದ. ಏಳು ವರ್ಷಗಳಲ್ಲಿ ಆಲೇಗೌಡನ ಗೊಂತೆಲ್ಲ ಚಿನ್ನವಾಯಿತು. ಮಗುವಿನ ಇಚ್ಛೆ ಯಂತೆ ಏಳುಗೂಡಿನ ದನಗಳನ್ನು ಮಾಡಿಕೊಟ್ಟು, ಬಂಗಾರದ ಚಿಪ್ಪ ಕೊಡಲಿಯನ್ನು ಮಾಡಿಕೊಟ್ಟ. ಕೆಂಗುರಿ ಮಲ್ಲಪ್ಪ ದನಗಳ ಜೊತೆ ಕಾಡಿನಲ್ಲಿಯೇ ವಾಸ ಮಾಡತೊಡಗಿದ. ಕೆಂಗುರಿ ಮಲ್ಲಪ್ಪ ಬಂದ ಮೇಲೆ ಆಲೇಗೌಡನಿಗೆ 'ದೊಡ್ನಾಲ ಸಣ್ಣಾಲ' ಎಂಬ ಮಕ್ಕಳಾದರು.

ಕೆಂಗುರಿ ಮಲ್ಲಪ್ಪನ ವಿವಾಹ ಕಂಬಿಗೊಲ್ಲರ ಚಿನ್ನಮ್ಮನೊಂದಿಗೆ ನಡೆಯುತ್ತದೆ. ಕೆಂಗುರಿ ಮಲ್ಲಪ್ಪ ಹೆಂಡತಿಯನ್ನು ಬಿಟ್ಟು ತನ್ನ ಪಾಡಿಗೆ ಮೂಡಲಗಿರಿ ತಿಮ್ಮಪ್ಪನ ಕಾವಲಿನಲ್ಲಿ ದನಗಳನ್ನು ಮೇಯಿಸಿಕೊಂಡು ಕಾಲ ಕಳೆಯ ತೊಡಗಿದ. ಚಿನ್ನಮ್ಮ ಮೈನೆರೆದು ಹನ್ನೆರಡು ವರ್ಷವಾಯಿತು. ಮದುವೆಯಾಗಿ ಹನ್ನೆರಡು ವರ್ಷವಾಯಿತು. ಒಬ್ಬಳೇ ಒಂಟಿ ಜೀವನ ನಡೆಸುತ್ತಿದ್ದಾಗ "ಕರಿತಲೆಯ ಮಂಡೆಯವರು" ಚಿನ್ನಮ್ಮನನ್ನು ಬಂಜೆ ಎಂದು ಹಾಸ್ಯ ಮಾಡಿದರು. ಅವಳು ದುಃಖದಲ್ಲಿದ್ದಾಗ ಚಿನ್ನಮ್ಮನ ಕನಸಿನಲ್ಲಿ ಮನೆ ದೇವರಾದ ಚಿತ್ರದೇವರು ಬಂದು ಅವಳ ದುಃಖದ ಕಾರಣವೇನೆಂದು ವಿಚಾರಿಸಿದನು. ಅವಳು ತನ್ನ ಬಂಜೆತನವನ್ನು ನೀಗಿಸಬೇಕೆಂದು ಕೇಳಿಕೊಂಡಳು. ಅದು ತನ್ನಿಂದ ಸಾಧ್ಯವಿಲ್ಲವೆಂದೂ, ತಾನು ಅಸಹಾಯಕನೆಂದೂ ಹೇಳಿ

ಹೊರಟು ಹೋದ. ಈಶ್ವರನ ಮಗಳಾದ ಗೌರಸಂದ್ರದ ಮಾರಿ, ಚಿನ್ನಮ್ಮನ ಕನಸಿನಲ್ಲಿ ಬಂದು ಅವಳ ದುಃಖಕ್ಕೆ ಕಾರಣವನ್ನು ಕೇಳುತ್ತಾಳೆ. ಚಿನ್ನಮ್ಮನು ಸಂತಾನಬೇಕೆಂದು ಕೇಳಿಕೊಂಡಾಗ ಸಂತಾನ ಪಡೆದರೆ ಹಲವಾರು ಕಷ್ಟಗಳನ್ನು ಎದುರಿಸಬೇಕಾಗುವುದೆಂದು ಸಂತಾನ ಪಡೆಯದಿದ್ದರೆ ಸುಖವಾಗಿ ಇರಬಹುದೆಂದು ಗೌರಸಂದ್ರದ ಮಾರಿ ಹೇಳಿದಾಗ, ತನಗೆ ಏನೇ ಕಷ್ಟ ಬಂದರು ಅದನ್ನೆದುರಿಸಲು ತಾನು ಸಿದ್ಧಳೆಂದು ತನಗೆ ಸಂತಾನ ಬೇಕೆ ಬೇಕೆಂದೂ ಹಟ ಹಿಡಿದಳು. ನನಗೆ 'ಸಾವಿರ ವರ್ಷ ಬಾಳುವ ಸುಪುತ್ರ ಬೇಕಿಲ್ಲ. ಐನೂರು ವರ್ಷ ಬಾಳುವ ಸುಪುತ್ರ ಬೇಕಿಲ್ಲ; ಹದಿನಾರು ವರ್ಷಗಳ ಕಾಲ ನರಲೋಕ, ಸುರಲೋಕವನ್ನು ಒತ್ತಿ ಆಳುವ ಮಗ ಬೇಕು' ಎಂದಳು. ಗೌರಸಂದ್ರದ ಮಾರಕ್ಕ, ಚಿನ್ನಮ್ಮನ ಪರವಾಗಿ ಈಶ್ವರನನ್ನು ಬೇಡಿಕೊಂಡಳು. ಅವಳ ಒತ್ತಾಯಕ್ಕೆ ಮಣಿದು ಈಶ್ವರ ಅಂಥ ಸಂತಾನವನ್ನು ಕರುಣಿಸಲು ಒಪ್ಪಿದ.

ಈಶ್ವರ, ಮಗನಾದ ವೀರಭದ್ರನನ್ನೇ ಭೂಲೋಕಕ್ಕೆ ಕಳುಹಿಸಬೇಕೆಂದು ನಿರ್ಧಾರ ಮಾಡಿದ ವೀರಭದ್ರ ಪುಂಡನಾಗಿದ್ದು ತೊಂದರೆ ಕೊಡುತ್ತಿದ್ದುದನ್ನು ಗಮನಿಸಿ, ಅವನಿಗೆ ಚಿನ್ನಮ್ಮನ ನಡುಬೆನ್ನಿನಲ್ಲಿ ಹುಟ್ಟಿ ಹದಿನಾರು ವರ್ಷಗಳ ಕಾಲ ಜುಂಜಪ್ಪನೆಂಬ ಹೆಸರಿನಿಂದ ಪ್ರಸಿದ್ಧನಾಗಿ ಬಾಳಿ ಅನಂತರ ಕೈಲಾಸಕ್ಕೆ ಬರಬೇಕೆಂದು ಆಜ್ಞೆ ಮಾಡಿದ. ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸಿ ಕಾಡುಗೊಲ್ಲರ ಆರಾಧ್ಯ ದೈವವಾಗುವಂತೆ ಹೇಳಿ ಈಶ್ವರ ವೀರಭದ್ರನ ಎಲ್ಲಾ ಸತ್ವವನ್ನೂ ಒಂದು ಮಾವಿನ ಹಣ್ಣಿನಲ್ಲಿ ಅಡಕ ಮಾಡಿ ಅದನ್ನು ಗೌರಸಂದ್ರದ ಮಾರಕ್ಕನಿಗೆ ಕೊಟ್ಟು ಆ ಹಣ್ಣನ್ನು ಚಿನ್ನಮ್ಮನಿಗೆ ಕೊಡುವಂತೆ ತಿಳಿಸಿದ. ಅದರಂತೆ ಗೌರಸಂದ್ರದ ಮಾರಕ್ಕ ಆ ಹಣ್ಣನ್ನು ತಂದು ಚಿನ್ನಮ್ಮನಿಗೆ ಕೊಟ್ಟಳು. ಕೆಂಗುರಿ ಮಲ್ಲಪ್ಪನ ಬಳಿಗಿ ಹೋಗಿ ಅವನ ನೆರಳನ್ನು ಬೀಳಿಸಿಕೊಂಡು ಬಂದಳು. ಮನೆದೇವರಾದ ಚಿತ್ತಯ್ಯನನ್ನು ನೆನೆದು ಗೌರಸಂದ್ರದ ಮಾರಕ್ಕ ಕೊಟ್ಟ ಹಣ್ಣನ್ನು ತಿಂದಳು. ಗೌರಸಂದ್ರ ಮಾರಕ್ಕ ಆಶೀರ್ವದಿಸಿ, ಮುಂದಿನ ಕಷ್ಟಗಳನ್ನೆಲ್ಲಾ ಅವಳೇ ಅನುಭವಿಸಬೇಕೆಂದು ಹೇಳಿ ಹೊರಟು ಹೋದಳು. ನವಮಾಸ ತುಂಬಿದಾಗ ಸೋಮವಾರದ ದಿನ ಸೂರ್ಯ ಹುಟ್ಟುವ ಹೊತ್ತಿಗೆ ಸರಿಯಾಗಿ ಚಿನ್ನಮ್ಮನ ನಡುಬೆನ್ನು ಪಟಪಟನೆ ಒಡೆಯಿತು. ಆ ನಡುಬೆನ್ನಿನಿಂದ ಮಗು ಎಗರಿ ಹತ್ತಿರದಲ್ಲಿದ್ದ ಮೂಗುಹುತ್ತದ ಮೇಲೆ ಕುಳಿತುಕೊಂಡಿತು, ಆ ಮಗುವೇ ಜುಂಜಪ್ಪ. ಕೆಂಗುರಿ ಮಲ್ಲೇಗೌಡ ಮತ್ತು ಚಿನ್ನಮ್ಮ ಕೂಡಿದ್ದರಿಂದ ಗರ್ಭಿಣಿಯಾಗಿ ಸಾಮಾನ್ಯ ರೀತಿಯಂತೆ ಮಾರಣ್ಣ, ಮೈಲಣ್ಣ ಮತ್ತು ಮಾರಕ್ಕ ಎಂಬ ಮಕ್ಕಳು ಹುಟ್ಟುತ್ತಾರೆ. ಮೂರು ಜನ ಗಂಡು ಮಕ್ಕಳ ನಂತರ ಒಂದು ಹೆಣ್ಣು ಮಗುವಾದರೆ, ಆ ಮಗು ಮನೆಗೆ ಮಾರಿ ಎಂಬುದು ಅಂದಿನ ನಂಬಿಕೆಯಾಗಿತ್ತು. ಇದರಿಂದಾಗುವ ಮುಂದಿನ ಕಷ್ಟಗಳನ್ನು ಜುಂಜಪ್ಪ ತಾಯಿಗೆ ಹೇಳಿದರೂ ಆ ಮಗುವನ್ನು ಕೊಲ್ಲದೆ ಪ್ರೀತಿಯಿಂದ ಸಾಕಿದಳು. ಮಾರಿಹಬ್ಬದ ಸಂದರ್ಭದಲ್ಲಿ ಇದ್ದ ಒಂದು ವಿಶಿಷ್ಟ ಸಂಪ್ರದಾಯದಂತೆ ಕೆಂಗುರಿ ಮಲ್ಲೇಗೌಡ ತಾನೇ ಬಲಿಯಾಗಬೇಕಾದ ಪರಿಸ್ಥಿತಿ ಬರುತ್ತದೆ.

'ಚಲುವರಾಜು'ರವರು ಸಂಪಾದಿಸಿರುವ 'ಜುಂಜಪ್ಪ' ಮಹಾಕಾವ್ಯವನ್ನು ಬುಡಕಟ್ಟು ಮಹಾಕಾವ್ಯ ಮಾಲೆಯ ಅಡಿಯಲ್ಲಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದೆ. ಅದರಲ್ಲಿ ಜುಂಜಪ್ಪನ ಕುಲಕ್ಕೆ ಸಂಬಂಧಿಸಿದ ಮೂಲಕಥೆಯನ್ನು ಕಾವ್ಯದ 'ಗೊಲ್ಲರ ಕುಲದ ಹುಟ್ಟಿನ ಸಂದು'ವಿನಲ್ಲಿ ಪ್ರಸ್ತಾಪಿಸಲಾಗಿದೆ. ಅದರಂತೆ ಮಹಾಲಕ್ಷ್ಮಿಗೆ ಸಿಕ್ಕ ಮುತ್ತಿ ಎಂಬ ಮಗ ಹಾಗೂ ಒಬ್ಬ ಮಗಳು. ಗೋವರ್ಧನ ಬೆಟ್ಟದಲ್ಲಿನ ವಿಷ್ಣುವಿನ ಒಂದು ದನದಲ್ಲಿ

ಹುಟ್ಟಿದ ಸನ್ಮುತ್ತಿ ಎಂಬ ಮಗ ಹಾಗೂ ಒಬ್ಬಳು ಮಗಳು. ಇವರಿಬ್ಬರ ಮಕ್ಕಳನ್ನು ಬೆರಕೆ ಮಾಡಿ, ಅಂದರೆ ಮಹಾಲಕ್ಷ್ಮಿ ಮಗ ಸಿಕ್ಕಮುತ್ತಿಗೂ, ವಿಷ್ಣುವಿನ ದನದಲ್ಲಿ ಜನಿಸಿದ ಮಗಳಿಗೂ ಮದುವೆ ಮಾಡಲಾಗಿ ಅವರಿಗೆ ಹುಟ್ಟುವ 'ದ್ಯಾವುರ ದೈಮಾರ' ಎಂಬುವನು ಜುಂಜಪ್ಪನಿಗೆ ನಾಲ್ಕನೆ ತಲೆಯ ಅಜ್ಜ. ಈ ಮಹಾಕಾವ್ಯ ಕಾಡುಗೊಲ್ಲರ ಬದುಕಿನ ಚರಿತ್ರೆಯಾಗಿದೆ.

ಕಾವ್ಯದ ನಾಯಕನಾದ ಜುಂಜಪ್ಪನ ತಂದೆ ಕೆಂಗರು ಮಲ್ಲೇಗೌಡ, ಪಶುಪಾಲನೆಯನ್ನೇ ವೃತ್ತಿಯಾಗಿಸಿ ಕೊಂಡಿರುವ ಕಾಡುಗೊಲ್ಲ. ಪಶುಗಳ ಜೊತೆಯಲ್ಲಿಯೇ ಸದಾ ಕಾಲ ಕಳೆಯುತ್ತಾ ಇರುತ್ತಾನೆ. ಕಂಬೇರಗೊಲ್ಲರ ಸಿನ್ನಮ್ಮನೊಡನೆ ಇವನ ವಿವಾಹವಾಗುತ್ತದೆ. ಮದುವೆಯಾದ ಕೂಡಲೇ ಸಿನ್ನಮ್ಮನನ್ನು ಬಿಟ್ಟು ದನಗಳನ್ನು ಕರೆದುಕೊಂಡು ಕೊಂಕಿ ಜರಿಮಲೆ ಸೀಮೆಗೆ ಹೊರಟು ಹೋಗುತ್ತಾನೆ. ಮದುವೆಯಾಗಿ ಹನ್ನೆರಡು ವರ್ಷ ಕಳೆದರೂ ಗಂಡ ಮನೆಗೆ ಬರಲಿಲ್ಲ. ಊರಿನ ಜನ ಎಲ್ಲರೂ,

"ಬಂಜೆ ಮುಂಡೆ ಅವುಳಣ್ಣ
ಹೆಣ್ಣೆತ್ತವುಳಲ್ಲ
ಗಂಡು ಹೆತ್ತವುಳಲ್ಲ
ಬಂಜೆ ಅವುಳೆಂದು
ಊರುಗಳು ಜನುರೆಲ್ಲ
ಆಡುಕಂತರೆ ಸಿನ್ನಮ್ಮನ್ನಗಳಿಗಾಗೋ"

(ಜುಂಜಪ್ಪ, ಪುಟ ೧೩೧, ೧೩೨)

ಸಿನ್ನಮ್ಮನ ಅತ್ತೆಗೆಯರು ಸಹ 'ಎದ್ದು ಬಂಜೆ ಮಕ ನೋಡಬಾರದು, ಬಂಜೇರನ್ನ ಆದಿಶಕ್ತಿ ಹೊರೋದಿಲ್ಲ, ಭೂದೇವತೆ ಹೊರೋದಿಲ್ಲ, ಆದಿಶಕ್ತಿ ಕಾಪಾಡಿದಿಲ್ಲ' ಎಂದು ಹೀಯಾಳಿಸುತ್ತಾರೆ. ಒಮ್ಮೆ ಭಿಕ್ಷೆಗೆ ಬಂದಿದ್ದಂತಹ ಜೋಗಪ್ಪನು ಸಹ "ಬಂಜೆ ಕೈಯ ಭಿಕ್ಷೆ ನಾನು ತಗಮದಿಲ್ಲ" ಎಂದು ಹೇಳಿ ಸ್ವೀಕರಿಸದೆ ಹೊರಟು ಹೋಗುತ್ತಾರೆ.

ಹೀಗೆ ಸಮಾಜದಲ್ಲಿ ಹೆಣ್ಣು ಬಂಜೆ ಎಂಬ ಕಾರಣದಿಂದಾಗಿ ಅನಾದರಕ್ಕೆ ಒಳಗಾಗುತ್ತಾಳೆ. ಮನೆ ಮಂದಿ ಅವಳನ್ನು ನಿಕೃಷ್ಟವಾಗಿ ಕಂಡು ಕಿರುಕುಳ ನೀಡುತ್ತಾರೆ. "ಇದು ಸ್ಪಷ್ಟವಾಗಿ ವೇದ್ಯವಾಗುವುದು ಜನಪದ ಸಾಹಿತ್ಯದಲ್ಲಿ ಮಕ್ಕಳಿಲ್ಲದ ಬಂಜೆ ಹೆಣ್ಣುಗಳ ಗೋಳಿನಲ್ಲಿ. ಮಕ್ಕಳು ಬೇಕೆಂಬುದು ವೈಯಕ್ತಿಕ ಅಭೀಪ್ಸೆಯಷ್ಟೇ ಅಲ್ಲ ಅದು ನಮ್ಮ ಧಾರ್ಮಿಕ ಸಾಮಾಜಿಕ ನಂಬಿಕೆಯೂ ಹೌದು. ಬಂಜೆತನ ಎಂಬುದು ಜನ್ಮಜನ್ಮಾಂತರದ ಪಾಪದ ಫಲ ಎಂಬ ಹಿಂದೂ ಧರ್ಮದ ನಂಬಿಕೆಗನುಗುಣವಾಗಿ ಜನಪದ ಸ್ತ್ರೀಯರ ಬದುಕು ರೂಪುಗೊಂಡಿದೆ. ಹೆಣ್ಣಿನ ಬದುಕಿನಲ್ಲಿ ಬಂಜೆತನದ ದುಃಖಕ್ಕೆ ಮಿಗಿಲಾದ ದುಃಖ ಇನ್ನೊಂದಿಲ್ಲ. ಬಂಜೆಯಾದವಳು ಈ ಸಮಾಜ ಮತ್ತು ಕುಟುಂಬ ವ್ಯವಸ್ಥೆಯಲ್ಲಿ ಅನುಭವಿಸುವ ಅವಮಾನ ಬಹಿಷ್ಕಾರಗಳನ್ನೂ ಬಂಜೆಯ ದಾರುಣ ದುಃಖವನ್ನೂ ಜನಪದ ಸಾಹಿತ್ಯ ವಿಧವಿಧವಾಗಿ ಅಭಿವ್ಯಕ್ತಿಸಿದೆ."[೨೮]

ಸಿನ್ನಮ್ಮನು ಎಲ್ಲರಿಂದಲೂ ಬಂಜೆ ಎಂಬ ಹೀಯಾಳಿಕೆಗೆ ಒಳಗಾಗಿ ಆ ದುಃಖವನ್ನು ತಾಳಲಾರದೆ ಶಿವನನ್ನು ನೆನೆಸಿಕೊಂಡು ಕಾಡಿನಲ್ಲಿನ ಮಡುವಿಗೆ ಬಿದ್ದು ಪ್ರಾಣವನ್ನು ಕಳೆದುಕೊಳ್ಳಲು ಹೋಗುತ್ತಾಳೆ. ಆದರೆ ಸತ್ಯವಂತೆಗೆ ಅಪಾಯ ಮಾಡಬಾರದೆಂದೂ ಗಂಗಮ್ಮ ತಾಯಿ ಇಂಗಿ ಹೋಗುತ್ತಾಳೆ. ಹೀಗೆ ಯಾವ ತೆರನಾಗಿಯೂ ಪ್ರಾಣ ಕಳೆದುಕೊಳ್ಳಲು ಸಾಧ್ಯವಾಗದೆ ಇರುವಾಗ, ಗೌರಸಂದ್ರದ ಮಾರಮ್ಮ ಸಿನ್ನಮ್ಮನ ಸಹಾಯಕ್ಕೆ ಬರುತ್ತಾಳೆ. ಗೌರಸಂದ್ರನ ಮಾರಮ್ಮ ನೀನು ಪತಿವ್ರತೆ ನಿನಗೆ ಕೈಲಾಸದ ಪದವಿ ಇದೆ. ಮಕ್ಕಳಫಲ ಬೇಡವೆಂದರೂ ಕೇಳದೆ ಇದ್ದಾಗ, ಗೌರಸಂದ್ರದ ಮಾರಮ್ಮ ಸಿನ್ನಮ್ಮನಿಗೆ ಈಶ್ವರನ ಕುರಿತು ತಪಸ್ಸು ಮಾಡಲು ಹೇಳಿದಳು. ತಪಸ್ಸು ಮಾಡಿದಾಗ ಪಾರ್ವತಿ ಪರಮೇಶ್ವರರು ನರಲೋಕಕ್ಕೆ ಬರುತ್ತಾರೆ. 'ನನಗೆ ಮಕ್ಕಳ ಸಂತಾನ ಕೊಡು ಸ್ವಾಮಿ ನೀನು ಕೊಡದಿದ್ದರೆ ನಾಲಿಗೆ ಇರಿದುಕೊಂಡು ಪ್ರಾಣ ಬಿಡುತೀನಿ' ಎನ್ನುತ್ತಾಳೆ.

"ಆಗಲೆ ಹುಟ್ಟುಲಿ ಸ್ವಾಮಿ
ಈಗಲೆ ಸಾಯಲಿ ಸ್ವಾಮಿ
ಬಂಜೆ ಎಂಬ ಸೊಲ್ಲ
ಇಂಗು ಸಯ್ಯೋ"

ಎಂದು ಬೇಡಿದರೆ ಸಿನ್ನಮ್ಮ, ಈಶ್ವರ ಆಗ,

"ಅತ್ತಿ ಹೂವಿನಂಗೆ
ನೆತ್ತೀಗೂ ನೆರಿ ಬಂದಾವೆ
ಇನ್ನೂ ಬೇಕೇನೆ ಸಿನ್ನಮ್ಮ
ಮಕ್ಕಳ ಫಲುಗಳೂ"

(ಜುಂಜಪ್ಪ, ಪುಟ ೧೩೫)

ಎಂದರೆ,

"ಸಂಜೆಲೆ ಹುಟ್ಟಲಿ ಸ್ವಾಮಿ
ಮುಂಜಲೆ ಸಾಯಿಲಿ ಸ್ವಾಮಿ
ಬಂಜೆಂಬ ಸೊಲ್ಲ ಇಂಗುಸಯ್ಯೋ"

(ಜುಂಜಪ್ಪ, ಪುಟ ೧೩೫)

ಎನ್ನತ್ತಾಳೆ.

ಇಲ್ಲಿ ಸಿನ್ನಮ್ಮನ ತಾಯ್ತನದ ಹಂಬಲ ಎಷ್ಟಿದೇ ಎಂದರೆ 'ಸಂಜೆ ಹುಟ್ಟಿ, ಮುಂಜಾನೆ ಸಾಯಲಿ.' ಒಟ್ಟಿನಲ್ಲಿ 'ಬಂಜೆ'ಎಂಬ ಸೊಲ್ಲ ಹಿಂಗಿಸಬೇಕು ಎಂಬುದನ್ನು ಗಮನಿಸಿದರೆ, ಬಂಜೆಯ ದುಃಖ, ವೇದನೆ, ತುಡಿತ ಎಷ್ಟೆಂಬುದನ್ನು ಕಾಣಬಹುದು.

ಈಶ್ವರನು, ಸಿನ್ನಮ್ಮನಿಗೆ ಮಕ್ಕಳನ್ನು ಪಡೆದರೆ ಮುಂದೆ ಬರಬಹುದಾದ ಕಷ್ಟಗಳನ್ನು ಹೇಳುತ್ತಾನೆ.

"ಗಂಡ ಮಕ್ಕಳು ಹುಟ್ಟಿದು
ಮೂರು ವರುಷಾಕ್ಕೊಂದು
ಹೆಣ್ಣುಮಗುವು ಹುಟ್ಟುತ್ತೈತೆ
ಹೆಣ್ಣುಮಗು ಹುಟ್ಟಿದು
ಮೂರು ವರುಷಕು ನಿನ್ನ
ಗಂಡುಗು ಮರುಣವಮ್ಮ
ಗಂಡ ಸತ್ತು ಮೂರು ವರುಷಕೆ
ಅಮ್ಮ ಭಂಗ ಬಡತನ ಬರುತ್ತೈತೆ"

(ಜುಂಜಪ್ಪ, ಪುಟ ೧೪೦)

ಎಂದು ಹೇಳಿ, ಮುಂದೆ ಬರಬಹುದಾದ ಕಷ್ಟಗಳನ್ನು ತಿಳಿಸಿದಾಗ್ಯೂ ಮಕ್ಕಳ ಭಾಗ್ಯ ಬೇಕೆನ್ನುತ್ತಾಳೆ.

ಕೊನೆಗೆ ಶಂಕರನು 'ಮೂರು ಗಂಡುಗಳ ಹಿಂದೆ ಒಂದು ಹೆಣ್ಣು ಹುಟ್ಲಿ' ಎಂದು ಆಶೀರ್ವಾದಿಸಿದ. ಶಿವನು ವೀರಭದ್ರನನ್ನು ಕರೆದು ಭೂಲೋಕದಲ್ಲಿ ಸಿನ್ನಮ್ಮನ ಗರ್ಭದಲ್ಲಿ ಜುಂಜಪ್ಪನ ಅವತಾರ ಎತ್ತಿ ಹುಟ್ಟಬೇಕು ಎನ್ನಲಾಗಿ ವೀರಭದ್ರ ಅದಕ್ಕೆ ಒಪ್ಪದೆ ನರಮನುಷ್ಯರ ಗರ್ಭದಲ್ಲಿ ಹುಟ್ಟಿದರೆ ಸೂತಕ ಎನ್ನುತ್ತಾನೆ. ಆಗ ಪರಮೇಶ್ವರ ಬಲಗಡೆ ಭುಜದಲ್ಲಿ ಬಂಗಾರದ ಹಲ್ಲಿ ಮಾಡಿ ನಿನ್ನ ಬಿಡುತೀನಪ್ಪ ಒಂಬತ್ತು ತಿಂಗಳು ಯಾರಿಗೂ ಕಾಣಿಸದಂತೆ ಬಲಗಡೆ ಭುಜದಲ್ಲಿ ಬಂಗಾರದ ಹಲ್ಲಿಯಾಗಿದ್ದು ನಂತರ ನೆಲದ ಮೇಲೆ ಪಟಪಟನೆ ಬಿದ್ದು ಮಗುವಾಗಿ, ಕಾರ್‌ಕಾರ್‌ನೆ ಅತ್ತುಬಿಡಪ್ಪ ಎಂದು ಹೇಳುತ್ತಾನೆ. ಪಾರ್ವತಿ ದೇವಿಯು ನರಲೋಕಕ್ಕೆ ಹೋಗುತ್ತಿರುವ ಮಗನಿಗೆ ತೊಂದರೆ ಉಂಟಾಗದಿರಲಿ ಎಂದು ನೂರಾರು ಬಿರುದು ಬಾವಲಿಗಳನ್ನು, ಅಸ್ತ್ರಗಳನ್ನು ನೀಡಿ ಈರೇಳು ಲೋಕಕ್ಕೆ ದೈವನಾಗಿ ಬಾಳೆಂದು ಹರಸುತ್ತಾಳೆ. ಭೂಲೋಕಕ್ಕೆ ವೀರಭದ್ರನನ್ನು ಕಳುಹಿಸುವಾಗ ಈಶ್ವರ ಕೆಲವೊಂದು ಷರತ್ತನ್ನು ವಿಧಿಸುತ್ತಾನೆ. ನೀನು ಹುಟ್ಟಿದ ಹದಿನಾರು ವರ್ಷಕ್ಕೆ ಏಳು ಲಕ್ಷದ ದನಗಳ ಕಾಯುತೀಯ, ಆ ಏಳು ಲಕ್ಷದ ದನಗಳಲ್ಲಿ ಒಂದೇ ಒಂದು ದನ ಕೊಂದಿದ್ದೀಯ ಅಂದ್ರೆ, ನೀನು ಏಳು ಜಲುಮದಲ್ಲಿ ಹುಟ್ಟಬೇಕು, ಏಳು ಜನುಮದಲ್ಲಿ ಸಾಯಬೇಕು. ಒಬ್ಬ ಸ್ತ್ರೀಯನ್ನು ಕೊಂದ್ರು ಏಳು ಜನ್ಮದಲ್ಲಿ ಹುಟ್ಟಬೇಕು, ಏಳು ಜನ್ಮದಲ್ಲಿ ಸಾಯಬೇಕು. ಸ್ತ್ರೀ ಹತ್ಯೆ, ಶಿಶುಹತ್ಯೆ, ಗೋಹತ್ಯೆ ಏನು ಮಾಡಕಿಲ್ಲ ಎಂದು ಹೇಳಿ, ಪ್ರಪಂಚದ ಮೇಲೆ ಜುಂಜಪ್ಪ ಎನ್ನುವ ದೇವರಾಗಿ ಪೂಜೆ ಮಾಡಿಸಿಕೊಳ್ಳುವೆ ಎಂದ ಪರಮೇಶ್ವರ.

ಶಿವಪಾರ್ವತಿಯರು ಜುಂಜಪ್ಪನನ್ನು ಬಂಗಾರದ ಹಲ್ಲಿ ಮಾಡಿ ಕೈಯೊಳಗೆ ಹಿಡಿದುಕೊಂಡು ರಥಾರೂಢರಾಗಿ ರಾಯನ ಕಳುವರಳ್ಳಿಯ ಆಲೇಗೌಡನ ಮನೆಯ ಮೇಲೆ ರಥ ಇಳಿಸಿದ ಪರಮೇಶ್ವರ.

"ತಾಯಿನೇ ಸಿನ್ನಮ್ಮನ ಗರ್ಭಕು
ಇಬ್ಬರು ತಮ್ಮೊಗಳನಾಕಿದುನಣ್ಣಾ
ಜುಂಜಪ್ಪನ್ನ ಬಲಗಡೆ ಭುಜಕೆ
ಬಂಗಾರದ ಹಲ್ಲಿ ಮಾಡಿ

ಕಚ್ಚಿದುನೊ ಸ್ವಾಮಿ ಗಳಿಗಾಗೋ
ಅಂತೆಂಬ ಗಳಿಗೆವೊಳುಗೆ
ಮೂರೇಟು
ಬೆತ್ತದೊಳಗೆ ಸಿನ್ನಮ್ಮನ್ನ
ಮಡುದನೋ ಪರಮೇಶ್ವರನು"

(ಜುಂಜಪ್ಪ, ಪುಟ ೧೪೯)

ಅನಂತರ ಶಿವಪಾರ್ವತಿಯರು ಕೈಲಾಸಕ್ಕೆ ಹೊರಟು ಹೋದರು. ಪರಮೇಶ್ವರ ಹೀಗೆ ತನ್ನ ಭಕ್ತಳಾದ ಸಿನ್ನಮ್ಮನಿಗೆ ಮಕ್ಕಳ ಫಲವನ್ನು ಕರುಣಿಸುತ್ತಾನೆ. ಸಿನ್ನಮ್ಮ ಗರ್ಭಿಣಿಯಾದಳು. ನವಮಾಸ ತುಂಬಿತು. ಶನಿವಾರದಂದು ಜುಂಜಪ್ಪ, ತಾಯಿಗೆ ಬೆನ್ನು ತಟ್ಟಿ, ತಾಯಿಯ ಹೊಟ್ಟೆ ಒಳಗಿನಿಂದಲೇ ಹೆದರಬೇಡ ಸಿನ್ನಮ್ಮ ನಾನು ಊರು ಮನಿಯೊಳಗೆ ಜನನವಾಗುವುದಿಲ್ಲ. ಕಳುವಾರಳ್ಳಿ ದಿನ್ನೆವೊಳಗೆ ಬಿದಿರಿನ ದಬ್ಬೆ ತೆಗೆದು ಎರಡು ಗುಡಿಸಲು ಕಟ್ಟುವಂತೆ ಹೇಳಿದ. "ಇಲ್ಲಿ ಜುಂಜಪ್ಪ ತಾಯಿಯ ಗರ್ಭದಲ್ಲಿದ್ದಾಗಲೇ ಮಾತನಾಡಿ ಕಾರಣಿಕ ಶಿಶುವೆಂಬ ಹಾಗೆ ವರ್ಣಿತವಾಗಿದ್ದಾನೆ."[೫] ಅದರಂತೆ ಗುಡಿಸಲನ್ನು ಕಟ್ಟಲಾಯಿತು. ಶಿರಾದ ಪೇಟೆಯಿಂದ ಆಲೇಗೌಡನು ಸೊಸೆಯ ಸಹಾಯಕ್ಕೆಂದು ತಿಮ್ಮೋಜಮ್ಮ ಎಂಬ ಸೂಲಗಿತ್ತಿಯ ಕರೆತರುತ್ತಾನೆ. ಜುಂಜಪ್ಪ ತಾಯಿಯ ಹೊಟ್ಟೆ ಒಳಗಿನಿಂದ ಮಾತನಾಡುತ್ತಾನೆ. 'ಊರ ಮನುಷ್ಯನ ನೆರಳು ನನಗೆ ಸುಳಿಯುವ ಹಾಗಿಲ್ಲ. ಆ ಸೂಲಗಿತ್ತಿ ಕೈ ಎಷ್ಟು ಜನರನ್ನು ಮುಟ್ಟಿದೆಯೋ ಯಾರ್ಯಾರಿಗೆ ಹೆರಿಗೆ ಮಾಡ್ಯವುಳೋ ಅಂಥ ಕೈಯೊಳು ಬಂದು ನನ್ನ ಮುಟ್ಟಿ ಬತಿಗೆಡಿಸಾಳಮ್ಮ' ಎಂದಾಗ ಸಿನ್ನಮ್ಮ ಸೂಲಗಿತ್ತಿಗೆ ಹೊಟ್ಟೆಯೊಳಗೆ ದೆವ್ವವೋ, ಪೀಡೆಯೋ, ಪಿಶಾಚಿಯೋ, ಬುಡುಕಂಬತ್ತೆತಮ್ಮ ಅಂಟು ಮುಂಟಾಗುತ್ತೆಂದು ನೀನು ಒಳಗೆ ಬರಬೇಡ ಎಂದಳು. ಅದನ್ನು ಲೆಕ್ಕಿಸದೆ ಸೂಲಗಿತ್ತಿ ಗುಡಿಸಲು ಒಳಕ್ಕೆ ನುಗ್ಗುತ್ತಾಳೆ. ಆಗ ಸೂಲಗಿತ್ತಿಗೆ ಇದ್ದಕ್ಕಿದ್ದಂತೆ ತಡೆಯಲಾರದ ಹೊಟ್ಟೆ ನೋವುಂಟಾಯಿತು. ಇದು ಪೀಡೆ ಪಿಶಾಚಿಯಲ್ಲ. ಯಾವುದೋ ದೇವರು ನಿನ್ನ ಹೊಟ್ಟೆಯಲ್ಲಿ ಜನಿಸುತ್ತದೆ. ನಿನ್ನ ಮಾತನ್ನು ಉಲ್ಲಂಘಿಸಿ ನಾನು ಒಳಗಡೆಗೆ ಬಂದಿದ್ದು ತಪ್ಪಾಯಿತು. ನನ್ನ ನೋವನ್ನು ತಪ್ಪಿಸು ಎಂದು ತಪ್ಪಿನ ಕಾಣಿಕೆ ಕಟ್ಟಿದಳು. ಅವಳ ನೋವು ಇಲ್ಲವಾಯಿತು. ತನ್ನ ಊರ ದಾರಿ ಹಿಡಿದಳು. ಸೋಮವಾರದ ದಿನ ಜುಂಜಪ್ಪ ಸಿನ್ನಮ್ಮನ ಬಲಗಡೆ ಭುಜವನ್ನು ತಟ್ಟಿದ. ಜುಂಜಪ್ಪ ಭೂಮಿಗೆ ಬರುವುದಕ್ಕಿಂತ ಮುಂಚೆ,

'ಹಾವಿನ ಮಿಂಚೋ ಮಿಂಚಿದಂಗೆ
ತಳಕ್ಕನು ಹೊಳುದು ಸ್ವಾಮಿ
ಬಂಗಾರದ ಹಲ್ಲಿಯಾಗಿ
ಪಟಪಟ ನೊಡುದಾನು
ಸಿನ್ನಮ್ಮನು
ಬಲಗಡೆ ಭುಜದೊಳಗೆ ಜುಂಜಪ್ಪಗಳಿಗಾಗೋ'
'ಪಟ್ಟನೆ ಒಡೆದು ನೆಲದ ಮೇಲೆ ಬಿದ್ದೊ ಮಗುವಾಗಿ
ಕಾರುಕಾರೆಂದತ್ತೆನೊ'

(ಜುಂಜಪ್ಪ, ಪುಟ ೧೫೫)

ತಾಯಿ ಒಂದು ತೊಟ್ಟು ಹಾಲು ಕುಡಿಸಿದುದರಿಂದ ಜುಂಜಪ್ಪ ಸಿನ್ನಮ್ಮನ ಮಗನಾದ, ಮೂರು ತಿಂಗಳವರೆಗೆ ನನ್ನ ಮುಟ್ಟಬೇಡ ಎಂದು ಸಿನ್ನಮ್ಮನಿಗೆ ಹೇಳಿದ.

"ಆ ಕಡೆ ಗುಡುಸಿಲಿಗೆ ಹೋಗೇವುಳೊ ಸಿನ್ನಮ್ಮ
ಹೋಗುತ್ತಿದ್ದಂಗೆ
ಮಾರಣ್ಣ ಮೈಲಣ್ಣಂಬವೆರಡು
ಜವುಳಿ ಮಕ್ಕಳುಟ್ಟಿದುವಣ್ಣ"

(ಜುಂಜಪ್ಪ, ಪುಟ ೧೫೫)

"ಇಲ್ಲಿ ಸಿನ್ನಮ್ಮ ಪತಿವ್ರತೆಯಾಗಿರುವುದರಿಂದ ಪ್ರಾಣ ಕಳೆಬುಕೊಳ್ಳಲು ಹೋದರೂ ಗಂಗೆಯೇ ಬರಿದಾಗಿ ಹೋಗುವುದು ಹಾಗೂ ಪ್ರಕೃತಿ ಸಹಜ ರೀತಿಯಲ್ಲದೆ ದೇವರ ವರದಿಂದ ಹುಟ್ಟುವವನು ಜುಂಜಪ್ಪ. ಸಿನ್ನಮ್ಮನಿಗೆ ಮಾರಮ್ಮನಂತಹ ಊರದೇವತೆಗಳು ಸಹಾಯ ಮಾಡುವುದು. ಸಿನ್ನಮ್ಮನ ಹೊಟ್ಟೆಯಲ್ಲಿ ಹುಟ್ಟುತ್ತಿರುವವನು ಸಾಮಾನ್ಯನಲ್ಲ ಅವನು ದೇವತೆ ಎನ್ನುವುದನ್ನು ಸಾಬೀತುಪಡಿಸುವುದು, ಸೂಲಗಿತ್ತಿಗೆ ಉಂಟಾಗುವ ನೋವಿನಿಂದ, ಜುಂಜಪ್ಪ ಸಾಮಾನ್ಯ ಮಾನವನಂತೆ ಸಹಜವಾಗಿ ಹುಟ್ಟದೆ ಸಿನ್ನಮ್ಮನ ಭುಜದಿಂದ ಹುಟ್ಟಿದ ಎನ್ನುವಲ್ಲಿ ದೈವಿಕತೆಯ ಅಂಶವನ್ನು ಜಾನಪದರು ಗುರುತಿಸಿಕೊಂಡ ಮಾಧ್ಯಮವೂ ಹೌದು."[೩೦]

ಮೂರು ಪಾಠಗಳಲ್ಲಿಯೂ ಜುಂಜಪ್ಪನ ಹುಟ್ಟಿನಲ್ಲಿ ಕಂಡು ಬರುವ ಸಮಾನವಾದ ಒಂದು ಅಂಶವೇನೆಂದರೆ ಜುಂಜಪ್ಪ ತಾಯಿಯ ಗರ್ಭದಿಂದ ಜನಿಸದೆ ತಾಯಿಯ ಬೆನ್ನಿನಲ್ಲಿ ಜನಿಸುವುದು ಇವನ ಹುಟ್ಟು ಸಾಮಾನ್ಯ ರೀತಿಯಲ್ಲಿ ಆಗಿಲ್ಲದಿರುವುದರಿಂದ ಇವನೊಬ್ಬ ದೈವ. ಮಹಾಪುರುಷ ಎಂಬುದು ಜನಪದರಿಗೆ ತಿಳಿಯುತ್ತದೆ. ಇದರಿಂದ ಅವರ ವ್ಯಕ್ತಿತ್ವಕ್ಕೆ ಹುಟ್ಟಿನಿಂದಲೇ ಒಂದು ಅಲೌಕಿಕ ಸ್ಪರ್ಶ ಕೊಡುವ ಉದ್ದೇಶ ಜನಪದ ಕವಿಯದು.

"ಮೌಖಿಕ ಪುರಾಣಗಳೆಲ್ಲವೂ ಒಂದು ಸಮುದಾಯದ ಜನಾಂಗದ ನಾಯಕರನ್ನು ಶಿಷ್ಟ ಸಂಸ್ಕೃತಿಯ ದೇವ-ದೇವತೆಗಳೊಡನೆ ಸಮೀಕರಿಸುತ್ತಾರೆ. ಮತ್ತು ಇಂತಹ ನಾಯಕರು ಅಯೋನಿಜರಾಗಿ ಜನ್ಮ ತಾಳುತ್ತಾ ರಲ್ಲದೆ, ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ ಮುಂತಾದ ಹೆಚ್ಚಿನ ನಾಯಕರು ಸ್ತ್ರೀ ಸಂಘದಿಂದ ದೂರ ವಿದ್ದು, ಆಜನ್ಮ ಬ್ರಹ್ಮಚಾರಿಗಳಾಗಿರುತ್ತಾರೆ. ಪ್ರಾಯಃ ಒಂಗು ಸಮುದಾಯದ ಹೊಣೆ ಹೊತ್ತನಾಯಕರು ಕೌಟುಂಬಿಕ ಬಂಧನಗಳಿಂದ ಮುಕ್ತರಾಗಿದ್ದಾಗ ಮಾತ್ರ ಅವರು ತಮ್ಮ ಸಾಮೂಹಿಕ ಜವಾಬ್ದಾರಿಯನ್ನು ನಿರ್ವಹಿಸಬಹುದು ಎಂಬ ನಿಲುವು ಇಲ್ಲಿ ಕೆಲಸ ಮಾಡುತ್ತಿರಬಹುದು ಅಥವಾ ದೈವಿಕಾಂಶದ ಸ್ತ್ರೀ ಸಂಗಸಲ್ಲ ಎಂಬ ಲೈಂಗಿಕತೆಯನ್ನು ಕುರಿತ ಸಂಕೋಚವು ಇಲ್ಲಿ ಪ್ರತಿಫಲಿತವಾಗುತ್ತಿರಬಹುದು."[೩೧]

ಜುಂಜಪ್ಪನ ತಾತ ಆಲೇಗೌಡ ರಾಯನಕಳುವಾರಳ್ಳಿ ಪೇಟೆಗೆ ಬಂದು ಮ್ಯಾದರು ಚನ್ನಣ್ಣನಿಗೆ ಮೂರು ಅವಳಿ ತೊಟ್ಲು ಹೆಣೆದು ಕೊಡುವಂತೆ ಹೇಳಿದ. ಬೆಟ್ಟದಿಂದ ತಂದ 'ಮೂರು ಜಣಿಗೆ' ಬಿದುರಿನಿಂದ ಹೆಣೆಯಲು ಹೋದರೆ ಒಂದಕ್ಕೊಂದು ಕೂಡಿಕೊಳ್ಳದೆ ಬಿಟ್ಟು ಹೋಗುತ್ತಿತ್ತು. ಇದಕ್ಕೆ ಕಾರಣವೇನಿರಬಹುದು ಎಂದು ಚಿಂತಿಸುತ್ತಾ, ಕಾಲಲ್ಲಿ ತುಣುಕಂಡು ತೊಟ್ಟಲು ಹೆಣೆಯಲು ಹೋದಾಗ 'ಎರಡು ಕಣ್ಣು ಆಗಲೆ ಕಾಣದಂಗಾದವು'

ಇದಕ್ಕೆ ಕಾರಣವೇನೆಂದು ಚಿಂತಿಸುತ್ತಿರುವಾಗ ಗೌರಸಂದ್ರದ ಮಾರಮ್ಮ ಕೊರವಂಜಿಯ ವೇಷ ಧರಿಸಿ ಬಂದು 'ನೀನು ಮನೆ ಹೊರಗೆ ಉಚ್ಚೆ ಉಗುಳಿನೊಳಗೆ ಸೂತಕ ಸಂಬಂಧದಲ್ಲಿ ಹೆಣೆದರೆ ತೊಟ್ಟಿಲು ಬರುವುದಿಲ್ಲ. ಇದು ದೇವರ ತೊಟ್ಟಿಲು. ನೀನು ಒಂದು ಹೊತ್ತು ಉಪವಾಸದಿಂದ ತಣ್ಣೀರು ತಡಿ ಬಟ್ಟೆವೊಳಗೆ ಬೆಟ್ಟಕ್ಕೆ ಹೋಗಬೇಕು. ಬಿದಿರು ಕಡಿದು ಅಲ್ಲೆ ದಬ್ಬೆ ತೆಗೆದು, ಒಬ್ಬರ ನೆರಳು ಸಹ ಬೀಳದಂತೆ, ತೊಟ್ಟಿಲು ಹೆಣೆದರೆ ತೊಟ್ಟಿಲು' ಆಗುತ್ತದೆ ಎನ್ನುತ್ತಾಳೆ. ಬಾಯಿಗೆ ಬಟ್ಟೆ ಕಟ್ಟಿಕೊಂಡು ತೊಟ್ಟಿಲು ಎತ್ತಿಕೊಂಡು ಬಾ 'ನನಗೆ ಕಣ್ಣು ಕಾಣುವಂಗೆ ಮಾಡಪ್ಪ' ಎಂದು ಮೀಸಲು ಕಟ್ಟಿಕೊಳ್ಳಲು ಹೇಳಿದಳು. ಗೌರಸಂದ್ರದ ಮಾರಮ್ಮ ಹೇಳಿದಂತೆ ತೊಟ್ಟಿಲನ್ನು ಹೆಣೆದು ತಂದು ಕೊಡುತ್ತಾನೆ. ಜುಂಜಪ್ಪ ತಾಯಿಗೆ ನಮ್ಮ ಮೂರು ಜನರನ್ನೂ ಜರಿಮಲೆ ಸೀಮೆಯೊಳಗೆ ಸಿತ್ತುರುದೇವುರ ಹಟ್ಟಿಗೆ ಜನಿಗೆಗೆ ಕರೆದುಕೊಂಡು ಹೋಗಿ ಜನಿಗೆ ಹಾಕಿಸಿ ನಮಗೆ ನಾಮಕರಣ ಮಾಡಿಕೊಂಡು ಬರುವಂತೆ ಹೇಳಿದ. ಅದರಂತೆಯೇ ಸಿತ್ತುರುದೇವುರಟ್ಟಿಗೆ ಹೋದರು. ಹಟ್ಟಿ ಉದಿ ಬಾಗಲಲ್ಲಿ ಸಿನ್ನಮ್ಮನು ಮಕ್ಕಳನ್ನು ಕುಂಡ್ರಿಸಿ, ಆಲೇಗೌಡ ಹಟ್ಟಿ ಮನೆಗೌಡನ ಹತ್ತಿರ ಹೋಗಿ, ನನ್ನ ಸೊಸೆ ಮೂರು ಜನ ಗಂಡು ಮಕ್ಕಳನ್ನು ಹಡೆದಿದ್ದಾಳೆ, ಜನಿಗೆಗೆ ಬಂದಿದ್ದೇವೆ. ಒಳಗೆ ಕರೆದುಕೊಂಡು ಸೂತಕ ಕಳೆದು ಜನಿಗೆ ಹಾಕಿ, ಮಕ್ಕಳಿಗೆ ನಾಮಕರಣ ಮಾಡಬೇಕು ಎಂದು ಕೇಳಿಕೊಂಡಾಗ 'ನಿನ್ ಸೊಸೆ ಅದೆಂಗಯ್ಯ ಮಕ್ಕಳನ್ನು ಹಡದ್ಲು, ನಮ್ಮ ಮಗ ಕೆಂಗರು ಮಲ್ಲೇಗೌಡ ನಿನ್ ಸೊಸೆ ಮಕ ನೋಡದಂತೆ, ಹೊಲದೊಳಗೆ ಸೇರಕೊಂಡ್ ಬಿಟ್ಟವ್ನೆ' ಎಂದು ಕೇಳುತ್ತಾನೆ. 'ಊರಗೌಡ ನನ್ನ ಸೊಸೆ ಪತಿವ್ರತೆ, ಪರಮೇಶ್ವರನ ವರದಿಂದ ಮಕ್ಕಳನ್ನು ಪಡೆದಿದ್ದಾಳೆ' ಜನಿಗೆ ಹಾಕಿ ಎಂದು ಆಲೇಗೌಡ ಕೇಳಿದಾಗ,

"ಗಂಡಮುಟ್ಟದ್ದು
ಗರ್ಭಿಣಿಯಾಗದುಂಟೇನಯ್ಯಾ
ಅವುಳು ಏನೂ ಇಲ್ಲದೆ
ಗರ್ಭಿಣಿಯಾಗು ಬೇಕಾಗಿದ್ರೆ
ರಾಯಿಕಳುವರಳ್ಳಿ
ಹಾಗಲೇ ಊರೊಳುಗೆ
ತುರಕರಿಗೊ ತುಂಡ್ರನಿಗೊ
ಮ್ಯಾಸಬೇಡರನಿಗೊ
ಹುಟ್ಟಿಸಿಕ್ಕುಂಡಿರುವ ಮಕ್ಕಳಿಗೆ
ಜನಿಗೆ ಹಾಕಿರೆಂದು
ಬಂದಿದ್ದೀರೆನಯ್ಯ ಗಳಿಗಾಗೋ"

(ಜುಂಜಪ್ಪ, ಪುಟ ೧೬೨-೧೬೩)

ಎಂದು ಗೌಡ, ಪೂಜಾರಪ್ಪ, ದಳವಾಯಿಗಳು ಬೈದರು. ಪೂಜಾರಿ ಸಿತ್ರಯ್ಯನ ಮಗಳು ಸಿತ್ರಮ್ಮ ಮಕ್ಕಳನ್ನು ನೋಡಲು ಬಂದು, ಸಿನ್ನಮ್ಮನನ್ನು ನೀತಿಗೆಟ್ಟವಳು ಎಂದು ಬೈದು ಮಾರಣ್ಣ, ಮೈಲಣ್ಣನನ್ನು ನೋಡಲು

ಅವು ಅವರಪ್ಪನನ್ನೇ ಹೋಲುತ್ತಿದ್ದವು. ಮಧ್ಯದಲ್ಲಿ ಇರುವ ಮಗುವಿನ ಮುಖ ನೋಡಬೇಡವೆಂದು ಸಿನ್ನಮ್ಮ ತಡೆದಳು. ಆದರೆ ಆಕೆಯನ್ನು ಅಸಡ್ಡೆ ಮಾಡಿ ಯಾರೂ ಮಕ ನೋಡುದಂತಹ ಮಕ್ಕಳನ್ನು ಹೆತ್ತಿದ್ದಾಳೆ. ಪತಿವ್ರತೆ ಎಂದು ಹೀಯಾಳಿಸಿ, ಮಕ ನೋಡಿದಳು. ಜುಂಜಪ್ಪನಿಗೆ ಅವರಮ್ಮನನ್ನು ಬೈದಿದ್ದಕ್ಕೆ ಸಿಟ್ಟಿತ್ತು ಮಕ ನೋಡುತ್ತಿದಂಗೆ,

'ಕರಿ ಕರಿನೆ ಹಲ್ಕಡ್ದು ಕಣ್ ಬಿಟ್ಟಾನಣ್ಣ
ಜುಂಜಪ್ಪ ಅವುಳಿಗೇ
ಕಣ್ ಬೀಡುತಿದ್ದಂಗೆ ಎರಡು ಕಣ್ಣು
ಆಗಲೇ ಕವಿರೋದವಣ್ಣ ಸಿತ್ತಮ್ಮನಿಗೆ ಗಳಿಗಾಗೋ'

(ಜುಂಜಪ್ಪ, ಪುಟ ೧೬೪)

ಸಿತ್ತಮ್ಮ ಮಗುವನ್ನು ನೋಡಲಾಗಿ ಅವಳ ಕಣ್ಣು ಹೊರಟು ಹೋದುದನ್ನು ಕಂಡು ಊರ ಜನರು ನಾವು ಸತ್ಯವಂತರು, ಇಂತಹವರನ್ನೆಲ್ಲಾ ನೋಡಿದರೆ ಇನ್ನು ಯಾರು ಯಾರಿಗೆ ಏನೇನು ಆಗುವುದೋ ಎಂದು ಸಿನ್ನಮ್ಮನನ್ನು, ಆಲೇಗೌಡನನ್ನು ಊರಿನಿಂದ ಹೊರಗೆ ಓಡಿಸಿ ಬಿಟ್ಟರು. ಊರಿನ ಹೊರಗೆ ದಿಣ್ಣೆಯ ಬಳಿ ಬರುವಾಗ ಜುಂಜಪ್ಪ ತಾಯಿಗೆ ತೊಟ್ಟಿಲು ಇಳಿಸಲು ಕೇಳಿಕೊಂಡ. ತೊಟ್ಟಿಲಿನಿಂದ ಇಳಿದು, ಏಳು ವರ್ಷದ ಮಗನಾಗಿ ನಿಂತುಕೊಂಡು, ಜುಂಜಪ್ಪ ನೂರೇಳು ಮಂದಿ ಮಾರಿಯರನ್ನು ಕರೆದ, ಬಂದ ಮಾರಿಯರಿಗೆ ಊರಿನ ಪೂಜಾರಪ್ಪ, ಗೌಡ, ದಳವಾಯಿ, ಈ ಮೂವರನ್ನು ಬಿಟ್ಟು ಉಳಿದವರೆಲ್ಲರಿಗೂ ಸಿಡುಬು,ವಾಂತಿ, ಭೇದಿಯನ್ನು ಕೊಟ್ಟು ನಾಶ ಮಾಡುವಂತೆ ಹೇಳಿದ. ಅದರಂತೆ ಮಾರಿಯರು ಊರಿನ ಜನರನ್ನೆಲ್ಲ ನಾಶ ಮಾಡಿದರು. ಊರಿಗೆ ಬಂದ ಸ್ಥಿತಿಯನ್ನು ಕಂಡು ಪೂಜಾರಪ್ಪ, ಗೌಡ, ದಳವಾಯಿಗಳು ಗೌರಸಂದ್ರದ ಮಾರಮ್ಮನ ಬಳಿ ಕಣಿ ಕೇಳಲು ಹೋಗುತ್ತಾರೆ. ಆಕೆ ಮನೆದೇವರು ಮುನಿಸಿಕೊಂಡಿರುವ ವಿಷಯ ತಿಳಿಸುತ್ತಾಳೆ. ಸಿನ್ನಮ್ಮನ ಹೊಟ್ಟೆಯೊಳಗೆ ನಿಮ್ಮ ದೇವರು ಹುಟ್ಟಿದ್ದಾನೆ. ಆಯಮ್ಮ ಪತಿವ್ರತೆ, ಜನಿಗೆಗೆ ಬಂದರೆ ಅವಮಾನ ಮಾಡಿ ಕಳಿಸಿದ್ದರಿಂದ, ಆ ದೇವರು ಮಾರಿಯನ್ನು ಕಳುಹಿಸಿ ಊರನ್ನು ನಾಶ ಮಾಡಿದ್ದಾರೆ. ಇದಕ್ಕೆ ಪರಿಹಾರವಾಗಿ ಜುಂಜಪ್ಪನಿಗೆ, ಮೀಸಲು ಕಟ್ಟಿ, ನೂರೊಂದು ಸಲ ನೀವು ಮೂರು ಜನರು ಅಡ್ಡ ಬಿದ್ದರೆ, ನಿಮ್ಮ ಹಟ್ಟಿ ಜನಗಳೆಲ್ಲ ಎದ್ದಿರುತ್ತಾರೆ ಎಂದು ಹೇಳುತ್ತಾಳೆ. ಗೌರಸಂದ್ರದ ಮಾರಮ್ಮ ಹೇಳಿದಂತೆ ಮಾಡಿ ಅವರನ್ನು ಹೀಯಾಳಿಸಿದ್ದಕ್ಕೆ ತಪ್ಪಾಯಿತು ಎಂದು ಕ್ಷಮೆ ಯಾಚಿಸಿ, ಅವರನ್ನು ಹಟ್ಟಿಯೊಳಗೆ ಕರೆದುಕೊಂಡು ಹೋಗುತ್ತಾರೆ.

"ಪವಾಡ ಪುರುಷರಿಗೆ ಜನ್ಮವಿತ್ತ ತಾಯಂದಿರಿಗೆ ಲೋಕಾಪವಾದ ತಪ್ಪುವುದಿಲ್ಲ. ಜುಂಜಪ್ಪ ದೈವಾಂಶ ಸಂಭೂತ ಎಂಬುವುದು ಸಾಮಾನ್ಯ ಜನಕ್ಕೆ ಅರ್ಥವಾಗುವುದು ಅವನು ಎಸಗುವ ಈ ರೀತಿಯ ಪವಾಡಗಳಿಂದಲೇ. ಈ ವೀರಪುರುಷ ಬಾಲ್ಯದಲ್ಲಿ ತೋರಿಸಿದ ಶಕ್ತಿ ಪರಾಕ್ರಮಗಳೂ ಹಾಗೂ ಅತಿವಿಸ್ಮಯಕಾರಕ ಪವಾಡಗಳೂ ಕಾವ್ಯದುದ್ದಕ್ಕೂ ಹರಡಿಕೊಂಡಿದೆ."[೨]

"ಅವುರಟ್ಟಿ ಊದಿಬಾಗಿಲೊಳುಗೆ
ಮೂರುತಾವು ಕುಂಡಿರಿಸಿ

ಮೂರುತಾವೆಬ್ಬುರಿಸಿ
ಜನಿಗೆ ಹಾಲನ್ನು ಕುಡಿಸಿ
ಜನಿಗೆ ಗಂಜನು ಕುಡಿಸಿ
ಸೂತ್ಗವೇ ಕಳುದವುರಣ್ಣ"

(ಜುಂಜಪ್ಪ, ಪುಟ ೧೭೪)

ಸಿತ್ತುರು ದೇವರು ಪ್ರತ್ಯಕ್ಷವಾಗಿ ಪರಮ ಪತಿವ್ರತೆ ನೀನು ಮಾರಣ್ಣ, ಮೈಲಣ್ಣ, ಜೋಡಿಲಿ ಜುಂಜಪ್ಪ ಎಂದು ಹೆಸರಿಕ್ಕಮ್ಮ ಎಂದರು. ಅದರಂತೆ ಹೆಸರಿಟ್ಟರು. ಉದ್ಧಟತನದಿಂದ ಮಾತನಾಡಿದ ಪೂಜಾರಿ ಹಾಗೂ ಸಿತ್ತಮ್ಮನನ್ನು ಕರೆಸಿ, ನಮ್ಮ ತಾಯಿ ನೀತಿಗೆಟ್ಟವಳೆಂದು ಹೀಯಾಳಿಸಿದುದ್ದಕ್ಕೆ ನೀನು ಸೂರ್ಯ ಚಂದ್ರ ಇರೋವರೆಗೂ ನರಮಾನವರೆಲ್ಲ ನಿನ್ನ ಉಗುಳುವಂತೆ ಮಾಡುತ್ತೇನೆಂದು ಹೇಳಿ, ಕುರುಡಿ ಕಣ್ಣಲ್ಲಿ ನೀರು ಸೋರಿದಂತೆ ಸೋರು, 'ಸಿತ್ತೆಮಳೆಯಾಗು' ಎಂದು ಶಾಪಕೊಟ್ಟು ಜುಂಜಪ್ಪ ಕಳುವಾರಹಳ್ಳಿಗೆ ಬರುತ್ತಾನೆ.

"ಮಾತನಾಡುವ ಅಲೌಕಿಕ ಶಿಶುವಾಗಿ ಜನಿಸುವ ಜುಂಜಪ್ಪ ತಾಯಿಯನ್ನು ಹಿರಿಯಟ್ಟಿಗೆ ಜನಿಗೆಗೆ ಕರೆದುಕೊಂಡು ಹೋಗುವ ಸನ್ನಿವೇಶ ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳಿಗೆ ಕೈಗನ್ನಡಿಯಾಗಿದೆ. ಹಟ್ಟಿಯಿಂದ ಹೊರಗಿದ್ದು ಸೂತಕ ನೀಗಿಸುವ ನಡಾವಳಿಗಳನ್ನೆಲ್ಲ ಗಮನಿಸಿದರೆ, ಜುಂಜಪ್ಪನ ಕಾವ್ಯ ಕಾಡುಗೊಲ್ಲರ ಜೀವನದ ಆಚಾರ-ವಿಚಾರಗಳ ವಿಶ್ವಕೋಶದಂತಿದೆ."[೩೩]

ಕಾಡುಗೊಲ್ಲರು ಮಗು ಹುಟ್ಟುವ ಸಂದರ್ಭದಲ್ಲಿ ಸೂತಕವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಸೂತಕವನ್ನು ಕಳೆಯುವ ಎಲ್ಲ ವಿಧಿ-ವಿಧಾನವನ್ನು ಸಹ ಶಾಸ್ತ್ರೋಕ್ತವಾಗಿ ಆಚರಣೆ ಮಾಡುತ್ತಾರೆ. ಬಾಣಂತಿ ಮತ್ತು ಮಗುವಿಗೆ ಮೂರು ತಿಂಗಳ ಸೂತಕ ಕಳೆಯಲು ಹೊರ ಮತ್ತು ಒಳ ಜೆನ್ನಿಗೆಯ ಹಾಲು ಕುಡಿಸುತ್ತಾರೆ. ಇದು ಸೂತಕ ಕಳೆದು ಅವರು ಪರಿಶುದ್ಧರಾದರೆಂಬ ನಂಬಿಕೆ. ಈ ಸಂದರ್ಭವನ್ನು ಬಿಟ್ಟರೆ ಬೇರೆ ಯಾವ ಸಂದರ್ಭದಲ್ಲಿಯೂ, ಯಾವ ಕಾರಣಕ್ಕೂ, ಜೆನ್ನಿಗೆ ಹಾಲನ್ನು ಬಳಸುವುದಿಲ್ಲ.

ಜುಂಜಪ್ಪನಿಗೆ ಅವಮಾನ ಮಾಡಿದಾಗ ಮತ್ತು ಅವನ ಹುಟ್ಟಿನ ಬಗ್ಗೆ ಶಂಕೆ ಮಾಡಿದಂಥವರಿಗೆ ಶಿಕ್ಷೆಯನ್ನುಂಟು ಮಾಡುತ್ತಾನೆ. ಜುಂಜಪ್ಪ ತಾನೊಬ್ಬ ಸಾಮಾನ್ಯ ಮಾನವನಲ್ಲ. ಒಬ್ಬ ದೈವಾಂಶಸಂಭೂತ ಎಂಬುದನ್ನು ತೋರಿಸಲು ಊರಿಗೆ ಮಾರಿಯನ್ನು ಬಿಟ್ಟು ಊರನ್ನು ನಾಶ ಮಾಡುವುದು, ಅನಂತರ ಜನರಿಗೆ ಅವರ ಮಹಿಮೆ ತಿಳಿದು ಇವನು ಸಾಮಾನ್ಯ ದೈವನಲ್ಲ ಎಂಬ ಅರಿವುಂಟಾಗಿ ಅವನಿಗೆ ಶರಣಾಗತರಾಗುತ್ತಾರೆ. ಇದರಿಂದ ಜುಂಜುಪ್ಪನ ಶಕ್ತಿ, ಮಹಿಮೆ ಪ್ರಭಾವಗಳು ಜನರಿಗೆ ತಿಳಿದು ಅವನೊಬ್ಬ ಮಹಿಮಾ ಪುರುಷನಾಗುತ್ತಾನೆ.

ಮೂರು ಗಂಡು ಮಕ್ಕಳು ಹುಟ್ಟಿದ ಮೂರು ವರ್ಷಕ್ಕೆ, ಒಂದು ಹೆಣ್ಣು ಮಗುವಿಗೆ ಗರ್ಭಿಣಿಯಾಗುತ್ತಾಳೆ ಸಿನ್ನಮ್ಮ. ಹುಟ್ಟಿದಂತಹ ಹೆಣ್ಣು ಮಗುವಿಗೆ ಮಾರಕ್ಕ ಎಂದು ಹೆಸರಿಟ್ಟರು. ಕೆಂಗರು ಮಲ್ಲೇಗೌಡ ದನಗಳಿಗೆ ಸಪ್ಪೆರೋಗ ಬಂದಾಗ ಕಳುವಾರಳ್ಳಿ ಮಾರಮ್ಮನಿಗೆ ಹರಕೆ ಮಾಡಿಕೊಂಡು ಮೀಸಲು ಕಟ್ಟಿಕೊಳ್ಳುತ್ತಾನೆ. ಈ ಸಾರಿ ಕಳುವಾರಳ್ಳಿಗೆ ಬಂದು ಊರ ಮಾರಮ್ಮನಿಗೆ 'ಬಾನ ಹೊರ್ತಿನಿ, ದೊಡ್ಡ ಪರಶೆ ಮಾಡಿಸ್ತೀನಿ ಕಣಮ್ಮ ದನಗಳ ಸಪ್ಪೆ ರೋಗವನ್ನು ಹೋಗಲಾಡಿಸು' ಎಂದು ಕೈ ಮುಗಿದುಕೊಂಡ. ಅದರಂತೆ ಸಪ್ಪೆರೋಗ ನಿಂತಿತ್ತು.

ಮಾರಿಯ ಹರಕೆ ತೀರಿಸಲು ಕೆಂಗರು ಮಲ್ಲೇಗೌಡ ಕಳುವಾರಳ್ಳಿಗೆ ಬರುವಾಗ, ಊರಿನ ಜನ ನಿನ್ನ ಹೆಂಡತಿ ನಾಲ್ಕು ಜನ ಮಕ್ಕಳನ್ನು ಹಡೆದಿದ್ದಾಳೆ ಎಂದು ಹೇಳಿದಾಗ, ಕೋಪದಿಂದ ಅರಮನೆ ಬಾಗಿಲಿಗೆ ಬರುತ್ತಾನೆ. ಮಾರಣ್ಣ, ಮೈಲಣ್ಣ, ಜುಂಜಪ್ಪ ಸೂರ್ಯ ಮೂಡಿದಂತೆ ಜೋಡಿಯಾಗಿ, ಕುಳಿತಿರುವಾಗ, ಮಗನ ರೂಪ ನೋಡಿ ಮೂರ್ಛೆ ಬೀಳುತ್ತಾನೆ. ಮಕ್ಕಳು ತಂದೆ-ತಾಯಿ ಪಕ್ಕದಲ್ಲಿ ಕೂರಿಸಿ ಪಾದಪೂಜೆ ಮಾಡುತ್ತಾರೆ. ನನ್ನ ಮಕ್ಕಳು ಸತ್ಯವಂತರು ನನ್ನ ಹೆಂಡತಿ ಪತಿವ್ರತೆ ಎಂಬುದನ್ನು ದಿವ್ಯ ದೃಷ್ಟಿಯಿಂದ ಅರಿಯುತ್ತಾನೆ. ಕೆಂಗರು ಮಲ್ಲೇಗೌಡ ತಂದೆಗೆ (ಆಲೇಗೌಡ) ಹೇಳಿ, ಮಾರಮ್ಮನ ಪರುಸೆಗೆ ತಮ್ಮಟೆ ಸಾರಿದ. ಮಂಗಳವಾರದ ದಿನ ಪರುಸೆ ನಡೆಯುತ್ತದೆ.

> “ಗಿಡುವಡಿಕೆ ಬರುವಾಗ
> ಮರಣ ಹೊದುಗಿತಣ್ಣ
> ಜುಂಜಪ್ಪನು ತಂದೀಗೆ
> ಮೂರು ಗಂಡುಮಕ್ಕಳಿಂದೊಂದು
> ಹೆಣ್ಣು ಹುಟ್ಟಿದ್ದು ದೆಸೆಯಿಂದಗಳಿಗಾಗೋ”
>
> (ಜುಂಜಪ್ಪ, ಪುಟ ೧೮೫)

ಹಿಂದೆ ಮಕ್ಕಳ ಫಲ ಕರುಣಿಸುವಾಗ ಪರಮೇಶ್ವರ ಹೇಳಿದಂತೆಯೇ ಕೆಂಗರು ಮಲ್ಲೇಗೌಡನ ಮರಣವಾಗುತ್ತದೆ. “ಕಾಳೇಗೌಡ ನಾಗವಾರರವರು ಸಂಗ್ರಹಿಸಿರುವ ಪಾಠದಲ್ಲಿ ಜುಂಜಪ್ಪನ ತಂದೆ ಮಾರಕ್ಕನ ಮುಖ ನೋಡಿದಾಗ ತಲೆ ಸಿಡಿದು ಸಾಯುತ್ತಾನೆ.[೨೪]” ಅನಂತರ ಶ್ರೀಮಂತಿಕೆ ಹೋಗುತ್ತದೆ. ಮನೆಗೆ ಕಡುಬಡುತನ ಆವರಿಸುತ್ತದೆ. ಅವರು ಅರಮನೆಯನ್ನು ಬಿಟ್ಟು ಅರಣ್ಯ ಸೇರುತ್ತಾರೆ. ಜುಂಜಪ್ಪ ತಾಯಿಗೆ ನೀನು ಹುಟ್ಟುತ್ತಾ ಮತ್ತು ಮದುವೆಯಾಗಿ ಅಷ್ಟೈಶ್ವರ್ಯವಂತರ ಮನೆಯೊಳಗಿದ್ದೆ. ಈಗ ಬಡತನ ಬಂದಿದೆ. ನೀನು ನಮಗೆ ಐಶ್ವರ್ಯ ಬರುವವರೆಗೆ ನಿನ್ನ ಅಣ್ಣಂದಿರ ಜೊತೆ ಇರು ಎಂದಾಗ, ‘ಹೆಣ್ಣು ಕೆಟ್ಟು ತವರು ಮನೆಗೆ ಹೋಗಬಾರ್ದು ಕಣ್ರಪ್ಪ’ ಎಂದು ಹೇಳಿ, ಎಷ್ಟೇ ಕಷ್ಟ ಬಂದರೂ ‘ನಿನ್ ಹತ್ರಲೇ ನೀಗಿಸ್ಕೊಂಡಿರುತ್ತೇನೆ’ ಎನ್ನುತ್ತಾಳೆ. ಸಿನ್ನಮ್ಮ ನಾಲ್ಕು ಮಕ್ಕಳನ್ನು ಸಾಕಲು ಚಿಂತೆ ಮಾಡುತ್ತಿರುವಾಗ ಜುಂಜಪ್ಪ ತಾಯಿಯನ್ನು ಕುರಿತು ಚಿಂತೆ ಮಾಡಬೇಡಮ್ಮ ಒಂದು ಹೊರೆ ಸೌದೆ ಕಡೆದುಕೊಂಡು ಹಿರಿಯೂರು ಪೇಟೆಯಲ್ಲಿನ ‘ಕ್ಯಾಮಟಿಗಶೆಟ್ಟಿ’ಗೆ ‘ಮೂರುದುಡ್ಡಿ’ಗೆ ಸೌದೆ ಮಾರಿ, ಬಂದ ಮೂರು ದುಡ್ಡಿನಲ್ಲಿ ಒಂದು ದುಡ್ಡಿಗೆ ಉಪ್ಪು, ಮೆಣಸಿನಕಾಯಿ, ನಿನಗೆ ಬಾಯಿಗೆ ಅಡಿಕೆ ಎಲೆ, ಒಂದು ದುಡ್ಡಿಗೆ ಒಂದು ಪಾವು ಅಕ್ಕಿ ಇನ್ನೊಂದು ದುಡ್ಡಿಗೆ ಒಂದು ಪಾವು ಹಸಿ ಕಡಲೇ ತರಬೇಕು. ಅದಕ್ಕಿಂತ ಹೆಚ್ಚಿನದು ಬೇಕಿಲ್ಲ ಎಂದನು. ಆದರೂ ಹೆಚ್ಚಿನ ಹಣಕ್ಕೆ ಮಾರಲು ಹೋಗಿ ಯಾರೂ ಕೊಳ್ಳದಿದ್ದಾಗ, ಜುಂಜಪ್ಪ ಹೇಳಿದಂತೆ ಸೌದೆಯನ್ನು ಕ್ಯಾಮಟಿಗಶೆಟ್ಟಿಗೆ ಮೂರು ದುಡ್ಡಿಗೆ ಮಾರುತ್ತಾಳೆ. ಇದು ಜುಂಜಪ್ಪನ ಶಕ್ತಿ ಮಹಿಮೆಯನ್ನು ತಾಯಿ ಮರೆಯದಂತೆ ಆಕೆಗೆ ನೆನಪಿಸುವ ಪ್ರಕರಣವಾಗಿ ಮೂಡಿ ಬಂದಿದೆ.

ಸೌದೆ ಕಡಿದು ಹೊರೆ ಕಟ್ಟುವಾಗ ಸುಂಟರಗಾಳಿ ಬಂದು ಅವಳ ಏಳು ಮಾರುದ್ದ ಮಂಡೆ ಕಿತ್ತೋದವು. ತಲೆಯಲ್ಲಿ ಒಂದು ಕೂದಲು ಇಲ್ಲದೆ ತಾಮ್ರದ ಬುರುಡೆಯಾಯಿತು. ಪೀತಾಂಬರದ ಸೀರೆಯ ಸೆರಗನ್ನು

ಸಿಂಬೆಯಾಗಿ ಮಾಡಿಕೊಂಡು ಸೌದೆಯನ್ನು ಹೊತ್ತುಕೊಂಡು ಹೋಗಿ ಮೂರುದುಡ್ಡಿಗೆ 'ಕ್ವಾಮಟಿಗಶೆಟ್ಟಿ'ಗೆ ಮಾರುತ್ತಾಳೆ. ಸೌದೆಯನ್ನು ತರಲು ಕಾಡಿಗೆ ಹೋಗಿ ಸೌದೆ ಕಡಿದು ಎದ್ದೇಳುತ್ತಿದ್ದಾಗ, ಉಟ್ಟ ಸೀರೆಯು ಅಳಿದು ಹೋಯಿತು. ಏಳಾಳುದ್ದದ ಕೆಂಗೂರು ಕುಳಿಗೆ ಬಿದ್ದು ಪ್ರಾಣ ಬಿಡಲು ಹೋಗುವಾಗ, ಜುಂಜಪ್ಪ ತನ್ನ ದಿವ್ಯ ದೃಷ್ಟಿಯಿಂದ ಒಂದು ತ್ಯಾಗದ ಗಿಡವನ್ನು ಚಿಗುರುಸಿದ. ತ್ಯಾಗದ ಎಲೆಗಳನ್ನು ಕಿತ್ತು ಕಟ್ಟಿಕೊಂಡು ಬೋಡು ತಲೆಯ ಮೇಲೆ ಹೊರೆ ಹೊತ್ತುಕೊಂಡು ಕೋಮಟಿಗಶೆಟ್ಟಿಗೆ ಮೂರು ದುಡ್ಡಿಗೆ ಮಾರುತ್ತಾಳೆ. ಮನೆಗೆ ಸಾಮಾನು ತೆಗೆದುಕೊಂಡು ಕಾಡಿಗೆ ಬರುತ್ತಾಳೆ. ಮಕ್ಕಳಿಗೆ ಅಡಿಗೆ ಮಾಡಿ ಊಟಕ್ಕೆ ಇಡುತ್ತಾಳೆ. ಜುಂಜಪ್ಪನಿಗೆ ಆರು ಪಾವು ಹಸಿ ಕಡಲೆ ನೆನೆಹಾಕಿ ಕೊಟ್ಟಳು. ಮಾರಣ್ಣ, ಮೈಲಣ್ಣ, ಮಾರಕ್ಕ ತಾಯಿಯ ಅವಸ್ಥೆಗೆ ದುಃಖಿಸುತ್ತಾರೆ.

ಮಾರನೆಯ ದಿನ ಕಾಡಿನಲ್ಲಿ ಸಿನ್ನಮ್ಮ ಸೌದೆ ಕಡಿದು ಕಟ್ಟಿಕೊಂಡು ಕುಳಿತಿದ್ದಾಗ ಹೋರಿಗಳ ಗಂಟೆ ಶಬ್ದ ಕೇಳಿಸಿ ಇದು ನಮ್ಮ ಅಣ್ಣಗಳ ಹೋರಿ ಎಂದು ತಿಳಿದು, ಒಂದು ಬೇಲಿ ಪೊದೆಯಲ್ಲಿ ತೂರಿಕೊಂಡಳು. ಸಿನ್ನಮ್ಮನ ಅಣ್ಣಂದಿರು ಹಿರಿಯೂರು ಪೇಟೆಗೆ ಮುತ್ತು ರತ್ನ ಮಾರಲು ಹೋಗುತ್ತಿದ್ದರು. ಸಿನ್ನಮ್ಮ ನನ್ನ ಈ ಸ್ಥಿತಿಗೆ, ಇವರ ಹೆಂಡತಿಯರು ಬಂಜೆ ಎಂದುದರಿಂದಾಗಿಯೇ ನಾನು ಮಕ್ಕಳ ಫಲ ಪಡೆದೆ. ಮೂರು ಗಂಡು ಮಕ್ಕಳ ನಂತರ ಒಂದು ಹೆಣ್ಣು ಮಗು ಹುಟ್ಟಿದ್ದುದರಿಂದ ಈ ಪರಿಸ್ಥಿತಿ ಬಂದಿತ್ತು ಎಂದು ಬೈದುಕೊಳ್ಳುವಾಗ, ಅವಳ ಶಬ್ದ ಕಿರಿಯವನಾದ ಕಟ್ಟಾಣಿಗೆ ಕೇಳಿಸಿತು. ಅನಂತರ ಅವನ ಹಿರಿಯಣ್ಣನಿಗೂ ಕೇಳಿಸಿ ಅವರು ಅವಳನ್ನು ಈಚೆಗೆ ಕರೆದರು. ಸಿನ್ನಮ್ಮ ಎದುರಿಗೆ ಬರಲು ಸೀರೆಯಿಲ್ಲ ಎಂದು ತನ್ನ ಸ್ಥಿತಿಯನ್ನು ಹೇಳಿಕೊಂಡಳು. ಅಣ್ಣಂದಿರು ತಲೆಮ್ಯಾಲೆ ಇದ್ದ ಅಚ್ಚಡ ಕಂಬಿ ಪೇಟವನ್ನು ಕೊಟ್ಟರು. ಅದನ್ನು ಉಟ್ಟು ಈಚೆಗೆ ಬಂದಳು. ಅಂತಹ ಸ್ಥಿತಿಯಲ್ಲಿ ಅವಳನ್ನು ಏಳು ಜನ ಅಣ್ಣಂದಿರು ತೌರಿಗೆ ಕರೆದುಕೊಂಡು ಹೋಗಿ ಬಿಳಿಸೀರೆ ಉಡಿಸಿ, ಮಡ್ಲಕ್ಕಿ ಕಟ್ಟಿ ಆಕೆಯನ್ನು ಕಳುಹಿಸಿದರು. ಜುಂಜಪ್ಪ ಹಿಂದೆಯೇ ತಾಯಿಗೆ ಹೇಳಿರುತ್ತಾನೆ. "ಊರೊಳಗೆ ಒಂದೇ ಒಂದು ರಾತ್ರಿ ನಿಂತವಳೆ ಅಂದ್ರೆ, ಕೆಟ್ಹೋಗವ್ಳೆ ಅಂತ, ಅಲ್ಲಿಗೆ ಬ್ಯಾರೆ ಜಾತಿಯಳಾದ್ಳು ಅಂತ, ಮನೆಯೊಳಗೆ ಬಿಟ್ಕು ಕೊಂಬುದಿಲ್ಲ ಕಣಮ್ಮ ಭೂಮಿ ಚಂದ್ರ ಇರೋವರ್ಗೂ ಇದೇ ನಡ್ಯೋಗಲಿ ಎಂದಿದ್ದ. ಪ್ರಾಯಃ ಊರು ಸಂಸ್ಕೃತಿಯ ಬಗ್ಗೆ ಇರುವ ಸಂದೇಹ ಭೀತಿಗಳು ಇಲ್ಲಿ ವ್ಯಕ್ತವಾಗಿವೆ."[೩೫]

ಕಾಡುಗೊಲ್ಲರ ಬದುಕಿನಲ್ಲಿ ಶೌಚ ಗುಣ ತುಂಬಾ ಪ್ರಮುಖವಾದದ್ದು. ಜುಂಜಪ್ಪ ತನ್ನ ಮಹಾಶೌಚ ಗುಣದಿಂದ ಆದರ್ಶ ಪುರುಷನಾಗಿದ್ದಾನೆ. ಆತ ತನ್ನ ತಾಯಿಯ ಶೀಲವನ್ನೆ ಶಂಕಿಸಿ ಪರೀಕ್ಷೆಗೊಡ್ಡಿದ್ದಾನೆ. ಇಂತಹ ಪುರುಷ ಪ್ರಧಾನ ವ್ಯವಸ್ಥೆ ಸ್ತ್ರೀಯ ಮೇಲೆ ನಡೆಸಿದಂತಹ ಒಂದು ದಬ್ಬಾಳಿಕೆಯಾಗಿದೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಗೆ ಯಾವ ಸ್ವಾತಂತ್ರ್ಯವೂ ಇರಲಿಲ್ಲ. ಶೀಲ, ಪಾತಿವ್ರತ್ಯ, ತ್ಯಾಗ, ಕಷ್ಟ ಸಹಿಷ್ಣುತೆ ಇವು ಹೆಣ್ಣಿನ ಪರಮೋಚ್ಚ ಆದರ್ಶ ಗುಣಗಳೆಂದು ಭಾವಿಸಿ, ಇಂತಹ ಸಂಕೋಲೆಗಳಲ್ಲಿ ಹೆಣ್ಣನ್ನು ಬಂಧಿಸಿಡಲಾಗಿತ್ತು. ಪುರುಷ ಪ್ರಧಾನ ಸಮಾಜ ವ್ಯವಸ್ಥೆ ಹೆಣ್ಣಿನ ಈ ಆದರ್ಶಗುಣಗಳ ಬಗ್ಗೆ ಶಂಕೆಯನ್ನು ವ್ಯಕ್ತಪಡಿಸಿದಾಗ ಹೆಣ್ಣು ತನಗೆ ಎದುರಾದ ಈ ಎಲ್ಲ ಪರೀಕ್ಷೆಗಳ ವಿರುದ್ಧ ಧೈರ್ಯವಾಗಿ ಹೋರಾಟ ನಡೆಸಿ ತನ್ನ ಪಾತಿವ್ರತ್ಯದ ಕಠಿಣ ಪರೀಕ್ಷೆಗಳಲ್ಲಿ ಜಯಸಾಧಿಸಿ ತನ್ನ ಅಸ್ತಿತ್ವವನ್ನು ತೋರ್ಪಡಿಸುತ್ತಿದ್ದಳು. ಅಣ್ಣಂದಿರ ಮನೆಯಲ್ಲಿ

ಇದ್ದು ಬಂದ ಸಿನ್ನಮ್ಮಳ ಬಗ್ಗೆ ಜುಂಜಪ್ಪ ಶಂಕೆ ವ್ಯಕ್ತಪಡಿಸಿದ. ಆದರೆ ಸಿನ್ನಮ್ಮನು ಜುಂಜಪ್ಪ ಒಡ್ಡುವ ಎಲ್ಲ ಪರೀಕ್ಷೆಗಳನ್ನು ಎಲ್ಲರೆದುರು ಎದುರಿಸಲು ಒಪ್ಪಿದಳು. ಇದನ್ನು ನೋಡಲು ಐವತ್ತಾರು ದೇಶದ ಪ್ರಜೆಗಳು ಆನೆ, ಒಂಟೆಯ ಮೇಲೆ ಕಳುವಾರಳ್ಳಿಗೆ ಬರುತ್ತಾರೆ. ಊರಿನ ಜನಗಳೆಲ್ಲ ಸೇರಿದರು. ಜುಂಜಪ್ಪನ ತಾತ (ಆಲೇಗೌಡ) ನಿನ್ನ ಸವಾಲುಗಳನ್ನು ಹೇಳು ಎಂದಾಗ : ಜುಂಜಪ್ಪ,

೧. ಒಣಗಿದ ಒನಕೆಯನ್ನು ತರಿಸಿ ಅದರಿಂದ ಒಳನಾರು ತೆಗೆದರೆ ನಿನ್ನ ಸೊಸೆಯನ್ನು ಪತಿವ್ರತೆ ಎಂದು ಒಪ್ಪಿಕೊಳ್ಳುತ್ತೇನೆ ಎಂದ. ಒಣಗಿದ ಒನಕೆಯನ್ನು ತರಿಸಿ ಸಿನ್ನಮ್ಮನ ಕೈಗೆ ಕೊಟ್ಟಾಗ, ಆಕೆ ಮನೆದೇವರ, ಗುರುದೇವರ ಪಾದಗಳನ್ನು ನೆನೆಸಿ, ಒನಕೆಯನ್ನು ಪರಪರನೆ ಸಿಗಿದು ಓಳನಾರನ್ನು ತೆಗೆದಳು.

೨. ಅದಕ್ಕೆ ಒಪ್ಪದ ಜುಂಜಪ್ಪ. ತೂತುದ್ದು ಕಣ್ಣಿನ ಜರಡೆಯಲ್ಲಿ ಕಲ್ಯಾಣಿಯಿಂದ ನೀರನ್ನು ತಂದು ನನ್ನ ಪಾದದ ಮುಂದಿಡಬೇಕು ಎಂದ. ಅದರಂತೆ ಹೊನ್ನಟ್ಟಾಗಲೇ ಗೌಡ ತೂತದ ಜರಡಿ ತರಿಸಿಕೊಟ್ಟ. ಆಕೆ ಪರಮೇಶ್ವರನನ್ನು ಕುರಿತು ನಾನು ಪತಿವ್ರತೆ ಆಗಿದ್ದರೆ ನನ್ನ ಮಕ್ಕಳು ನನ್ನ ಕೈ ಸೇರುವಂತೆ ಇದ್ದರೆ, ಈ ಜರಡೆ ಒಳಗೆ ನೀರು ಬರಲಿ ಎಂದು ಹೇಳಿ ಕಲ್ಯಾಣಿ ನೀರಿನಲ್ಲಿ ಜರಡಿಯನ್ನು ಅದ್ದಿ ಎತ್ತಿದಾಗ ಪರಮೇಶ್ವರ ಪ್ರತ್ಯಕ್ಷನಾಗಿ ಕೊರಳ ಒಳಗಿದ್ದ ಸರ್ಪವನ್ನು ಕಿತ್ತು ಕಲ್ಯಾಣಿ ಒಳಕ್ಕೆ ಎಸೆದ, ಎಸೆಯುತ್ತಿದ್ದಂಗೆ ಸರ್ಪ ಜರಡಿಗೆ ಸಿಂಬಿಯಾಗಿ ಒಂದು ತೊಟ್ಟು ನೀರು ಬೀಳದಂತಾಯಿತು. ಎಲ್ಲಾ ಪ್ರಜೆಗಳ ಎದುರು ನೀರು ತುಂಬಿದ ಜರಡಿ ತಂದು ಜುಂಜಪ್ಪನ ಪಾದದ ಮುಂದೆ ಇಟ್ಟಳು.

೩. ಜುಂಜಪ್ಪ ಇದು ಕಪ್ಪಿನ ಬಲುಮೆಯಿಂದ ಮಾಡಿದ ಕೆಲಸ. ತಾಯಿ ಪತಿವ್ರತೆ ಆಗಿದ್ದರೆ ನಾನು ಮುತ್ತಿನ ಉಂಗುರವನ್ನು ತೆಗೆದು ಸಮುದ್ರಕ್ಕೆ ಎಸೆಯುತ್ತೇನೆ. ಹಗಲನ್ನೆರಡು ಗಂಟೆ ಸಮುದ್ರಕ್ಕೆ ಬಿದ್ದವಳು, ರಾತ್ರಿ ಹನ್ನೆರಡು ಗಂಟೆಗೆ ಸಮುದ್ರದಿಂದ ಈಚೆಗೆ ಮುತ್ತಿನುಂಗರ ತೆಗೆದುಕೊಂಡು ಬಂದರೆ, ಪತಿವ್ರತೆ ಎಂದು ಒಪ್ಪುತ್ತೇನೆ ಎನ್ನುತ್ತಾನೆ. ಮುತ್ತಿನುಂಗುರ ತೆಗೆದು ಸಮುದ್ರಕ್ಕೆ ಹಾಕಿದ. ಸಿನ್ನಮ್ಮ ಪಾರ್ವತಿ-ಪರಮೇಶ್ವರರ ಧ್ಯಾನ ಮಾಡಿ ಸಮುದ್ರಕ್ಕೆ ಬಿದ್ದಳು. ಅರ್ಧ ಸಮುದ್ರದಲ್ಲಿ 'ಜಲ್ದಿ ಬೋಪ್ಪರಾಯ' ಎನ್ನುವ ಸಮುದ್ರರಾಜ ಇಪ್ಪತ್ತುನಾಲ್ಕು ವರ್ಷದಿಂದ ಸೂರ್ಯನನ್ನು ಕುರಿತು ತಪಸ್ಸು ಮಾಡುತ್ತಿದ್ದರೂ, ಸೂರ್ಯ ಪ್ರತ್ಯಕ್ಷನಾಗಿರಲಿಲ್ಲ. ಸಿನ್ನಮ್ಮ ಮಹಾಪತಿವ್ರತೆ, ಸಮುದ್ರಕ್ಕೆ ಬಿದ್ದು ಆಕೆಯ ನೆರಳು ಸಮುದ್ರರಾಜನ ಮೇಲೆ ಬೀಳುತ್ತಿದ್ದಂತೆ, ಅವನ ಜಪ ಈಡೇರಿತು. ಸೂರ್ಯ ಪ್ರತ್ಯಕ್ಷನಾದ. ಸಮುದ್ರರಾಜ, ಸಿನ್ನಮ್ಮನನ್ನು ಕಂಡು, ತಾಯಿ ನಿನ್ನಿಂದ ನನ್ನ ಸೂರ್ಯ ಜಪ ಈಡೇರಿತೆಂದು ಹೇಳುತ್ತಾ, ಈ ಅರ್ಧ ಸಮುದ್ರಕ್ಕೆ ಬಂದ ಕಾರಣವನ್ನು ಕೇಳುತ್ತಾನೆ. ಆಗ ಆಕೆ ನನ್ನ ಮಗ ಮುತ್ತಿನುಂಗುರವನ್ನು ಎಸೆದಿದ್ದಾನೆ. ಅದನ್ನು ತರಲು ಬಂದಿದ್ದೇನೆ ಎನ್ನುತ್ತಾಳೆ. ತಾಯಿ ಆ ಮುತ್ತಿನುಂಗ್ರ ಏಳೇಳು ಹದಿನಾಲ್ಕು ಯೋಜನದ ಒಳಗಡೆ ಇದೆ. ಅಲ್ಲಿಗೆ ನೀನು ಹೋಗಲು ಸಾಧ್ಯವಿಲ್ಲ. ಇಲ್ಲಿಯೇ ನಿಂತು ಕೊಂಡು ನಿನ್ನ ಮಗನ ಪಾದ ನೆನೆಸಿ, 'ಎತ್ತಪ್ಪ-ಜುಂಜಪ್ಪ' ಅನ್ನು ಉಂಗುರ ಬಂದು ನಿನ್ನ ಕೈ ಸೇರುತ್ತದೆ ಎಂದು ಹೇಳುತ್ತಾನೆ. ಅರ್ಧ ಸಮುದ್ರದಲ್ಲಿ ನಿಂತು ಸಿನ್ನಮ್ಮ ಜುಂಜಪ್ಪನ ಪಾದವನ್ನು ನೆನೆಸಿ, ಎತ್ತಪ್ಪ ಜುಂಜಪ್ಪ ಮಗನೇ ನಾನು ನಿಮ್ಮ ತಂದೆಗೆ ಪತಿವ್ರತೆಯಾಗಿದ್ರೆ ಉಂಗುರ ಬಂದು ಕೈ ಸೇರಲಿ ಎಂದಾಗ, ಉಂಗುರ ಬಂದು ಕೈ ಸೇರುತ್ತದೆ. ಮುತ್ತಿನುಂಗುರವನ್ನು ತಂದು ಜುಂಜಪ್ಪನ ಬೆರಳಿಗೆ ಅರ್ಪಿಸಿದಳು.

೪. ಇದನ್ನು ಒಪ್ಪದ ಜುಂಜಪ್ಪ, ಮುಂದಿನ ಸವಾಲು ಸೀಗೆ ಎಲೆಯನು ಬಿಡಿಸಿ ರಾಶಿ ಹಾಕಬೇಕು. ಸೀಗೆ ಎಲೆಯನ್ನು ಒಂದಾಳು ಉಣ್ಣುವಂತಹ ಊಟದ ಎಲೆ ಕಟ್ಟಿದರೆ ನಾನು ಒಪ್ಪುತ್ತೇನೆ ಎಂದನು. ಎಲ್ಲರೂ ಸೇರಿ ಸೀಗೆ ಎಲೆಯನ್ನು ಬಿಡಿಸಿ ರಾಶಿ ಮಾಡಿದರು. ಪರಮೇಶ್ವರನನ್ನು ಸಿನ್ನಮ್ಮ ನೆನಸಿ ನನ್ನ ಮಕ್ಕಳು ನನ್ನ ಕೈ ಸೇರುವಂತೆ ಇದ್ರೆ ಈ ಸೀಗೆ ಎಲೆ ಇಸ್ತ್ರ ಹಚ್ಚುವುದಕ್ಕೆ ಬರಲಿ ಎಂದು ಮೂರೆಲೆ ಜೋಡಿಸಿ ಕಡ್ಡಿ ಹಾಕಿದಳು. ಸಿನ್ನಮ್ಮ ಮೂರೆಲೆಗೆ ಕಡ್ಡಿ ಹಾಕುವಾಗ ಪರಮೇಶ್ವರನಿಗೆ ಕರುಣೆ ಉಂಟಾಯಿತು. ನನ್ನ ಶಾಪದಿಂದ ಮಹಾತಾಯಿ ಪತಿವ್ರತೆಗೆ ಎಷ್ಟೊಂದು ಕಷ್ಟಗಳನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗನೇ ಕೊಡುತ್ತಾನೆ ಎಂದು ಪರಮೇಶ್ವರ ಪ್ರತ್ಯಕ್ಷನಾಗಿ ಒಬ್ಬರ ಕಣ್ಣಿಗೂ ಕಾಣದಂತೆ ಸಿನ್ನಮ್ಮನ ಹಿಂದುಗಡೆ ನಿಂತು ಆಶೀರ್ವಾದ ಮಾಡಿದ. 'ಈಯಮ್ಮ ಮೂರು ಎಲಿಗೆ ಕಡ್ಡಿ ಹಾಕುವಾಗ ಎಲೆ ಎಲೆಗಳೇ ಜೋಡಿಸಿಕೊಂಡು ಒಂದಾಳುಂಬುವಷ್ಟು ಸೀಗೆ ಎಲೆಗಳು ಊಟದ ಎಲೆ ಆಯಿತು. ಎಲೆಗಳನ್ನು ಎಲ್ಲರ ಮುಂದೆ ತಂದಿಟ್ಟಳು.

೫. ಇದಕ್ಕೆ ಒಪ್ಪದೆ, ಬಿಳಿಸೀರೆಯುಟ್ಟು ಕಳಸ ಹೊತ್ತುಕೊಂಡು ಅಗ್ನಿಪ್ರವೇಶ ಮಾಡಬೇಕು. ಹನ್ನೆರಡು ಗಂಟೆ ಕಾಲದ ನಂತರ ಈಚೆಗೆ ಬಂದಾಗ ಬಿಳಿಸೀರೆ ಕಪ್ಪಾಗಬಾರದು ಯಾವ ರೀತಿ ಅಗ್ನಿಗೆ ಪ್ರವೇಶ ಮಾಡಿದಳೋ ಅದೇ ರೀತಿ ಈಚೆಗೆ ಬರಬೇಕು ಎಂದನು. ರಾತ್ರಿ ಹನ್ನೆರಡು ಗಂಟೆಗೆ ಅಗ್ನಿಪ್ರವೇಶಕ್ಕೆ ಸಿನ್ನಮ್ಮ ನಿಂತಾಗ ಅಗ್ನಿ ಪ್ರತ್ಯಕ್ಷವಾದನು. ಸಿನ್ನಮ್ಮ ನೀನು ಪತಿವ್ರತೆ, ನಿನ್ನನ್ನು ನಾನು ಸುಡುವುದಿಲ್ಲ. ಪತಿವ್ರತೆಯರಿಗೆ, ಭಕ್ತರಿಗೆ ಬೆಂಕಿ ಸುಡುವುದಿಲ್ಲ ಎಂದು ಆಶ್ವಾಸನೆ ನೀಡುತ್ತಾನೆ. ಸಿನ್ನಮ್ಮ ಅಗ್ನಿಗೆ ಕೈ ಮುಗಿದು ಅಗ್ನಿಪ್ರವೇಶ ಮಾಡಿದಾಗ ಅಗ್ನಿ ತಣ್ಣೀರಿನಂತಾಗಿತ್ತು. ಅವಳ ಬಿಳಿ ಸೀರೆ ಕಪ್ಪಾಗಿರಲಿಲ್ಲ. ಆಗ ಹೊನ್ನಟ್ಟಾಲೇಗೌಡ ನನ್ನ ಸೊಸೆ ಪತಿವ್ರತೆ ಎಂದಾಗ ಜುಂಜಪ್ಪ ಅಗ್ನಿ ತಣ್ಣೀರಾಗಿ ಉರಿದು ಬಿಟ್ಟನಲ್ಲ ನಾನು ಇದನ್ನು ಒಪ್ಪುವುದಿಲ್ಲ ಎಂದನು.

೬. ಮತ್ತೇನು ಮಾಡಬೇಕು ಎಂದಾಗ ಸತ್ತು ಏಳು ವರ್ಷವಾಗಿರುವ ನಮ್ಮಪ್ಪನನ್ನು ಎಳಿಸಿ ಮಾತನಾಡಿಸಿದರೆ, ಒಪ್ಪಿಕೊಳ್ಳುತ್ತೇನೆ. ಕೆಂಗರು ಮಲ್ಲೇಗೌಡನ ಸಮಾಧಿಗೆ ಸಿನ್ನಮ್ಮ ಗಂಧ ಧೂಪವನ್ನು ಹಚ್ಚಿ ಪರಮೇಶ್ವರನನ್ನು ನೆನೆಸಿ ಮೂರು ಸುತ್ತು ಪ್ರದಕ್ಷಿಣೆ ಹಾಕಿ, ಸ್ವಾಮಿ ನಾನು ನಿನಗೆ ಪತಿವ್ರತೆ ಆಗಿದ್ದರೆ, ಎದ್ದು ಮೂರು ಮಾತಾಡು, ಇಲ್ಲದಿದ್ದರೆ ನಾನು ಈಗಲೇ ಕೈಲಾಸಕ್ಕೆ ಬರುತ್ತೇನೆ ಎನ್ನುತ್ತಾಳೆ.

"ಅಷ್ಟೊತಿಗೇ
ಗುಡ್ಡೆ
ಪಟಪಟನೇ
ಚದುರಿತು ಶಂಕರನೇ
ಕೆಂಗರು ಮಲ್ಲೇಗೌಡ
ಸಿನ್ನಮ್ಮನ ಗಂಡ
ಎದ್ದು ಕುಂತಾನಣ್ಣ
ಗಡ್ಡ ನೆಲಕೆ ಬೇರೂಯ್ಯುಂಡಾವಯ್ಯೋ
ಕುಂತಗಂಡು
ಅಪ್ಪ ಮಗನಿಗೇಳುತ್ತಾನೆ

ಕೇಳೋ ನನು ಮಗನೇ
ಕಂಬೇರು ಸೀನ್ನಿ ಪತುವ್ರತೆಯಣ್ಣಾ
ನನ್ನೆಣೆತಿ ಪತುವ್ರತೆ ಕೇಳಿರಿ ಕಂದಮ್ಮ
ನಾನಿಲ್ಲವೆಂದು ನೆನ್ನೆಣೆತಿಗು
ಕಷ್ಟ ಕೊಡುಬೇಡಿರಪ್ಪಾ
ತಾಯಿ ಮಕ್ಕಳು ಒಂದಾಗಿರಿ ಮಗು
ಅಂದನು ಜುಂಜಪ್ಪನು ತಂದೆ
ಕೆಂಗರು ಮಲ್ಲೇಗೌಡ"

(ಜುಂಜಪ್ಪ, ಪುಟ ೨೩೪)

ಸತ್ತ ಗಂಡನನ್ನು ಮಾತಾಡಿಸಿದಳು ಸಿನ್ನಮ್ಮ.

೭. ಇದನ್ನು ಒಪ್ಪದ ಜುಂಜಪ್ಪ ಮತ್ತೊಂದು ದಿವ್ಯವನ್ನು ಒಡ್ಡುತ್ತಾನೆ. ಮೊದಲು ನಾನು ಕೊಟ್ಟಿದ್ದಂತಹ ತ್ಯಾಗದ ಉಡುಗೆಯನ್ನು ಬೇಲಿ ಪೊದೆಯಲ್ಲಿ ಬಿಟ್ಟು ಅವರಣ್ಣ ಕೊಟ್ಟಂತಹ ಹಚ್ಚಡ ಕಂಬಿ ಪೇಟವನ್ನುಟ್ಟ ಗಂಬಂದಿದ್ದು. ಇದು ಹೊರಟು ಹೋಗಿ ತ್ಯಾಗ ದುಡಿಗೆ ಪ್ರತ್ಯಕ್ಷವಾಗಬೇಕು ಅಂದ. ಆಗ ಹೊನ್ನಟ್ಟಾಲೇಗೌಡ ತ್ಯಾಗ ದುಡಿಗೆ ಬಿಸಿಲಲ್ಲಿ ಒಣಗಿ, ಮಳೆಯಲ್ಲಿ ನೆಂದು ಕೊಳತು ಹೋಗಿರುತ್ತದೆ ಎಂದಾಗ, ಪತಿವ್ರತೆಯರು ಉಟ್ಟ ಉಡಿಗೆ ಕೊಳೆಯುವುದಕ್ಕೆ ಸಾಧ್ಯವಿಲ್ಲ ಎಂದನು ಜುಂಜಪ್ಪ. ಆಗ ಸಿನ್ನಮ್ಮ ಪರಮೇಶ್ವರನ ಧ್ಯಾನ ಮಾಡಿದಳು. ಉಟ್ಟಿದ್ದಂತ ಬಿಳಿಸೀರೆ ಹೋಗಿ 'ತ್ಯಾಗ ದುಡಿಗೆ ಪ್ರತ್ಯಕ್ಷವಾಯಿತು' ನಂತರ ತ್ಯಾಗದ ಉಡುಪು ಮಾಯವಾಗಿ, ಸಿನ್ನಮ್ಮನಿಗೆ ಪೀತಾಂಬರದ ಸೀರೆ ಪ್ರತ್ಯಕ್ಷವಾಗಿ, ಏಳು ಮಾರುದ್ದದ ತಲೆಕೂದಲು ವಾಲಿ ಬೆಳೆಯಿತು.

೮. ಜುಂಜಪ್ಪ ಕೊನೆಯದಾಗಿ ಒಂದು ದಿವ್ಯವನ್ನು ಒಡ್ಡಿದ ಏಳೂರು ಅಗಸರನ್ನು ಕರೆಸಿ, ಏಳು ತೆರೆಯನ್ನು ಕಟ್ಟಿಸಿ, ಏಳು ತೆರೆಯಿಂದ ಆ ಕಡೆ ಆಯಮ್ಮ ನಿಂತುಕೊಳ್ಳಬೇಕು. ಏಳು ತೆರೆಯಿಂದ ಈ ಕಡೆ ನಾವು ನಾಲ್ಕು ಜನ ಮಕ್ಕಳು ನಿಲ್ಲುತ್ತೇವೆ. ತಾಯಿ ಕರೆದಂತಹ ಹಾಲಿನಿಂದ ನಮ್ಮ ಹೊಟ್ಟೆ ತುಂಬಿಸಬೇಕು ಎಂದಾಗ ಎಷ್ಟು ದಿನವಾಗಿದೆ. ಮಕ್ಕಳಿಗೆ ಹಾಲು ಕುಡಿಸಿ, ಇವತ್ತು ಹಾಲು ಬರಲು ಸಾಧ್ಯವೇ ಎಂದು ಪರಮೇಶ್ವರನ ಧ್ಯಾನ ಮಾಡಿದಳು. ನನ್ನ ಮಕ್ಕಳು ನನ್ನ ಕೈ ಸೇರುವ ಹಾಗಿದ್ದರೆ,

"ಹಾಲು ಬೀಳುಲಿ
ಅಂದಾಳು ಸಿನ್ನಮ್ಮ
ಪಾರ್ವತಿ ದೇವಿ
ದ್ವಾರ ಬಾಗಿಲಿಗೆ ಬಂದು
ಸಿನ್ನಮ್ಮನ ತಲೆಯಮಾಲೆ
ಕರ್ದವುಲೊ ಪಾರ್ವತಿಗಳಿಗಾಗೋ"

(ಜುಂಜಪ್ಪ, ಪುಟ ೨೩೭)

ಹಾಲು ಸಿನ್ನಮ್ಮನ ತಲೆಯ ಮೇಲೆ ಬಿದ್ದ ಕೂಡಲೇ ಏಳು ತೆರೆಯ ಆಚೆ ಇದ್ದ ಮಕ್ಕಳಿಗೆ ಹೊಟ್ಟೆಗೆ ತುಂಬಿ ಹೋಯಿತು. ನಮ್ಮ ತಾಯಿ ಪತಿವ್ರತೆ, ಸಿಟ್ಟು ಮಾಡಿಕೊಂಡು ಶಾಪ ಕೊಟ್ಟಾಳು ಎಂದು ಮಕ್ಕಳು ಓಡಿ ಬಂದು ತಾಯಿ ಪಾದವನ್ನು ಹಿಡಿದುಕೊಂಡರು. ಹೀಗೆ ಸಿನ್ನಮ್ಮ ಜುಂಜಪ್ಪ ಒಡ್ಡಿದ ಎಲ್ಲಾ ಎಂಟು ದಿವ್ಯ ಗಳಲ್ಲಿಯೂ ಯಶಸ್ವಿಯಾಗಿ ಗೆದ್ದು ತನ್ನ ಪಾತಿವ್ರತ್ಯವನ್ನು ಪ್ರಮಾಣೀಕರಿಸುತ್ತಾಳೆ.

ಜುಂಜಪ್ಪನೇ ಹೇಳುವಂತೆ ಆ ಮಹಾತಾಯಿಗೆ ಉಂಟಾಗಿದ್ದ ಲೋಕನಿಂದನೆ, ಗಂಡ ಇಲ್ಲದೇ ಗರ್ಭಿಣಿ ಆಗಿ ಮಕ್ಕಳನ್ನು ಹಡೆದವಳು ಎಂಬುದು ಪ್ರಜೆಗಳಿಗೆ ತಿಳಿದಿತ್ತೆ ವಿನಃ ಪರಮೇಶ್ವರನಿಂದ ವರ ಪಡೆದಿದ್ದು ಯಾರಿಗೂ ತಿಳಿದಿರಲಿಲ್ಲ. ಕಾಡಿನಲ್ಲಿ ನೀನು ಪಡೆದಿದ್ದ ವರ ಇವರ ಅರಿವಿಗೆ ಬರಲಿ, ನನ್ನ ತಾಯಿ ಪತಿವ್ರತೆ ಎಂಬುದು ಪ್ರಪಂಚಕ್ಕೆಲ್ಲ ತಿಳಿಯಲಿ ಎನ್ನುವ ದೃಷ್ಟಿಯಿಂದ ಪರೀಕ್ಷೆಗೆ ಈಡು ಮಾಡಿದೆ ಎಂಬುದಾಗಿ ಹೇಳುತ್ತಾನೆ. ಸಿನ್ನಮ್ಮ ಪರಿಶುದ್ಧಳಾಗಿದ್ದು, ಕಳಂಕರಹಿತವಾದ ನಡತೆಯಿಂದಾಗಿ ಮತ್ತು ಪರಮೇಶ್ವರನ ಭಕ್ತಳಾದ ಕಾರಣ ಅವಳು ಎಲ್ಲ ದಿವ್ಯಗಳಲ್ಲಿಯೂ ಜಯಗಳಿಸಿ ತನ್ನ ಪಾತಿವ್ರತ್ಯವನ್ನು ಸಾಬೀತುಪಡಿಸಿದಳು.

"ಚಿನ್ನಮ್ಮನಿಗೆ ಒಡ್ಡುವ ಪರೀಕ್ಷೆಗಳ ಸರಮಾಲೆ ಗಮನಿಸಿದರೆ, ಜುಂಜಪ್ಪ ಮುಂತಾದವರ ಹುಟ್ಟೇ ಅತ್ಯಂತ ವಿವಾದಾಸ್ಪದವಾದದ್ದರಿಂದಲೇ ಏನೋ ಈ ಪ್ರಸಂಗ ಬರೀ ಪವಾಡಗಳಿಂದ ಮುಚ್ಚಿ ಹೋಗಿರುವುದನ್ನು ಗಮನಿ ಸಿದರೆ ನಮ್ಮ ಅನುಮಾನಗಳು ಇನ್ನಷ್ಟು ದೃಢಗೊಳ್ಳುತ್ತಾ ಹೋಗುವುದರೊಂದಿಗೆ ಪುರಾಣ ವಾಸ್ತವದ ಕಹಿಯನ್ನು ಪವಾಡಗಳಿಂದ ಮುಚ್ಚಿ ಹಾಕಿರಬೇಕು ಅನಿಸುತ್ತದೆ. ಕೆಲವು ವಕ್ತೃಗಳ ಕತೆಗಳಲ್ಲಿ ಚಿನ್ನಮ್ಮನನ್ನು ಆಕೆಯ ಗಂಡ ಮುಟ್ಟುವುದೇ ಇಲ್ಲವೆಂಬಂತೆ ಚಿತ್ರಿಸಿದರೆ, ಇನ್ನು ಕೆಲವು ವಕ್ತೃಗಳ ಕತೆಯಲ್ಲಿ ಸಮಾಗಮ ಸನ್ನಿವೇಶವನ್ನು ಸೃಷ್ಟಿಸುತ್ತಾರೆ. ದಕ್ಷಿಣ ಸಂಪ್ರದಾಯದ ಪಾಠದಲ್ಲಿ ಚಿನ್ನಮ್ಮನ ಶೀಲವನ್ನು ಶಂಕಿಸಿ ಶಿವಗಂಗೆ ಬೆಟ್ಟಕ್ಕೆ ಕರೆದುಕೊಂಡು ಹೋಗಿ ಚಿನ್ನಮ್ಮನ ಶಿರಶ್ಛೇದನ ಮಾಡಬೇಕೆಂದಾಗ ಗೌರಸಂದ್ರ ಮಾರಿ ಪ್ರತ್ಯಕ್ಷವಾಗಿ ತಾನೇ ವರ ಕೊಟ್ಟಿರುವುದಾಗಿ ಸಮಜಾಯಿಷಿ ನೀಡುವ ಪ್ರಸಂಗ ಸೃಷ್ಟಿಸುತ್ತಾರೆ."[೩೬]

"ಜನಪದ ಮಹಾಕಾವ್ಯಗಳು ಅಭಿವ್ಯಕ್ತಿಸುವ ಪಾತಿವ್ರತ್ಯದ ಪರಿಕಲ್ಪನೆ ಶಿಷ್ಟಕಾವ್ಯ ಪುರಾಣಗಳಿಗಿಂತ ಭಿನ್ನವಾದುದು. ಶಿಷ್ಟಕಾವ್ಯದ ಹೆಣ್ಣುಗಳು ಸ್ಥಾಪಿತ ಪತಿವ್ರತೆಯರಾಗಿದ್ದು ಪುರುಷ ಒಡ್ಡುವ ಎಲ್ಲಾ ದಿವ್ಯಗಳನ್ನು ಗೆಲ್ಲುತ್ತಾರೆ. ಪಾತಿವ್ರತ್ಯವನ್ನು ಸಾಬೀತುಗೊಳಿಸುತ್ತಾರೆ. ಸಿರಿ, ಸಂಕಮ್ಮ, ಚನ್ನಮ್ಮರ ಮಾದರಿಗಳು ಹೆಣ್ಣು ಸಾಂಕೇತಿಕವಾಗಿ, ಸಾಮಾಜಿಕವಾಗಿ ಅನುಭವಿಸುತ್ತಾ ಬಂದ ಸಂದರ್ಭಗಳನ್ನು ಸಮರ್ಥವಾಗಿ ಪ್ರಕಟಿಸುತ್ತವೆ. ಇವು ಹೆಣ್ಣಿನ ಇತಿಹಾಸದ ಮೂರು ಕಾಲಘಟ್ಟವನ್ನು ದಾಖಲುಗೊಳಿಸುತ್ತವೆ. ಇಲ್ಲಿ ಕಾಲಘಟ್ಟದ ಕಲ್ಪನೆ, ಚರಿತ್ರಕಾರನೊಬ್ಬನ ಕಾಲನಿರ್ಣಯದ ಗತಿಯದಲ್ಲ. ಸಿರಿ ಮಾತೃಸಂಸ್ಕೃತಿಯ ಹೆಣ್ಣುಶಕ್ತಿಯ ಸ್ವಾಯತ್ತ ಸ್ಥಿತಿಯಾದರೆ, ಸಂಕಮ್ಮ ಮಾತೃಸಂಸ್ಕೃತಿ, ಪಿತೃಸಂಸ್ಕೃತಿಗೆ ಅವಸ್ಥಾಂತರಗೊಳ್ಳುವಲ್ಲಿ ಹೆಣ್ಣಿಗೆ ಎದುರಾದ ಸಂಘರ್ಷದ ಸ್ಥಿತಿ, ಪಿತೃಸಂಸ್ಕೃತಿ, ಮಾತೃಸಂಸ್ಕೃತಿಯ ಮೇಲೆ ಪೂರ್ಣ ಹತೋಟಿ ಸಾಧಿಸಿದ ಹೆಣ್ಣಿನ ಅಧೀನ ಸ್ಥಿತಿಯಾಗಿ ಚೆನ್ನಮ್ಮ ಕಂಡು ಬರುತ್ತಾಳೆ. ಈ ಎಲ್ಲ ಸ್ಥಿತಿಯಲ್ಲೂ ಹೆಣ್ಣು ಒಂದಿಲ್ಲೊಂದು ಬಗೆಯಲ್ಲಿ ತನ್ನ ಅಸ್ಮಿತೆಯನ್ನು ಸ್ಥಾಪಿಸಿದ್ದಾಳೆನ್ನುವ ಡಾ. ಗಾಯತ್ರಿ ನಾವಡರವರ ಅನಿಸಿಕೆ ಸರಿಯಾಗಿಯೇ ಇದೆ."[೩೭]

ನಂತರ ಸಿನ್ನಮ್ಮ ಮತ್ತು ಮಕ್ಕಳೆಲ್ಲರೂ ಕಳುವಾರಹಳ್ಳಿಗೆ ಬಂದು ನೆಲೆಸಿದರು. ತಂಗಿ ಮಾರಕ್ಕನನ್ನು ಸೋದರ ಮಾವ ಕಡೆ ಹುಟ್ಟಿನ ಕಟ್ಟಾಣಿಗೆ ಕೊಟ್ಟು ಮದುವೆ ಮಾಡಿದ ಮೇಲೆ, ಮನೆಯಲ್ಲಿದ್ದ ಮಾರಿ

ತೊಲಗಿದಂತಾಗಿ, ಜುಂಜಪ್ಪನ ಐಶ್ವರ್ಯ ಹೆಚ್ಚಾಯಿತು. ರಾಮಲಕ್ಷ್ಮಣ ಎಂಬ ಅವನ ಮನೆಯ ಕಣಜಗಳು ತುಂಬಿದವು. ಸಿನ್ನಮ್ಮ ಸುಖ ಜೀವನ ಸಾಗಿಸಿದಳು.

ಜೀ.ಶಂ.ಪ.ರವರು ಸಂಗ್ರಹಿಸಿರುವ ದಕ್ಷಿಣ ಸಂಪ್ರದಾಯದ 'ಜನಪದ ಕಾವ್ಯ ಕಥೆಗಳು' ಎಂಬ ಪಾಠದಲ್ಲಿ ಚಿನ್ನಮ್ಮನ ಬಡತನದ ಪ್ರಸ್ತಾಪವಾಗಲ್ಲಿ, ಚಿನ್ನಮ್ಮನ ಶೀಲವನ್ನು ಶಂಕಿಸಿ ಜುಂಜಪ್ಪ ಒಡ್ಡುವಂತಹ ದಿವ್ಯಗಳು ಪ್ರಸ್ತಾಪಗೊಂಡಿಲ್ಲ.

ಆದರೆ ತೀ.ನಂ.ಶಂಕರನಾರಾಯಣರವರ 'ಉತ್ತರ ಸಂಪ್ರದಾಯದ' ಕಥೆಯಲ್ಲಿ ಚಿನ್ನಮ್ಮನ ಅಣ್ಣಂದಿರು ಕೊಟ್ಟಂತಹ ಏಳು ಕರುಗಳನ್ನು ತಂದಂತಹ ತಾಯಿಯ ಶೀಲದ ಬಗ್ಗೆ ಜುಂಜಪ್ಪ ಶಂಕಿಸಿ, ಊರಿನ ಪ್ರಮುಖರ ಮುಂದೆ ನ್ಯಾಯಕ್ಕೆ ಕರೆಸುತ್ತಾನೆ. "ಚಿನ್ನಮ್ಮ ಕೆಲವು ಪರೀಕ್ಷೆಗಳಲ್ಲಿ ಯಶಸ್ವಿಯಾದರೆ ಅವಳು ನಿರಪರಾಧಿ ಯೆಂದು ಒಪ್ಪಿ, ಹಟ್ಟಿಗೆ ಅವಳನ್ನು ಸೇರಿಸುವುದಾಗಿ ಹೇಳಿದ. ಜುಂಜಪ್ಪ ಒಡ್ಡಿದ ಪರೀಕ್ಷೆಗಳು ಇವು,

೧. ಹದಿನಾಲ್ಕು ಕಮರದ ಒನಕೆಗಳ ಒಳನಾರನ್ನು ತೆಗೆಯುವುದು.

೨. ಮೂಗುಹುತ್ತಕ್ಕೆ ಕೈಯಿಟ್ಟು, ಅದರೊಳಗಿರುವ ನಾಗರಹಾವನ್ನು ಎಳೆದು, ಅದರ ಕಟವಾಯವನ್ನು ಸಿಗಿದು, ಆ ಹಾವನ್ನು ಸಿಂಬೆ ಮಾಡಿ ತಲೆಯ ಮೇಲಿಟ್ಟುಕೊಂಡು, ಅದರ ಮೇಲೆ ಸಣ್ಣ ಕಣ್ಣಿನ ಜರಡಿಯಲ್ಲಿ ನೀರು ತುಂಬಿಕೊಂಡು, ಸಿಂಬೆಯ ಮೇಲಿಟ್ಟುಕೊಂಡು ಒಂದು ತೊಟ್ಟು ನೀರೂ ಕೆಳಕ್ಕೆ ಚೆಲ್ಲದಂತೆ ಸಭೆಯನ್ನು ಒಂಬತ್ತು ಸುತ್ತು ಸುತ್ತುವುದು.

೩. ದೊಡ್ಡ ಕಣ್ಣಿನ ಜರಡಿಯಲ್ಲಿ ನೀರು ತುಂಬಿಕೊಂಡು ಒಣಗಿದ ಅರಳಿಮರಕ್ಕೆ ಹೊತ್ತು, ಅದರ ಬುಡಕ್ಕೆ ನೀರು ಹಾಕಿ, ಆ ಮರವನ್ನು ಚಿಗುರಿಸುವುದು.

೪. ಸತ್ತಿರುವ ಕೆಂಗುರಿ ಮಲ್ಲೇಗೌಡನನ್ನು ಸಮಾಧಿಯಿಂದ ಎಬ್ಬಿಸಿ 'ಚಿನ್ನಮ್ಮ ಪಾಪಿಯಲ್ಲ. ಅವಳು ಪತಿವ್ರತೆ. ನನಗೆ ಹಾಸಿದ ಸೆರಗನ್ನು ಅವಳು ಬೇರೆ ಯಾರಿಗೂ ಹಾಸಿಲ್ಲ' ಎಂದು ಅವನಿಂದ ಹೇಳಿಸುವುದು.

೫. ಹದಿನಾಲ್ಕು ತೆರೆಕಟ್ಟಿ, ಚಿನ್ನಮ್ಮ, ಒಂದು ಕಡೆ ನಿಂತು ತನ್ನ ಎರಡು ಮೊಲೆಗಳಿಂದಲೂ ಹಾಲನ್ನು ಕರೆಯಬೇಕು. ಎದೆಯ ಹಾಲು ಒಂದೇ ದಾರದಂತೆ ಹದಿಮೂರು ತೆರೆಗಳ ಮೂಲಕ ಹಾಯ್ದು ಬಂದು ಹದಿನಾಲ್ಕನೆಯ ತೆರೆಗೆ ಬಂದಾಗ ನಾಲ್ಕು ಭಾಗವಾಗಿ ಜುಂಜಪ್ಪ, ಮಾರಣ್ಣ, ಮೈಲಣ್ಣ, ಮಾರಕ್ಕ ಈ ನಾಲ್ಕು ಜನ ಮಕ್ಕಳ ಬೊಗಸೆಗೆ ಬಿದ್ದು ತುಂಬಿ ಹರಿಯಬೇಕು.

ಜುಂಜಪ್ಪ ಒಡ್ಡಿದ ಐದು ಪರೀಕ್ಷೆಯಲ್ಲಿಯೂ ಚಿನ್ನಮ್ಮ ಯಶಸ್ವಿಯಾದಳು. 'ತಾಯಿ, ನಿನ್ನನ್ನು ಈವರೆಗೆ ಸೋಸಿದೆ. ನೀನು ಪತಿವ್ರತೆ, ನಿನ್ನ ಸತ್ಯ ನನಗೆ ಗೊತ್ತಾಯಿತು' ಎಂದ ಜುಂಜಪ್ಪ. ಅನಂತರ ಚಿನ್ನಮ್ಮ ಏಳು ಕೆರೆಗಳಲ್ಲಿ ಏಳೇಳು ಬಾರಿ ಮುಳುಗಿ ಒಂಬತ್ತು ದಿನಗಳ ಕಾಲ ಹಟ್ಟಿಯ ಕಳ್ಳೆಬೇಲಿಯಿಂದ ಹೊರಗೆ ಒಂಟಿ ಕಾಲಿನಲ್ಲಿ ಕುರಿ ಕಾಯಬೇಕಾಯಿತು. ಒಂಬತ್ತು ದಿನ ಕಳೆದ ಮೇಲೆ ಅವಳು ಒಂದು ಹಣ ತಪ್ಪು ಕಟ್ಟಿದಳು. ಒಳದುಡ್ಡಿನ, ಹೊರದುಡ್ಡಿನ ದಂಡ ಕಟ್ಟಿದಳು. ಕೂಲಿ ಮಾಡಿ ಹಣ್ಣು ಕಾಯಿಗಳನ್ನು ತಂದು ಚಿನ್ನಮ್ಮ ಗೋವಿನ ಗಂಜಳವನ್ನು ಕುಡಿದು ಶುದ್ಧಳಾದ ಮೇಲೆ ಜುಂಜಪ್ಪ ಅವಳ ಕೈಗೆ ಮೂರು ತಿಂಗಳ ಮಗುವಾದ ಮಾರಕ್ಕನನ್ನು ಕೊಟ್ಟ."[೩೮]

ಈ ಎರಡು ಪಠ್ಯಗಳಲ್ಲಿ ಬರುವಂತಹ ಪರೀಕ್ಷೆಗಳಲ್ಲಿ ಕೆಲವು ವ್ಯತ್ಯಾಸಗಳಾಗಿವೆ. ತೀ.ನಂ. ಶಂಕರನಾರಾಯಣ ರವರ ಪಾಠದಲ್ಲಿ ಎಲ್ಲಾ ಪರೀಕ್ಷೆಗಳಲ್ಲಿಯೂ ಚಿನ್ನಮ್ಮ ಗೆದ್ದ ನಂತರ ಅವಳಿಗೆ ಗೋವಿನ ಗಂಜಲ ಕುಡಿಸಿ ಪರಿಶುದ್ಧಳಾದ ಮೇಲೆ, ಚಿನ್ನಮ್ಮನನ್ನು ಹಂಚಿಹುಲ್ಲಿನ ಅರಮನೆಗೆ ಕರೆತರುತ್ತಾರೆ. ಮಾರಕ್ಕನ ಮದುವೆಯ ನಂತರ ಐಶ್ವರ್ಯ ಮರಳಿ ಬರುತ್ತದೆ. ಕನ್ನಡ ವಿ.ವಿ.ಯ ಪಠ್ಯದಲ್ಲಿ ತಾಯಿ ಪತಿವ್ರತೆ ಎಂದು ಒಪ್ಪಿದ ನಂತರ ಕಳುವಾರಳ್ಳಿಯ ಅರಮನೆಗೆ ಕರೆದುಕೊಂಡು ಬರುತ್ತಾನೆ.

ಜುಂಜಪ್ಪ ತಾಯಿಗೆ ಒಡ್ಡುವ ಪರೀಕ್ಷೆಗಳನ್ನು ಪುರಾಣ ಸಂಪೂರ್ಣವಾಗಿ ತನ್ನ ಪ್ರಭಾವದ ಕಕ್ಷೆಗೆ ತೆಗೆದು ಕೊಂಡಿದ್ದು, ಕಾಡುಗೊಲ್ಲ ಜನಾಂಗದ ಆಶಯಗಳಿಗೆ ಅನುಗುಣವಾಗಿ ಧಾರ್ಮಿಕ ಸಂಪ್ರದಾಯಗಳನ್ನು ಕ್ರಿಯಾತ್ಮಕವಾಗಿ ರೂಪಿಸಲು, ಕವಿ ಬಳಸಿಕೊಂಡಿರುವಂತಿದೆ.

ಪಶುಪಾಲನೆ ಪ್ರಾರಂಭವಾಗಿ ಪುರುಷ ದೈವಗಳ ಪ್ರಾಬಲ್ಯ ಹೆಚ್ಚಿದಂತೆಲ್ಲ ಸ್ತ್ರೀಪ್ರಧಾನ ಕುಟುಂಬ ವ್ಯವಸ್ಥೆ ನಾಶ ಹೊಂದಿ ಪಿತೃಪ್ರಧಾನ ವ್ಯವಸ್ಥೆ ರೂಢಿಗೆ ಬಂದುದರ ಪರಿಣಾಮವಾಗಿ ಹೆಣ್ಣುಮಕ್ಕಳ ಪ್ರಾಬಲ್ಯವೂ ಕ್ಷೀಣಿಸತೊಡಗಿತು. ಪುರುಷ ಸಮಾಜ ಪ್ರಾಚೀನ ಕಾಲದಿಂದಲೂ ಸಹ ಸ್ತ್ರೀಯನ್ನು ಶೋಷಿಸುತ್ತಲೇ ಬಂದಿದೆ. ಪುರುಷ ಪ್ರಾಬಲ್ಯವೂ ಸಮಾಜದಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯ ಇರಲಿಲ್ಲವಾದ್ದರಿಂದ ಪುರಾಣ ಕಾಲದಿಂದಲೂ ಸ್ತ್ರೀ ಒಂದಲ್ಲ ಒಂದು ವಿಧದಲ್ಲಿ ಶೋಷಣೆಗೆ ಒಳಗಾಗುತ್ತಿದ್ದಾಳೆ. ಅವರು ಎಷ್ಟೇ ಕಷ್ಟ-ನಷ್ಟಗಳಿಗೆ ಒಳಗಾದರೂ ಸಹ ತಮ್ಮ ಪಾತಿವ್ರತ್ಯವನ್ನು ಕಾಪಾಡಿಕೊಳ್ಳಬೇಕು. ಪವಾಡ ಪುರುಷರಿಗೆ ಜನ್ಮವಿತ್ತ ತಾಯಂದಿರಿಗೆ ಲೋಕಾಪವಾದ ತಪ್ಪುವುದಿಲ್ಲ. ಇಂತಹ ಪವಾಡ ಪುರುಷನಿಗೆ ಜನ್ಮವಿತ್ತ ಸಿನ್ನಮ್ಮ ತನ್ನ ಪಾತಿವ್ರತ್ಯವನ್ನು ಸಾಬೀತುಪಡಿಸಿ ಅವಳು ಸಹ ಒಂದು ಅಲೌಕಿಕ ಶಕ್ತಿವುಳ್ಳವಳು ಎಂಬುವುದನ್ನು ತೋರಿಸಿದ್ದಾಳೆ.

ದನಗಳ ಹುಲ್ಲು-ನೀರಿಗೋಸ್ಕರ ಕಾವಲಿನಿಂದ ಕಾವಲಿಗೆ, ಕಾಡಿನಿಂದ-ಕಾಡಿಗೆ ದನಗಳನ್ನು ಹೊಡೆ ಯುತ್ತಿದ್ದರು. ಚೇಳೂರು ಕಾವಲಿಗೆ ದನಗಳನ್ನು ಹೊಡೆದುಕೊಂಡು ಹೋಗುವಂತೆ ಮಾರಣ್ಣ, ಮೈಲಣ್ಣನಿಗೆ ಹೇಳಿ ಜುಂಜಪ್ಪ ತಾಯಿಯ ಅಪ್ಪಣೆ ಮತ್ತು ದನಗಳನ್ನು ಮೇಯಿಸಲು ಬೇಕಾದ ಹುಲ್ಲಿಗೆ ಬನ್ನಿ ಹಣವನ್ನು ಪಡೆದುಕೊಂಡು ಬರಲು ಹೊರಟ. ಯಾವ ಕಾವಲಿಗೆ ದನಗಳನ್ನು ಹೊಡೆದರೂ ತಾಯಿಯ ಅಪ್ಪಣೆಯಿಲ್ಲದೆ ಹೋದವನಲ್ಲ. ಹನ್ನೆರಡು ವರ್ಷದಿಂದ ಮಕ್ಕಳಿಗಾಗಿ ಹಂಬಲಿಸಿದ್ದ ಚಿನ್ನಮ್ಮ ಜುಂಜಪ್ಪ ಒಬ್ಬನೇ ಬಂದುದನ್ನು ನೋಡಿ ಬೇಸರಪಟ್ಟಳು.

"ಏನು ದರುಮರೆ ದನವೆಲ್ಲೊ ಮನೆಸ್ವಾಮಿ
ಮಕ್ಕಳ ಎಲ್ಲಿ ಬಿಟ್ಟು ಬಂದೇ
ಹಾಲುಕಂದ ನೀರುಕಂದ ಮಾರಣ್ಣ ಮೈಲಣ್ಣ
ಚಿಕ್ಕಮಕ್ಕಳ ಎಲ್ಲಿ ಬಿಟ್ಟು ಬಂದೆ"

(ದ.ಕ.ಜ.ಕಾ. ಪುಟ ೨೪೧)

ಎಷ್ಟೋ ವರ್ಷಗಳ ಮೇಲೆ ಮನೆಗೆ ಬಂದ, ತನಗೆ ತಾಯಿ ನೀಡಿದ ಸ್ವಾಗತದ ವೈಖರಿ ಬೇಸರ ತಂದಿತು. ಜುಂಜಪ್ಪನಿಗೆ, ಏನೂ ಬೇಡವಾಗಿ, 'ರೇವುಂಡೆ' ಮರದಡಿಯಲ್ಲಿ ಮಲಗಿದನು. ಅತ್ತ ಚೇಳೂರು ಕಾವಲಿನಲ್ಲಿ

ಚೇಳೂರು ದೊರೆಗಳ ದಂಡು, ಜುಂಜಪ್ಪನ ದನಗಳ ಮೇಲೆ ದಾಳಿಮಾಡಿ, ಮಾರಣ್ಣ, ಮೈಲಣ್ಣರನ್ನು ಕೈಕಾಲು ಕಟ್ಟಿ ಹಿಂಸಿಸುತ್ತಾರೆ. ಬಡಮೈಲನಿಗೆ ಕ್ರೂರ ಹಿಂಸೆ ನೀಡುತ್ತಾರೆ. ತನ್ನ ಮೇಲೆ ಮುನಿದು ಜುಂಜಪ್ಪ ಮಲಗಿದ್ದಾನೆಂಬ ವಿಷಯದ ತಿಳಿದ ತಾಯಿ 'ತಪ್ಪುಗಾಣಿಕೆ' ಕಟ್ಟಿ ಕೇಳಿಕೊಂಡ ಮೇಲೆ ಇನ್ನೂ ನಿದ್ದೆ ಪೂರ್ಣ ಹರಿಯದೆ ಗುಡ್ಡದ ಮಲ್ಲಪ್ಪನ ಏಳೇಳು ಜೋಡಿ ಹರೆಗಳು ಬೋರಿಟ್ಟ ಮೇಲೆ ಮೇಲೆದ್ದನು. ಕಂಚಿನ ಎಣ್ಣೆ ಬಟ್ಟಲಿನಲ್ಲಿ ಬಡಮೈಲನನ್ನು ಚೇಳೂರಿನ ಕಂಬಕ್ಕೆ ಕಟ್ಟಿರುವ ದೃಶ್ಯ ಕಾಣಿಸಿತು. ತಾಯಿಯಿಂದ ಆಶೀರ್ವಾದ ಪಡೆದು ತಾಯಿಕೊಟ್ಟ ಬುತ್ತಿಯನ್ನು ತೆಗೆದುಕೊಂಡು ಅಲ್ಲಿಂದ ಕೂಡಲೇ ಹೊರಟು, ಚೇಳೂರಿನ ಪ್ರಸಂಗದಲ್ಲಿ ಜಯಶೀಲನಾಗಿದ್ದಲ್ಲದೆ, ಅಲ್ಲಿನ ದೊರೆತನವೇ ಅವನದಾಗುತ್ತದೆ. ಅನಂತರ ಹದಿನಾಲ್ಕು ಗೂಡಿನ ದನಗಳೊಂದಿಗೆ ತಮ್ಮಂದಿರನ್ನು ಕರೆದುಕೊಂಗು ಆಲರ್ತಿಬಯಲು ಸಾಲು ತಗ್ಗಲಿ ಮರದ ನೆರಳಿಗೆ ಬಂದ. ಕಳವೇರಹಳ್ಳಿಯ ಕೆರೆ ಏರಿ ಮೇಲೆ ಸುರಹೊನ್ನ ಮರದ ನೆರಳಿನಲ್ಲಿ ಮಲಗಿದ. ಮೂರು ತಿಂಗಳು ಕೇಡಿನ ನಿದ್ರೆ ಬಂದಿತು. ನಿದ್ದೆ ಕಳೆದ ಮೇಲೆ ದನಗಳನ್ನು ಹುಲಿಕುಂಟೆ ತಮ್ಮಣ್ಣನ ಕಾವಲಿಗೆ ಬಿಡುವಂತೆ ತಮ್ಮಂದಿರಿಗೆ ಹೇಳಿ ತಾಯಿಯ ಅಪ್ಪಣೆ ಬೇಡಲು ಹೆಂಚಿಹುಲ್ಲಿನ ಅರಮನೆಗೆ ಹೋದ. ಆದರೆ "ಹುಲಿಕುಂಟೆ ತಮ್ಮಣ್ಣ ಬರುವ ರಭಸಕ್ಕೆ ಹಕ್ಕಿ, ಪಕ್ಷಿ ನೆಲಕ್ಕೆ ಬಿದ್ದು ಪ್ರಾಣ ಬಿಡುತ್ತವೆ."[೨೯] ಅಂಥವನ ಕಾವಲಿಗೆ ಅಪ್ಪಣೆ ಕೊಡಲು ಚಿನ್ನಮ್ಮ ನಿರಾಕರಿಸಿದಳು. ಜುಂಜಪ್ಪ ತಾಯಿಯ ಮೇಲೆ ಮುನಿಸು ಮಾಡಿಕೊಂಡು ಮೂರು ತಿಂಗಳು ಕೇಡಿನ ನಿದ್ರೆ ಮಾಡಿದಾಗ ದನಗಳಿಗೆ ಗೊಡ್ಡು ಜಡ ಹತ್ತಿತ್ತು. ಗೌರಸಂದ್ರದ ಮಾರಿಯನ್ನು ಜುಂಜಪ್ಪ ವಿಚಾರಿಸಿದಾಗ, ಪರಿಹಾರವನ್ನು ಸೂಚಿಸಿದಳು. ಅವಳ ಸಲಹೆಯಂತೆ ಈದಿಲ್ಲದ ಹೆಣ್ಣುಕರುವಿನ ಗಂಜಲವನ್ನು ದನಗಳ ಮೇಲೆ ಎರಚಿದಾಗ ಜಡ ವಾಸಿಯಾಗುವುದು. ಗಾಡಿಗಗುಂಟೆ ಸಾಣೆಕೆರೆ ಪುಟ್ಟಣ್ಣನನ್ನು ಸಾಹಿಸಿದ ಮೇಲೆ ಪುನಃ ಮೂರು ತೀಂಗಳ ಮಾಯದ ನಿದ್ರೆಗೆ ಹೋದ. 'ತಾಳೆದುರ್ಗಿ ಕಾವಲಿಗೆ ತಾಯಿಯ ಅಪ್ಪಣೆ ಪಡೆದು ಹೊರಟಾಗ ಹಲವು ಅಪಶಕುನಗಳಾದವು. ದೇವೇಂದ್ರನಿಗೆ ಓಲೆ ಬರೆದು ದೇವಗಣಿಕೆಯರಿಂದ ಅಡಿಗೆ ಮಾಡಿಸಿ, ಎಲ್ಲ ದೈವಗಳಿಗೂ 'ನೀರು ಮುಟ್ಟದ ಅಡಿಗೆ'ಯನ್ನು ಹಾಕಿಸಿದ. ರಾಯಕಳೇವರಹಳ್ಳಿಯ ಭೂತವನ್ನು ಮಾತ್ರ ಕರೆಯಲು ಮರೆತ. ಆದರೆ ತಾಳೆದುರ್ಗಿಯನ್ನು ಈ ಭೂತದ ಸಹಾಯದಿಂದಲೇ ಸಂಹರಿಸಿದ ಮೇಲೆ, ಭರ್ಜರಿ ಔತಣ ಹಾಕಿಸಿದ್ದಲ್ಲದೆ ಭೂತಕ್ಕೆ ಗುಡಿಯನ್ನು ಕಟ್ಟಿಸಿಕೊಟ್ಟ. ದೊಡ್ಡಕ್ಕನಿಗೆ ಸರಿಯಾಗಿ ಬುದ್ಧಿ ಕಲಿಸಿದ ಮೇಲೆ ಜುಂಜಪ್ಪನಿಗೆ ಮೂರು ತಿಂಗಳು ಕೇಡಿನ ನಿದ್ರೆ ಹತ್ತಿ ಮೂಗುತ್ತ ಬೆಳೆಯಿತು. ಸೀರ್‍ಯದ ರಂಗಣ್ಣನ ದಂಡು ಜುಂಜಪ್ಪನ ದನಗಳನ್ನು ನಾಶ ಮಾಡಲು ಹೊರಟಾಗ, ತಾಯಿ ಜುಂಜಪ್ಪನನ್ನು ಹುಡುಕಲು ೧೪ ಕಾವಲನ್ನು ಸುತ್ತಿದಳು. ಜುಂಜಪ್ಪನನ್ನು ಹುಡುಕುತ್ತ, ಮೂಗುತ್ತವನ್ನು ಸೀಳಿದಳು. 'ಹಸಿಯ ನಿದ್ದೆ ಬಿಸಿಯ ನಿದ್ದೆ ಯಾರು ಮಾಡಿದರೂ ಬೆನ್ನು ಭಾಗಕ್ಕೆ ಬಂದು ನಿಲ್ಲಿ' ಎಂದು ಜುಂಜಪ್ಪ ನುಡಿದ. ಮುಂಭಾಗಕ್ಕೆ ಉರಿಗಣ್ಣು ಬಿಟ್ಟಾಗ 'ಹರಿಯಬ್ಬೆ ಆಲದ ಮರ' ಉರಿದು ಬೂದಿಯಾಯಿತು. ತಾಯಿ ಮುಂದಿನ ಗಂಡಾಂತರ ವನ್ನು ತಿಳಿಸಿದಳು. ಬಳ್ಳಾರಿ ತುರುಕನ ವೇಷಧರಿಸಿ, ಭೂಮಿ ಬಿಟ್ಟು ಅಂತರ ಮೇಘಕ್ಕೆ ಕುದುರೆ ಹಾರಿಸಿ, ಜುಂಜಪ್ಪ ರಂಗಣ್ಣನ ದಂಡನ್ನೆಲ್ಲ ನಾಶ ಮಾಡಿ ತನ್ನ ನಿಜ ರೂಪ ತೋರಿದ ರಂಗಣ್ಣ ಜುಂಜಪ್ಪನ ಪಾದಕ್ಕೆ ಶರಣಾದ.

ಸೋದರ ಮಾವಂದಿರು, ಜುಂಜಪ್ಪನಿಗೆ ಮದ್ದಿಟ್ಟು ಕೊಲ್ಲುವ ನಿರ್ಧಾರದಿಂದ ತಂಗಿ ಚಿನ್ನಮ್ಮನ ಬಳಿಗೆ ಬಂದು ಸೋದರಳಿಯಂದಿರನ್ನು ಬಿಲ್ಲಿನ ಹಬ್ಬದ ಊಟಕ್ಕೆ ಕಳಿಸಿಕೊಡುವಂತೆ ಒತ್ತಾಯಿಸಿ, ಒಪ್ಪಿಸಿದರು.

ಮಾವಂದಿರ ಮೋಸವನ್ನು ತಿಳಿದೂ ಸಹ, ತಾಯಿಯ ಮಾತಿಗಾಗಿ ತಮ್ಮಂದಿರ ಜೊತೆ ಹೋದ. ತಂಗಿ ಮಾರಕ್ಕನಿಂದಲೇ ಸೋದರಮಾವಂದಿರು ವಿಷವಿಕ್ಕಿಸಿದರು. ಜುಂಜಪ್ಪ ತಮ್ಮಂದಿರು ಊಟ ಮಾಡದಂತೆ ಹೇಳಿ ತಾನೊಬ್ಬನೇ ಮಾಡಿ ಮಡಿದ. ಮಡಿದ ಏಳು ದಿನಕ್ಕೆ ಮತ್ತೆ ನರಲೋಕಕ್ಕೆ ಬಂದು ಕಂಬೇರಹಟ್ಟಿಯನ್ನೂ, ಸೋದರಮಾವಂದಿರನ್ನೂ, ಗರ್ಭಿಣಿಯಾದ ತಂಗಿ ಮಾರಕ್ಕನನ್ನು ಹೊರತುಪಡಿಸಿ ಉರಿಬಾಣದಿಂದ ನಾಶ ಮಾಡುತ್ತಾನೆ.

ತಾಯಿ ಚಿನ್ನಮ್ಮನಿಗೆ ಮಕ್ಕಳ ಮೇಲಿದ್ದ ಅಗಾಧವಾದ ಮಮತೆ, ಪ್ರೀತಿ, ಚೇಳೂರಿನಲ್ಲಿ ಮಕ್ಕಳು ಜೂಜಿನಲ್ಲಿ ಸತ್ತು ಹೋದರೆಂದು ಅಣ್ಣಂದಿರಿಂದ ಸುದ್ದಿ ತಿಳಿದು ಮಕ್ಕಳು ಸತ್ತ ಮೇಲೆ ತಾನು ಬದುಕಿದ್ದು ಮಾಡುವುದಾದರೂ ಏನೆಂದು, ಕಳವೇರಹಳ್ಳಿಯಲ್ಲಿ ಚಿನ್ನಮ್ಮ 'ಕೆಂಡಕೊಂಡ'ವಾಗಲು ಸಿದ್ಧತೆ ನಡೆಸಿದಳು. ಈ ವಿಷಯ ತಿಳಿದ ಜುಂಜಪ್ಪ ತನ್ನ ಚಿಪ್ಪಗೊಡಲಿಯನ್ನು ಹಿಡಿದು ಮರವೊಂದರ ಮೇಲೆ ಏರಿ ತಿರುವಿ ಎಸೆದನು. ಅದು ಚಿನ್ನಮ್ಮನ ಬಳಿಗೆ ಹೋಗಿ ಬಿದ್ದಿತು. ಅದನ್ನು ಕಂಡ ಚಿನ್ನಮ್ಮ ಮಕ್ಕಳು ಬದುಕಿರುವರೆಂದು ಅರಿತಳು. ಪ್ರೀತಿಪಾತ್ರರು ಯಾರು ಸತ್ತರೂ ಅಗ್ನಿಪ್ರವೇಶ ಮಾಡುತ್ತಿದ್ದರೆಂಬ ದಾಖಲೆ ಇಲ್ಲಿ ಕಂಡುಬರುತ್ತದೆ. ಕಂಬೇರ ಚಿನ್ನಮ್ಮ ವಿಧವೆಯೆಂದು ಯಾರೂ ಭಾವಿಸಲಿಲ್ಲ. ಆಕೆ ಮುತ್ತೈದೆಯಂತೆಯೇ ಬದುಕಿದ್ದಳು. ಕೆಂಡಕ್ಕೆ ಹೋಗಿ ಬೀಳುವ ಸಂಕಲ್ಪ ಮಾಡಿದಾಗ ಮಡಿಲಕ್ಕಿ ಕಟ್ಟಿಸಿಕೊಂಡು ಬರುತ್ತೇನೆಂದು ಹೇಳುತ್ತಾಳೆ. "ಕಾಡುಗೊಲ್ಲರ ಆಚಾರ-ವಿಚಾರ ಸೂತಕಾದಿಗಳನ್ನು ತೀವ್ರವಾಗಿ ಗಮನಿಸಿದಾಗ ಈ ಜನ ಒಂದಾನೊಂದು ಕಾಲದಲ್ಲಿ ಯಾವುದೋ ದಟ್ಟವಾದ ಸಂಸ್ಕೃತಿಯನ್ನು ಹೊಂದಿದ್ದವರು ಸಂಪರ್ಕ ಕಡಿದುಕೊಂಡು ಬೆಟ್ಟ ಕಾಡುಗಳ ನಡುವಿದ್ದ ಬುಡಕಟ್ಟು ಜನರಾದರೋ ಅಥವಾ ಇವರ ಬದುಕಿನ ಶೌಚವನ್ನು ಮಾತ್ರ ಇತರ ಧರ್ಮದವರು ಅನುಸರಿಸಿದರೋ ತಿಳಿಯುತ್ತಿಲ್ಲ"[೪೦] ಎನ್ನುತ್ತಾರೆ ಸಿದ್ಧಗಂಗಯ್ಯನವರು.

ಜುಂಜಪ್ಪ ಕೆಚ್ಚೆದೆಯ ಕಲಿವೀರ. ಎಲ್ಲೆ ಹೋದರೂ ಗೆದ್ದು ಬರಬಲ್ಲ ಸಮರ್ಥ ವ್ಯಕ್ತಿ. ವೀರಭದ್ರನ ಅವತಾರ. ಆದರೆ ತಾಯಿ ಚಿನ್ನಮ್ಮ ಜುಂಜಪ್ಪನನ್ನು ತನ್ನ ಮಗನಾಗಿ ಕಂಡವಳೇ ಹೊರತು ಅವನೊಬ್ಬ ಮಹಿಮಾಪುರುಷ ಎಂಬುದು ಅವಳಿಗೆ ಮುಖ್ಯವಾಗಿರಲಿಲ್ಲ.

ಜುಂಜಪ್ಪ ಸೋದರಮಾವಂದಿರು ಮದ್ದಿಕ್ಕುವ ಮೋಸದ ಪ್ರಸಂಗದಿಂದ ಹತನಾದ. ಸತ್ತ ಏಳು ದಿವಸಗಳ ಮೇಲೆ ಮತ್ತೆ ಉರಿದೆದ್ದು ಬಂದು, ಉರಿಬಾಣಗಳನ್ನು ಬಿಟ್ಟು ಕಂಬೇರಹಟ್ಟಿ ಹಾಗೂ ಸೋದರ ಮಾವಂದಿರನ್ನು ನಾಶ ಮಾಡುತ್ತಾನೆ. ತಾಯಿ ಈ ಕೃತ್ಯಕ್ಕೆ ಅಡ್ಡಿಪಡಿಸುತ್ತಾಳೆ. ತಾಯಿಯ ಮಾತನ್ನು ಮೀರಿ ಎಂದು ನಡೆಯದ ಜುಂಜಪ್ಪ ಈಗ ಹೊಸ ಹುಟ್ಟನ್ನು ಪಡೆದು ಎದ್ದಿದ್ದಾನೆ. ಅವನ ತಾಳ್ಮೆ, ಸಹನೆ, ಕರುಣೆಗಳೆಲ್ಲ ಉರಿಮದ್ದಿನಲ್ಲಿ ಭಸ್ಮವಾಗಿ ಹೋಗಿವೆ. ತಾಯಿಯನ್ನು ಲೆಕ್ಕಿಸದೆ ಅವನಾಡುವ ನುಡಿಗಳು ಜುಂಜಪ್ಪನಲ್ಲಿ ಸುಪ್ತವಾಗಿದ್ದ ರೊಚ್ಚಿನ ಭೀಕರತೆಯನ್ನು ಧ್ವನಿಸುವಂತಿದೆ.

"ಅವಳೇನ ಆಡೋದು ನಾವೇನ ಕೇಳೋದು
ಹೂಡೋ ಮಾರಣ್ಣ ಮರಬಿಲ್ಲ -ಕಂಬೇರಿಗೆ
ಬಾಳೆಯ ಕಾಯಂತೆ ಬಾಣ ಸುರಿಯಲಿ"

(ದ.ಕ.ಜ.ಕಾ., ಪುಟ ೨೪೩)

"ಜುಂಜಪ್ಪ ಮತ್ತು ಅವನ ಸಮುದಾಯ ಇಂದು ವೈಷ್ಣವೀಕರಣಕ್ಕೆ ಒಳಗಾಗಿದ್ದರೂ, ಜುಂಜಪ್ಪನ ಕಾವ್ಯದೊಳಗೆ ಜುಂಜಪ್ಪನ ವ್ಯಕ್ತಿತ್ವದ ಸಮೀಕರಣ ಶೈವಧಾರೆಯ ವೀರಭದ್ರನ ವ್ಯಕ್ತಿತ್ವದೊಡನೆ ನಡೆಯುತ್ತದೆ. ದಕ್ಷ-ಯಜ್ಞವನ್ನು ನಾಶಮಾಡಲು ಶಿವನಿಗಾದ ಅಪಮಾನದ ವಿರುದ್ಧ ಸೇಡು ತೀರಿಸಿಕೊಳ್ಳಲು ವೀರಭದ್ರ ಶಿವನ ಉರಿ ಕೋಪದ ಉತ್ಕಟ ಸ್ಥಿತಿಯಿಂದ ಸೃಷ್ಟಿಸಿದ ವ್ಯಕ್ತಿತ್ವವಾಗಿದೆ. ಜುಂಜಪ್ಪ ತನ್ನೆಲ್ಲ ಪಶುಗಳೊಂದಿಗೆ ಸುಖವಾಗಿದ್ದಾಗ ಅವನ ಮಾವಂದಿರು ಕೊಡುವ ತೊಂದರೆಗಳು ಮಾಡುವ ಅವಮಾನಗಳು ದಕ್ಷಬ್ರಹ್ಮನು ಶಿವನನ್ನು ಅವಮಾನಿಸಿದ ಪ್ರಸಂಗವನ್ನು ನೆನಪಿಸುತ್ತದೆ. ವೀರಭದ್ರನ ವ್ಯಕ್ತಿತ್ವದ ಪ್ರಧಾನ ರೂಪಗಳಾದ ಸಿಟ್ಟು, ದ್ವೇಷ ತೀರಿಸಿಕೊಳ್ಳುವ ಛಲ ಅವರಿಗೆ ಮುಖ್ಯವಾಗುತ್ತವೆ."[೪೧]

ತನ್ನ ತೌರೂರು ಮಣ್ಣುಗೂಡಿ ಹೋದ ದೃಶ್ಯವನ್ನು ತಾಯಿ ಸಿನ್ನಮ್ಮ ದೂರದ ಕಳವೇರಹಳ್ಳಿಯಲ್ಲಿ ನಿಂತು ವೀಕ್ಷಿಸಲೆಂದೇ ಜುಂಜಪ್ಪ

"ಕಂಬೇರ ಹಟ್ಟಿ ಮೇಲೆ ಕಾಗೆ ಬೋರಿಟ್ಟವೆ
ಎದ್ದು ನೋಡೆ ಚಿನ್ನ ತೌರೂರ-ನಿಮ್ಮಣ್ಣಗಳ
ಒದ್ದಾಡಿ ಕೀಳುತವೆ ರಣಹದ್ದು"

(ದ.ಕ.ಜ.ಕಾ., ಪುಟ ೨೪೩)

ಎಂಥ ಭೀಕರ ದೃಶ್ಯವಿದು.

ಧರ್ಮ ಸಂಸ್ಥಾಪನೆಗಾಗಿ, ನೀತಿ ಬೋಧನೆಗಾಗಿ ಜನಪದ ದೈವಗಳು ಅವತರಿಸಿದ್ದು, "ಆ ಸಮಾಜದ ಜನರು ಬೆಳೆಸಿಕೊಂಡು ಬಂದ ನಂಬಿಕೆ ಮೌಲ್ಯಗಳ ಪ್ರಚಾರಕ್ಕಾಗಿ. ಹೀಗಾಗಿ ಈ ಪುರಾಣಗಳ ವೀರ ಪುರುಷರು ಕೆಲವೊಮ್ಮೆ ಹೆತ್ತ ತಾಯಿಯಂತೆ ಪ್ರೀತಿ ತೋರಿಸುವುದು, ಕೆಲವೊಮ್ಮೆ ರೌದ್ರರೂಪ ಧರಿಸಿ ಶಿಕ್ಷಿಸುವುದೂ ತಮ್ಮ ದೈವತ್ವದ ಬಗ್ಗೆ ಜನಗಳಲ್ಲಿ ವಿಶ್ವಾಸ ಮೂಡಿಸಲು ಸಾಹಸ ಕೃತ್ಯಗಳನ್ನು ಮಾಡಿ ತೋರಿಸುವುದೂ ಕಂಡು ಬರುತ್ತದೆ."[೪೨]

ಜುಂಜಪ್ಪ ಮತ್ತು ಅವನ ಸಮುದಾಯ ಬಹುಶಃ ಮೂಲದಲ್ಲಿ ಶೈವರಾಗಿದ್ದು ಇಂದು ವೈಷ್ಣವೀಕರಣಕ್ಕೆ ಒಳಗಾಗಿದ್ದರೆ. ಕಾವ್ಯದಲ್ಲಿ ಜುಂಜಪ್ಪನ ವ್ಯಕ್ತಿತ್ವದ ಸಮೀಕರಣವನ್ನು ಶೈವ ವಿಧಿಯ ವೀರಭದ್ರನ ವ್ಯಕ್ತಿತ್ವದೊಡನೆ ಮಾಡಲಾಗುತ್ತದೆ. ಶಿವನ ಉರಿಗೋಪದ ಉಗ್ರತೆಯ ಸ್ಥಿತಿಯಿಂದ ಸೃಷ್ಟಿಯಾದ ವ್ಯಕ್ತಿತ್ವ ವೀರಭದ್ರನದು. ಜುಂಜಪ್ಪನ ಸೋದರ ಮಾವಂದಿರು ಒಡ್ಡುವ ತೊಂದರೆಗಳು, ಅವಮಾನಗಳು, ಶಿವನನ್ನು ದಕ್ಷ ಬ್ರಹ್ಮ ಅವಮಾನಿಸಿದ ಪ್ರಸಂಗವನ್ನು ನೆನಪಿಸುತ್ತದೆ. ಮಾವಂದಿರಿಂದ ಹತನಾದ ಜುಂಜಪ್ಪ ಏಳು ದಿನಗಳ ನಂತರ ಪವಾಡ ಸದೃಶ ರೀತಿಯಲ್ಲಿ ಮತ್ತೆ ಬದುಕಿ ಬಂದು ಅವರ ಹಟ್ಟಿಯನ್ನು ತನ್ನ ಉರಿಗಣ್ಣಿನಿಂದ ಸುಟ್ಟು ಬೂದಿ ಮಾಡಿ, ತಾನೂ ಸಾಯುವುದನ್ನು ವೀರಭದ್ರನ ವಿಶಿಷ್ಟಗಣ್ಣಿನಿಂದ ಸುಟ್ಟ, ಛಲಗಳೊಡನೆ ಜುಂಜಪ್ಪನನ್ನು ಸಮೀಕರಿಸುತ್ತಾರೆ. "ಮುಖ್ಯವಾಗಿ ಹಗೆಯನ್ನು ನಾಶಪಡಿಸಿಯೇ ತೀರುವೆನೆಂಬ ಛಲ ಕೆಳವರ್ಗಗಳ ಸಾಂಸ್ಕೃತಿಕ ಚರಿತ್ರೆಯಲ್ಲಿ ಹಲವು ಸಲ ಪುನರಾವರ್ತನೆಗೊಂಡಿದೆ."[೪೩] ಹೀಗಾಗಿ ಜುಂಜಪ್ಪ ತನ್ನ ಅಲೌಕಿಕ ಕತೆಯಿಂದ ಹೊರತುಪಡಿಸಿ ನೋಡಲು ಸಾಧ್ಯವೇ ಇಲ್ಲದ ರೀತಿಯಲ್ಲಿ ಅವನನ್ನು ಪವಾಡ ಮಹಿಮೆಗಳು

ಆವರಿಸಿಕೊಂಡಿವೆ. ಜನಾಂಗದ ಆಶಯಗಳಿಗೆ ಅನುಗುಣವಾಗಿ ಜುಂಜಪ್ಪನ ಪುರಾಣವನ್ನು ರೂಪಿಸಲಾಗಿದ್ದು, ಹೆಜ್ಜೆಹೆಜ್ಜೆಗೂ ಗೊಲ್ಲ ಜನಾಂಗದ ದಟ್ಟ ಸಾಂಸ್ಕೃತಿಕ ಹಾಗೂ ಧಾರ್ಮಿಕ ಹಿನ್ನೆಲೆಯಲ್ಲಿ ಚಿತ್ರ ನೀಡುವುದರೊಂದಿಗೆ ಜನಾಂಗ ವಿಧಿ-ವಿಧಾನಗಳ ವಿವರಗಳನ್ನು ನೀಡುತ್ತಾ, ಕಾವ್ಯ ಕಾಡುಗೊಲ್ಲ ಜನಾಂಗದ ಸಂವಿಧಾನದ ರೂಪ ತಳೆಯುತ್ತದೆ.

ಜುಂಜಪ್ಪ, ವೀರಭದ್ರನ ಅವತಾರವೆಂಬ ವಾದ ಬೆಳೆದು ಬಂದಿದ್ದರೂ ಅವನು ಗೊಲ್ಲ ಜನಾಂಗದ ಇತರ ವೀರರಂತೆ ಒಂದು ಕಾಲಕ್ಕೆ ಬದುಕಿದ್ದ ಒಬ್ಬ ವೀರ, ಆದರ್ಶ ವ್ಯಕ್ತಿ ಹಾಗೂ ಪರೋಪಕಾರಿಯಾಗಿದ್ದಿರಬಹುದು. ಕಾಲಕ್ರಮೇಣ ಅವನ ಸುತ್ತ ಪುರಾಣದ ಕಥೆಗಳು ಆವರಿಸಿ, ಜನಾಂಗದ ಆರಾಧ್ಯ ದೈವದ ಮಟ್ಟಕ್ಕೇರಿಸಿರಬಹುದು. ಜುಂಜಪ್ಪ ತಂದೆ ಸತ್ತಾಗ ಯಮನನ್ನು ಕಂಡು ತನ್ನ ತಂದೆಯನ್ನು ಮೂರು ಗಳಿಗೆ ಕಾಲ ತಮ್ಮಲ್ಲಿಗೆ ಕರೆತಂದು ಅವನಿಂದ ಕುಲಧರ್ಮವನ್ನು ತಿಳಿದು ತಂದೆಯ ಹಿತವಚನಕ್ಕೆ ತಲೆ ಬಾಗಿದವನು. ತನ್ನ ಹಿರಿಯರ ಬಗ್ಗೆ ವಿವರವಾಗಿ ತಿಳಿದುಕೊಂಡವನು. ತನ್ನ ವಂಶದ ಹಕ್ಕುಗಳನ್ನು ಅರಿತವನು. ತಾಯಿಯು ಮೇಲೆ ಭಕ್ತಿ ಉಳ್ಳವನು. ತಾಯಿಯ ಆಶೀರ್ವಾದವನ್ನು ಪಡೆಯದೆ ಯಾವುದೇ ಕಾರ್ಯಕ್ಕೆ ಹೋಗುತ್ತಿರಲಿಲ್ಲ. ಕಾವ್ಯ ಈ ಅಂಶವನ್ನು ಸಮರ್ಥವಾಗಿ ಚಿತ್ರಿಸಿದೆ. ಚೇಳೂರು ಕಾವಲು ಜುಂಜಪ್ಪನ ವಶವಾದ ಮೇಲೆ ತಾಯಿಯನ್ನು ನೋಡಿ ಬರುವ ಹಂಬಲವಾಗಿ ಮಾರಣ್ಣ, ಮೈಲಣ್ಣ ಮತ್ತು ಬಡಮೈಲನಿಗೆ ಬುದ್ಧಿ ಹೇಳಿ ಕಳವೇರಳ್ಳಿಗೆ ಹೋಗುತ್ತಾನೆ. ತಾಯಿಯ ಮಕ್ಕಳನ್ನು ಕಂಡು ಹನ್ನೆರಡು ವರ್ಷಗಳಾಗಿತ್ತು. ಅವರಿಗೋಸ್ಕರ ನೀರು ಎಣ್ಣೆಯ ಜೊತೆ ದಾರಿ ಕಾಯುತ್ತಿದ್ದಳು. ಆದರೆ ಜುಂಜಪ್ಪ ಮಾತ್ರ ಬಂದ ಉಳಿದ ಮಕ್ಕಳು ಮತ್ತು ಗೋವುಗಳಿಲ್ಲದ್ದನ್ನು ನೋಡಿದ ತಾಯಿ ದನವೆಲ್ಲೊ, ಹಾಲು ಕಂದ, ನೀರು ಕಂದ ಮಾರಣ್ಣ, ಮೈಲಣ್ಣ, ಚಿಕ್ಕ ನುಕ್ಕಳೆಲ್ಲೆಂದು ನೊಂದು ಆತಂಕದಿಂದ ಕೇಳುತ್ತಾಳೆ. ತಾಯಿಯನ್ನು ಕಾಣಲು ಅಷ್ಟು ದೂರದಿಂದ ಹಂಬಲಿಸಿ ಬಂದ ನನ್ನ ಕ್ಷೇಮದ ಬಗ್ಗೆ ಅಂತಃಕರಣದ ಮಾತನಾಡಿದೆ ಮೌನವಾಗಿದ್ದುದನ್ನು ಕಂಡು ಜುಂಜಪ್ಪ ಪೆಚ್ಚಾದ. ತಾಯಿಯನ್ನು ಕಂಡು ದುಃಖ ಉಕ್ಕಿ ಬಂತು. ಕೋಪ ಹೆಚ್ಚಾಯಿತು. ಮರುಮಾತನಾಡದೆ ಅಲ್ಲಿಂದ ಹೊರಟ. ಮನಸ್ಸು ಬಂದೆಡೆಗೆ ಏಕಾಂಗಿಯಾಗಿ ಭಾರವಾದ ಮನಸ್ಸಿನಲ್ಲಿ ನಡೆದ. ಕೊನೆಗೆ ರಾಯ ಕಳ್ಳೇರಹಳ್ಳಿಯ ಹತ್ತಿರ ರೇವುಂಡೇ ಮರದ ಕೆಳಗೆ ಮುಂಗಣ್ಣ ನಿದ್ರೆ ಆವರಿಸಿತು. ಎಲ್ಲವನ್ನೂ ಮರೆತು ಮೂರು ತಿಂಗಳು ಕಾಲನಿದ್ದೆ ಮಾಡಿದ. ತಾಯಿಯ ಮೇಲೆ ತನ್ನ ಅಸಮಧಾನವಾದರೂ, ಅದನ್ನು ಹೇಳಲಾರದಷ್ಟು ತಾಯಿಯ ಮೇಲೆ ಭಕ್ತಿ. ಜುಂಜಪ್ಪ ಹೊರಗೆ ಹೋಗುವುದು ಒಂದೊಂದು ಸಾಹಸವನ್ನು ಮೆರೆಯಲು ಮಾತ್ರ. ಅದು ಮುಗಿದ ಕೂಡಲೇ ಅವನು ಮೂಲ ನೆಲೆಗೆ ಬಂದು ಪವಡಿಸಿ ಬಿಡುತ್ತಾನೆ. ಮುಂದಿನ ಸಾಹಸಕ್ಕೆ ತಾಯಿಯ ಆಶೀರ್ವಾದ ಇಲ್ಲದೆ ಒಂದು ಹೆಜ್ಜೆಯನ್ನು ಮುಂದಿಡಲಾರ. ವೀರಭದ್ರನ ಅವತಾರಿಯಾಗಿ, ಮುಂಗೋಪ, ಹಠಕ್ಕೆ ಪ್ರಸಿದ್ಧನಾದ ವ್ಯಕ್ತಿಯಾಗಿದ್ದರೂ ತಾಯಿಯ ಮುಂದೆ ಮಮತೆಯ ಕೂಸು ಅವಳಿಗೆ ಮಕ್ಕಳು ಹಾಲುಕಂದ ನೀರು ಕಂದಗಳಿದ್ದ ಹಾಗೆ. ತನ್ನ ಮೇಲೆ ಮಗ ಜುಂಜಪ್ಪ ಮುನಿದು ಮಲಗಿದ್ದಾನೆಂದು ತಿಳಿದು 'ತಪ್ಪುಗಾಣಿಕೆ' ಕಟ್ಟಿ ಅವನನ್ನು ನಿದ್ದೆಯಿಂದ ಎಬ್ಬಿಸುವಂತಹ ತಾಯಿ.

ಜುಂಜಪ್ಪ ಅವತಾರ ಪುರುಷ ಎಂಬುದು ಗೊತ್ತಿದ್ದರೂ, ಜುಂಜಪ್ಪನನ್ನು ಮಗನಾಗಿ ಮಾತ್ರ ಕಂಡವಳು ಚಿನ್ನಮ್ಮ. ಚೇಳೂರು ಕಾವಲಿಗೆ ದನಗಳನ್ನು ಹೊಡೆಯುವ ವಿಚಾರ ಕೇಳಿಯೇ ತಾಯಿ ಹೆದರುತ್ತಾಳೆ. ಕೆಟ್ಟವರ

ಸಹವಾಸ ಬೇಡವೆನ್ನುತ್ತಾಳೆ. ಚೇಳೂರಿಗೆ ಹೋಗಲೇಬೇಕಾಗಿ ಬಂದ ಪ್ರಸಂಗದಲ್ಲಿ ತಾಯಿ ಅಪ್ಪಣೆಯನ್ನು ಕೊಡುವುದಲ್ಲದೆ, ಚಿತ್ತಪ್ಪನೆಂಬ ಕೊಡಲಿಯನ್ನು ನಾರಾಯಣನೆಂಬ ನಾರಗೊಡಲಿಯನ್ನು ಕೊಟ್ಟು, "ಮಗನೆ ಚೇಳೂರು ರಂಗನಿಗೆ ಉಳಿವಿಲ್ಲ, ನಿನಗೆ ಭಯವಿಲ್ಲ, ಗೆದ್ದು ಬಾರಪ್ಪ ದೊರೆತನ"[೪೪] ಎಂದು ಹರಸುತ್ತಾಳೆ. ಮಕ್ಕಳ ಮೇಲಿನ ಗಾಢವಾದ ಪ್ರೀತಿ ಎಷ್ಟಿತ್ತೆಂದರೆ, ಚೇಳೂರು ಕಾವಲಿನ ಪ್ರಸಂಗದಲ್ಲಿ ಅವಳ ಅಣ್ಣಂದಿರು ಜುಂಜಪ್ಪ, ತಮ್ಮಂದಿರೊಂದಿಗೆ ಮಡಿದ ಎಂಬ ಸುಳ್ಳು ಸುದ್ದಿಯನ್ನು ಕೇಳಿ 'ಕೆಂಡಕೊಂಡ' ಆಗುವುದರಲ್ಲಿದ್ದವಳು. ಸೀರ್ಯದ ರಂಗಣ್ಣನ ದೊಡ್ಡ ದಂಡು ಜುಂಜಪ್ಪನ ದನವಿದ್ದ ಕಡೆ ಕಾಳಗಕ್ಕೆ ಬಂದಾಗಿನ ಪ್ರಸಂಗದಲ್ಲಿ ಜುಂಜಪ್ಪನಿಗೆ ಕೇಡಿನ ನಿದ್ದೆ ಬಂದು ಅವನ ಮೇಲೆ ಮೂರಾಳುದ್ದ ಮೂಗುತ್ತ ಬೆಳೆದಿತ್ತು. ಆಗ ಸುದ್ದಿ ತಿಳಿದ ತಾಯಿ ಚಿನ್ನಮ್ಮ 'ಕಾರೆಂಬ ಕತ್ತಲು ಬೋರೆಂಬ ಗಿಡವು' ಏಳೇಳು ಹದಿನಾಲ್ಕು ಕಾವಲನ್ನು ಸುತ್ತಿದಳು. ಜುಂಜಪ್ಪನನ್ನು ಹುಡುಕುತ್ತಾ ಅರಿಸಿಣ ಗುತ್ತಿಯ ಮೂರಾಳೆತ್ತರದ ಮೂಗುತ್ತಕ್ಕೆ ಕೈಹಾಕಿ ಎರಡು ಭಾಗಕ್ಕೆ ಸೀಳಿದಳು."[೪೫] ಮಗನನ್ನು ಎಚ್ಚರಿಸಿ ಮುಂದಿನ ಗಂಡಾಂತರವನ್ನು ತಿಳಿಸಿ ಮಗನನ್ನು ಅರಿಸಿ ಬೀಳ್ಕೊಟ್ಟಳು. ಇಂತಹ ತಾಯಿ ತನ್ನ ಸೋದರರ ಕುಟಿಲೋಪಾಯಕ್ಕೆ ಬಲಿಯಾಗಿ ಮಕ್ಕಳನ್ನು ಸೋದರಮಾವಂದಿರ ಮನೆಯಲ್ಲಿ ಬಿಲ್ಲು ಹಬ್ಬಕ್ಕೆ ಕಳಿಸಿ ಮಕ್ಕಳನ್ನು ಕಳೆದುಕೊಳ್ಳುವುದಲ್ಲದೆ ತನ್ನ ತವರು ನಾಶವಾಗುವುದನ್ನು ನೋಡಬೇಕಾದ ದುರ್ಗತಿ ಒದಗಿತು.

ಕಾವ್ಯದಲ್ಲಿ ಜುಂಜಪ್ಪ, ತಾಯಿಯ ಶೀಲದ ಬಗ್ಗೆ ಶಂಕೆ ವ್ಯಕ್ತಪಡಿಸಿ ಅವಳ ಸತ್ಯವನ್ನು ಪರೀಕ್ಷಿಸುವ ಪ್ರಸಂಗ ಬಹುರೋಚಕವಾದುದು. ಪರೀಕ್ಷೆಯಲ್ಲಿ ಗೆದ್ದ ತಾಯಿಯ ಗುಣವನ್ನು ಮೆಚ್ಚಿ ತಾಯಿ ನಿನ್ನನ್ನು ಇದುವರೆಗೆ ಸೋಸಿದೆ, ನಿನ್ನ ಸತ್ಯ ಗೊತ್ತಾಯಿತು ಎನ್ನುವ ಮಾತನ್ನು ಜುಂಜಪ್ಪನಿಂದ ಹೇಳಿಸುವುದಾದರೂ ಅನೇಕ ಪ್ರಶ್ನೆಗಳನ್ನು ತೆರೆದಿಡುತ್ತದೆ. ತಾಯಿ ಚಿನ್ನಮ್ಮ ಸತ್ಯವಂತೆ ಎನ್ನುವುದು ಜುಂಜಪ್ಪನಿಗೆ ತಾನು ಹುಟ್ಟುವಾಗಲೇ ತಿಳಿದ ವಿಷಯ. ಕಾವ್ಯದಲ್ಲಿ ಹೆಣ್ಣಿನ ಬದುಕಿನ ಅತಂತ್ರ ಸ್ಥಿತಿಯನ್ನು ಕಷ್ಟ ಕಾರ್ಪಣ್ಯಗಳನ್ನು ಚಿನ್ನಮ್ಮನ ಮೂಲಕ ಅರಿಯಬಹುದಾಗಿದೆ. ಕಾಡುಗೊಲ್ಲ ಬುಡಕಟ್ಟುಗಳಲ್ಲಿ ಸ್ತ್ರೀಗಿರುವ ನಿಯಮಗಳು ತೋರಿಕೆಗೆ ಅತ್ಯಂತ ಉದಾರವಾಗಿರುವಂತೆ ಕಾಣಿಸಿದರೂ ಅಂದರೆ ಹೆಣ್ಣಿಗೆ ಗಂಡು ತೆರಕಟ್ಟಿ ವಿವಾಹವಾಗುವ ಪದ್ಧತಿ, ಗಂಡಂದಿರು ತೀರಿಕೊಂಡಾಗ ಹೆಂಡತಿಯರನ್ನು ವಿಧವೆಯರೆಂದು ಕರೆದುಕೊಳ್ಳದೆ, ಸುಮಂಗಲಿಯರೆಂದು, ತಾಳಿ, ಕಡಗ, ಬಳೆ, ಇವುಗಳನ್ನು ಮೈಮೇಲೆ ಉಳಿಸಿಕೊಳ್ಳುವ ಹಾಗೂ ವಿಧವೆಯರು ಧಾರ್ಮಿಕ ಆಚರಣೆಗಳಲ್ಲಿ ಯಾವ ಸಂಕೋಚವಿಲ್ಲದೆ ಭಾಗಿಯಾಗಬಹುದಾದ ಅತ್ಯಂತ ಉದಾರವಾದ ನಿಯಮಗಳಿದ್ದರೂ, ಹೆಣ್ಣು ಮುಟ್ಟಾದಾಗ, ಮೈ ನೆರೆದಾಗ, ಹೆರಿಗೆ ಸಂದರ್ಭದಲ್ಲಿ ಹಟ್ಟಿಯಿಂದ ದೂರದಲ್ಲಿ ಅಸ್ಪೃಶ್ಯಳಂತೆ ಇಡುವ ಹೀನಾಯ ವಿಧಾನಗಳು, ಪದ್ಧತಿಗಳು, ಎಂತಹ ಕಟುಕರಲ್ಲೂ ಅಚ್ಚರಿ ಹುಟ್ಟಿಸುತ್ತದೆ. ಬಸುರಿಹೆಂಗಸರು ಮಕ್ಕಳನ್ನು ಹೆತ್ತು ಬಾಣಂತಿಯಾಗುವ ಸಮಯದಲ್ಲಿ ಸ್ತ್ರೀಗೆ ಆಗುವ ದೈಹಿಕ, ಮಾನಸಿಕ ಹಿಂಸೆಗಳನ್ನು ತಡೆದುಕೊಳ್ಳುವ ಸ್ಥಿತಿಯಲ್ಲಿರುವುದಿಲ್ಲ. ಇಂತಹ ಸಂದರ್ಭದಲ್ಲಿ ಈ ಕೆಟ್ಟ ಸಂಪ್ರದಾಯದಿಂದ ಮಗು ಬಾಣಂತಿಯರು ಸಾಯಬಹುದು. "ಯಾವುದೇ ಸಂಸ್ಕೃತಿ ಹೆಣ್ಣು ಬಗ್ಗೆ ಹೊಂದಿರುವ ನಿಲುವನ್ನು ಆಕೆಯ ಮುಟ್ಟಿನ ಹಾಗೂ ಲೈಂಗಿಕ ಶೀಲದ ವಿಷಯದಲ್ಲಿ ಅವು ಹೊಂದಿರುವ ಭಾವನೆಗಳ ಮೂಲಕ ತಿಳಿಯಬಹುದು"[೪೬] ಎನ್ನುವ ಡಾ.ರಹಮತ್ ತರೀಕೆರೆಯವರ ಮಾತನ್ನು ಒಪ್ಪುತ್ತಾ, ಚಿನ್ನಮ್ಮನ ಶೀಲ ಪರೀಕ್ಷೆ, ಜನಾಂಗದ ಹೆಣ್ಣನ್ನು ತಮ್ಮ ಅಧೀನದಲ್ಲಿಟ್ಟು

ಬಾಳಿಸಲೆಂದು ರೂಪಗೊಂಡ ಪುರುಷಪ್ರಧಾನ ವ್ಯವಸ್ಥೆಯ ತಂತ್ರ ಮಾತ್ರವಾಗಿದೆ. ಹಾಗೂ ಮಿತಿ ಇಲ್ಲದ ಕ್ರೌರ್ಯ ದೌರ್ಜನ್ಯಗಳನ್ನು ಆ ವ್ಯವಸ್ಥೆ ಅವಳ ಮೇಲೆ ಎಸಗಿದೆ. ಈ ಕಾಡುಗೊಲ್ಲರ ಜನಾಂಗದಲ್ಲಿ ಸ್ತ್ರೀಯರ ಧ್ವನಿಗಳನ್ನು ಒತ್ತಿಡಲಾಗಿದ್ದು, ಯಾವ ಹಂತದಲ್ಲೂ ಶೋಷಣೆಯನ್ನೆದುರಿಸಲು ಸಾಧ್ಯವಾಗದಂತಹ ಧಾರ್ಮಿಕ ಕಟ್ಟುಪಾಡುಗಳನ್ನು ಈ ಜನಾಂಗದ ಸ್ತ್ರೀಯರ ಮೇಲೆ ಇದೇ ಜನಾಂಗದ ಪುರುಷಪ್ರಧಾನ ವ್ಯವಸ್ಥೆ ಹೇರಿದೆ.

**ಅಡಿಟಿಪ್ಪಣಿಗಳು**

೧. ಡಾ.ಹಿ.ಚಿ.ಬೋರಲಿಂಗಯ್ಯ; ಬುಡಕಟ್ಟು ದೈವಾರಾಧನೆ, ೨೦೦೦, ಪುಟ ೧೬

೨. ಅದೇ, ಪುಟ ೧೬

೩. ಗಂಗಾಧರ ದೈವಜ್ಞ (ಸಂ); ಮಾಳಿಂಗರಾಯನ ಕಾವ್ಯ, ೧೯೯೯, ಪುಟ ೧೯

೪. ಡಾ.ತೀ.ನಂ.ಶಂಕರನಾರಾಯಣ; ಜಾನಪದ ಸಮೀಕ್ಷೆ ವಿಶ್ಲೇಷಣೆ, ೧೯೯೯,ಪುಟ ೩೩೩

೫. ಡಾ.ತಿಪ್ಪೇರುದ್ರಸ್ವಾಮಿ (ಸಂ); ಕೃಷ್ಣಮೂರ್ತಿ ಹನೂರು, ಮಲೆನಾಡು ಜಾನಪದ, ಚಿತ್ರದುರ್ಗದ ಮೂರು ಬುಡಕಟ್ಟುಗಳು, ೧೯೮೩, ಪುಟ ೧೮೫

೬. ಡಾ.ಮೀರಾಸಾಬಿಹಳ್ಳಿ ಶಿವಣ್ಣ; ಗೊಲ್ಲಕಡಗ, ೧೯೯೯, ಪುಟ ೧೩೭

೭. ಡಾ.ಮೀರಾಸಾಬಿಹಳ್ಳಿ ಶಿವಣ್ಣ; ಜಾನಪದ ೧೯೯೨, ಡಾ.ವೀರಣ್ಣದಂಡೆ (ಸಂ), ೧೯೯೫, ಪುಟ ೫೮

೮. ಡಾ.ಮೀರಾಸಾಬಿಹಳ್ಳಿ ಶಿವಣ್ಣ; ಜುಂಜಪ್ಪನ ಕಾವ್ಯ : ಒಂದು ನೋಟ, ಡಾ.ತೀ.ನಂ.ಶಂಕರನಾರಾಯಣ (ಸಂ), ಕರ್ನಾಟಕದ ಜನಪದ ಮಹಾಕಾವ್ಯಗಳು, ೧೯೯೮, ಪುಟ ೭೫

೯. ಅದೇ, ಪುಟ ೭೬

೧೦. ಡಾ.ಮೀರಾಸಾಬಿಹಳ್ಳಿ ಶಿವಣ್ಣ; ಗೊಲ್ಲಕಡಗ, ೧೯೯೯, ಪುಟ ೮೪

೧೧. ಅದೇ, ಪುಟ ೧೨

೧೨. ಡಾ.ತೀ.ನಂ.ಶಂಕರನಾರಾಯಣ; ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ೧೯೮೨, ಪುಟ ೧೩೬

೧೩. ಡಾ.ಹಿ.ಚಿ.ಬೋರಲಿಂಗಯ್ಯ; ಬುಡಕಟ್ಟು ದೈವಾರಾಧನೆ, ೨೦೦೦, ಪುಟ ೪

೧೪. ಡಾ.ಕೆ.ಮರುಳಸಿದ್ದಪ್ಪ (ಸಂ); ಸಾಧನೆ, ಸಂಪುಟ ೨೩, ಸಂಚಿಕೆ ೩,೪, ಜುಲೈ ಡಿಸೆಂಬರ್ ೧೯೯೪, ಪುಟ ೭೮, ೭೯

೧೫. ಡಾ.ಕೃಷ್ಣಮೂರ್ತಿ ಹನೂರು (ಸಂ); ಜನಪದ ಮತ್ತು ಬುಡಕಟ್ಟು ಗೀತೆಗಳು, ೧೯೯೮, ಪುಟ ೧೦

೧೬. ಡಾ.ತೀ.ನಂ.ಶಂಕರನಾರಾಯಣ; ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ೧೯೮೨, ಪುಟ ೧೭೬

೧೭. ಜಾನಪದ ಸಾಹಿತ್ಯದರ್ಶನ; ಭಾಗ ೧೩, ಮೈಲಾರಲಿಂಗನ ಪರಿವಾರ ದೇವತೆಗಳು, ಡಾ. ಎಸ್.ಎಸ್.ಬಸವಲಿಂಗ ಸೊಪ್ಪಿಮಠ, ೧೯೯೪, ಪುಟ ೩೧

೧೮. ಎಸ್.ಎಸ್.ಹಿರೇಮಠ; ಜಾತ್ರೆಗಳು, ೧೯೯೩, ಪುಟ ೯೪

೧೯. ಡಾತೀ.ನಂ.ಶಕರನಾರಾಯಣ; ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ೧೯೮೨, ಪುಟ ೧೪೧

೨೦. ಅದೇ, ಪುಟ ೧೭೪,೧೭೫

೨೧. ಡಾ.ಮೀರಾಸಾಬಿಹಳ್ಳಿ ಶಿವಣ್ಣ; ಗೊಲ್ಲಕಡಗ, ೧೯೯೯, ಪುಟ ೪೩

೨೨. ಡಾ.ಎಚ್.ಜೆ.ಲಕ್ಕಪ್ಪಗೌಡ (ಸಂ); ಡಾ.ಜೀ.ಶಂ.ಪ., ಸುವರ್ಣ ಜಾನಪದ, ಸಂಪುಟ-೧, ೧೯೯೮, ಪುಟ ೧೨೭

೨೩. ಡಾ.ಕೆ.ಎಂ.ಮೈತ್ರಿ (ಸಂ); ಕೃಷ್ಣಗೊಲ್ಲರ ಕಥನಕಾವ್ಯಗಳು, ೨೦೦೦, ಪ್ರಸ್ತಾವನೆ ೨, ೩

೨೪. ಬಿ.ಸಿದ್ಧಗಂಗಯ್ಯ (ಸಂ); ಜುಂಜಪ್ಪನ ಕಾವ್ಯ, ೧೯೯೬, ಪುಟ ೩

೨೫. ಡಾ.ತೀ.ನಂ.ಶಂಕರನಾರಾಯಣ; ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ೧೯೮೨, ಪುಟ ೫೦, ೫೧

೨೬. ಡಾ.ತೀ.ನಂ.ಶಂಕರನಾರಾಯಣ; ಜನಪದ ಮಹಾಕಾವ್ಯ, ೧೯೯೬, ಪುಟ ೪೩ (ಉಲ್ಲೇಖ : ಜೀ.ಶಂ.ಪ. ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೨೦೧-೨೪೪)

೨೭. ಡಾ.ಜೀ.ಶಂ.ಪರಮಶಿವಯ್ಯ; ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೨೩೧

೨೮. ಡಾ.ಕೆ.ಆರ್.ಸಂಧ್ಯಾರೆಡ್ಡಿ; ಜನಪದ ಸಾಹಿತ್ಯದಲ್ಲಿ ಮಹಿಳೆ, ೧೯೯೫, ಪುಟ ೨೩

೨೯. ಬಿ.ಸಿದ್ಧಗಂಗಯ್ಯ (ಸಂ); ಜುಂಜಪ್ಪ ಕಾವ್ಯ, ೧೯೯೬, ಪುಟ ೧೯

೩೦. ಡಾ.ಎನ್.ಎಸ್.ಸರಸ್ವತಿ; ಜನಪದ ಸಾಹಿತ್ಯದಲ್ಲಿ ಪವಾಡಗಳು : ಒಂದು ಅಧ್ಯಯನ (ಅಪ್ರಕಟಿತ), ೧೯೯೭, ಪುಟ ೨೫೦

೩೧. ಸಿ.ಎನ್.ರಾಮಚಂದ್ರನ್; ಪ್ರಜಾವಾಣಿ ಸಾಪ್ತಾಹಿಕ ಜುಂಜಪ್ಪ, ೩.೨.೨೦೦೨

೩೨. ಡಾ.ಸುಶೀಲಾ ಪಿ. ಉಪಾಧ್ಯಾಯ; ದಕ್ಷಿಣ ಭಾರತದ ಜಾನಪದ, ೧೯೯೮, ಪುಟ ೬೮

೩೩. ಡಾ.ಮೀರಾಸಾಬಿಹಳ್ಳಿ ಶಿವಣ್ಣ; ಡಾ.ತೀ.ನಂ.ಶಂಕರನಾರಾಯಣ, (ಸಂ), ಕರ್ನಾಟಕ ಜನಪದ ಮಹಾಕಾವ್ಯ, ೧೯೯೮, ಪುಟ ೭೬

೩೪. ಡಾ.ಕಾಳೇಗೌಡ ನಾಗವಾರ; ಜುಂಜಪ್ಪ, ೧೯೯೦, ಪುಟ ೪

೩೫. ಸಿ.ಎನ್.ರಾಮಚಂದ್ರನ್; ಪ್ರಜಾವಾಣಿ ಸಾಪ್ತಾಹಿಕ ಜುಂಜಪ್ಪ, ೩.೨.೨೦೦೨

೩೬. ಡಾ.ಮೀರಾಸಾಬಿಹಳ್ಳಿ ಶಿವಣ್ಣ; ಗೊಲ್ಲಕಡಗ, ೧೯೯೯, ಪುಟ ೪೦, ೪೧

೩೭. ಡಾ.ಗಾಯತ್ರಿ ನಾವಡ; ಭಾರತೀಯ ಸ್ತ್ರೀವಾದ : ಒಂದು ಸಂಕಥನ, ೨೦೦೦, ಪುಟ ೩೬

೩೮. ಡಾ.ತೀ.ನಂ.ಶಂಕರನಾರಾಯಣ; ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ೧೯೮೨, ಪುಟ ೬೫, ೬೬

೩೯. ಡಾ.ಜೀ.ಶಂ.ಪರಮಶಿವಯ್ಯ; ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೨೨೩

೪೦. ಬಿ.ಸಿದ್ಧಗಂಗಯ್ಯ (ಸಂ); ಜುಂಜಪ್ಪನ ಕಾವ್ಯ, ೧೯೯೬, ಪುಟ ೪೮

೪೧. ಎ.ಎಸ್.ಪ್ರಭಾಕರ (ಸಂ); ಮ್ಯಾಸಬೇಡರ ಕಥನಗಳು, ೧೯೯೯, ಪುಟ ೯, ೧೦

೪೨. ಡಾ.ಸುಶೀಲಾ ಪಿ. ಉಪಾಧ್ಯಾಯ; ದಕ್ಷಿಣ ಭಾರತದ ಜಾನಪದ, ೧೯೯೮, ಪುಟ ೬೯

೪೩. ಎ.ಎಸ್.ಪ್ರಭಾಕರ (ಸಂ); ಮ್ಯಾಸಬೇಡರ ಕಥನಗಳು, ೧೯೯೯, ಪುಟ ೧೦

೪೪. ಡಾ.ಜೀ.ಶಂ.ಪರಮಶಿವಯ್ಯ; ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೨೨೨

೪೫. ಅದೇ, ಪುಟ ೨೨೭

೪೬. ಡಾ.ರಹಮತ್ ತರೀಕೆರೆ; ಮರದೊಳಗಣ ಕಿಚ್ಚು, ೨೦೦೨, ಪುಟ ೫೨

## ಅಧ್ಯಾಯ ೬

# ಇತರೆ ಜನಪದ ಮಹಾಕಾವ್ಯಗಳ ಸ್ತ್ರೀ ಪಾತ್ರಗಳು

೬.೧ ಜನಪದ ರಾಮಾಯಣ - ಸೀತೆ

೬.೨. ಜನಪದ ಮಹಾಭಾರತ - ದ್ರೌಪದಿ

೬.೩. ಬುರ್ರಕಥಾ ಕಾವ್ಯ - ಸ್ಯಾಸಿ ಚಿನ್ನಮ್ಮ

# ಅಧ್ಯಾಯ ೬

# ಇತರೆ ಜನಪದ ಮಹಾಕಾವ್ಯಗಳ ಸ್ತ್ರೀ ಪಾತ್ರಗಳು

## ೬.೧. ಜನಪದ ರಾಮಾಯಣ - ಸೀತೆ

ನಮ್ಮ ನಾಡಿನ ಸ್ಥಾಪಿತ ಪುರಾಣಗಳೆಂದರೆ ರಾಮಾಯಣ ಮತ್ತು ಮಹಾಭಾರತ. ವಾಲ್ಮೀಕಿ, ವ್ಯಾಸ ಯಾರೆಂಬುದನ್ನು ಅರಿಯದ ಅನಕ್ಷರಸ್ಥ ಸಾಮಾನ್ಯನಿಗೂ ಕೂಡಾ ರಾಮಾಯಣ ಮಹಾಭಾರತದ ಕಥೆಗಳು ಸ್ವಲ್ಪವಾದರೂ ತಿಳಿದಿವೆ. "ಈ ಕಾವ್ಯಗಳು ಇಂದಿನ ಈ ಬೃಹತ್ ಸ್ವರೂಪ ತಾಳುವ ಮೊದಲು ಶತಶತಮಾನ ಗಳಿಂದ ಬಾಯಿಂದ ಬಾಯಿಗೆ ಹರಿದು ಬಂದವುಗಳು. ವಾಲ್ಮೀಕಿಯಿಂದ ಕಲಿತ ರಾಮಾಯಣವನ್ನು ಲವ-ಕುಶರು ಮೊದಲು ಆಶ್ರಮದ ಮುನಿಗಳೆದುರು ಹಾಡಿ ಆಮೇಲೆ ಅನೇಕ ಶ್ರೋತೃ ವೃಂದದ ಮುಂದೆ ಹಾಡುತ್ತಾ ಅಯೋಧ್ಯೆಗೆ ಬಂದು ಶ್ರೀರಾಮನ ಸಭೆಯಲ್ಲಿ ಹಾಡಿದರು. ಈ ಶಿಷ್ಟ ಮಹಾಕಾವ್ಯಗಳಿಗೆ ಜಾನಪದ ಸಂಪ್ರದಾಯದ ವಜ್ರಕವಚವಿದೆ."[೧] ಶಿಷ್ಟ ಕವಿಗಳಿಗೆ ವಾಲ್ಮೀಕಿ, ವ್ಯಾಸರ ಕಾವ್ಯಗಳು ಪ್ರೇರಣೆ ಕೊಟ್ಟರೆ, ಜನಪದ ಕಾವ್ಯಗಳು ಅವರೆಲ್ಲರಿಗೂ ಪ್ರೇರಣೆ ಕೊಟ್ಟಿವೆ. "ಜಾನಪದ ಮತ್ತು ಶಿಷ್ಟ ಕಾವ್ಯಗಳ ಪರಸ್ಪರ ಕೊಡುಕೊಳೆ ಅವ್ಯಾಹತವಾಗಿ ಸಾಗಿ ಬಂದಿದ್ದು ಗಮನಾರ್ಹ. ಅಂತೆಯೇ ಅವು ಪರಸ್ಪರಾವಲಂಬಿಗಳೆಂಬುದನ್ನು ಅಲ್ಲ ಗಳೆಯಲಾಗದು."[೨] ಸಂಚಾರಿಗಾಯಕರು ಕಥಾನಕವನ್ನು ಒಬ್ಬರಿಂದೊಬ್ಬರಿಗೆ ಮುಟ್ಟಿಸುವಾಗ, ಮೂಲಕಥೆ ಅನೇಕ ಪ್ರಕ್ಷೇಪಗಳಿಗೆ ಈಡಾಗಿ ಮಾರ್ಪಡುವುದು ಸಹಜ. ಹೀಗಾಗಿ ಪೂರ್ವದ ವಾಸ್ತವ ಇತಿಹಾಸ ಕಥೆಗೆ ಜನಪದ ಕಥೆ ಉಪಕಥೆಗಳು ಇಲ್ಲವೆ ಇನ್ನಿತರ ವಿಷಯಗಳು ಸೇರ್ಪಡೆಯಾಗಿ, ಮೂಲಕಥೆ ಹಿಗ್ಗುತ್ತಾ ರೂಪಾಂತರಗೊಳ್ಳುತ್ತಾ ಹೋಗುತ್ತದೆ. "ಇಂತಹ ಕಥಾಪುಂಜಗಳನ್ನೇ ವೀರಗಧಾಚಕ್ರ ಎನ್ನುತ್ತಾರೆ. ಈ ಗಾಥೆಗಳು ವಿವಿಧ ಕಥಾ ಚಕ್ರಗಳಾಗಿ ಚಲಿಸುತ್ತಾ ಚಲಿಸುತ್ತಾ ಕಡೆಗೆ ಒಬ್ಬ ಶಕ್ತನಾದ ಕವಿಯ ಆಯಸ್ಕಾಂತ ಪ್ರತಿಭೆಯೊಳಗೆ ಕೂಡಿಕೊಂಡು ಒಂದು ಮಹಾಕಾವ್ಯವಾಗಿ ರೂಪುಗೊಳ್ಳುತ್ತವೆ."[೩] ಒಟ್ಟಿನಲ್ಲಿ ರಾಮಾಯಣ ಮಹಾಭಾರತಗಳು ಜಾನಪದ ಕಥೆಗಳ ಒಂದು ಪರಂಪರೆಯಿಂದ ಕೂಡಿವೆ.

"ರಾಮಾಯಣ ಕಥೆ, ನಿಶ್ಚಿತ ಪ್ರದೇಶವೊಂದರಲ್ಲಿ ಜನ್ಮತಾಳಿದುದಾಗಿದ್ದು, ಆಮೇಲೆ ರಾಷ್ಟ್ರೀಯ ಘಟನೆ ಯಾಗಿ, ಸಂಸ್ಕೃತಿಯ ಪ್ರತಿನಿಧಿಯಾಗಿ ರೂಪಿತವಾದುದಾಗಿರಬೇಕು."[೪] ಇದರ ಮೂಲ ರಚನಕಾರ, ನಮಗಿಂದು ಅನಾಮಧೇಯ. "ಹೀಗೆ ಮೂಡಿ ಬಂದವುಗಳಲ್ಲಿ ಪ್ರಮುಖವಾಗಿ ಜೈನ, ಬೌದ್ಧ ಮತ್ತು ಹಿಂದೂ ಪರಂಪರೆಗಳು ನಿಲ್ಲುತ್ತವೆ. ವೈದಿಕ ಪರಂಪರೆಯೇ ಜೈನ ರಾಮಾಯಣಕ್ಕೆ ಮೂಲ. ಆ ಕಥೆಯನ್ನು ಜೈನರು ತಮ್ಮ ಮತ ಧರ್ಮಕ್ಕೆ ಅನುಸಾರವಾಗಿ ಅಳವಡಿಸಿಕೊಂಡಿರುವರೆಂಬ ಅಭಿಪ್ರಾಯವಿದೆ. ಆದರೆ ಇದಕ್ಕೆ ಮೂಲ ಜಾನ

ಪದೀಯವಾದ ನೆಲೆ ಪ್ರಾಚೀನ, ಬೌದ್ಧ ಸಾಹಿತ್ಯದಲ್ಲಿ ರಾಮಕಥೆಗೆ ಸಂಬಂಧಿಸಿದ 'ಜಾತಕ ಕಥೆ'ಗಳಲ್ಲಿ ಕಂಡುಬರುತ್ತದೆ."[೫] "ಜನಪದ ಪುರಾಣಗಳಿಗೆ ಒಂದು ವ್ಯವಸ್ಥಿತವಾದ ಚೌಕಟ್ಟು ಇರುವುದು ಕಂಡು ಬರುವುದಿಲ್ಲ ಇಲ್ಲಿ ಹಲವಾರು ಪಾಠಾಂತರಗಳು, ರೂಪಾಂತರಗಳು ದೊರೆಯುತ್ತವೆ. ಕೆಲವೊಮ್ಮೆ ಆಶಯವನ್ನೇ ಪಲ್ಲಟಗೊಳಿಸಿಕೊಂಡ ಬಗೆಯನ್ನು ಕಾಣುತ್ತೇವೆ."[೬] ವಾಲ್ಮೀಕಿ ರಾಮಾಯಣವನ್ನು ಬರೆಯುವ ಮೊದಲು ರಾಮಕತೆ ಹಲವಾರು ರೂಪಗಳಲ್ಲಿ ಜಾನಪದ ಪರಂಪರೆಯಾಗಿ ಪ್ರಚಲಿತವಿದ್ದು ಲಿಪಿರೂಪಕ್ಕಿಳಿದ ಮೇಲೂ ಜಾನಪದ ರಾಮಾಯಣ ಪರಂಪರೆ ತನ್ನ ಪಾಡಿಗೆ ಬೆಳೆಯುತ್ತಲೇ ಇದೆ. "ಅದು ದೇಶದ ತುಂಬಾ ಹರಡಿ, ತಲೆಮಾರುಗಳ ಮೂಲಕ ಹರಿದಾಗ ಹಲವಾರು ಪಾಠಾಂತರ ರೂಪಾಂತರಗಳು ಪ್ರಾದೇಶಿಕ ವ್ಯತ್ಯಯಗಳು ಕಡೆ.ಗೆ ಭಿನ್ನ ಕಥಾಸಂಪ್ರದಾಯಗಳು ಹುಟ್ಟಿಕೊಳ್ಳಲು ಕಾರಣವಾಯಿತು."[೭] "ರಾಮಾಯಣದಲ್ಲಿ ಬರುವ ಅಯೋಧ್ಯೆಯ, ಕಿಷ್ಕಿಂಧೆಯ ಮತ್ತು ಲಂಕೆಯ ಜನಜೀವನದ ಚಿತ್ರಗಳು ಆ ಕಾಲದ ಜನರ ಚಿತ್ರಗಳೇ ಆಗಿವೆ. ತಮ್ಮ ವಿವೇಚನೆಗೆ ಮೀರಿದ ಸಂಗತಿಗಳಿಗೆ, ತಮ್ಮ ಅಳತೆಗೆ ದಕ್ಕಲಾರದ ವ್ಯಕ್ತಿಗಳ ಜೀವನಕ್ಕೆ ಅತಿಮಾನುಷತೆಯನ್ನು ಆರೋಪಿಸುವುದು ಜನಪರ ವಿಶಿಷ್ಟ ಗುಣ. ಅದರಂತೆ ಮಾನವನಾಗಿದ್ದ ರಾಮನನ್ನು ದೈವ ಸಮಾನನ್ನಾಗಿ, ಅನಂತರ ದೇವತಾ ಅವತಾರನನ್ನಾಗಿ ನಮ್ಮ ಜನ ಕಲ್ಪಿಸಿದರು. ಹಾಗೆಯೇ ಸ್ವಭಾವದಲ್ಲಿ ಪಕ್ವವಾಗಿಲ್ಲದ ಮತ್ತು ಆಚರಣೆಯಲ್ಲಿ ಸ್ವಲ್ಪ ಅನಾಗರಿಕತೆಯನ್ನು ಮೈಗೂಡಿಸಿಕೊಂಡಿದ್ದ ಜನರನ್ನು ವಾನರರೆಂದೂ, ದೈಹಿಕ ಶಕ್ತಿಯಲ್ಲಿ, ಭಾವೋನ್ಮಾದದಲ್ಲಿ ಮತ್ತು ರೂಕ್ಷತನದಲ್ಲಿ ತಮ್ಮ ಜೀವನವನ್ನು ನಡೆಸುತ್ತಿದ್ದ ಜನರನ್ನು ರಾಕ್ಷಸರೆಂದೂ ಮತ್ತು ಇತರರೆಲ್ಲರಿಗಿಂತ ಮೇಲ್ಮಟ್ಟದ ಹಾಗೂ ನಿಗ್ರಹಾನುಗ್ರಹ ಸಮರ್ಥರಾಗಿದ್ದ ಜನಾಂಗವನ್ನು ದೇವರೆಂದೂ ನಮ್ಮವರು ಪರಿಭಾವಿಸಿರಬೇಕು."[೮] ಈ ಎಲ್ಲಾ ಅಂಶಗಳನ್ನು ಒಂದು ಸುಬದ್ಧ ರೂಪದಲ್ಲಿ ಹಣೆಯುತ್ತಾ, ಭಾಷೆಯಿಂದ ಭಾಷೆಗೆ ಅನೇಕ ಪಾಠಾಂತರಗಳನ್ನು ಸೃಷ್ಟಿ ಗೊಳ್ಳುತ್ತಿರುವ ಜನಪದ ರಾಮಾಯಣಗಳು ಅನೇಕ. "ರಾಮಾಯಣದ ಮೇಲೆ ವಿಶೇಷ ಅಧ್ಯಯನ ಮಾಡಿರುವ ರೋಮಿಲಾಥಾಪರ್ ತಮ್ಮ 'Exile and Kingdom' ಕೃತಿಯಲ್ಲಿ ರಾಮಾಯಣದ ಮೂಲವನ್ನು ಬುದ್ಧ ಪೂರ್ವದ ಜಾನಪದ ಪಠ್ಯಗಳಾದ ಜಾತಕ ಕಥೆಗಳಲ್ಲಿ ಗುರುತಿಸುತ್ತಾರೆ. ಈಗಲೂ ಆದಿವಾಸಿಗಳಲ್ಲಿ ಭಿನ್ನ ರಾಮಾಯಣಗಳಿವೆ. ಭಾರತದುದ್ದಕ್ಕೂ ಜನಪದರಲ್ಲಿ ಎಂಟುನೂರು ಬಗೆಯ ರಾಮಾಯಣಗಳಿರುವುದನ್ನು ಅಧ್ಯಯನಕಾರರು ಗುರುತಿಸಿದ್ದಾರೆ."[೯]

ನಮ್ಮ ದೇಶ ಜನಪದ ಕಥೆಗಳ ಕಣಜ. ಇಲ್ಲಿ ಸಿಗುವ ಜನಪದ ಕಾವ್ಯಗಳು ಪ್ರಪಂಚದಲ್ಲಿ ಎಲ್ಲಿಯೂ ದೊರೆಯದೆಂದು ಹೇಳಬಹುದು. ಜನಪದ ಕಥನ ಕಾವ್ಯಗಳಾದ ರಾಮಾಯಣ, ಮಹಾಭಾರತಗಳನ್ನು ಪ್ರಾಣಿ ಕಥೆಗಳು, ಸಾಮಾಜಿಕ ಕಥೆಗಳು, ಐತಿಹಾಸಿಕ ಕಥೆಗಳು ಹಾಗೂ ಪೌರಾಣಿಕ/ಪುರಾಣ ಕಥೆಗಳೆಂದು ವಿಂಗಡಿಸಬಹುದು.

"ಪುರಾಣ ಕಥೆಗಳು ಸೃಷ್ಟಿ, ಸ್ಥಿತಿ, ಲಯಗಳನ್ನು ಕುರಿತಿರುತ್ತವೆ. ಹೀಗಾಗಿ ಅವು ಎಷ್ಟೋ ವೇಳೆ ಐತಿಹ್ಯವನ್ನು ಹೋಲುತ್ತವೆ. ಇವುಗಳಲ್ಲಿ ಎದ್ದು ಕಾಣುವ ಮುಖ್ಯ ವ್ಯತ್ಯಾಸವೆಂದರೆ, ಪುರಾಣಗಳ ಆವರಣ-ದೈವಿಕ, ಪಾತ್ರಗಳು ದೇವತೆಗಳು, ಉದ್ದೇಶ-ನಿರೂಪಣೆ ಐತಿಹ್ಯಗಳಾದರೂ ಸ್ಥಳ, ಸಂಗತಿ, ವ್ಯಕ್ತಿಗಳನ್ನು ಕುರಿತವು ಹೇಳುವವರೂ

ಕೇಳುವವರೂ ನಿಜವೆಂದೇ ಭಾವಿಸಿರುವ ಕಥೆಗಳು ಪುರಾಣ ಕಥೆಗಳು ಧಾರ್ಮಿಕ ನಂಬಿಕೆಗಳಿಗೆ ಮತ್ತು ನಡಾವಳಿಗಳಿಗೆ ಹೆಚ್ಚಾಗಿ ಸಂಬಂಧಿಸಿರುತ್ತವೆ. ರಾಮಾಯಣ, ಮಹಾಭಾರತಗಳು ಪುರಾಣ ಇತಿಹಾಸ ಎರಡೂ ಆಗಿವೆ. ಆದರೆ ನಮ್ಮಲ್ಲಿ ಅವು ಪೌರಾಣಿಕ ಪ್ರಸಂಗಗಳೆಂಬ ತಿಳುವಳಿಕೆಯಿರುವುದರಿಂದ ಅವನ್ನು ಪುರಾಣ ಗುಂಪಿನಲ್ಲಿಯೇ ಸೇರಿಸಲಾಗಿದೆ."[೧೦] ಮಹಾಭಾರತ, ರಾಮಾಯಣಕ್ಕೆ ಸಂಬಂಧಿಸಿದ ಕಥೆಗಳು ಕರ್ನಾಟಕದಲ್ಲಿ ದಂತಕಥೆಗಳ ರೂಪದಲ್ಲಿ ಹೆಚ್ಚಾಗಿ ದೊರಕುತ್ತವೆ. "ಹಾಡ್ಗತೆಗಳ ರೂಪದಲ್ಲಿ ಅಲ್ಲಲ್ಲಿ ದೊರೆತರೂ ಇನ್ನೂ ಕ್ರಮಬದ್ಧವಾದ ಸಂಗ್ರಹ ಆಗಬೇಕು."[೧೧] "ಪ್ರಸಂಗಗಳಿಗೆ ಸಂಬಂಧಿಸಿದ ಅನೇಕ ಕಥನಗೀತೆಗಳು, ವಿಸ್ತಾರವಾದ, ಕಾವ್ಯಗಳು ಲಭ್ಯವಾದರೂ"[೧೨] "ಅಪಾರ ಸಂಖ್ಯೆಯಲ್ಲಿ ಇಲ್ಲ."[೧೩] ರಾಮಾಯಣಕ್ಕೆ ಸಂಬಂಧಿಸಿದಂತೆ ನಾಡಿನಾದ್ಯಂತ ಪ್ರತಿಹಳ್ಳಿಗಳಲ್ಲೂ ಐತಿಹ್ಯಗಳು ಕಂಡುಬರುವುದು ಸಾಮಾನ್ಯವಾದ ಸಂಗತಿ.

ರಾಮಾಯಣದ ಸಮಗ್ರ ಚಿತ್ರಣಗಳನ್ನು ನೀಡಬಲ್ಲ ಕಂಠಸ್ಥ ಸಂಪ್ರದಾಯದಲ್ಲಿ ಉಳಿದಿದ್ದ ಬಿಡಿ ಹಾಡುಗಳನ್ನು ನಮ್ಮ ಗಾಯಕರು ಹಾಡುತ್ತಾ ಬಂದಿದ್ದಾರೆ. ಸಮಗ್ರ ರಾಮಾಯಣ ಭಾಗವಂತಿಕೆ ಸಂಪ್ರದಾಯದ ಹಾಡುಗಳಲ್ಲಿ ಪ್ರಕಟವಾಗಿದ್ದು ಅವು ಜೀ.ಶಂ.ಪ. ಅವರ ಭಾಗವಂತಿಕೆ ಮೇಳ ಮತ್ತು ಮೇಟಿ ಕೆರೆ ಹಿರಿಯಣ್ಣನವರ ಭಾಗವಂತಿಕೆ ಪದಗಳ ಸಂಕಲನದಲ್ಲಿವೆ. "ಶಿಷ್ಟ ಮೂಲದ ರಾಮಾಯಣದ ಕಥಾ ಚೌಕಟ್ಟನ್ನೇ ಈ ಕತೆ ಹೋಲುವುದಾದರೂ, ಅನೇಕ ಜನಪದ ಆಶಯಗಳು ಈ ಕತೆಯೊಡನೆ ಬೆರತು ಸುಂದರವಾದ ಜನಪದ ಕಾವ್ಯದ ಆವರಣವನ್ನು ಕಲ್ಪಿಸುತ್ತವೆ."[೧೪] ರಾಮಾಯಣಕ್ಕೆ ಸಂಬಂಧಿಸಿದ ಹಾಡುಗಳು, ತ್ರಿಪದಿ ರೂಪದಲ್ಲಿ ಕೆಲವು ಅಲ್ಲಲ್ಲಿ ದೊರೆಯುತ್ತವೆ. ಅಂತಹ "ತ್ರಿಪದಿ"[೧೫]ಗಳೆಂದರೆ ಬೀಸುವ ಪದಗಳಲ್ಲಿನ ತ್ರಿಪದಿಗಳು. ಸೀತಾ ಸ್ವಯಂವರ, ಅವಳ ಮದುವೆ ಸುದ್ದಿ ಲಂಕೆಗೆ ಹರಡಿದ ಸ್ವಾರಸ್ಯ, ಸೀತೆಯ ಸೌಂದರ್ಯಕ್ಕೆ ಅಯೋಧ್ಯೆಯ ಜನ ಬೆರಗಾಗುವುದು. ಸೀತಾದೇವಿ ರಾವಣನಿಗೆ ಸೆರೆ ಆಗುವುದು ಜಟಾಯುವಿನ ಪ್ರಸಂಗ. ರಾಮನ ದಂಡು ಲಂಕೆಗೆ ಹೋಗುವುದು, ಹನುಮಂತನ ಅದ್ಭುತ ಸಾಹಸಗಳು, ರಾಮ ಸಮುದ್ರಕ್ಕೆ ಸೇತುವೆ ಕಟ್ಟುವುದು, ಯುದ್ಧದ ವರ್ಣನೆ ಹಾಗೂ ಯುದ್ಧ ವೈಖರಿ ರಾಮಲಕ್ಷ್ಮಣರ ಬಾಣ ಪ್ರಯೋಗ ಇವೆಲ್ಲದರ ಬಗ್ಗೆ ಹಾಡುಗಳೂ ತ್ರಿಪದಿಗಳಲ್ಲಿ ದೊರೆತು, ಸಮಗ್ರ ಜನಪದ ರಾಮಾಯಣವನ್ನು ಪರಿಚಯಿಸುತ್ತದೆ. ಉತ್ತರ ರಾಮಾಯಣಕ್ಕೆ ಸಂಬಂಧಿಸಿದ ಅಪೂರ್ವ ಕಾವ್ಯ ಲವ ಕುಶರ ಪ್ರಸಂಗ ನೀಲಗಾರರಲ್ಲಿ, ದೇವರ ಗುಡ್ಡರಲ್ಲಿ ಲಭ್ಯವಿದ್ದು, ಡಾ.ಜೀ.ಶಂ.ಪರಮಶಿವಯ್ಯನವರು ಈಗಾಗಲೇ ಪ್ರಕಟಿಸಿರುವ, 'ಜನಪದ ಕಾವ್ಯ ಕಥೆಗಳು'[೧೬] ಪುಸ್ತಕದಲ್ಲಿ 'ಹ್ಯಾಗೆ ಕೊಂದಪ್ಪ ನನ್ನ ಮಡದೀಯ' ಎಂಬ ಶೀರ್ಷಿಕೆಯಡಿ ಪ್ರಕಟಗೊಂಡಿದೆ. ಇದಲ್ಲದೆ ಇವರ ಎರಡು ಜನಪದ ಕಾವ್ಯಗಳು ಎಂಬ ಸಂಕಲನದಲ್ಲಿ ಅವಲಯ್ಯ, ಕುಶಲಯ್ಯ, ಕಾಳಗ ಮತ್ತು ಸತ್ಯವಂತ ಸಾರುಗಧರ ಎಂಬ ಎರಡು ಜನಪದ ಕಾವ್ಯಗಳಿವೆ. ಸೀತೆಯ ಮುಗ್ಧತೆ, ರಾಮ ಆದೇಶಕ್ಕೆ ತಲೆ ಬಾಗುವುದು, ಪ್ರಾಣಿಗಳ ಬಗ್ಗೆ ಅವಳ ಸಹಜವಾದ ಪ್ರೀತಿ ಮಕ್ಕಳ ಮೇಲಿನ ಮಮತೆ, ಎಲ್ಲಕ್ಕಿಂತ ಹೆಚ್ಚಾಗಿ ಗಂಡ ಹಾಕಿದ ಗೆರೆ ದಾಟದವಳಾಗಿ ಚಿತ್ರಿತಳಾಗಿದ್ದಾಳೆ. ಮೌನವನ್ನೇ ಆದರ್ಶವಾಗಿಸಿಕೊಂಡು, ಭೂತಾಯಿಯ ಮಡಿಲಲ್ಲಿ ಲೀನವಾಗುವ ಬಗೆ ಎಲ್ಲವನ್ನು ಜನಪದ ಕವಿ ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾನೆ.

ಕೆ.ಶಿವರಾಮ ಐತಾಳರ "ದಕ್ಷಿಣ ಕನ್ನಡದ ಜನಪದ ಸಾಹಿತ್ಯ"[೨] ಸಂಕಲನದಲ್ಲಿ, ಒಂದೊಂದು ಸಾಲಿನಲ್ಲಿ ರಾಮಾಯಣದ ಪ್ರತಿಯೊಂದು ಘಟನೆಯನ್ನೂ ಹೇಳುವ ಈ ಗೀತೆ 'ಸಂಪ್ರದಾಯದ ಹಾಡು' ಎಂಬ ಪ್ರಕಾರಕ್ಕೆ ಸೇರಿದ್ದಾಗಿದೆ.

"ಮತಿಘಟ್ಟ ಕೃಷ್ಣಮೂರ್ತಿಯವರ 'ಕನ್ನಡ ಜನಪದ ಸಾಹಿತ್ಯ ಭಂಡಾರ'ದಲ್ಲಿನ 'ರಾಮಾಯಣದ ಕಥೆಗಳು' ಎಂಬ ಭಾಗದಲ್ಲಿ ೭ ಕಥನಕಾವ್ಯಗಳಿವೆ. ಸಂಪ್ರದಾಯದ ಹಾಡುಗಳ ಪ್ರಕಾರಕ್ಕೆ ಸೇರುವ ಈ ಸಂಗ್ರಹದಲ್ಲಿ ಧನಸ್ಸು ಎತ್ತಿದ್ದು, ಸೇತುವೆಸಂಧಿ ಮತ್ತು ಅರುಂಧತಿ ಎಂಬ ಕಾವ್ಯಗಳು ವಿವಿಧ ಛಂದಸ್ಸಿನಲ್ಲಿವೆ."[೮] ಇವರದೇ "ಕನ್ನಡ ಜನಪದ ಸಾಹಿತ್ಯ ಭಂಡಾರ ಸಂಪುಟ ೨"[೯]ರಲ್ಲಿ ೧೦ ನೆಲೆಗಳನ್ನು ವಿಂಗಡಿಸಿದ್ದು, ಪೌರಾಣಿಕ ಕಥೆಗಳ ವಿಭಾಗದಲ್ಲಿ ರಾಮನ ಕಥೆ, ಶ್ರೀರಾಮನ ಬಾಲಲೀಲೆ, ಕಿರು ರಾಮಾಯಣ, ಅಹಲ್ಯೋದ್ಧಾರ, ಧನಸ್ಸು ಎತ್ತಿದ್ದು, ರಾವಣನ ಐಶ್ವರ್ಯ, ಲಕ್ಷ್ಮಣ ಮೂರ್ಛೆ ಹೋದದ್ದು, ಪಟ್ಟಣ ಪ್ರವೇಶ, ಲಕ್ಷ್ಮಣ ನಕ್ಕದ್ದು, ಲವಕುಶರ ಕಾಳಗ ಇತ್ಯಾದಿ ೧೨ ಹಾಡುಗಳು ರಾಮಾಯಣಕ್ಕೆ ಸಂಬಂಧಿಸಿದವು. ರಾಮನ ಕಥೆ ಹಾಡು ನಾಲ್ಕು ಸಾಲಿನ ಎಂಟು ನುಡಿಗಳಲ್ಲಿ ಇಡೀ ರಾಮಾಯಣದ ಕಥೆಯನ್ನು ತಿಳಿಸಿದರೆ, ಕಿರು ರಾಮಾಯಣ ೧೦೪ ಸಾಲುಗಳಲ್ಲಿ ಕಥೆಯನ್ನು ಸ್ವಲ್ಪ ವಿಸ್ತಾರವಾಗಿ ಹೇಳಿದೆ. ಶ್ರೀರಾಮನ ಬಾಲಲೀಲೆಯನ್ನು ವರ್ಣಿಸುವ ಶ್ರೀರಾಮ ಬಾಲಲೀಲೆ, ಅಪರೂಪದ ಹಾಡು ಅಹಲ್ಯೋದ್ಧಾರ, ಶಿಲೆಯಾಗಿದ್ದ ಅಹಲ್ಯೆ ರಾಮ ಪಾದ ಸ್ಪರ್ಶದಿಂದ ಮೊದಲಿನ ರೂಪ ತಾಳುವ ಒಂದು ವಿಶಿಷ್ಟ ಧಾಟಿಯ ಹಾಡು. ಸೀತಾ ಸ್ವಯಂವರದ ವರ್ಣನೆಯಲ್ಲಿ ಧನಸ್ಸು ಎತ್ತಿದ್ದು ಹಾಡು ತಿಳಿಸಿದರೆ, ಸೀತಾಪಹರಣವನ್ನು 'ಹೊಮ್ಮಿಗದ ಸಂದಿ' ತಿಳಿಸುತ್ತದೆ. ಲಕ್ಷ್ಮಣ, ರಾಮನನ್ನು ಹುಡುಕಲು ಹೊರಡುವ ಮುನ್ನ ಆಶ್ರಮದ ಮುಂದೆ 'ಏಳು' ಗೆರೆಗಳನ್ನು ಬರೆದನು. ಗೆರೆಗಳನ್ನು ಬರೆದನೆನ್ನುವ ವಿಚಾರ ಜಾನಪದರ ಕಲ್ಪನೆ. ರಾವಣನ ಐಶ್ವರ್ಯವನ್ನು ವರ್ಣಿಸುವ ಹಾಡು, ರಾಮಾಯಣದ ಯುದ್ಧ ಕಾಂಡದಲ್ಲಿ ಬರುವ ಲಕ್ಷ್ಮಣ ಮೂರ್ಛೆ ಹೋದ ಸನ್ನಿವೇಶವನ್ನು ತಿಳಿಸುತ್ತದೆ. ಯುದ್ಧದಲ್ಲಿ ಜಯ ಪಡೆದು ಸೀತಾದೇವಿಯೊಡನೆ ಅಯೋಧ್ಯೆಗೆ ವಾಪಸ್ಸು ಬರುವುದನ್ನು 'ಪಟ್ಟಣ ಪ್ರವೇಶ'ದ ಹಾಡು ವರ್ಣಿಸುತ್ತದೆ. ಲಕ್ಷ್ಮಣ ವನವಾಸದಲ್ಲಿದ್ದಾಗ ಹದಿನಾಲ್ಕು ವರ್ಷ ಊಟ, ನಿದ್ದೆ ಇಲ್ಲದೆ ಇದ್ದು, ಈಗ ಇಲ್ಲಿನ ಸುಖಭೋಗಗಳನ್ನು ನೆನೆದು ಬದಲಾದ ಸ್ಥಿತಿಯ ಬಗ್ಗೆ ನಗು ಬಂದ ವಿಚಾರವನ್ನು 'ಲಕ್ಷ್ಮಣ ನಕ್ಕದ್ದು' ಹಾಡು ತಿಳಿಸಿದರೆ, ರಜಕನೊಬ್ಬನ ಒಡಕು ಮಾತು ಕೇಳಿ ಬಸುರಿಯಾದ ಸೀತೆಯನ್ನು ಕಾಡಿಗೆ ಕಳಿಸುವುದು, ಲವಕುಶರ ಜನನ, ಯಜ್ಞಾಶ್ವವನ್ನು ಕಟ್ಟಿ ಹಾಕುವುದು, ತಂದೆ ಮಕ್ಕಳಿಗೆ ನಡೆದ ಯುದ್ಧ ಕೊನೆಯಲ್ಲಿ ಸೀತೆ ಮತ್ತು ಮಕ್ಕಳೊಂದಿಗೆ ಅಯೋಧ್ಯೆಗೆ ಹಿಂದಿರುಗಿ ಸುಖವಾಗಿದ್ದರು ಎನ್ನುವ ವಿಚಾರವನ್ನು 'ಲವಕುಶರ ಕಾಳಗ' ಪದ್ಯ ತಿಳಿಸುತ್ತದೆ. ಸಂಪೂರ್ಣ ರಾಮಾಯಣದ ಚಿತ್ರವನ್ನು ನೀಡಲು ಈ ಪದ್ಯಗಳು ಸಮರ್ಥವಾಗಿವೆ.

ಡಾ.ಕಾಳೇಗೌಡ ನಾಗವಾರರವರ "ಬಯಲು ಸೀಮೆಯ ಲಾವಣಿಗಳು"[೨೦] ಸಂಗ್ರಹದಲ್ಲಿ ಕರ್ನಾಟಕ ಜನಪದ ಸಾಹಿತ್ಯದ ವೈಶಿಷ್ಟ್ಯವನ್ನು ಎತ್ತಿ ಹಿಡಿಯುವ ೧೫೫ ಲಾವಣಿಗಳಿದ್ದು, ಅದರಲ್ಲಿ ಲವಕುಶರ ಕಥೆ ಉತ್ತರ ರಾಮಾಯಣದ ಕತೆಯನ್ನು ಜನಪದದ ಜೀವಂತ ವಾಣಿಯಲ್ಲಿ ಹೇಳಲಾಗಿದೆ. ಉತ್ತರ ರಾಮಾಯಣದ

ಕಥೆಯನ್ನು ಹೇಳುವ ಅನೇಕ ಪಾಠಗಳು ಇದ್ದರೂ, 'ಒಂದೊಂದರಲ್ಲೂ ಜನಪದರು ತಮ್ಮದೇ ಆದ ವಿಶಿಷ್ಟ ಕಲ್ಪನೆಗಳನ್ನು ಹೆಣೆದಿದ್ದಾರೆ. ಕತೆಯಲ್ಲಿ ಮಡಿವಾಳನೊಬ್ಬನ ಮಾತನ್ನು ತಿಳಿದ ರಾಮ ತಮ್ಮ ಲಕ್ಷ್ಮಣನಿಗೆ ಸೀತೆಯನ್ನು ಅರಣ್ಯದ ಮಧ್ಯದಲ್ಲಿ ತಲೆ ಕಡಿದು ಬರುವಂತೆ ಆಜ್ಞಾಪಿಸುತ್ತಾನೆ. ರಾಮನ ಹಿರಿಯರು ಸೀತೆ ಬಾಳ ಸತ್ಯವಂತೆ ಎಂದು, ಅವನ ಕನಸಿನಲ್ಲಿ ತಿಳಿಸಿದ್ದರೂ, ಬಗೆಬಗೆಯ ಸತ್ವಪರೀಕ್ಷೆಗೆ ಸೀತೆಯನ್ನು ಒಡ್ಡುತ್ತಾನೆ.' ಎಲ್ಲದರಲ್ಲೂ ಜಯಶೀಲಳಾದರೂ ಮನಸ್ಸಿಗೆ ಒಪ್ಪಿಗೆಯಾಗದೆ ಸೀತೆಯ ತಲೆ ಕಡಿದು, ಗುರುತಿಗೆ ರಕ್ತ ತಂದು ತೋರಿಸಲು ಕಟ್ಟಪ್ಪಣೆ ಮಾಡುತ್ತಾನೆ. ಮರು ಮಾತಾಡಲು ಪ್ರಯತ್ನಿಸಿದ ತಮ್ಮನನ್ನು ಕೋಪದಿಂದ,

'ನಾನಾಳು ಲೋಕಾವ
ನೀನೆ ಆಳಬೇಕಂತ
ನಿನ್ನ ಮನದೇಲಿದ್ದಾದೇನೊ?

(ಬಯಲು ಸೀಮೆಯ ಲಾವಣಿಗಳು, ಪುಟ ೧೫೬)

ಎನ್ನುತ್ತಾನೆ.

ಅತ್ತಿಗೆ ತುಂಬು ಗರ್ಭಿಣಿ. ದುಃಖದಿಂದ ಕಡಿಯಲು ಎತ್ತಿದ ಖಡ್ಗದ ನೆರಳಿಗೆ ಮೂರು ನೆರಳು ಸುಳಿದು, ಕಡಿಯದೆ, ಹೊನ್ನಮರದ ಹಾಲನ್ನು ತಂದು ಗುರುತಿಗಾಗಿ ಅಣ್ಣನಿಗೆ ತೋರಿಸುತ್ತಾನೆ. ಇತ್ತ ಸೀತೆ ಲವಕುಶ ಎಂಬ ಹೆಸರಿನ ಎರಡು ಮೀನುಗಳ ಸಹಾಯದಿಂದ ಹೊಳೆ ದಾಟಿ ವಾಲ್ಮೀಕಿ ರಾಯನ ಆಶ್ರಯದಲ್ಲಿ ಜವಳಿ ಗಂಡು ಮಕ್ಕಳಿಗೆ ಜನ್ಮ ಕೊಡುತ್ತಾಳೆ. ಮೀನುಗಳ ಹೆಸರನ್ನು ಮಕ್ಕಳಿಗೆ ಇಡುತ್ತಾಳೆ. ಮುಂದೆ ಮಕ್ಕಳು, ರಾಮರ ಪಟ್ಟದ ಕುದುರೆಯನ್ನು ಕಟ್ಟಿ ಅವರೊಂದಿಗೆ ಯುದ್ಧ ಮಾಡಿ, ರಾಮ ಲಕ್ಷ್ಮಣರ ಮತ್ತು ಅವರ ಸೈನ್ಯವನ್ನು ತರಿದಿಡುತ್ತಾರೆ. ಕೊನೆಗೆ, ಸೀತಮ್ಮ ಮಕ್ಕಳಿಗೆ ರಾಮ ಲಕ್ಷ್ಮಣರನ್ನು ಪರಿಚಯಿಸಿ, ಮೂರು ಬೊಗಸೆ ಕಣ್ಣೀರನ್ನು ಹೆಣಗಳ ಮೇಲೆ ಎರಚಿ ಬದುಕಿಸುತ್ತಾಳೆ. ಎಲ್ಲರೂ ಪಟ್ಟಣಕ್ಕೆ ಹಿಂದಿರುಗುವಾಗ ರಾಮ, ಲಕ್ಷ್ಮಣನನ್ನು ಕುರಿತು

'ನಿಮ್ಮತ್ತಿಗೆ ಸೀತಮ್ಮಾನ
ನಾನು ಇನ್ನೂವೆ ನೆಚ್ಚುಲಿಲ್ಲ'

(ಬಯಲು ಸೀಮೆಯ ಲಾವಣಿಗಳು, ಪುಟ ೧೬೮)

ಎಂದು ಹೇಳುವ ಮಾತನ್ನು ಕೇಳಿದ ಸೀತಮ್ಮ, ಭೂಮಿತಾಯಿಯನ್ನು ಪ್ರಾರ್ಥಿಸಿ, ತಾಯಿಯೊಡಲಿಗೆ ಹೋಗುತ್ತಾಳೆ. "ಉತ್ತರಕಾಂಡ ರಾಮಾಯಣದ ಪೂರ್ಣಕಥೆಯನ್ನು ಜನಪದದ ಜೀವಂತವಾಣಿಯಲ್ಲಿ ಕೇಳುವ ಸಂಪತ್ತು ಲವಕುಶರ ಕಥೆಯಲ್ಲಿ ನಮ್ಮದಾಗುತ್ತದೆ. ಸೀತೆಯಂತಹ ಸಚ್ಚಾರಿತ್ರ್ಯ ಪೂರ್ಣ ಹೆಣ್ಣಿಗೊದಗಿದ ಅಸಾಧಾರಣ ದುಃಖವನ್ನು ವರ್ಣಿಸುವ ಕಡೆಗೆ ಮಾತ್ರ ಹೆಚ್ಚಿನ ಒತ್ತು ಕೊಟ್ಟು, ಬೇರೆಲ್ಲ ಕಡೆಯೂ ನಿಟ್ಟೋಟದಿಂದ ಓಡುವ ಈ ಲಾವಣಿಯಲ್ಲೂ ಕಂಡು ಬರುವ ನಾಯಕಿಯ ಬಗೆಗಿನ ಅನುಕಂಪದ ದನಿ."[೨೦] ಸೀತೆಯ ಬಗೆ ಬಗೆ ಸತ್ವ ಪರೀಕ್ಷೆಗಳು, ಅವಳಿಗೊದಗಿದ ಅಸಾಧಾರಣ ದುಃಖವನ್ನು ಚಿತ್ರಿಸುವ ಶಕ್ತಿಯುತವಾದ ಈ ಲಾವಣಿ ಕೇಳುಗರ ಕರಳು ಮಿಡಿಯುವಂತಿದೆ.

ಡಾ.ಎ.ಹಿರಿಯಣ್ಣನವರು ಸಂಪಾದಿಸಿರುವ 'ತಂಬೂರಿ ಸಂಪ್ರದಾಯದ ಕಾವ್ಯಗಳು,"[೨೨] ಜಾನಪದ ಅಧ್ಯಯನ ಕ್ಷೇತ್ರದ ಒಂದು ವಿಶಿಷ್ಟ ಮುಖವನ್ನು ಪ್ರತಿನಿಧಿಸುತ್ತದೆ. ನಾಡ ತಂಬೂರಿಯನ್ನು ಬಳಸುವ, ಕರ್ನಾಟಕದ ಲೌಕಿಕ ವೃತ್ತಿಗಾಯಕರಾದ ಇವರನ್ನು ತಂಬೂರಿಯವರು ಎಂದು ಕರೆಯಲಾಗುತ್ತದೆ. ಹಾಸನ ಜಿಲ್ಲೆಯಲ್ಲಿ ವಿಶೇಷವಾಗಿಯು, ಚಿಕ್ಕಮಗಳೂರು, ಮಂಡ್ಯ ಮತ್ತು ಕೊಡಗು ಜಿಲ್ಲೆಯ ಕೆಲಭಾಗಗಳಲ್ಲಿ ವಿರಳವಾಗಿಯೂ ಕಂಡು ಬರುತ್ತಾರೆ. ತಂಬೂರಿಯವರು ಸುಮಾರು ಇಪ್ಪತ್ತಕ್ಕೂ ಮೀರಿ ಅನೇಕ ಐತಿಹಾಸಿಕ, ಪೌರಾಣಿಕ, ಸಾಮಾಜಿಕ ಮತ್ತು ಇತರ ಕಾವ್ಯಗಳನ್ನು ಹಾಡುತ್ತಾರೆ. ಡಾ.ಎ.ಹಿರಿಯಣ್ಣ ನವರ ಈ ಸಂಗ್ರಹದಲ್ಲಿ 'ರಾಮನ ಬಂಟ ಆಂಜುನೇಯನಾಗೊ' ಕಾವ್ಯದ ಕಥೆಯಲ್ಲಿ ಹನುಮಂತ, ಅಂಜನಾದೇವಿಯ ಬೆನ್ನಿನಲ್ಲಿ ಜನಿಸಿದ, ತಾಯಿಯಿಂದ, ಕಚ್ಚುವ ಹಾವಿನಿಂದ, ಕಡಿಯುವ ಕಳ್ಳನಿಂದ, ಉಕ್ಕಿ ಹರಿಯುವ ಸಮುದ್ರದಲ್ಲಿ ಉಳಿದು, ಶ್ರೀರಾಮನ ಬಂಟನಾಗು ಎಂದು ವರ ಪಡೆಯುವ, ತಾಯಿಗೆ ಅಂಜನ ತಂದು ಕೊಡುವವರೆಗಿನ ಕಥೆ ಶಿಷ್ಟ ಮೂಲದ ಕಥೆಯಾಗಿದೆ. ನಂತರ ಜನಪದ ಕಥೆಯಾಗಿ ಹನುಮಂತರಾಯ ಕೂಲಿ ಮಾಡುವುದು ಸೀತೆ ಅಪಹರಣದ ಸುದ್ದಿ ತಿಳಿದು, ಆಕೆಯನ್ನು ಹುಡುಕಿಕೊಂಡು ಸಮುದ್ರ ದಾಟಿ, ಲಂಕೆಯ ಅಶೋಕವನದಲ್ಲಿ ಸೀತೆಯನ್ನು ಕಂಡು ಪರಿಚಯ ಹೇಳಿದಾಗ, ಸೀತೆ ಗುರುತು ಕೇಳುವುದು, ರಾಮನಲ್ಲಿಗೆ ಹಿಂತಿರುಗಿ ಬಂದು ರಾಮನಿಂದ ಮುದ್ರೆ ಉಂಗುರ ಪಡೆದು ಲಂಕೆಗೆ ಹೋಗಿ ಸೀತೆಗೆ ತೋರಿಸುವುದು, ನಂತರದಲ್ಲಿ ಸೀತೆಯನ್ನು ಲಂಕೆಯಿಂದ ಶ್ರೀರಾಮನಲ್ಲಿಗೆ ಹೊತ್ತು ತಂದ. 'ಶ್ರೀರಾಮನಿಂದ ತೇಜಾಗಿ ಬಾಳೊ ಮಗನೆ' ಎನ್ನುವ ವರ ಪಡೆಯುವ ಹನುಮಂತರಾಯನ ಸಾಹಸ ಮಹಿಮೆಯನ್ನು ಚಿತ್ರಿಸುತ್ತದೆ. ಅಶೋಕ ವನದಿಂದ ಏಕಾಏಕಿ ಸೀತೆಯನ್ನು ರಾಮನಲ್ಲಿಗೆ ಹೊತ್ತು ತರುವ ವಿಚಾರ ಇಲ್ಲಿ ವಿನೂತನವಾಗಿದ್ದು, ಜನಪದ ಕಥಾ ಸರಣಿಯನ್ನೇ ಹೇಳುತ್ತದೆ.

ಗುಂಡ್ಮಿ ಚಂದ್ರಶೇಖರ ಐತಾಳರವರು ಸಂಪಾದಿಸಿರುವ 'ಕೈಲಿಯ ಕರೆದ ನೊರೆಹಾಲು'[೨೩]ರಲ್ಲಿನ 'ಪೌರಾಣಿಕ ಕಥನ ಗೀತೆಗಳು' ಎಂಬ ವಿಭಾಗದಲ್ಲಿ ಉತ್ತರ ರಾಮಾಯಣಕ್ಕೆ ಸಂಬಂಧಿಸಿದ 'ಸೀತಾದೇವಿಯ ವನ್ವಾಸ' ಜನಪದ ಗೀತೆಯಲ್ಲಿ, ಸೀತೆಯನ್ನು ಕಾಡಿನಲ್ಲಿ ಲಕ್ಷ್ಮಣ ಕಡಿದು ಬರಲು ರಾಮನ ಆದೇಶ. ಸೀತೆ ಲಕ್ಷ್ಮಣನಿಗೆ, ತಾನು ಆರು ತಿಂಗಳ ಗರ್ಭಿಣಿ ಎಂದು ಹೇಳಿಯೂ, ಅಣ್ಣ ಆದೇಶವನ್ನು ನೆರವೇರಿಸಲು ಹೇಳುವುದು, ಲಕ್ಷ್ಮಣ ಶಿಶು ಹತ್ಯೆಯ ಪಾಪಕ್ಕೆ ಗುರಿಯಾಗಲಾರನೆಂದು, ಬೇವಿನ ಮರದ ನೆತ್ತರನ್ನು ಅಣ್ಣನ ಹಣೆಗಿಟ್ಟು ಸೀತೆಯನ್ನು ಕೊಂದನೆಂದಾಗ, ರಾಮ ದುಃಖಿಸುತ್ತಾ ಸೀತೆ ಏನೆಂದು ಪ್ರಾಣ ಬಿಟ್ಟಳು ಎಂದು ಕೇಳಿದಾಗ,

'ತಾಯಿಯ ನೆನಿಲಿಲ್ಲೆ ತಂದಿಯ ನೆನಿಲಿಲ್ಲೆ
ರಾಮಾರಾಮೆಂದೇ ಮಡಿದಳು'

(ಕೈಲಿಯ ಕರೆದ ನೊರೆಹಾಲು, ಪುಟ ೬೦)

ಎನ್ನುತ್ತಾನೆ ಲಕ್ಷ್ಮಣ. ಮುಂದೆ ವಾಲ್ಮೀಕಿಯ ಆಶ್ರಮದಲ್ಲಿ ಲವಕುಶರನ್ನು ಪಡೆದು ಅಯೋಧ್ಯೆಗೆ ಹಿಂದಿರುಗುವ ಸಂದರ್ಭದಲ್ಲಿ ಮಕ್ಕಳಿಗೆ ಸ್ವತಃ ರಾಮನೇ 'ಬಸಲಿಯ ಕುಡಿಕೊಯ್ದು ಬಿಸಲಿಗೆ ತಡೆಮಾಡಿದ ಹಳ್ಳಿಯವರ 'ಛತ್ರಿ'ಯನ್ನು ಹಿಡಿದು ಕರೆ ತಂದನಂತೆ.' ಬಸಲಿಯ ಕುಡಿಯಂಥ ಆ ಕಂದರಿಗೆ ಅಷ್ಟೇ ಕೋಮಲವಾದ

ಛತ್ರಿ. ರಾಮನ ವಾತ್ಸಲ್ಯ ಎಷ್ಟೊಂದು ಧ್ವನಿತವಾಗಿದೆ ಎಂಬುದನ್ನು ಈ ಗ್ರಾಮ ರಾಮಾಯಣ ಎಷ್ಟೊಂದು ಅರ್ಥಪೂರ್ಣವಾಗಿ ಹೇಳಿದೆ.

ಎಸ್. ಎ. ಕೃಷ್ಣಯ್ಯನವರು ಸಂಪಾದಿಸಿರುವ 'ಬಾಚಿಗೊಂಡನ ಹಳ್ಳಿ ಮತ್ತು ಏಣಿಗಿ ಬಸಾಪುರದ ಜನಪದ ಗೀತೆಗಳು'[೨೪] ಎಂಬ ಸಂಕಲನದಲ್ಲಿ 'ಪೌರಾಣಿಕ ಗೀತೆ'ಗಳ ವಿಭಾಗದಲ್ಲಿ 'ಕಾಗೆ ಹೊಡೆದವರಿಗೆ ಮಗಳು' ಎಂಬ ಜನಪದ ಹಾಡಿನಲ್ಲಿ ರಾಮಾಯಣದ ಒಂದು ಚಿಕ್ಕ ಪ್ರಸಂಗ ಅಡಕಗೊಂಡಿದೆ. ಜನಪದ ರಾಮಾಯಣದಲ್ಲಿ ಜನಕರಾಜ ಕಾಗೆಯನ್ನು ಹೊಡೆದವರಿಗೆ ಮಗಳನ್ನು ಕೊಡುವೆನೆನ್ನುವ ಆಶಯ ಇಲ್ಲಿದೆ. ಒಂದು ಶುಭ ಕಾರ್ಯದಲ್ಲಿ ನೇಮನಿಷ್ಠೆಯಿಂದ ಎಡೆ ಅರ್ಪಣೆಗಾಗಿ ಅಡುಗೆ ಮಾಡಿಸಿದ್ದನ್ನು ಕಾಗೆ ಎಂಜಲು ಮಾಡುತ್ತದೆ. ಅದನ್ನು ಕೊಂದವರಿಗೆ ಮಗಳು ಸೀತೆಯನ್ನು ಮದುವೆ ಮಾಡಿ ಕೊಡುವುದಾಗಿ ಪ್ರಚಾರ ಮಾಡುತ್ತಾನೆ. ರಾಮ ಲಕ್ಷ್ಮಣರು ಸಾಹಸದಿಂದ, ಕಾಡು ಮೇಡು ಸುತ್ತಿ, ಕಡೆಗೆ ಒಂದು ತೋಪಿನಲ್ಲಿದ್ದ ಕಾಗೆಯನ್ನು ಬಾಣದಿಂದ ಹೊಡೆದುರುಳಿಸಿ, ಕುರುಹಿಗಾಗಿ ಒಬ್ಬನ ಕೈಯಲ್ಲಿ ರುಂಡ ಮತ್ತೊಬ್ಬನ ಕೈಯಲ್ಲಿ ಚೆಂಡು ಭಾಗ, ಹಿಡಿದುಕೊಂಡು ಜನಕರಾಜನ ಹತ್ತಿರ ಬಂದಾಗ, ಯಾರಿಗೆ ಹೆಣ್ಣು ಕೊಡಬೇಕೆಂಬ ಕಸಿವಿಸಿಯಲ್ಲಿದ್ದಾಗ, ಲಕ್ಷ್ಮಣ ರಾಮಣ್ಣನಿಗೆ ಕೊಡಿ ಎಂದು ಹೇಳುತ್ತಾನೆ. ಮದುವೆಯ ನಂತರ ಸೀತೆ, ಗಂಡನ ಮನೆಗೆ ರಾಮ ಲಕ್ಷ್ಮಣರೊಂದಿಗೆ ಹಂಪಿಯ ಹೊಳೆಯಲ್ಲಿ ನಡೆದರು ಎನ್ನುವುದನ್ನು ತಿಳಿಸುತ್ತದೆ.

ಮೂಲ ರಾಮಾಯಣದಲ್ಲಿ ಶಿವಧನಸ್ಸನ್ನು ಹೆದೆಯೇರಿಸಿ ಮದುವೆಯಾಗುವ ಆಶಯವಿದ್ದರೆ, ಕಾಗೆ ಹೊಡೆದುರುಳಿಸುವ ಆಶಯ ಜನಪದರದ್ದು.

ಡಾ.ಎನ್.ಆರ್.ನಾಯಕ್‌ರ ಸಂಪಾದಕತ್ವದಲ್ಲಿ 'ಹಳ್ಳೇರ ಜಾನಪದ ಸಾಹಿತ್ಯ'[೨೫] ಕೃತಿಯಲ್ಲಿ ಗ್ರಾಮಾಂತರ ಪ್ರದೇಶದಲ್ಲಿ ನೆಲೆಸಿರುವ ಜನಪದರ ದಿನನಿತ್ಯದ ಜೀವನಕ್ಕೆ ಸಂಬಂಧಿಸಿದ ಮೌಲಿಕ ವಿಚಾರಗಳಿವೆ. ಗದ್ಯ ಕಥೆಗಳು ವಿಭಾಗದಲ್ಲಿರುವ ರಾಮಾಯಣ ಕಥೆಗಾರ, ಕುಂತಿಯನ್ನು ಹೆಸರಿಸಿದರೂ, ಇದರಲ್ಲಿ ರಾಮಾಯಣದ ಕಥಾವಸ್ತುವಿದೆ. ಮಂಡೋದರಿಯ ಹೆಣ್ಣು ಮಗುವನ್ನು ಗಂಡ ರಾವಣ ತಾನೇ ಲಗ್ನವಾಗುವ ಬಯಕೆ ವ್ಯಕ್ತಪಡಿಸಿದಾಗ, ಮಗುವನ್ನು ಪೆಟ್ಟಿಗೆಯಲ್ಲಿ ಹಾಕಿ ಸಮುದ್ರದಲ್ಲಿ ತೇಲಿ ಬಿಡುವುದು, ಅಜ್ಜ ಮುನಿಗೆ ಸೀತೆ ಸಿಗುವುದು ಕಾಗೆ ಕೊಡುವ ತೊಂದರೆ, ಅದನ್ನು ಲಕ್ಷ್ಮಣ ಕೊಲ್ಲುವುದು, ರಾಮ ಸೀತೆಯನ್ನು ಮದುವೆ ಯಾಗುವುದು, ರಾವಣ ಸೀತೆಯನ್ನು ಕಾಡಿನಲ್ಲಿ ಅಪಹರಿಸುವುದು, ಹನುಮಂತ ಲಂಕೆಗೆ ಬೆಂಕಿಯಿಟ್ಟು ಸೀತೆ ಯನ್ನು ರಾಮನಿಗೆ ತಂದೊಪ್ಪಿಸುವುದು ಈ ಕತೆಯಲ್ಲಿದೆ. ರಾಮಾಯಣ, ಮಹಾಭಾರತಗಳು ಈ ಕತೆಯಲ್ಲಿ ಕಲಬೆರಕೆಯಾಗಿವೆ. ಈ ಕಥೆಯ ಭಿನ್ನ ಪಾಠಗಳು, ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಗದ್ಯ ಪದ್ಯ ಎರಡು ರೂಪಗಳಲ್ಲಿಯೂ ದೊರೆಯುತ್ತವೆ ಎನ್ನುತ್ತಾರೆ ಡಾ.ಎನ್.ಆರ್. ನಾಯಕ್‌ರವರು.

ಡಾ.ಎನ್.ಆರ್.ನಾಯಕ್‌ರವರ 'ಕಾರವಾರ ಜಿಲ್ಲೆಯ ಜನಪದ ಗೀತೆಗಳು'[೨೬] ಎನ್ನುವ ಪಿಎಚ್.ಡಿ ಮಹಾಪ್ರಬಂಧದಲ್ಲಿನ 'ಕಥನ ಕವನಗಳು' ವಿಭಾಗದಲ್ಲಿನ ರಾಮಾಯಣದ ಕಥೆಗಳಲ್ಲಿ ಸೀತೆ, ಮಾಯಾಮೃಗ ಸಂಧಿ, ಸೀತಾವನವಾಸಗಳ ಬಗ್ಗೆ ಮಹತ್ವಪೂರ್ಣವಾದ ಜನಪದ ವಿವರಗಳನ್ನು ನೀಡಿದ್ದಾರೆ.

ಡಾ.ಎಲ್.ಆರ್.ಹೆಗಡೆರವರು ಸಂಗ್ರಹಿಸಿರುವ 'ಪರಮೇಶ್ವರಿಯ ಪದಗಳು'[೨೭] ಸಂಕಲನದಲ್ಲಿನ ಒಂಬತ್ತು ಹಾಡುಗಳು ಹೆಚ್ಚಿನ ಜೀವನ ಸತ್ವದೀದ ಕೂಡಿವೆ. ಇದರಲ್ಲಿ 'ಸೀತಾವನವಾಸ' ಎಂಬ ರಾಮಾಯಣಕ್ಕೆ ಸಂಬಂಧಿಸಿದ ಹಾಡು ಯಕ್ಷಗಾನಗಳಲ್ಲಿಯೂ, ಹೆಂಗಸರ ಹಾಡುಗಳಲ್ಲಿಯೂ ಮತ್ತು ಗುಮಟೆ ಪದ ಗಳಲ್ಲಿಯೂ ಜನಪ್ರಿಯವಾದುದು.

ರಾಮನಿಗೆ ಬೀಳುವ ಕೆಟ್ಟ ಸ್ವಪ್ನ, ರಾವಣನ ತಂಗಿ ಕೊರವಂಜಿ ರೂಪದಲ್ಲಿ ಬಂದು ನಡೆಸುವ ಅವಾಂತರ ಈ ಹಾಡಿನ ಹಿನ್ನೆಲೆಯಾಗಿದೆ. ಸೀತೆ, ಕೊರವಂಜಿಯ ಸಂಚಿನಂತೆ, ರಾವಣನ ಪಟ ಬರೆದು, ರಾಮನ ಸಿಟ್ಟಿಗೆ ಒಳಗಾಗುವುದು, ರಾಮನ ಆದೇಶದಂತೆ, 'ಸೀತೆಯ ತಲೆ ಹೊಡೆಯಲು ಲಕ್ಷ್ಮಣ ಸೀತೆಯನ್ನು ನಿನ್ನ ತೌರಮನೆಗೆ ಹೋಗೋಣ ಎಂದು ಅರಣ್ಯಕ್ಕೆ ಕರೆದುಕೊಂಡು ಹೋಗುವುದು, ಕೊನೆಗೆ ಸೀತೆಯೇ ತನ್ನನ್ನು ಕೊಲ್ಲು ಎನ್ನುವುದು, ಅವಳಿಗೆ ಲಕ್ಷ್ಮಣ ನಿನ್ನ ಸತ್ಯವಿದ್ದರೆ ನಿಂತಲ್ಲೇ ಹೊಳೆ ಹರಿಯಲಿ ಎಂದಂತೆ ಹೊಳೆ ಹರಿಯುವುದೂ ಇಲ್ಲಿನ ಒಂದು ವಿಶೇಷ. ಕೊಲ್ಲಲೆತ್ತಿದ ಲಕ್ಷ್ಮಣನ ಪಟ್ಟದ ಮೇಲೆ ಸೀತೆ ಹೊಟ್ಟೆಯ ಶಿಶುವಿನ ಪಿಂಡ ಹೊಳೆದುದು. ಸೀತೆಯನ್ನು ಕೊಲ್ಲದೆ, ಕಾಡ ಹೊನ್ನೆ ಮರದ ರಸವನ್ನು ಕತ್ತಿಗೆ ಲೇಪಿಸಿಕೊಂಡು ಹೋಗುವುದು ಇವೆಲ್ಲ ಜಾನಪದ ಕಥನ ಸರಣಿಯಲ್ಲಿ ಬರುವ ಸಾಮಾನ್ಯ ಜನಪದರ ಆಶಯಗಳು. ಅಡವಿಯಲ್ಲಿ ಕುರುಡ ಅಜ್ಜಮುನಿ, ಸೀತೆ ಹಾಗೂ ಅವಳು ಹಡೆದ ಮಗುವನ್ನು ಸಲಹುವುದು, ಮತ್ತೊಂದು ಮಗುವನ್ನು ಅಜ್ಜಮುನಿ ದರ್ಬೆಯಿಂದ ಪಡೆದುದು, ಆ ಮಕ್ಕಳಿಗೆ ಲವಕುಶರೆಂದು ಹೆಸರಿಟ್ಟು ಬೆಳೆಸುವುದು, ಕೊನೆಗೆ ರಾಮನ ಅಶ್ವ ಮೇಧದ ಕುದುರೆಯನ್ನು ಹುಡುಗರು ಕಟ್ಟಿಹಾಕಿ ಯುದ್ಧದಲ್ಲಿ ರಾಮಸೈನ್ಯವನ್ನು ನಾಶ ಮಾಡಿ, ರಾಮ ಲಕ್ಷ್ಮಣರ ತಲೆಗಳ ಛೇದಿಸುವುದು, ಮುನಿಯಜ್ಜನು ದರ್ಭೆಯನ್ನು ಮಂತ್ರಿಸಿ, ಮಡಿದ ರಾಮ ಲಕ್ಷ್ಮಣರನ್ನು ಬದುಕಿಸು ವುದು, ಕೊನೆಗೆ ರಾಮ, ಸೀತೆ ಹಾಗೂ ಮಕ್ಕಳನ್ನು ತನ್ನ ಅರಮನೆಗೆ ಕರೆದುಕೊಂಡು ಹೋಗುತ್ತಾನೆ. ಸೀತೆ ಆಡಿಬಂದ ಮಕ್ಕಳಿಗೆ ಊಟ ನೀಡಿ, ಅವರು ಮಲಗಿದ ಸಂಗತಿಯನ್ನು ತಿಳಿಸುತ್ತಾ ಕಥೆ ಮುಕ್ತಾಯ ವಾಗುತ್ತದೆ.

''ಮಧುಗಿರಿಯಲ್ಲಿ ಪ್ರಸಿದ್ಧವಾಗಿರುವ ಚಿತ್ರಪಟ ರಾಮಾಯಣದ ಪ್ರಕಾರ, ಅಯೋಧ್ಯೆಗೆ ಹಿಂದಿರುಗಿದ ಸೀತೆ ರಾವಣನ ಚಿತ್ರ ಬರೆಯುತ್ತಿದ್ದಳು ರಾಮ ಬಂದನೆಂದು ಮಂಚದ ಕೆಳಗೆ ಅಡಗಿಸಿಟ್ಟಳು. ರಾವಣನ ಆತ್ಮ ಅದರಲ್ಲಿ ಸೇರಿ ಕುಣಿಯುತ್ತಾ ಬಂತು. ಪರಿಣಾಮವಾಗಿ ರಾಮನಿಗೆ ಕೋಪ ಬಂದು ಗರ್ಭಿಣಿ ಸೀತೆಗೆ ವನವಾಸವಾಯಿತು. ಇನ್ನೊಂದು ಕತೆಯ ಪ್ರಕಾರ ಕೈಕೇಯಿ ಕೌಸಲ್ಯೆಯರೇ ಹೀಗೆ ಅವಳಿಂದ ರಾವಣನ ಚಿತ್ರ ಬರೆಸಿ, ರಾಮನಿಗೆ ಚಾಡಿ ಹೇಳಿ ಕಾಡಿಗಟ್ಟಿಸಿದರು. ರಾಮ ಸೀತೆಯರಿಗೆ, ಯಾವ ಆದರ್ಶದ ಗಂಧಗಾಳಿ ಸೋಂಕಿಸದ ಈ ಜಾನಪದರು ಅವರನ್ನು ರಾಗದ್ವೇಷಗಳ ಮನುಷ್ಯರಾಗಿಯೇ ಕಂಡಿದ್ದಾರೆ.''[೨೮]

ಡಾ.ಪಿ.ಕೆ.ರಾಜಶೇಖರ, ಡಾ,ರಾಗೌ ಮತ್ತು ಎಸ್.ಬಸವಯ್ಯ ಅವರು ಸಂಪಾದಿಸಿರುವ 'ಜನಪದ ರಾಮಾಯಣ' ಸರಳ ರಗಳೆಯ ಧಾಟಿಯಲ್ಲಿದೆ. ''ರಾಗೌ ಅವರು ಜನಪದ ರಾಮಾಯಣವನ್ನು 'ಲಾವಣಿ ಮಹಾಕಾವ್ಯ'ವೆಂದು ಕರೆದಿದ್ದಾರೆ... ಇಲ್ಲಿ ವಸ್ತುವೆಲ್ಲ ಬರಿಯ ಕ್ರಿಯೆಯೇ, ಪಾತ್ರಗಳು ಬಹುತೇಕ ಸಿದ್ಧ ಮಾದರಿಯವು. ವಿಕಾಸ ತೀರ ವಿರಳ ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.''[೨೯]

ಈ ಜನಪದ ರಾಮಾಯಣದಲ್ಲಿ ನಾಲ್ಕು ಭಾಗಗಳಿದ್ದು, ಮೊದಲನೆಯ ಭಾಗದಲ್ಲಿ ಸೀತೆಯ ಜನನ ಮದುವೆ ಮತ್ತು ಅಗ್ನಿಪರೀಕ್ಷೆಗೆ ಸಂಬಂಧಿಸಿದ ವಿವರಗಳಿವೆ. ಸೀತೆ ತನ್ನ ಪಾತಿವ್ರತ್ಯ ಪರೀಕ್ಷೆಗಾಗಿ ಮರಳಿನ ಹರವಿಯಲ್ಲಿ ನೀರನ್ನು ತುಂಬಿಕೊಂಡು, ಸರ್ಪನ ಸಿಂಬೆಯನ್ನು ತಲೆಯ ಮೇಲಿಟ್ಟುಕೊಂಡು, ಹೊತ್ತು ತರುವುದು, ಕೊಂಡ ಮೀಯುವ ಪ್ರಸಂಗ, ಜನಪದರ ಆಶಯಗಳು. ಎರಡನೆಯದರಲ್ಲಿ ಸುಣ್ಣುಮಾರನ ಕಥೆ, ಶೂರ್ಪನಖಿಯ ಮಗನಾದ ಈತ, ತಂದೆಯ ಕೊಂದ ರಾವಣನ ಮೇಲೆ ಸೇಡು ತೀರಿಸಿಕೊಳ್ಳಲು ತಪಸ್ಸು ಮಾಡಿ, ಚಂದ್ರಾಯುಧವನ್ನು ಪಡೆಯುವ ಪ್ರಸಂಗದಲ್ಲಿ ಚಂದ್ರಾಯುಧದಿಂದಲೇ ಸಾವನ್ನಪ್ಪುವ ವಿವರಗಳಿವೆ. ಮೂರನೆಯದರಲ್ಲಿ ಲವಕುಶರ ಕಾಳಗ, ನಾಲ್ಕನೆಯ ಹಂತದಲ್ಲಿ ತಂಬೂರಿ ಸಂಪ್ರದಾಯದ 'ಸಂಪೂರ್ಣ ಜನಪದ ರಾಮಾಯಣ'ವನ್ನೊಳಗೊಂಡಿದೆ. ಈ ಕತೆ ಶಿಷ್ಟ ರಾಮಾಯಣದ ಕತೆಗಿಂತ ಭಿನ್ನವಾಗಿದೆ. "ಕೆಲವು ಹೋಲಿಕೆಗಳು ಕಂಡರೂ ಅದು ವಾಲ್ಮೀಕಿಯ ಅನುಸರಣೆಯಿಂದಾದುದಲ್ಲದೆ, ಇವೆರಡಕ್ಕೂ ಮೂಲವಾಗಿರುವ ಮತ್ತು ಎಲ್ಲಕ್ಕೂ ಸಾಮಾನ್ಯವಾಗಿರುವ ಸಾರ್ವತ್ರಿಕ ಕಥಾ ಮಾದರಿಯೆಂಬುದನ್ನು ಮನಗಾಣಬೇಕೆನ್ನುತ್ತಾರೆ."[೩೦] ರಾಗೌರವರು "ಮಹಾಕಾವ್ಯವೊಂದು ಲಾವಣಿಗಳ ಚಕ್ರ ಅಥವಾ ಸರಣಿ."[೩೧] ಇಲ್ಲಿಯ ನಾಲ್ಕು ಭಾಗಗಳೂ ಪ್ರತ್ಯೇಕ ಘಟಕಗಳಿದ್ದಂತೆ ತೋರುವುದರಿಂದ ಇದನ್ನು ಮಹಾಕಾವ್ಯವೆಂದು ಕರೆಯುವುದು ಸರಿಯೇ ಎನಿಸುತ್ತದೆ. "ಜನಪದ ಕಾವ್ಯಕ್ಕೆ ಅದರದೇ ಆದ ಅಳತೆಯ ಮೌಲ್ಯಗಳಿದ್ದು, ತನ್ನದೇ ಪರಿಮಿತಿ ಹಾಗೂ ವೈಶಿಷ್ಟ್ಯವೂ ಇದೆ"[೩೨] ಎನ್ನುತ್ತಾರೆ ರಾಗೌ. ಜನಪದದ ಅರಿವಿನ ಮೌಲ್ಯಗಳ ದೃಷ್ಟಿಯಲ್ಲಿ 'ಜನಪದ ರಾಮಾಯಣ'ವನ್ನು ನೋಡಿದಾಗ ಈ ಕೃತಿ ಒಂದು ಉತ್ತಮ ಜನಪದ ಮಹಾಕಾವ್ಯವೆನ್ನಬಹುದು.

"ವಿಶ್ವದ ಎಲ್ಲ ಕಾವ್ಯಗಳಿಗೂ ಬುಡಕಟ್ಟು ವಸ್ತುವೇ ಮೂಲ. ಆ ವಸ್ತುವನ್ನೇ ಬುಡಕಟ್ಟಿನಿಂದ ದೂರಾದ ಜನಪದರು ಜನಪದ ಕಾವ್ಯಗಳೆಂದು ಮತ್ತು ಅಲ್ಲಿಂದಲೂ ದೂರಾದ ಶಿಷ್ಟರು ಶಿಷ್ಟ ಕಾವ್ಯಗಳೆಂದು ಕರೆದರು. ಭಾರತದ ಶಿಷ್ಟ ಕಾವ್ಯಗಳೆಂದರೆ ರಾಮಾಯಣ, ಮಹಾಭಾರತವೆಂದು ಎಲ್ಲರನ್ನೂ ಶಿಷ್ಟ ಕವಿಗಳು ನಂಬಿಸಿದ್ದರು. ರಾಮಾಯಣ ಮತ್ತು ಮಹಾಭಾರತದ ಕಥಾವಸ್ತು ಬುಡಕಟ್ಟಿನಿಂದ ಜನಪದರು ಹಾಗೂ ಜನಪದರಿಂದ ಶಿಷ್ಟರು ತಮಗೆ ಮತ್ತು ತಮ್ಮ ಪರಿಸರಕ್ಕೆ ಹಿತವೆನಿಸುವಂತೆ ರಚಿಸಿಕೊಂಡರು ಮತ್ತು ಕೊಳ್ಳುತ್ತಿದ್ದಾರೆ."[೩೩]

ಬುಡಕಟ್ಟು ಸಮುದಾಯಗಳಲ್ಲಿ ಪರಂಪರೆಯಿಂದ ಬೆಳೆದು ಬಂದ ಹತ್ತಾರು ಮೌಖಿಕ ಮಹಾಕಾವ್ಯಗಳಿದ್ದು ಅವು ಆದಿಮ ಸಂಸ್ಕೃತಿಯ ಹಲವು ಮಜಲುಗಳನ್ನು ತೆರೆದಿಡುತ್ತವೆ. "ರಾಮಾಯಣ ಮತ್ತು ಮಹಾಭಾರತ ಗಳೆರಡೂ ಕಾಡಿನ ಕಥೆಗಳು. ಆರಂಭವಾಗುವುದು ಅರಮನೆಯಲ್ಲಾದರೂ ಮುಂದುವರಿಯುವುದು ಅರಣ್ಯ ಗಳಲ್ಲಿ ಆದ್ದರಿಂದ ಈ ಎರಡೂ ಕಾವ್ಯಗಳ ಬಹುಭಾಗ ಕಾಡಿನ ಕಥೆಯಾಗಿಯೇ ನಮಗೆ ಕಾಣುತ್ತದೆ. ಬುಡಕಟ್ಟು ಗಳು ಕೂಡ ಕಾಡಿನ ಜನರೇ ಆದುದರಿಂದ ರಾಮಾಯಣ, ಮಹಾಭಾರತಗಳ ಬಗ್ಗೆ ಅವರದೇ ಆದ ಕಲ್ಪನೆಗಳಿವೆ."[೩೪]

ಸಹ್ಯಾದ್ರಿ ಶ್ರೇಣಿಯ ಪಶ್ಚಿಮದ ತಪ್ಪಲುಗಳಲ್ಲಿನ ನಿಬಿಡಾರಣ್ಯಗಳಲ್ಲಿ ವಾಸವಾಗಿರುವ ಗೊಂಡರು ತಮ್ಮ ವಿಶಿಷ್ಟ ಜೀವನಕ್ಕೆ ಹೆಸರಾದವರು. ಉತ್ತರ ಕನ್ನಡ ಜಿಲ್ಲೆಯ ಭಟ್ಕಳ ಮತ್ತು ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕುಗಳಲ್ಲಿ ಕಂಡು ಬರುವ ಇವರು ಮೂಲತಃ ಕುಮುರಿ ಬೇಸಾಯಗಾರರಾಗಿದ್ದು ಇಂದೂ ಕೂಡ ಕೃಷಿಕರೇ ಆಗಿದ್ದಾರೆ.

"ಜಟ್ಟಿಗ ಕೋಗ್ರಿ, ಹುಲಿಗಿರ್ತಿ, ಹಂದಿಗಿರ್ತಿ ಮುಂತಾಗಿ ಮೂಲದೈವಾರಾಧನೆಯ ಪಳಯುಳಿಕೆಗಳು ಇವರಲ್ಲಿ ಇನ್ನೂ ಇವೆ. ಈಗ ತಿರುಪತಿ ವೆಂಕಟರಮಣನ ಭಕ್ತರಾಗಿ ಮಾರ್ಪಾಟು ಹೊಂದಿದ್ದಾರೆ. ಅಚ್ಚ ಕನ್ನಡ ಭಾಷೆಯ ಗೊಂಡರು ಅನೇಕ ವಿಧವಾದ ಕಾವ್ಯಗಳನ್ನು ಕಟ್ಟಿ ಹಾಡುತ್ತಾರೆ. ಗೊಂಡರು ಹಾಡುವ ರಾಮಾಯಣದಲ್ಲಿ ಮೂಲ ರಾಮಾಯಣಕ್ಕಿಂತ ಭಿನ್ನವಾದ ಹಲವು ಘಟನೆಗಳು ಬರುತ್ತವೆ."[೩೫] ಇಲ್ಲಿನ ಸೀತೆ ಅತ್ಯಂತ ಸ್ವಾಭಿಮಾನಿ, ತನ್ನ ಆಸೆ ಅಭಿಲಾಷೆಗಳನ್ನು ಗಂಡನಾದವನು ತೀರಿಸದಿದ್ದರೆ, ಅವನು ನನ್ನ ಗಂಡನಲ್ಲ ಎಂದು ತೊರೆಯಲು ಸಿದ್ಧವಾಗುವ ಸ್ವಾಭಿಮಾನಿ. ಬುಡಕಟ್ಟು ಸಮಾಜವೊಂದರ ಹೆಣ್ಣು. ಆದರೆ ಮೂಲ ರಾಮಯಣದ ಸೀತೆ ಗಂಡನ ಮಾತನ್ನು ಮೀರದ ಸಾಧ್ವೀಮಣಿ. ಬುಡಕಟ್ಟು ಸಮುದಾಯಗಳಲ್ಲಿ ಒಂದಾದ ಗೊಂಡರಿಂದ ಚಿತ್ರಿತವಾಗಿರುವ ರಾಮಾಯಣ ಕಾವ್ಯವನ್ನು "ಗೊಂಡರ ರಾಮಾಯಣ"[೩೬]ವೆಂದು ಹೆಸರಿಸಿ ಪ್ರೊ.ಹಿ.ಚಿ.ಬೋರಲಿಂಗಯ್ಯನವರು ಸಂಪಾದಿಸಿದ್ದು, ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಿತವಾಗಿದೆ. ಈ ಗೊಂಡರ ರಾಮಾಯಣವನ್ನು ಉತ್ತರ ಕನ್ನಡ ಜಿಲ್ಲೆಯ ಭಟ್ಕಳ ತಾಲ್ಲೂಕಿನ ಹಲ್ಯಾಣಿಯ ಗೊಂಡ ಸಮುದಾಯದ ಮುಖಂಡ ಶ್ರೀ ತಿಮ್ಮಪ್ಪಗೊಂಡ ಹಾಡಿದ್ದಾರೆ.

ದಶರಥನ ಬೇಟೆಯಿಂದ ಆರಂಭವಾಗುವ ಈ ರಾಮಾಯಣ ಮೂಲ ರಾಮಾಯಣದಂತೆ ಆರು ಕಾಂಡ ಹಾಗೂ ನಂತರ ಉತ್ತರ ಕಾಂಡ ಎಂಬ ಯಾವ ವಿಂಗಡನೆಯೂ ಇಲ್ಲದೆ, ಎಲ್ಲಿಯೂ ನಿಲುಗಡೆಗೊಳ್ಳದೆ, ಕಡೆಗೆ ಸೀತೆ ಭೂಮಿಗೆ ಹೋಗುವವರೆಗೆ ಒಂದೇ ಸಮನೆ ನಿರರ್ಗಳವಾಗಿ ಹರಿದು ಅಲ್ಲಿ ಕೊನೆಗೊಳ್ಳುತ್ತದೆ. ಇಲ್ಲಿ ವಾಲ್ಮೀಕಿಯ ಸುಂದರ ವರ್ಣನೆಗಳಾಗಲಿ, ಯುದ್ಧ ವೈಭವೀಕರಣವಾಗಲಿ ಇಲ್ಲದೆ ಕಂಡದ್ದನ್ನು ಕಂಡ ಹಾಗೆ ಹೇಳುವ ಬುಡಕಟ್ಟು ಜನರ ವಾಸ್ತವಕ್ಕೆ ಹತ್ತಿರವಾಗಿದೆ.

ಕಥೆಯ ಅನುಕ್ರಮವನ್ನು ಹಿಡಿದು ಪ್ರಸ್ತುತ, ಗೊಂಡರ ರಾಮಾಯಣದ ಮುಖೇನ ಅವರ ಆಶಯಗಳನ್ನು ಅರ್ಥೈಸುತ್ತಾ ಜನಪದ ರಾಮಾಯಣಕ್ಕೆ ಹಾಗೂ ಮೂಲ ವಾಲ್ಮೀಕಿ ರಾಮಾಯಣಕ್ಕೆ ಇದನ್ನು ತುಲನೆ ಮಾಡುವ ಮೂಲಕ ಸೀತೆಯ ಪಾತ್ರವನ್ನು ಅರ್ಥೈಸುವುದು ನನ್ನ ಉದ್ದೇಶ.

ಗೊಂಡರ ದಶರಥ ಮಹಾರಾಜ, ಕೈಕೆ, ಕೌಸಲ್ಯೆ, ಕೌಮಿತ್ರಾ ಎಂಬ ಮೂವರು ಹೆಂಡತಿಯರೊಂದಿಗೆ, ಸುಖವಾಗಿ ಕಾಲ ಕಳೆಯುತ್ತಿದ್ದಾಗ, ಬ್ಯಾಟೆಗೆ ಹೋಗಿ, ಪ್ರಾಣಿಗಳನ್ನು ಕೊಂದು ಅವುಗಳ ಮಾಂಸದ 'ಬ್ಯಾಟೆ ಅಡುಗೆ' ಮಾಡಬೇಕೆಂಬ ಆಸೆಯಿಂದ ಬೇಟೆಗೆ ಹೊರಟ. ಬುಡಕಟ್ಟು ಜನರ ಬೇಟೆಗಾರರನೊಬ್ಬ ಬೇಟೆಗೆ ಸಹಜವಾಗಿ ಹೋಗುವಂತೆ, ಒಂದು ಕೋವಿ ಹಿಡಿದು, ನಾಯಿಯನ್ನು ಕರೆದುಕೊಂಡು ಹೋಗುವುದನ್ನು ಬುಡಕಟ್ಟು ರಾಮಾಯಣ ಜನಾಂಗದ ಲೋಕ ದೃಷ್ಟಿಯನ್ನು ಅನನ್ಯವಾಗಿ ಚಿತ್ರಿಸುತ್ತದೆ.

ಕೆರೆಯಲ್ಲಿ ನೀರು ಕುಡಿಯುತ್ತಿದ್ದ ಆನೆಯೊಂದಕ್ಕೆ ಗುಂಡು ಹಾರಿಸಿದಾಗ ಅದು ಪ್ರಾಣ ಬಿಡುತ್ತಾ, 'ನಿನ್ನ ಪುತ್ರನಿಂದಲೇ ನೀನು ಸಾಯುತ್ತೀಯ' ಎಂದು ಶಾಪ ಕೊಡುತ್ತದೆ. ಆದರೆ ದಶರಥ 'ನನಗೆ ಇನ್ನೂ ಪುತ್ರನೇ ಹುಟ್ಟಿಲ್ಲ ಸಾಯುವುದೆಲ್ಲಿ' ಎಂದು ಲಗುವಾಗಿ ತೆಗೆದುಕೊಳ್ಳುತ್ತಾನೆ.

ವಾಲ್ಮೀಕಿ ರಾಮಾಯಣದಲ್ಲಿ ಅಯೋಧ್ಯೆಯಲ್ಲಿ ದಶರಥನ ಕೌಟುಂಬಿಕ ಜೀವನವನ್ನು ವರ್ಣಿಸುವ ಚಿತ್ರಣ ಸಿಗುತ್ತದೆ. "ಪುರಾತನ ಕಾಲದಲ್ಲಿ ಒಂದು ರಾಜಧಾನಿಯನ್ನಾಗಿ ಅಯೋಧ್ಯೆಯನ್ನು ಮನು ಕಟ್ಟಿದನಂತೆ.

ಅವನ ತರುವಾಯ ಬಂದ ಆ ವಂಶದ ರಾಜರು ಅದನ್ನು ವಿಸ್ತರಿಸಿ ಇನ್ನಷ್ಟು ಚಂದಗೊಳಿಸಿದರು. ದಶರಥನದು ಒಳ್ಳೆಯ ಆಳ್ವಿಕೆ ಜನರಿಗೆ ಅವನಲ್ಲಿ ಪ್ರೀತಿ ಗೌರವ ಇದ್ದು, ಉತ್ತಮ ಮಂತ್ರಿಗಳು ಸುಮಂತ್ರನಂತಹ ಸಲಹೆಗಾರ ಸ್ನೇಹಿತರೂ ಇದ್ದರು."[೩೭] ದಶರಥನಿಗೆ ಮೂವರು ರಾಣಿಯರು, ಕೌಸಲ್ಯೆ, ಸುಮಿತ್ರೆ ಮತ್ತು ಕಿರಿಯ ರಾಣಿ ಕೈಕೆಯಿ, ವಾಲ್ಮೀಕಿಯ ದಶರಥ ಮೃಗ ಬೇಟೆಗೆ ಹೋಗಿದ್ದಾಗ ಮುನಿ ಕುಮಾರನೊಬ್ಬನನ್ನು ಶಬ್ಧವೇದಿ ಬಾಣ ಪ್ರಯೋಗದಿಂದ ಕೊಂದಿದ್ದ. ಆಗ ಪುತ್ರ ವಿಯೋಗದಿಂದ ಸಾವಾಗಲೆಂದು ಶಾಪ ಪಡೆದಿದ್ದ. ಬ್ರಾಹ್ಮಣ ಅಥವಾ ಕ್ಷತ್ರಿಯರಲ್ಲದವರು ಮುನಿ ಕುಮಾರರಾಗುವ ಅಥವಾ ತಪಸ್ಸು ಆಚರಿಸುವಂಥ ಕಾಯಕವನ್ನು ಆ ಕಾಲದಲ್ಲಿ ಕೈಗೊಳ್ಳಬಾರದಿತ್ತು. ಈ ಧೋರಣೆಯನ್ನೇ ಪ್ರತಿಪಾದಿಸುತ್ತಿದ್ದ ಆಗಿನ ರಾಜರು ತಪಸ್ವಿಗಳಾಗ ಬಯಸಿದ ಶೂದ್ರರನ್ನು ಯಾವುದೋ ರೂಪದಲ್ಲಿ ಕೊಲ್ಲುತ್ತಿದ್ದರು. ಅಂಥ ಎರಡು ಬರ್ಬರ ಉದಾಹರಣೆಗಳು ರಾಮಾಯಣದಲ್ಲಿವೆ. ಒಂದು ಶ್ರವಣಕುಮಾರನ ಹತ್ಯೆ, ಮತ್ತೊಂದು ಶಂಭೂಕನ ಹತ್ಯೆ, ಮೊದಲನೆಯದು ತಂದೆಯಾದ ದಶರಥನಿಂದ ಘಟಿಸಿದರೆ, ಎರಡನೆಯದು ಆತನ ಮಗನಾದ ರಾಮನಿಂದ ಘಟಿಸುತ್ತದೆ. ಆದರೆ ಈ ಘಟನೆಯ ತಂಟೆಗೆ ಹೋಗದ ಗೊಂಡರ ರಾಮಾಯಣ ಆನೆಯ ಕೊಲೆಯನ್ನು ಎತ್ತಿ ತೋರಿಸುತ್ತದೆ. "ಪ್ರಕೃತಿಯ ಬಹುಮುಖ್ಯ ಪ್ರಾಣಿಗಳಲ್ಲಿ ಒಂದಾದ ಆನೆಯನ್ನು ಕೊಲ್ಲುವ ಮೂಲಕ ನಿಸರ್ಗದ ಮೇಲೆ ಹಲ್ಲೆ ನಡೆಸುವ ಯಾವನೇ ಆದರೂ ಅವನಿಗೆ ಶ್ರೇಯಸ್ಸಿಲ್ಲ ಎಂಬ ದೇಸಿ ಧರ್ಮ ಸೂಕ್ಷ್ಮವೊಂದು ಇಲ್ಲಿ ಹೇಳಲಾಗುತ್ತಿದೆ."[೩೮]

ಇಂದುರು ಲೋಕ, ಚಂದುರು ಲೋಕ, ದೇವಲೋಕ, ದೇವೆಂದ್ರ ಲೋಕವನ್ನೊಮ್ಮೆ ನೋಡಿ ಬರಬೇಕೆಂದು, ದಶರಥ ಮಾಯದ ರಥವೊಂದರಲ್ಲಿ ಹೋಗುತ್ತಾನೆ. ವಿಹಾರವನ್ನು ಮುಗಿಸಿಕೊಂಡು ಹಿಂದಿರುಗುವಾಗ ಬಾಯಾರಿಕೆಯಾಗಿ ನದಿಯೊಂದನ್ನು ಕಂಡು ನೀರು ಕುಡಿಯಲು ಮಾಯದ ರಥವನ್ನು ಇಳಿಸಿದನು. ಹಿಂದಿರುಗಿ ನೋಡಿದರೆ ಕಿರಿಯ ಮಡದಿ ರಥದ ಕೀಲು ಹೋಗಿದ್ದು ತನ್ನ ಕೈಯನ್ನು 'ಕೀಲು' ಮಾಡಿಕೊಂಡಿದ್ದಳು. ಇಲ್ಲದಿದ್ದರೆ ಪ್ರಾಣ ಉಳಿಯುತ್ತಿರಲಿಲ್ಲ. ಪ್ರಾಣ ಉಳಿಸಿದ್ದಕ್ಕೆ 'ನೀ ಬೇಡಿ ದೊರವ' ಕೊಡುತ್ತೇನೆ ಎಂದು ಬಲಗೈ ಭಾಷೆ ಕೊಡುತ್ತಾನೆ. ಮೂಲ ರಾಮಾಯಣದಲ್ಲಿಯೂ "ಒಂದಾವರ್ತಿ ದಶರಥ ರಣರಂಗಕ್ಕೆ ಹೋಗಿದ್ದಾಗ ಕೈಕೇಯಿಯೂ ಸಂಗಡಹೋಗಿ, ಬಳಲಿದ್ದ ಪತಿಯ ಶುಶ್ರೂಷೆಮಾಡಿ ಎರಡು ವರಗಳನ್ನು ಪಡೆದಿದ್ದಳಂತೆ."[೩೯] ವರಗಳನ್ನು ಸ್ವಯಂ ಇಚ್ಛೆಯಿಂದ ದಶರಥ ಕರುಣಿಸಿದ್ದಾನೆ.

ಸುಖದಲ್ಲಿ ಕಾಲ ಕಳೆಯುತ್ತಿರುವಾಗ ಮೂರು ಜನ ಮಡದಿಯರು 'ಗರುಬಣೆ'ಯರಾದರು. ಒಟ್ಟು ನಾಲ್ಕು ಜನ ಮಕ್ಕಳಾಗುತ್ತಾರೆ. ಅವರನ್ನು

"ಹಸುನೀರು ಬಿಸಿಮಾಡು ಹುಯ್ದಿದುರು
ಎಣ್ಣೆಲು ಬೆಣ್ಣೆಲಿ ಉಜ್ಜರಾಲಾ
ಬುದ್ದು ಬಲುವಾಗು ಬಂದರಾಲಾ
ಇದ್ಧಿ ಬುದ್ದೀನೆ ಕಲುಸರ್ಯಾಲೋ
ಸಾಧುಕು ಸಂಪತ್ತೆ ಕಲುಸರ್ಯಾಲಾ
ಜಾದು ವಿದ್ದೀನೆ ಕಲಿಸಿದುರೋ" ||ತಂದಾನ||

(ಗೊಂಡರ ರಾಮಾಯಣ, ಪುಟ ೫೨)

"ಬುಡಕಟ್ಟು ಸಮಾಜ ಜ್ಞಾನ ಪರಂಪರೆಗನುಗುಣವಾಗಿ ಮಕ್ಕಳಿಗೆ 'ಇದ್ದಿ ಬುದ್ದಿ ಕಲಿಸಿ,' ಸುಸಂಸ್ಕೃತರನ್ನಾಗಿ ಮಾಡಿದ್ದಲ್ಲದೆ, ಅವರಿಗೆ ಸಾಧುಕ ವಿದ್ಯೆ(ಗರಡಿ ಸಾಧನೆ), ಬಿಲ್ಲು ವಿದ್ಯೆಗಳಲ್ಲದೆ, ಬುಡಕಟ್ಟು ಸಮಾಜದಲ್ಲಿ ಅತಿ ಮುಖ್ಯವಾಗಿ ಕಲಿಯುವ ಮಾಂತ್ರಿಕ ವಿದ್ಯೆಯನ್ನು ಕಲಿಸುತ್ತಾರೆ. ಇಲ್ಲಿ ಅತ್ಯಂತ ಮುಖ್ಯವಾಗಿ ಗಮನಿಸ ಬೇಕಾಗಿರುವುದು ಪ್ರಾಚೀನ ಸಮಾಜದ ಅವಿಭಾಜ್ಯ ಅಂಗವೆನಿಸಿದ್ದ ಬುಡಕಟ್ಟು ವಿದ್ಯೆ ಎನಿಸಿದ್ದ 'ಜಾಲುವಿದ್ಯೆ' ಯನ್ನು ದಶರಥನ ಮಕ್ಕಳು ಕಲಿತರೆಂಬುವಲ್ಲಿ ಒಂದು ಆದಿವಾಸಿ ಸಮಾಜದ ಜೀವನಾಕಾಂಕ್ಷೆಗಳೂ ಅಡಗಿವೆ."[೪೦]

ದಶರಥ ತನಗೆ ಮುಪ್ಪಿನ ಕಾಲ ಬಂದಿರುವುದಾಗಿ, ರಾಮನಿಗೆ ಪಟ್ಟ ಕಟ್ಟಬೇಕೆಂದು 'ಗ್ಯಾನ' ಮಾಡಿದ ಬರುವ ಸೋಮವಾರದ ದಿನ ರಾಮನ ಪಟ್ಟಾಭಿಷೇಕವೆಂದು ಊರಿಗೆಲ್ಲಾ 'ಡೋಳಿಗು ಡಂಗೂರ' ಸಾರಿಸಿದನು. ಎಲ್ಲಾ ಏರ್ಪಾಡುಗಳು ನಡೆಯುತ್ತಿದ್ದಾಗ, ಕಿರಿಯ ಮಡದಿ ದಶರಥನಿಗೆ, ತನಗೆ ಕೊಟ್ಟಿದ್ದ ವರವ ಕೇಳುತ್ತೇನೆ ಎನ್ನುತ್ತಾಳೆ.

"ರಾಮ ಲಚ್ಚುಮಣ್ಣರು
ಆರಣ್ಣೇಕೀಗೂ ಹೋಗಬೇಕು
ಆರೊರುಷ ಅರಣ್ಯಲೆ ಉಳಿಬೇಕು
ಆರೊರುಷ ಅಜ್ಞಾಸ ಕಳಿಬೇಕು"

(ಗೊಂಡರ ರಾಮಾಯಣ, ಪುಟ ೫೫)

ರಾಮ ಲಕ್ಷ್ಮಣರು ಆರು ವರ್ಷ ವನವಾಸ ಮತ್ತೆ ಆರು ವರ್ಷ ಅಜ್ಞಾತವಾಸ ಮಾಡಬೇಕೆನ್ನುತ್ತಾಳೆ ಕೈಕೆ. ಅವರು ವನವಾಸ ಕಳೆದು ಬರುವವರೆಗೆ ಭರತ, ಶತ್ರುಘ್ನರಿಬ್ಬರೂ ಆಳಬೇಕು ಎನ್ನುವ ಕೈಕಾದೇವಿಯ ಮಾತಿಗೆ ದಶರಥ ಕಣ್ಣಲ್ಲಿ 'ನೀರೇತೆಗಿತಾನೇ' ರಾಮಲಕ್ಷ್ಮಣರು ಕಾಡಿಗೆ ಹೊರಡುವರು. ಭರತ, ಶತ್ರುಘ್ನರು ರಾಮನಿಂದೆ ಹೊರಡುವರು. ರಾಮ ಅವರಿಗೆ ವಿವೇಕ ಹೇಳಿದರೂ ಅವರು ಒಪ್ಪದಿದ್ದಾಗ,

"ನನ್ನಾ ಕಾಡೋವಿ ಕಾಡುತೀದ್ದೆವೀಗಿನ್ನು
ಪಟ್ಟುದೂ ಮೇಲೊಂದೆ ಇಡುಬೇಕಾ
ಅದನೂ ಪೂಜೊಂದೆ ಮಾಡುಕೊಂಡು
ಅರುಮನೆಯಲು ನೀವೇ ಉಳಿಬೇಕಾ"

(ಗೊಂಡರ ರಾಮಾಯಣ, ಪುಟ ೫೯, ೬೦)

ಎನ್ನುತ್ತಾರೆ "ಆರಾರನ್ನೆರಡು ವರುಷ" ಕಳೆದ ಮೇಲೆ ನಾನೇ ಬರುತೀನಿ ಎನ್ನುತ್ತಾನೆ ರಾಮ. ಭರತ ಶತ್ರುಜ್ಞರು ಹನ್ನೆರಡು ವರ್ಷ ಕಳೆದ ಮ್ಯಾಲೆ ಒಂದು ದಿವಸವೂ ಬರುವುದಕ್ಕೆ ಹೆಚ್ಚಾಗಬಾರದು, ಇಲ್ಲವಾದಲ್ಲಿ "ಕೊಂಡ ದಲ್ಲಿ ನಾವೆ ಹಾರುತೀದೋ ತಾನ" ಎಂದು ಹೇಳಿ ರಾಮನ ಕೋವಿಯನ್ನು ಪಟ್ಟದ ಮೇಲೆ ಇಟ್ಟುಕೊಂಡು ಆಳುತ್ತಾರೆ. ರಾಮಲಚ್ಚಮಣರು ಕಾಡು ಸೇರಿದರು.

ಗೊಂಡರ ರಾಮಾಯಣದ ಆರಂಭದಲ್ಲಿಯೇ ಬರುವ ಮತ್ತೊಂದು ಭಿನ್ನ ಪಾಠವೆಂದರೆ ರಾಮಲಕ್ಷ್ಮಣರ ವನವಾಸದ ವಿಚಾರ. ಇಲ್ಲಿನ ವನವಾಸ ಮೂಲ ರಾಮಾಯಣದಂತೆ, ರಾಮನ ಮದುವೆಯ ನಂತರ ಆಗುವಂತಹದಲ್ಲ. ಮದುವೆಗೆ ಮೊದಲೇ ದಶರಥ, ರಾಮನಿಗೆ ಪಟ್ಟಕಟ್ಟುವ ಯೋಚನೆ ಮಾಡುತ್ತಾನೆ. ಮೂಲ ರಾಮಾಯಣದಲ್ಲಿ ಕೈಕೆ ಬೇಡುವ ವರಗಳೆಂದರೆ ೧. ಭರತನಿಗೆ ಪಟ್ಟಾಭಿಷೇಕವಾಗಬೇಕು. ೨. ರಾಮ ಹದಿನಾಲ್ಕು ವರ್ಷ ವನವಾಸಕ್ಕೆ ಹೋಗಬೇಕು ಎಂಬುದಾಗಿ. ಈ ವರಗಳನ್ನು ಕೇಳುವುದು ಮಂಥರೆಯಿಂದ ಪ್ರಚೋದಿತಳಾಗಿ ಆದರೆ ಪ್ರಸ್ತುತ ಕಾವ್ಯದಲ್ಲಾಗಲಿ ರಾಗೌರವರ ಜನಪದ ರಾಮಾಯಣದಲ್ಲಾಗಲಿ ಮಂಥರೆಯ ಪ್ರಸ್ತಾಪವೇ ಇಲ್ಲ. ವನವಾಸಕ್ಕೆ ಹೊರಡುವವರು ರಾಮ ಮತ್ತು ಲಕ್ಷ್ಮಣರು ಮಾತ್ರ. ಸೀತೆ ಇವೆರಡೂ ಕಾವ್ಯಗಳಲ್ಲಿ ಇವರ ವನವಾಸದ ಮಧ್ಯದಲ್ಲಿ ಸೇರಿಕೊಳ್ಳುತ್ತಾಳೆ. ಪ್ರಕೃತ ಕಾವ್ಯದಲ್ಲಿ ರಾಮ ಲಕ್ಷ್ಮಣ ಆರು ವರ್ಷ ವನವಾಸ ಕಳೆದ ಮೇಲೆ ಇನ್ನೂ ಆರು ವರ್ಷಗಳು ಅಜ್ಞಾತವಾಸ ಬಾಕಿ ಇರುವಾಗ ಸೀತೆಯ ಲಗ್ನದ ವಿಚಾರ ಬರುತ್ತದೆ. ಮೂಲ ರಾಮಾಯಣದಲ್ಲಿ ರಾಮನನ್ನು ಯುವರಾಜನನ್ನಾಗಿ ಮಾಡಲು ತಯಾರಿ ನಡೆಯುವ ಸಮಯದಲ್ಲಿ, ಭರತ ಮತ್ತು ಶತ್ರುಘ್ನರು ಅಯೋಧ್ಯೆಯಲ್ಲಿರುವುದಿಲ್ಲ. ಕೈಕೆ, ರಾಮ ಮಾತ್ರ ವನವಾಸಕ್ಕೆ ಹೋಗಲು ಹೇಳುತ್ತಾಳೆ. ಭರತ ಕಾಡಿನಲ್ಲಿದ್ದ ರಾಮನಿಂದ ಅವನ ಪಾದುಕೆಗಳನ್ನು ತರುತ್ತಾನೆ. ಹದಿನಾಲ್ಕನೆಯ ವರ್ಷವಾದ ಮೇಲೆ ರಾಮ ಬರುವುದು, ಒಂದು ದಿನ ತಡವಾದರೂ ತಾನು ಅಗ್ನಿಪ್ರವೇಶ ಮಾಡುವುದಾಗಿ ಭರತ ಹೇಳುತ್ತಾನೆ.

ಇವೆಲ್ಲವಕ್ಕಿಂತ, ವಿಭಿನ್ನವಾದ ಅಂಶವೊಂದು ರಾಗೌರವರ 'ಜನಪದ ರಾಮಾಯಣ'ದಲ್ಲಿ ರಾಮನ 'ವನವಾಸದ ಪ್ರಸಂಗ' ಚಿತ್ರಿತವಾಗಿದೆ. ಶ್ರೀರಾಮನ ಪಟ್ಟಾಭಿಷೇಕದ ಆಲೋಚನೆಗೆ ಕೈಕೆಯ ವಿರೋಧ, ಭರತನಿಗೆ ಪಟ್ಟಕಟ್ಟುವ ಸೂಚನೆಗಳು ಯಥಾವತ್ತಾಗಿ ಚಿತ್ರಿತವಾಗಿದ್ದರೂ, ಹೊಸ ಚಿಂತನೆಯೊಂದನ್ನು ಹುಟ್ಟು ಹಾಕಿದೆ. ದಶರಥ ಪಟ್ಟಾಭಿಷೇಕದ ತೀರ್ಮಾನವನ್ನು 'ದಂಡಿ'ಗೆ ಬಿಟ್ಟುಬಿಡುತ್ತಾನೆ. ಇದು "ಒಂದು ನೂತನಾಂಶ ವಾಗಿದ್ದು ಪ್ರಜಾಪ್ರಭುತ್ವ ವಿಚಾರವೊಂದನ್ನು ಪ್ರತಿಬಿಂಬಿಸುತ್ತದೆ."[೯೧] ದಂಡಿನ ತೀರ್ಮಾನ ಹಿರಿಯನಾದ ರಾಮನ ಕಡೆ ತಿರುಗಿದಾಗ, ಹನ್ನೆರಡು ವರ್ಷ ಕಾಡಿನಲ್ಲಿ ತಪಸ್ಸು ಮಾಡಿ ಬಂದರೆ, ರಾಮನಿಗೆ ಪಟ್ಟವೆನ್ನುತ್ತಾಳೆ ಕೈಕೆ. ಅರಣ್ಯಕ್ಕೆ ಹೋದವರು ವಾಪಸ್ಸಾಗಲಾರರೆಂಬ ತರ್ಕಬದ್ಧ ಪ್ರಬಲ ನಂಬಿಕೆ.

ವನವಾಸಕ್ಕೆ ಹೊರಟ ರಾಮಲಕ್ಷ್ಮಣರು ಘೋರ ಕಾಡಿನಲ್ಲಿ ಸೊಪ್ಪು ಕಡಿದು ಮನೆ ಮಾಡಿದರು. ಕಾಡಿನಲ್ಲಿ ನರ ಮನುಷ್ಯರ ಸುಳಿವಿಲ್ಲ, ಕತ್ತರಿಸಲು ಕತ್ತಿ ಇಲ್ಲ, ಚೂರಿ ಇಲ್ಲ.

> "ಉಣುತೇನೆಂದರೂ ಅನ್ನಿಲ್ಲಾ
> ತಿನುತೇನೆಂದಾರೂ ಹಣ್ಣಿಲ್ಲಾ
> ಕುಡಿತೇನೆಂದಾರು ಹಾಲಿಲ್ಲಾ
> ಹಾಲಿಲ್ಲಾ ಅಲ್ಲೂ ನೀರಿಲ್ಲಾ"
>
> (ಗೊಂಡರ ರಾಮಾಯಣ ಪುಟ ೬೩)

ದುಸ್ತರ ಜೀವನ.

ದಿನದಲ್ಲಿ ಸಿಗುವುದು ಎರಡು ಹಣ್ಣು ಮಾತ್ರ. ಆರು ವರ್ಷ ಕಳೆದರು. ಹಣ್ಣು ಅರಸುತ್ತಾ ಕಾಡಿನಲ್ಲಿ ಹೋಗುತ್ತಿದ್ದ ಲಕ್ಷ್ಮಣನಿಗೆ ಪಕ್ಕದ ಜನಕರಾಜನ ರಾಜ್ಯದಲ್ಲಿ ಬಿಲ್ಲಿನ ಹಬ್ಬದ ವಿಷಯ ಗೊತ್ತಾಗುತ್ತದೆ.

ಮೂಲ ರಾಮಾಯಣದಲ್ಲಿ ಯಜ್ಞ ಕಾರ್ಯಕ್ಕಾಗಿ ನೆಲವನ್ನು ಜನಕರಾಜನು ಊಳುತ್ತಿದ್ದಾಗ ಒಂದು ಹೆಣ್ಣು ಮಗುವನ್ನು ಕಂಡು ತನ್ನ ಮಗಳಂತೆ ಪ್ರೀತಿಯಿಂದ ಬೆಳೆಸಿದ್ದನು. ಅವಳೆ ಸೀತೆ. ಆದರೆ ಗೊಂಡರ ರಾಮಾಯಣದ ಜನಕ ರಾಜನಲ್ಲ, ಒಬ್ಬ ರೈತ. ಇವನು ಹೊಲ ಊಳುತ್ತಿರುವಾಗ ಅವನ ನೇಗಿಲಿಗೆ ಸೀತೆ ಸಿಕ್ಕುತ್ತಾಳೆ. ಭೂಮಿಯಲ್ಲಿ ಸಿಕ್ಕ ಭೂಮಿ ತಾಯಿಯ ಮಗಳಿಗೆ 'ಸೀತಿ' ಎಂದು ಹೆಸರಿಡುತ್ತಾನೆ.

ಜನಪದ ರಾಮಾಯಣಗಳಲ್ಲಿ ಸೀತೆಯ ಪ್ರಾಧಾನ್ಯತೆಯನ್ನು ಕುರಿತ ಕತೆಗಳು ಹಲವು. ಶಿಷ್ಟ ಕಾವ್ಯದಲ್ಲಿ ರಾಮನಿಗೆ ಕೊಟ್ಟ ಪ್ರಾಶಸ್ತ್ಯ ಸೀತೆಗೆ ಇಲ್ಲವೆನ್ನಬಹುದು. ಪ್ರಸ್ತುತ ಗೊಂಡರ ರಾಮಾಯಣ ಮತ್ತು ರಾಗೌರವರ ಜನಪದ ರಾಮಾಯಣದಲ್ಲಿ ಸೀತೆಯ ಪ್ರಾಮುಖ್ಯತೆಯನ್ನು ಎತ್ತಿ ತೋರಿಸುವಂತೆ ಆಕೆಯ ಜನನ ಮತ್ತು ಸ್ವಯಂವರಗಳು ಸಮರ್ಥಿಸುತ್ತವೆ.

ಸೀತೆ ರಾವಣನ ಮಗಳು. ಇದು ಜನಪದ ಪರಂಪರೆಯ ಬಹು ಪ್ರಸಿದ್ಧ ನಂಬಿಕೆ. ರಾಗೌರವರ ಜನಪದ ರಾಮಾಯಣದಲ್ಲಿ ಸೀತೆಯ ಜನನದ ಹಿನ್ನೆಲೆಯಲ್ಲಿ ಒಂದೇ ಆಶಯದ ಎರಡು ವಿಭಿನ್ನ ಪ್ರಸಂಗಗಳಿವೆ. ಹೊನ್ನಾಜಮ್ಮನವರು ಹಾಡಿರುವ ರಾಮಾಯಣದಲ್ಲಿ, ಸೀತೆಯೇ ಒಡಮೂಡಿದ್ದ ತಾವರೆಯ ಹೂವನ್ನು ಕಿತ್ತು ರಾವಣ ಮೂಸಿದ್ದರಿಂದ ಅವನ ಮೂಗಿಗೆ ಸೀತೆ ಹೋಗಿ ಸೇರಿ, ನಂತರ ರಾವಣ ಸೀನುವುದರ ಮೂಲಕ ಸೀತೆ ಹುಟ್ಟುವುದು ಒಂದು ಪ್ರಸಂಗವಾದರೆ, ಇನ್ನೊಂದು ತಂಬೂರಿ ಸಂಪ್ರದಾಯದ ಪ್ರಕಾರ ರಾವಣ ಶಿವನಿಂದ ವರವಾಗಿ ಮಾವಿನಹಣ್ಣೊಂದನ್ನು ಪಡೆದು ಹಣ್ಣಿನ ಭಾಗವನ್ನು ತಾನು ತಿಂದು ಮಂಡೋದರಿಗೆ ವಾಟೆ ಕೊಡುತ್ತಾನೆ. ಹಣ್ಣು ತಿಂದಿದ್ದರಿಂದ ರಾವಣ ಗರ್ಭಧರಿಸಿ, ಹೆಣ್ಣು ಮಗುವಿಗೆ ಜನ್ಮ ನೀಡುತ್ತಾನೆ. ಇದು ದಶರಥ ಪಾಯಸದ ಮೂಲಕ ತನ್ನ ಹೆಂಡತಿಯರಿಗೆ ಮಕ್ಕಳಾಗುವ ವರ ಪಡೆದ ಆಯದಂತೆ, ಇದೊಂದು ತೀರ ವಿರಳವಾದ ವಿಚಿತ್ರ ಸಂಗತಿ. ಸೀತೆಯ ಜನನ ಎರಡು ಪ್ರಸಂಗಗಳಲ್ಲೂ ಅಮಂಗಳ. ಲಂಕೆಗೆ ಅನಿಷ್ಟಕಾರಕ. ಸೀತೆಯ ಜನನ ವೃತ್ತಾಂತದಲ್ಲಿ ಗಮನಾರ್ಹವಾದುದೆಂದರೆ, ರಾವಣ, ಸೀತೆಗೆ ತಂದೆ ಮಗಳ ಸಂಬಂಧವೆನ್ನುವುದು. ಜ್ಯೋತಿಷ್ಯದ ಆಣತಿಯಂತೆ ಹೊನ್ನಾಜಮ್ಮನ ಸೀತೆಯನ್ನು ಬ್ರಾಹ್ಮಣರಿಗೆ ದಾನ ಕೊಡಲಾಗುತ್ತದೆ. ಜನಕರಾಜನಿಗೆ ತಲುಪಿದ ಬಗ್ಗೆ ವಿವರಗಳಿಲ್ಲ. ತಂಬೂರಿ ಸಂಪ್ರದಾಯದ ಸೀತೆಯನ್ನು ರಾವಣ, ಮಂಡೋದರಿಯರು ಪೆಟ್ಟಿಗೆಯಲ್ಲಿಟ್ಟು ನದಿಯಲ್ಲಿ ತೇಲಿ ಬಿಡುತ್ತಾರೆ. ಸ್ನಾನ ಮಾಡುತ್ತಿರುವಾಗ ಜನಕರಾಜನಿಗೆ ಸಿಗುವುದು. ಈ ವಿಷಯವನ್ನು ಮಹಾಭಾರತದ "ಕರ್ಣನ ಪ್ರಸಂಗದೊಡನೆ ಹೋಲಿಸಬಹುದೆನ್ನುತ್ತಾರೆ"[೪೨] ರಾಗೌರವರು.

ಪ್ರಸ್ತುತ ಕಾವ್ಯದಲ್ಲಿ ಜನಕ ಒಂದು ಕಲ್ಲಿನ ಮೇಲೆ ಕುಳಿತು ದಿನವೂ ಜಪ ಮಾಡುತ್ತಿರುತ್ತಾನೆ. ಆಕಾಶದಲ್ಲಿ ಹಾರುವ ಕಾಗೆಯೊಂದು ದಿನವೂ ಅಲ್ಲಿಗೆ ಬಂದು ಕಲ್ಲಿನ ಮೇಲೆ ಹೇತು, ಹೊಲಸು ಮಾಡಿ ಜಪವನ್ನು ಕೆಡಿಸುತ್ತದೆ. ಜಪವನ್ನು ಕೆಡಿಸುವ ಆಕಾಶಕಾಕಿಯನ್ನು ಕೊಲ್ಲಿಸಲು

"ಭೂಮು ತೂಕದ ಬಿಲು
ಆಕಾಸು ತೂಕದ ಬಾಣ
ಇಡೀ ಭೂಮಿನೇ ಎತ್ತು ಬೇಕು
ಇಡೀ ಆಕಾಸನೆ ನೆಗಿಬೇಕು
ಆಕಾಸ ಕಾಕಿನೆ ಕೊಲುಬೇಕು"

(ಗಿರಿಜನ ಸಂಸ್ಕೃತಿ, ಪುಟ ೧೫೮)

'ಆಕಾಸಕಾಕಿ'ಯನ್ನು ಕೊಲ್ಲಲು ಬಿಲ್ಲಿನ ಹಬ್ಬವನ್ನು ಏರ್ಪಡಿಸಲಾಗುತ್ತದೆ. " 'ಬಿಲ್ಲಿನ ಹಬ್ಬ' ಇಲ್ಲಿ ಒಂದು ವಿಶೇಷವಾದ ಅರ್ಥವನ್ನು ಕೊಡುವಂತಿದೆ. ಕೃಷಿ ಮತ್ತು ಬೇಟೆ ಎರಡನ್ನು ಉಳಿಸಿಕೊಂಡ ಬುಡಕಟ್ಟಿನವರು, ಅನೇಕ ರೀತಿಯ ಬಿಲ್ಲುಗಳನ್ನು ನವೀಕರಣಗೊಳ್ಳುತ್ತಿದ್ದ ಹಾಗೂ ಹೊಸ ಹೊಸ ರೀತಿಯ ಬಿಲ್ಲುಗಳ ಅನ್ವೇಷಣೆಯಾಗುತ್ತಿದ್ದ ಕಾಲಘಟ್ಟವೊಂದರಲ್ಲಿ ಹೊಸ ಉತ್ಪಾದನೆಗಳ ಚಮತ್ಕಾರ ಪ್ರದರ್ಶಿಸುವ ರೀತಿಯಲ್ಲಿ ಬಿಲ್ಲಿನ ಹಬ್ಬ"[೪೩] ನಡೆದಿರುವಂತಿದೆ ಎಂದು ಮಾತ್ರ ಸದ್ಯಕ್ಕೆ ಊಹಿಸಬಹುದೆನ್ನುತ್ತಾರೆ.

ರಾಗೌರವರ ಜನಪದ ರಾಮಾಯಣದ ತಂಬೂರಿ ಸಂಪ್ರದಾಯದ ಕಥೆಯಲ್ಲಿ, ಮಿಂದು ಬರುತ್ತಿದ್ದ ಜನಕರಾಜನ ಮುಂದೆ ಹೊಲಸು ಮಾಡಿ, ಮಡಿ ಕೆಡಿಸಿದ ಈ 'ಕಬ್ಬಿಣದ ಕಾಗೆ'ಯನ್ನು ಮೀನಿನ ಕಣ್ಣಿನಲ್ಲಿ ಧನಸ್ಸನ್ನು ಎತ್ತಿ ಕೊಲ್ಲುವವರಿಗೆ ಸೀತೆಯನ್ನು ವಿವಾಹ ಮಾಡಿಕೊಡುವುದಾಗಿ ಜನಕ ಪ್ರತಿಜ್ಞೆ ಮಾಡುತ್ತಾನೆ. ಈ ಕಬ್ಬಿಣದ ಕಾಗೆ, ದಶರಥನ ಪಟ್ಟಣದ ಅರಮನೆಯಿಂದ ಹಾರಿ ಬಂದುದ್ದೆಂಬ ಒಂದು ವಿಲಕ್ಷಣ ಕಲ್ಪನೆ ಇದೆ. ಮಹಾಭಾರತದ ದ್ರೌಪದಿ ಸ್ವಯಂವರವನ್ನು ನೆನಪಿಸುತ್ತದೆ. ಗೊಂಡರ ರಾಮಾಯಣದ ಲಕ್ಷ್ಮಣ, ಬಿಲ್ಲಿನ ಹಬ್ಬದ ವಿಚಾರವನ್ನು ರಾಮನಿಗೆ ಹೇಳುತ್ತಾನೆ. ರಾಮನಿಗೆ ಇದು ಮೊದಲೇ ತಿಳಿದಿರುತ್ತದೆ. ಆಕಾಶಕಾಕಿ ಯನ್ನು ಹೊಡೆಯಬೇಕಾದರೆ, ಹನ್ನೆರಡು ವರ್ಷ ಅನ್ನ ಆಹಾರ ತಿಂದಿರಬಾರದು, ಹಾಲು ಹಣ್ಣು ಮುಟ್ಟಿರ ಬಾರದು, ಅಷ್ಟಲ್ಲದೆ

"ಕಂಕೃಲೂ  ಕವುಡೇನೆ ಕಟ್ಟಬೇಕು
ಮೂಗುನಲು ನೆಲ ಮುಸರಿ ಕಟ್ಟಬೇಕು
ಬೆನ್ನೂ ಮ್ಯಾಲೊಂದೆ ನಾಗು ಬೆತ್ತಾನೇ ಬೆಳಿಬೇಕು
ಗಂಟ್ಲಲ್ಲಿ ಸಾವಿಗನ ಬಲೆಯೊಂದೆ ಕಟ್ಟಬೇಕು"

(ಗೊಂಡರ ರಾಮಾಯಣ, ಪುಟ ೬೯, ೭೦)

ಲಕ್ಷ್ಮಣ ಅಂಥ ನೇಮ ನಿಯಮದಿಂದಲೇ ಇರುತ್ತಾನೆ. ಕಾಡಿನಲ್ಲಿ ಅವನಿಗೆ ದಿನಕ್ಕೆ ಎರಡೇ ಹಣ್ಣು ಸಿಗುತ್ತಿದ್ದುದು. ಅದನ್ನು ಅಣ್ಣನಿಗೆ ಒಪ್ಪಿಸಿದರೆ, ಅಣ್ಣ ಒಂದನ್ನು ತಿಂದು ಇನ್ನೊಂದನ್ನು ತಮ್ಮನಿಗೆ ಕೊಟ್ಟರೂ ತಿನ್ನಲು ಹೇಳುತ್ತಿರಲಿಲ್ಲ, ಅಲ್ಲದೆ ದೇವರ ಅಭಿಷೇಕಕ್ಕೆ ಹಣ್ಣು ಉಳಿಯುತ್ತಿರಲಿಲ್ಲ. ಹೀಗಾಗಿ ಅವನ ಪಾಲಿನ ಹಣ್ಣನ್ನು ದೇವರಿಗೆ ಅರ್ಪಿಸಿ ಅವನು ಹಾಗೇ ಇದ್ದು ಬಿಡುತ್ತಿದ್ದ. ಅವನ ಕಂಕಳು, ಬೆನ್ನು, ಮೂಗು ಹಾಗೂ ಗಂಟಲನ್ನು ರಾಮನಿಗೆ ತೋರಿಸುತ್ತಾನೆ. ಲಕ್ಷ್ಮಣ ಅಂಥ ನೇಮದಿಂದಿರುವುದರಿಂದ ಭೂಮಿ ತೂಕದ ಬಿಲ್ಲನ್ನು

ಎತ್ತಿ ಆಕಾಸುಕಾಕಿಯನ್ನು ಕೊಲ್ಲಲು ಸಮರ್ಥನಾಗಿದ್ದಾನೆ. ರಾಮ ಲಕ್ಷ್ಮಣರಿಬ್ಬರೂ ಜನಕರಾಜನ ಬಿಲ್ಲಿನ ಹಬ್ಬಕ್ಕೆ ಹೋಗುತ್ತಾರೆ. ಸೀತೆ ಹೇಗಿರುವಳೆಂದು ನೋಡ ಬಯಸುತ್ತಾರೆ. ಇಲ್ಲಿ ಜನಪದರ ವ್ಯವಹಾರ ಜ್ಞಾನ ಕೆಲಸಕ್ಕೆ ಬರುತ್ತದೆ. ಅರಮನೆಗೆ ಹೋಗಿ ಹೆಣ್ಣು ಮಕ್ಕಳು ಹೆಚ್ಚಾಗಿರುವ ಕಡೆ ಬಾಯಾರಿಕೆ ನೀರು ಕೊಡಿ ಎನ್ನುತ್ತಾರೆ. ಹುಡುಗಿ ನೀರು ಕೊಡುತ್ತಾಳೆ. ಆದರೆ ಅವಳು ಸೀತೆಯಲ್ಲ, ಸೀತೆಯನ್ನು ಅಲ್ಲಿಗೆ ಬರುವಂತೆ ಮಾಡಲು, ಬಾಯಲ್ಲಿ ನೀರು ಕುಡಿದು ಮೂಗಿನಲ್ಲಿ ಬಿಡುವ ಚಮತ್ಕಾರ ಮಾಡುತ್ತಾನೆ. ಇದನ್ನು ನೋಡಲು ಸೀತೆ ಬರುತ್ತಾಳೆ. ಸೀತೆಯನ್ನು ಮೊದಲೇ ನೋಡಿ ನಂತರ ಬಿಲ್ಲಿನ ಸಾಹಸಕ್ಕೆ ಹೋಗುತ್ತಾರೆ. ಸೀತೆಯನ್ನು ನೋಡಲು ಅವಳ ಗುಣಗಳನ್ನು ಪರೀಕ್ಷಿಸಲು ಇಂತಹದೇ ಒಂದು ರೀತಿಯ ಉಪಾಯವನ್ನು ರಾಮಲಕ್ಷ್ಮಣರು ಮಾಡುವುದನ್ನು ಜನಪದ ರಾಮಾಯಣದಲ್ಲೂ ನೋಡಬಹುದಾಗಿದೆ. ಹೊನ್ನಾಜಮ್ಮರವರ ಪಾಠದಲ್ಲಿ ರಾವಣ, ಸೀತೆ, ತನ್ನ ಮಗಳೆಂದು ಗೊತ್ತಿದ್ದು ಸೀತೆಯನ್ನು ವಿವಾಹವಾಗುವ ಕೇಳಿಕೆ, ಧನಸ್ಸನ್ನು ಎತ್ತಿ ಗೆದ್ದು ಕೊಳ್ಳುವಂತೆ ಜನಕನ ಸವಾಲು, ತಂಬೂರಿ ಸಂಪ್ರದಾಯದ ಸಂಪೂರ್ಣ ರಾಮಾಯಣದಲ್ಲೂ, ರಾವಣ ಧನಸ್ಸನ್ನೆತ್ತಿ ಎದೆಯ ಮೇಲೆ ಹಾಕಿಕೊಳ್ಳುವ ಪ್ರಸಂಗ, ವಾಲ್ಮೀಕಿ ರಾಮಾಯಣದಂತೆಯೇ ಬರುತ್ತದೆ. ರಾಮನು ಬಿಲ್ಲು ಮುರಿದು ವಿವಾಹವಾಗುವ ಕಥೆಯಲ್ಲಿ ಯಾವ ವ್ಯತ್ಯಾಸವೂ ಇಲ್ಲ.

ಆದರೆ "ಗೊಂಡರ ರಾಮಾಯಣದ ಲಕ್ಷ್ಮಣ ನಿಯಮದಂತೆ ಆಕಾಶಕಾಕಿಯನ್ನು ಕೊಂದು ಸೀತೆಯನ್ನು ಗೆಲ್ಲುತ್ತಾನೆ. ಆದರೆ ತಾನು ಗೆದ್ದ ಸೀತೆಯನ್ನು ಅಣ್ಣ ರಾಮನಿಗೆ ಮದುವೆ ಮಾಡಿಸುತ್ತಾನೆ. ಬಹುಶಃ ಇದುವರೆಗೆ ಸಿಕ್ಕಿರುವ ಜನಪದ ರಾಮಾಯಣಗಳಲ್ಲೇ ಇದು ವಿಶಿಷ್ಟವಾದುದು. ಯಾಕೆಂದರೆ ಲಕ್ಷ್ಮಣ ಗೆದ್ದ ಸೀತೆಯನ್ನು ರಾಮನಿಗೆ ನೀಡುವ ವಿಶೇಷ ಪ್ರಸಂಗ ಇದು ರಾಮಲಕ್ಷ್ಮಣ ಮತ್ತು ಸೀತೆಯ ನಡುವಿನ ಸಂಬಂಧಗಳು ಬುಡಕಟ್ಟು ರಾಮಾಯಣಗಳಲ್ಲಿ ತುಂಬ ವರ್ಣಮಯ"[೪೪] ರಾಗೌರವರ ಜನಪದ ರಾಮಾಯಣದಲ್ಲೂ ರಾಮ ಲಕ್ಷ್ಮಣರಿಬ್ಬರೂ ಕಾಗೆಯ ರೆಕ್ಕೆ ಕಡಿಯುತ್ತಾರೆ. ಲಕ್ಷ್ಮಣ ರಾಮನೇ ಮದುವೆ ಆಗಲು ಹೇಳುತ್ತಾನೆ.

ಈಗಾಗಲೇ ಎಸ್.ವಿ.ಕೃಷ್ಣಯ್ಯನವರು ಸಂಗ್ರಹಿಸಿರುವ ಕಾಗೆ ಹೊಡೆದವರಿಗೆ ಮಗಳು ಎನ್ನುವ ಪೌರಾಣಿಕ ಗೀತೆಯಲ್ಲಿ ಇದೇ ತರದ ಆಶಯವನ್ನು ನೋಡಿದ್ದೇವೆ. ವಾಲ್ಮೀಕಿ ರಾಮಾಯಣದ ಲಕ್ಷ್ಮಣ ಸೀತೆಯ ಕಾಲುಗಳನ್ನು ಮಾತ್ರ ಕಂಡವನು. ಆದರೆ ಬುಡಕಟ್ಟು ಜೀವನದಲ್ಲಿ ವಾಸ್ತವತೆಗೆ ಹೆಚ್ಚು ಒತ್ತು. ಇಲ್ಲಿ ನೈಸರ್ಗಿಕ ಸಹಜತೆಗೆ ಮನ್ನಣೆಯೇ ಹೊರತು, ಸಂಪ್ರದಾಯದ ಸಂಕೋಲೆಯ ಅತಿ ಪಾತಿವ್ರತ್ಯಕ್ಕಲ್ಲ.

ನಮ್ಮ ಜನಪದರು ರಾಮಲಕ್ಷ್ಮಣ, ಸೀತೆಯರನ್ನು ಆದರ್ಶದ ಸುಳಿಗೆ ಸಿಕ್ಕಿಸದೆ, ರಾಗ ದ್ವೇಷಗಳ ಮನುಷ್ಯರನ್ನಾಗಿಯೇ ಅವರನ್ನು ನೋಡಬಯಸಿದ್ದಾರೆ. "ಮಧ್ಯ ಭಾರತದ ಆದಿವಾಸಿ ಗೊಂಡ ಜನಾಂಗದ ಗೊಂಡ ರಾಮಾಯಣದ ಪ್ರಕಾರ ಸೀತೆಯ ಮೇಲೆ ಒಂದು ಕಣ್ಣು ಹಾಕಿದ್ದ ಎಂಬ ಅನುಮಾನದಿಂದ ರಾಮನು ಲಕ್ಷ್ಮಣನನ್ನು ಹಿಂಸಿಸುವ ಕತೆಯಿದೆ."[೪೫] "ಮಧ್ಯಭಾರತ ಮತ್ತು ಈಶಾನ್ಯ ಭಾರತದ ಬಹುತೇಕ ಬುಡಕಟ್ಟುಗಳ ರಾಮಾಯಣಗಳಲ್ಲಿ ಲಕ್ಷ್ಮಣ ನಾಯಕ. ಇವರಂತೆಯೇ ಕರ್ನಾಟಕದ ಸಹ್ಯಾದ್ರಿಯ ಗೊಂಡರೂ ಕೂಡ ಸೀತೆ ಯನ್ನು ಲಕ್ಷ್ಮಣನಿಂದಲೇ ಗೆಲ್ಲಿಸುತ್ತಾ ಅವನನ್ನು ನಿಜವಾದ ನಾಯಕನನ್ನಾಗಿ ಮಾಡುತ್ತಾರೆ. ರಾಮನಿಗಿಂತ ಲಕ್ಷ್ಮಣ ನೇಮ, ನಿಯಮ ತಪಸ್ಸು ಮತ್ತು ಸಾತ್ವಿಕತೆ ಎಲ್ಲದರಲ್ಲಿಯೂ ಮುಂದು."[೪೬] ಲಕ್ಷ್ಮಣ ಸೀತೆಯನ್ನು

ಗೆದ್ದದ್ದಕ್ಕೆ ರಾವಣನಿಗೆ ಅಸಮಾಧಾನವಾಗಿ ಇಂದಲ್ಲ ನಾಳೆ ಮೂರು ದಿನವಾದರೂ ನಾನು ಸೀತೆಯನ್ನು ಆಳದಿದ್ದರೆ, ಲಂಕಾ ಪಟ್ನದ ರಾವಣನೇ ಅಲ್ಲ ಎಂದು ಪ್ರತಿಜ್ಞೆ ಮಾಡುತ್ತಾನೆ.

"ಸೀತೆಯನ್ನು ಶ್ರೀರಾಮ ಬಿಲ್ಲು ಬಾಣಗಳ ಜೊತೆಯಲ್ಲಿ ವಿವಾಹ ಮಾಡುವ ಸಂಗತಿಯೊಂದು ತಂಬೂರಿ ಸಂಪ್ರದಾಯದಲ್ಲಿ ನಿರೂಪಿತವಾಗಿದೆ... ಕಾಡಿನಲ್ಲಿ ಇವರು ಇನ್ನೂ ವನವಾಸ ಮಾಡಬೇಕಾಗಿರುವುದರಿಂದ ಸೀತೆಯನ್ನು ಕಾಡಿಗೆ ಕರೆದುಕೊಂಡು ಹೋಗಲು ಸಾಧ್ಯವಿಲ್ಲವೆಂದು ವನವಾಸ ಮುಗಿದ ಮೇಲೆ ಕರೆದುಕೊಂಡು ಹೋಗುವ ವಿಚಾರದಿಂದಾಗಿ, ರಾಮನ ಬಿಲ್ಲುಬಾಣಗಳ ಜೊತೆಯಲ್ಲಿ ವಿವಾಹ ಮಾಡುವ ಕಥೆ ಇದೆ. ವನವಾಸವೆಂದರೆ ಬ್ರಹ್ಮಚರ್ಯ ಕಡ್ಡಾಯ, ಇದು ಜನಪದ ಆಶಯವೊಂದಾಗಿದ್ದು, ಸಾಮಾಜಿಕ ಪ್ರಾಚೀನ ಪದ್ಧತಿಯೊಂದರ ಕಡೆಗೆ ಬೆರಳು ಚಾಚುತ್ತದೆ."[೪೭] ಎನ್ನುತ್ತಾರೆ ರಾಗೌರವರು, ಈ ರೀತಿಯ ಆಶಯವನ್ನು ಜುಂಜಪ್ಪ ಮಹಾಕಾವ್ಯದಲ್ಲಿ ದೇವರ ದಯಮಾರನ ಬಾಕುವಿಗೇ ಕಂಬಕ್ಕನನ್ನು ಧಾರೆ ಎರೆದು ಮದುವೆ ಮಾಡುವುದನ್ನು ಕಾಣಬಹುದು.

ರಾವಣನಿಗೆ ಸೀತೆ ಮದುವೆಯಾದ ಸುದ್ಧಿ ತಿಳಿದು, ಜಿಂಕೆಯ ಮರಿಯಾಗಿ ಅವತಾರ ತಾಳಿ ಸೀತೆಯನ್ನು ಹೊರದೆ ಬಿಡುವುದಿಲ್ಲವೆನ್ನುತ್ತಾನೆ.

ವಾಲ್ಮೀಕಿ ರಾಮಾಯಣದಲ್ಲಿ ಒಟ್ಟಿಗೆ ರಾಮ, ಲಕ್ಷ್ಮಣ, ಭರತ, ಶತ್ರುಘ್ನಗೆ ಹೆತ್ತವರ ಸಮ್ಮುಖದಲ್ಲಿ ಮದುವೆಯಾದರೆ, ಇಲ್ಲಿ ರಾಮ ಸೀತೆಯರ ಲಗ್ನ ಮಾತ್ರ, ಅವರ ಬಂಧು ಬಳಗದವರ ಅನುಪಸ್ಥಿತಿಯಲ್ಲಿ ಆಗುತ್ತದೆ.

ಮದುವೆಯ ಬಳಿಕ ಉಳಿದ ಅಜ್ಞಾತವಾಸದ ಅವಧಿಯನ್ನು ಪೂರೈಸಲು ರಾಮ ಲಕ್ಷ್ಮಣರು ಅರಣ್ಯಕ್ಕೆ ಹೊರಡುತ್ತಾರೆ. ಅಜ್ಞಾತವಾಸದ ನಂತರ ಸೀತೆಯನ್ನು ಕರೆದುಕೊಂಡು ಹೋಗುವುದಾಗಿ ಹೇಳಿದರೂ ಒಪ್ಪದೆ, ಅಲ್ಲಿ ತಿನ್ನಲು ಅನ್ನವಿಲ್ಲ. ಕುಡಿಯಲು ಹಾಲಿಲ್ಲ ಎಂದರೂ ಸಹ, ನಿಮಗೆ ಆಗುವುದು ನನಗೂ ಆಗಲಿ ಎಂದು ಸೀತೆಯೂ ಗೊಂಡಾರಣ್ಯಕ್ಕೆ ಅವರ ಜೊತೆ ಹೋಗುತ್ತಾಳೆ. ಅವರೆಲ್ಲ ಸುಖವಾಗೆ ಇದ್ದರು. ಮೂಲ ರಾಮಾಯಣದಲ್ಲೂ ಸೀತೆ, ರಾಮ ಲಕ್ಷ್ಮಣರೊಂದಿಗೆ ಕಾಡಿಗೆ ಹೋಗುವ ನಿಲುವನ್ನೇ ತೆಗೆದುಕೊಳ್ಳುತ್ತಾಳೆ. ಸೀತೆಯನ್ನು ವನವಾಸಕ್ಕೆ ಕರೆದುಕೊಂಡು ಹೋಗುವಲ್ಲಿ ವಾದಗಳನ್ನೆತ್ತಿದಾಗ, ಸೀತೆ ನಿರಾಸೆಯಿಂದ, ನಾನು ಚಿಕ್ಕ ವಯಸ್ಸಿನ ಹೆಂಡತಿ, ಸ್ವಲ್ಪಕಾಲ ನಿನ್ನೊಡನೆ ಬಾಳಿದ್ದೇನೆ. ಒಬ್ಬ ನರ್ತಕನಂತೆಯೊ, ನಟನಂತೆಯೋ ನನ್ನನ್ನು ಇನ್ನೊಬ್ಬನಿಗೆ ಕೊಟ್ಟು ಹೋಗುತ್ತೀಯಾ ಎಂದಳು. ಅಥವಾ ನನ್ನ ತಂದೆ "ಸ್ತ್ರೀಯಾಂ ಪುರುಷ ವಿಗ್ರಹಂ ಅಳಿಯನನ್ನು ತಂದನೆ? ಎಂದಳು."[೪೮]

ರಾವಣ ಸುಮ್ಮನಿರಲಿಲ್ಲ, ಮೂರು ದಿನವಾದರೂ ಸೀತೆಯನ್ನು ಆಳಬೇಕೆಂದೂ, ಉಪಾಯ ಹೂಡಿ, ಸೂರ್ಪನಖಿಯನ್ನು, ರಾಮನನ್ನು ಮಳ್ಳು ಮಾಡಲು ಕಳುಹಿಸಿದ. ಸೂರ್ಪನಖಿ 'ಸೂಳಿಸುಂಗಾರದ' ರೂಪವನ್ನು ತಾಳಿ ನನ್ನನ್ನು 'ಲಗ್ಗಿನ'ವಾಗಲು ರಾಮನನ್ನು ಕೋರುತ್ತಾಳೆ. ರಾಮ, ನನಗಾಗಲೇ ಮದುವೆ ಆಗಿ, ಹೆಂಡತಿ ಇರುವುದಾಗಿ ಹೇಳುತ್ತಾ, ತಮ್ಮ ಲಚ್ಚಮಣ, ಇನ್ನು ಬ್ರಹ್ಮಚಾರಿಯಾಗಿರುವನು. ನಿನ್ನ ನೋಡಿದರೆ ಲಗ್ನವಾಗುವನು ಎಂದು ಲಕ್ಷ್ಮಣನಲ್ಲಿಗೆ ಹೋಗಲು ಹೇಳಿ, ಅವಳ ಬೆನ್ನ ಮೇಲೆ ಹೀಗೆ ಬರೆಯುತ್ತಾನೆ.

"ಇವ್ನ ಲಗ್ಗಿನನೆ ಆಗುಬೇಡಾ ಈಗಿನ್ನು
ಮೂಗು ಮೊಲೆಯೊಂದೆ ಕೊಯ್ಯಬೇಕು
ಮಾನಭಂಗ ನೀ ಕಳಿಬೇಕು
ಕೋಪಾದಲ್ಲವಳಬಿಡಬೇಕು"

(ಗೊಂಡರ ರಾಮಾಯಣ, ಪುಟ ೪೯)

ವಾಲ್ಮೀಕಿ ರಾಮಾಯಣದಲ್ಲಿ, ಮೂಗು ಮತ್ತು ಕಿವಿಯನ್ನು ಕೊಯ್ಯುವ ಪ್ರಸಂಗವಿದ್ದರೆ, ಇಲ್ಲಿ ಹೆಂಗಸಿನ ಬಗ್ಗೆ ಹೇಯ ಕೃತ್ಯಕ್ಕೆ ಆದೇಶಿಸುತ್ತಾನೆ. ಅವಳ ಮೂಗು ಮತ್ತು ಮೊಲೆಗಳನ್ನು ಕೊಯ್ಯುವ ಮೂಲಕ ಅತ್ಯಂತ ತುಚ್ಛ ಕಾರ್ಯವನ್ನು ಲಕ್ಷ್ಮಣ ರಾಮನ ಆದೇಶದಂತೆ ಎಸಗಿದ್ದಾನೆ. ಮಾನಭಂಗ ಮಾಡಿದ ಬಗ್ಗೆ ಕಾವ್ಯದಲ್ಲಿ ಪ್ರಸ್ತಾಪವಿಲ್ಲವಾದರೂ ಅವಳನ್ನು ಕೋಪಾವಿಷ್ಟಳಾಗುವಂತೆ ಮಾಡಿ ಮುಂದಿನ ದ್ವೇಷಕ್ಕೆ ಇನ್ನಷ್ಟು ಪ್ರಚೋದನೆಯನ್ನು ಅವರಿಬ್ಬರು ಮಾಡುತ್ತಾರೆ. ಮುಂಬರುವ ಕಷ್ಟಗಳನ್ನು ತಾವೇ ಆಹ್ವಾನಿಸಿಕೊಳ್ಳುತ್ತಾರೆ. ಆರ್ಯ ಸಂಸ್ಕೃತಿಯ ಪ್ರತೀಕವೆಂಬಂತಿರುವ ರಾಮನ ಈ ಕಾರ್ಯ, ದ್ರಾವಿಡ ಮಹಿಳೆಯರ ಬಗ್ಗೆ ಎಸಗಿದ ಘೋರ ಅಪರಾಧ.

ಸ್ತ್ರೀ ಪುರುಷರು ಒಬ್ಬರನ್ನೊಬ್ಬರು ಬಯಸುವುದು ಪ್ರಕೃತಿ ಸಹಜವಾದುದು. ಶೂರ್ಪನಖಿ ರಾಮನನ್ನು ಬಯಸಿದ್ದು ತಪ್ಪೇ? ತಪ್ಪಾಗಿದ್ದರೆ ಮೃದುವಾಗಿ ನಿರಾಕರಿಸಬಹುದಾಗಿತ್ತು. ಲಕ್ಷ್ಮಣನ ಬಳಿಗೆ ಹೋಗೆಂದು ಆಕೆಯಲ್ಲಿ ಆಸೆ ಹುಟ್ಟಿಸಿ, ಆಕೆಯ ಮಾನಭಂಗ ಮಾಡುವಂತೆ ಬರೆದು ಕಳಿಸುವುದು, ಹೆಣ್ಣನ್ನು ದೇವರೆಂದು ಪೂಜಿಸುವ ಈ ನೆಲದಲ್ಲಿ, ಇದು ರಾಮನಿಂದ ನಡೆದ ರಾಕ್ಷಸೀ ಕೃತ್ಯ.

ರಾಗೌರವರ ಜನಪದ ರಾಮಾಯಣದಲ್ಲಿ ಶೂರ್ಪನಖಿಯ ಪ್ರಸ್ತಾಪ ಎರಡನೆ ಭಾಗದಲ್ಲಿನ 'ಸುಣ್ಕುಮಾರನ ಕಥೆ'ಯಿಂದ, ತಿಳಿಯುವ ಮುಖ್ಯ ಅಂಶಗಳೆಂದರೆ, ರಾವಣನ ತಂಗಿ ಶೂರ್ಪನಖಿಯ ಮಗ ಸುಣ್ಕುಮಾರ. ಇವನ ತಂದೆ ಪಾತಾಳ ಲೋಕದ ಬ್ಯಾತಾಳಪುರದ ಹಲ್ಲೂರ ಎಂಬ ಅರಸ. ರಾವಣನ ಕಾಲಿಗೆ ಬೀಳಲಿಲ್ಲವೆಂದು, ಹಲ್ಲೂರನನ್ನು ರಾವಣ, ತನ್ನ ತಂಗಿ ವಿಧವೆಯಾಗುವುದನ್ನು ಲೆಕ್ಕಿಸದೆ ಕೊಲ್ಲುತ್ತಾನೆ. ಸುಣ್ಕುಮಾರ, ರಾವಣನ ಮೇಲೆ ಸೇಡು ತೀರಿಸಿಕೊಳ್ಳುವ ಪ್ರಯತ್ನದಲ್ಲಿ, ಲಕ್ಷ್ಮಣನಿಂದ ಹತನಾಗುತ್ತಾನೆ. ಲಕ್ಷ್ಮಣನನ್ನು ಕೊಲ್ಲಲು ಶೂರ್ಪನಖಿ ಕಾಗೆಯನ್ನು ಕಳಿಸುತ್ತಾಳೆ. ಕಾಗೆ ತನ್ನ ಅಸಹಾಯಕತೆ ಹಾಗೂ ರಾಮನ ಶೌರ್ಯವನ್ನು ಹೇಳಿದಾಗ, ಶೂರ್ಪನಖಿಯೇ ಸೇಡು ತೀರಿಸಿಕೊಳ್ಳಲು ಮುಂದಾಗುತ್ತಾಳೆ. "ಇದೇ ಕ್ರಿಯೆಯನ್ನು ಗಮನಿಸಿದಾಗ, ಶೂರ್ಪನಖಿಯ ಸೇಡು ಮಧ್ಯದಲ್ಲಿ, ರಾಮಾದಿಗಳ ಕಡೆಗೆ ತಿರುಗಿದಂತೆ ಕಂಡರೂ, ಕಡೆಗೆ ರಾವಣನ ಮೇಲೆಯೇ ಕೇಂದ್ರೀಕೃತವಾಗುತ್ತದೆ. ಶೂರ್ಪನಖಿರಾಮಾದಿಗಳಿಂದ ಅವಮಾನಿತಳಾಗಿ ರಾವಣನಲ್ಲಿಗೆ ಬಂದು ಹೇಳುವ 'ನಿನ್ನ ಪುಣ್ಯ ಕೊಂದ್ಹೊಸ ಸುದ್ದಿ' ಎಂಬ ಮಾತು ಅಪೂರ್ವ ರೀತಿಯಲ್ಲಿ ಧ್ವನಿಸುತ್ತದೆ. 'ಹೆಣ್ಣಿಗಾಸೆಯ ಪಟ್ಟ ರಾವುಳನಾಗ್ಲೆ ಕೆಟ್ಟ' ಎಂಬ ಇನ್ನೊಂದು ಮಾತು ಇದರ ಆಶಯವನ್ನು ವಿವರಿಸಿ ಬಿಡುತ್ತದೆ. ಮುಂದಿನ ಭಾಗ ಮೂಲ ರಾಮಾಯಣ ಮತ್ತು ಜನಪದ ರಾಮಾಯಣಗಳ ನಡುವೆ ಯಾವ ವ್ಯತ್ಯಾಸವೂ ಇಲ್ಲ."[೪೯]

ಗೊಂಡರ ಶೂರ್ಪನಖಿ ಅಣ್ಣನ ಬಳಿ ರಾಮ ನನ್ನ ಮೂಗು ಮೊಲೆಯನ್ನು ಕುಯ್ದವನೆ. ಸೀತೆಯನ್ನು ಬಿಡಬೇಡ ಅನ್ನುತ್ತಾಳೆ. ರಾವಣ ಮಾರೀಚನನ್ನು ಕರೆದು 'ಮಾಯದ ಮುರುಗ'ನಾಗಿ 'ನವುಲಕುಣತ' ಕುಣಿದು

ಸೀತೆಯ ಮರುಳು ಮಾಡಬೇಕೆಂದು ಬಲವಂತವಾಗಿ ಒಪ್ಪಿಸುತ್ತಾನೆ. ಮಾರೀಚ ಚಂದಾದ ಮುರುಗನಾಗಿ ಸೀತೆಯ ಮುಂದೆ ಸುಳಿದಾಡಿ, ಅವಳ ಮನಸ್ಸನ್ನು ಸೆಳೆಯುತ್ತಾನೆ. ಮೂಲ ರಾಮಾಯಣದಲ್ಲಿ ಸುಂದರ ಮೃಗನನ್ನು ನೋಡಿದ ಸೀತೆಯ ಮನಸ್ಸು ಮಾರು ಹೋಗುತ್ತದೆ. ರಾಮನಿಗೆ ಮೃಗವನ್ನು ಹಿಡಿದು ತರಲು ಹೇಳುತ್ತಾಳೆ. ನಮಗೆ ಆಟಕ್ಕೆ ಇರುತ್ತದೆ. ಅದರ ರೂಪ, ಕಾಂತಿ, ಇಂಪು ಧ್ವನಿ ಮನಸ್ಸನ್ನು ಸೂರೆಗೊಳ್ಳುತ್ತದೆ. ಅದ್ಭುತ ಮೃಗ, ಜೀವಂತವಾಗಿ ಹಿಡಿಯಲು ಆಗದೆ ಹೋದರೆ, ಕೊಂದಾದರೂ ತಂದರೆ, ಅದರ ಸ್ವರ್ಣ ವರ್ಣದ ಚರ್ಮದಲ್ಲಿ ಎಳೆಯ ಹುಲ್ಲನ್ನು ತುಂಬಿ ದಿಂಬು ಮಾಡಿ ಒರಗಿ ಕುಳಿತುಕೊಳ್ಳುವ ಆಸೆ ಎನ್ನುತ್ತಾಳೆ. ಇಲ್ಲಿ ಗೊಂಡರ ಸೀತೆ ಜಿಂಕೆಯನ್ನು ಬಯಸುವುದು, ಅದರ ಸುಂದರ ಚರ್ಮದಿಂದ ತನ್ನ ದೇಹಕ್ಕೊಪ್ಪುವ ಸುಂದರ ಕುಬುಸ ಹೊಲೆದು ಹಾಕಿಕೊಳ್ಳುವ ಸಹಜ ಆಸೆಗಾಗಿ ಈ ವಿಚಾರದಲ್ಲಿ ಸೀತೆ ರಾಮನಿಗೆ ಸಿಟ್ಟು ಬರಿಸಿದಳು. ರಾಮನ ಬುದ್ಧಿವಾದಕ್ಕೆ ಕಿವಿ ಕೊಡುವುದಿಲ್ಲ.

"ಅದುರ ಚಮ್ಮಾನೇ ತೆಗೆದಿದುರಾ
ನನಗೊಂದು ಕುಬುಸ ಮಾಡದಿದುರಾ
ರಾಮಸ್ವಾಮಿಯೇ ಪತಿಯಲ್ಲಾ
ನನ್ನ ಪತಿಯೊಂದೆ ನೀವಲ್ಲಾ
ನಿಮ್ಮ ಮಾತೊಂದೆ ಕೇಳುವುದಿಲ್ಲಾ"

(ಗೊಂಡರ ರಾಮಾಯಣ, ಪುಟ ೯೬)

ತನ್ನ ಆಸೆಯನ್ನು ಪೂರ್ಣಗೊಳಿಸದ ಪತಿ, ಪತಿಯಲ್ಲ ಎನ್ನುತ್ತಾಳೆ. "ನೀನು ರಾಮನೂ ಅಲ್ಲ, ನನ್ನ ಗಂಡನೂ ಅಲ್ಲ, ಇನ್ನು ಮೇಲೆ ನನಗೂ ನಿನಗೂ ಸಂಬಂಧವಿಲ್ಲ ಎನ್ನುತ್ತಾಳೆ. ಈ ಸಹಜವಾದ ಕೋಪ-ಮುನಿಸುಗೊಂಡರು ಸೃಷ್ಟಿಸಿದ ಸೀತೆಯಲ್ಲಿ ಮಾತ್ರ ಕಾಣಲು ಸಾಧ್ಯ ಇದೇ ಗೊಂಡರ ಅನನ್ಯತೆ." ಶಿಷ್ಟ ರಾಮಾಯಣದ ಮಹಾ ಪಾತಿವ್ರತ್ಯ ಸ್ತ್ರೀಯಾದ, ಗಂಡನ ಯಾವ ಮಾತನ್ನು ಮೀರದ ಸಾಧ್ವೀಮಣಿಯಾದ ಆ ಸೀತೆ ಎಲ್ಲಿ, ಗೊಂಡರ ಈ ಸೀತೆ ಎಲ್ಲಿ? "ಈ ಸೀತೆ ಕೂಡ ಸಂಕಮ್ಮನ ತರಹದ ಸ್ವಾಭಿಮಾನಿ ವ್ಯಕ್ತಿತ್ವವನ್ನು ತೋರುತ್ತಾಳೆ. ಬುಡಕಟ್ಟು ಸಮಾಜವೊಂದರ ಸ್ವಾಭಿಮಾನಿ ಹೆಣ್ಣಾಗಿ ಸೀತೆಯನ್ನು ಇಲ್ಲಿ ಚಿತ್ರಿಸುವ ಮೂಲಕ ಮಾತೃಪ್ರಧಾನ ತಮ್ಮ ಲೋಕ ದೃಷ್ಟಿಯನ್ನು ಗೊಂಡರು ತೋರ್ಪಡಿಸಿದ್ದಾರೆ."[೫೦] ಮಾತೃಪ್ರಧಾನ ಕುಟುಂಬದ ದಕ್ಷ ಹೆಣ್ಣು ಮಗಳ, ಸ್ವಚ್ಛಂದವಾಗಿ ಬದುಕುವ ಬುಡಕಟ್ಟು ಸಮಾಜದ ನಿರ್ಭೀತ ಹೆಣ್ಣು ಮಗಳೊಬ್ಬಳ ನಿರಾತಂಕ ವರ್ತನೆಯನ್ನು ತೋರುತ್ತಾಳೆಂದೂ, ಸೀತೆಯ ಈ ಆಸೆ ಮತ್ತು ಕುಬುಸದ ಬಗೆಗಿನ ತೀವ್ರಾಸಕ್ತಿಯ ಈ ಭಾಗ ಆದಿಮ ಸಮಾಜಗಳ ವಸ್ತ್ರ ವಿನ್ಯಾಸದ ಬಗ್ಗೆಯೂ ಬೆಳಕು ಚೆಲ್ಲುತ್ತದೆಂದು ಡಾ.ಹಿ.ಚಿ.ಬೋರಲಿಂಗಯ್ಯನವರು ಅಭಿಪ್ರಾಯಪಡುತ್ತಾರೆ.

ರಾಮ, ಲಕ್ಷ್ಮಣನನ್ನು ಸೀತೆಯ ಬುಡುದಾಗೆ ಇರಬೇಕೆಂದು ಹೇಳಿ ಮುರಗುನ ಹಿಡಿಯಲು ಹೋಗುತ್ತಾನೆ. ಬಹಳ ದೂರ ಮಾಯಾಮೃಗ ಹೋಯಿತು. ರಾಮ ಬಾಣ ಬಿಟ್ಟ, ಭೂಮಿ ಮ್ಯಾಲ ಬಿದ್ದು ಪ್ರಾಣ ಬಿಡುವಾಗ

ಲಚ್ಚಮಣ ಎಂದು ಮೂರು ಸಾರಿ ಮಾರೀಚ ಕೂಗಿ ಹೇಳಿದ. ಬಾಗಿಲಾಲೆ ನಿತ್ತುಕೊಂಡು ಭಿಕ್ಷೆ ನೀಡಬ್ಯಾಡ, ಗೆರೆದಾಟಿ ಬರಬೇಡ ಎಂದು ಸೀತೆಗೆ ಹೇಳಿ ರಾಮನ ಬಳಿಗೆ ಹೋಗುತ್ತಾನೆ ಲಕ್ಷ್ಮಣ. ಹತ್ತು ತಲೆಯ ಇಪ್ಪತ್ತು ತೋಳಿನ, ರಾವಣ ಸನ್ಯಾಸಿಯ ರೂಪದಲ್ಲಿ ಸೀತೆಯ ಬಳಿ ಬರುತ್ತಾನೆ. ಮೂರು ದಿನದಿಂದಲೂ ಊಟವಿಲ್ಲೆಂದು ಭಿಕ್ಷೆ ಕೇಳುತ್ತಾನೆ. ಭಿಕ್ಷೆ ನೀಡಲು ಬಂದ ಸೀತೆ ಗೆರೆ ದಾಟಿದಳು. ರಾವಣ ಸೀತೆಯನ್ನು ಹೊತ್ತೊಯ್ಯುತ್ತಾನೆ. ದಾರಿಯಲ್ಲಿ ಜಟಾಯುವಿನೊಡನೆ ಘರ್ಷಣೆ. ಏಳು ಸಮುದ್ರದಾಟಿ ಲಂಕೆ ಸೇರಿ, ಮಾವಿನ ತೋಪಿನಲ್ಲಿ ಕ್ಷೇತ್ರವೊಂದನ್ನು ಕಟ್ಟಿಸಿ ಸೀತೆಯನ್ನು ಅಲ್ಲಿರಿಸುತ್ತಾನೆ. ಮೂಲ ರಾಮಾಯಣದಲ್ಲಿನ ಅಶೋಕವನದ ಬದಲು ಇಲ್ಲಿ ಮಾವಿನ ತೋಪಿನ ಕಲ್ಪನೆ, ಸೀತೆಯ ಬಿಟ್ಟು ಬಂದ ಲಕ್ಷ್ಮಣನ ಮೇಲೆ ರಾಮ ಸಿಟ್ಟು ಮಾಡಿದಾಗ, ಸೀತೆ ಹೇಗೆ ನನ್ನ ಜರಿದಳು ಎಂಬುದನ್ನು ರಾಮನಿಗೆ ಹೇಳುತ್ತಾನೆ.

'ರಾಮಾ ಸತ್ತರು ಸಾಯಲಿ
ನನ್ನಾ ನೀನೇನು ಆಳುಬೇಕಾ
ಆಳುವ ಮನಸು ನಿನುಗೇನಾ
ಅಂದಳು ನನಗೀಗ ಜರಿದಿದುಳು
ಇನಸಟ್ಟು ನನಗೆ ಮಾಡಿದಳು'

(ಗೊಂಡರ ರಾಮಾಯಣ, ಪುಟ ೧೦೫)

ಮೂಲ ರಾಮಾಯಣದಲ್ಲೂ ಇದೇ ರೀತಿಯಾದ ಭಾವವನ್ನು ಸೀತೆ ವ್ಯಕ್ತಪಡಿಸುತ್ತಾಳೆ. ಸೀತಾಪಹರಣ ರಾಮಾಯಣದ ಗತಿಯನ್ನು ಬದಲಿಸುವ ಪ್ರಸಂಗ.

ತಂಬೂರಿ ಸಂಪ್ರದಾಯದ ಸಂಪೂರ್ಣ ರಾಮಾಯಣದಲ್ಲಿ ಜಿಂಕೆಯಾಗಿ ಬರುವುದು ರಾವಣ. ರಾಮನಂತೆ ನಟಿಸಿ ಸೀತೆಯನ್ನು ಅಪಹರಿಸುವುದು ರಾವಣ. ಇಲ್ಲಿ ಮಾರೀಚನ ಮತ್ತು ಜಟಾಯುವಿನ ಪ್ರಸಂಗಗಳು ಬರುವುದಿಲ್ಲ. ಲಕ್ಷ್ಮಣನನ್ನು ಸೀತೆಯ ಬಳಿ ಬಿಟ್ಟು ರಾಮ ಬೇಟೆಗೆ ಹೋದಾಗ ರಾವುಳನು ಮಾಯದ ಜಿಂಕೆಯಾಗಿ ಎದುರಿಗೆ ಬರುತ್ತಾನೆ. ಆಟವಾಡಿಸುತ್ತದೆ ಜಿಂಕೆ. ಕೊನೆಗೆ ರಾಮ ಬಾಣದಿಂದ ಹೊಡೆಯುತ್ತಾನೆ. ಕಾಣುವುದಿಲ್ಲ. ಜಿಂಕೆ ಹುಡುಕುತ್ತಾ ತಡವಾಗುತ್ತದೆ. ಸೀತೆ 'ಬಾಳ ತಡವಾಯ್ತು' ಎಂದು ಲಕ್ಷ್ಮಣನನ್ನು ರಾಮನ ಹತ್ತಿರ ಕಳಿಸುತ್ತಾಳೆ. ಇತ್ತ ಮಾಯದ ಜಿಂಕೆಯಾಗಿದ್ದ ರಾವುಳ, 'ರಾಮರ ಯಾಸವ ತಾಳಿ' 'ಮಿರ್ಗ ತಂದಿದೀನಿ, 'ಬಾಗು ತಗಿ ಬಾರೆ ಸೀತೆ' ಎನ್ನುತ್ತಾನೆ. ಪಟ್ಟಣಕ್ಕೆ ಹೋಗೋಣವೆಂದು ಪರಿಪರಿಯಾಗಿ ಹೇಳುತ್ತಾನೆ. ಸೀತೆ, ನಿಮ್ಮ ತಮ್ಮ ಲಕ್ಷ್ಮಣ ಬರಲಿ ಎನ್ನುತ್ತಾಳೆ. ಮಿರ್ಗವನ್ನು ನೋಡಲು ಆಲದ ಮರದ ಬುಡಕ್ಕೆ ಹೋಗುವಾಗ, ರಾವಣ ಅವಳನ್ನು ಸೊಂಟಕ್ಕೆ ಕೈ ಹಾಕಿ ಸಿರಿ ಮುಡಿಯ ಹಿಡಕಂಡು ಲಂಕೆಗೆ ತಂದು "ಅರಗೀನ ಅರಮನೆಯಲ್ಲಿಟ್ಟು, ಮರುಗೀನ ಭೀಗ" ಹಾಕುತ್ತಾನೆ. ರಾವಣ ಹಿಂದೆ ಹೇಳಿದ್ದ ಮಾತು ನಿಜವಾಯಿತೆಂದೂ, ಇದು ರಾವಣನ ಕೃತ್ಯವೆಂದು ರಾಮನಿಗೆ ಮನವರಿಕೆಯಾಗಿ ರಾವಣನ ಪಟ್ಟಣಕ್ಕೆ ಹೋಗುತ್ತಾರೆ.

ತಿಮ್ಮಪ್ಪಗೊಂಡರ ರಾಮಾಯಣದ ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತಿದ್ದಾಗ, ಸಾಯುವ ಸ್ಥಿತಿಯಲ್ಲಿದ್ದ ಜಟಾಯುವಿನಿಂದ 'ಸೀತೆಯ ಉಂಗುಟ' ನೀಡಿಕೆ ಮುಂದೆ-ಮುಂದೆ ಹೋಗುತ್ತಾ ಹನುಮಂತನ

ಭೇಟಿಯಾಗುತ್ತದೆ. ಅಂದರೆ ವಾನರಲೋಕಕ್ಕೆ ಪ್ರವೇಶ. ‘‘ವಾನರರಂತೆ ಚಿತ್ರಿತವಾಗಿರುವ ವಾಲಿ, ಸುಗ್ರೀವರು ಆಲೋಕ ದವರು. ಮನುಷ್ಯರೇ ಹೊರತು ಕಪಿಗಳಲ್ಲ-ಕಪಿಧ್ವಜರು. ಇವರ ಜೀವನ ಕ್ರಮಗಳು ಆರ್ಯರಿಗಿಂತ ಸಂಪೂರ್ಣ ವಾಗಿ ಭಿನ್ನವಾಗಿವೆ. ವಾಲಿಗೂ, ರಾವಣನಿಗೂ ಹಳೆಯ ದ್ವೇಷವಿತ್ತು ಎನ್ನುವುದನ್ನು ರಾಮ ವಾಲಿಯನ್ನು ಬಾಣ ಬಿಟ್ಟು ಕೊಲ್ಲುವ ಸಂದರ್ಭದಲ್ಲಿ ಈ ವಿಚಾರ ಹೇಳುತ್ತಾನೆ. ಈ ಹಿನ್ನೆಲೆಯಲ್ಲಿ ‘ವಾನರ’ ಜೊತೆ ರಾಮ ಸಖ್ಯ ಬೆಳೆಸಿಕೊಂಡ.’’[೫೧] ವಾಲಿ ತಮ್ಮ ಸುಗ್ರೀವನನ್ನು ರಾಜ್ಯ ಭ್ರಷ್ಟನನ್ನಾಗಿಸಿ, ಅವನ ಹೆಂಡತಿ ಯನ್ನು ತನ್ನ ಜೊತೆಗೆ ಇಟ್ಟುಕೊಂಡಿದ್ದ. ಬಿಲ್ಲು ಬಾಣಗಳ ಉಪಯೋಗವನ್ನೇ ಅರಿಯದ ವಾನರ ಕುಲದವರಿಗೆ ಧನುರ್ಧಾರಿಗಳಾದ ರಾಮ ಲಕ್ಷ್ಮಣರಿಂದ ವಾಲಿಯನ್ನು ಕೊಂದು ಪುನಃ ರಾಜನಾಗಬೇಕೆಂದು ಸುಗ್ರೀವನ ಆಸೆ. ಹನುಮಂತನೂ ಸುಗ್ರೀವನ ಜೊತೆಗಿದ್ದಾನೆ. ಇಂಥ ಸಂದರ್ಭವನ್ನು ರಾಮಲಕ್ಷ್ಮಣರು ಸದುಪಯೋಗ ಪಡಿಸಿಕೊಳ್ಳುತ್ತಾರೆ. ಸುಗ್ರೀವ ರಾಮನಿಗೆ,

“ನನ್ನ ಹೆಣ್ತಿನನಗೆ ಕೊಡಿಸಿದುರೆ
ನನ್ನ ಸೈನ್ಯನೇ ಕೊಡುತೀದಾ
ನಿನ್ನ ಸೀತೀನ ತರುವದಕೂ
ನಾವು ಸಾಯಾನೆ ಮಾಡುತೀದಾ”

(ಗೊಂಡರ ರಾಮಾಯಣ, ಪುಟ ೧೧೨, ೧೧೩)

ಇಲ್ಲಿ ಕೊಡು-ತೆಗೆದುಕೊಳ್ಳುವ ವ್ಯವಹಾರಿಕ ಸಂಬಂಧ, ರಾಜಕೀಯ ಒಡಂಬಡಿಕೆ ಕಂಡು ಬರುತ್ತದೆ. ಒಮ್ಮೆ ಬಲಾಢ್ಯನಾದ ರಾವಣನನ್ನು ಹಿಡಿದು ತಂದು ತನ್ನ ಶಿಶುವಿನ ತೊಟ್ಟಿಲಿಗೆ ಕಟ್ಟಿದಂಥ ಅಸಹಾಯ ಶೂರನಾದ ವಾಲಿಯನ್ನು ಆಧುನಿಕ ಅಸ್ತ್ರವಾದ ಧನಸ್ಸು ಬಳಸಿ ರಾಮ ಮರೆಯಲ್ಲಿ ನಿಂತು ಮೋಸದಿಂದ ಕೊಲ್ಲುತ್ತಾನೆ.

‘ಯಾವು ಕಳ್ಳಾನೋ ನೀನೇನು
ಎದುರು ಬಂದು ನನ್ನ ಹೊಡಿಲಾಕು
ಮರಿಯಲು ಬಂದುನಿತ್ತು ಹೊಡೆದಿಯೇನಾ”

(ಗೊಂಡರ ರಾಮಾಯಣ, ಪುಟ ೧೧೬)

ವಾಲಿಯ ಮಾತುಗಳಿಂದ ರಾಮನಿಗೆ ನಾಚಿಕೆಯಾಗುತ್ತದೆ. ಮೂಲ ರಾಮಾಯಣದಂತೆ ಶೂದ್ರನನ್ನು ಕೊಂದರೆ ಯಾವ ಪಾಪವೂ ಬರುವುದಿಲ್ಲವೆಂದು ತಿಳಿದಿದ್ದ ರಾಮ, ಪ್ರಸ್ತುತ ಕಾವ್ಯದಲ್ಲಿ ಮೋಸದಿಂದ ಕೊಂದದ್ದಕ್ಕೆ ಪಶ್ಚಾತ್ತಾಪಪಡುತ್ತಾ ವಾಲಿಗೆ ಮುಂದಿನ ಜನ್ಮದಲ್ಲಿ ಇಂಥದೇ ಒಂದು ಸಂದರ್ಭ ಬರುತ್ತದೆ. ಆಗ ನೀನು ಮರೆಯಲ್ಲಿ ನಿಂತು ನನ್ನನ್ನು ಕೊಲ್ಲು ಎಂದು ರಾಮ ಹೇಳುತ್ತಿರುವಾಗಲೇ ‘‘ವಾಲಿ ಸಾಯುತ್ತಾನೆ.’’[೫೨] ಬುಡಕಟ್ಟುಗಳು ಸೃಷ್ಟಿಸಿದ ರಾಮನಾದ್ದರಿಂದ ತನ್ನ ತಪ್ಪನ್ನು ಒಪ್ಪಿಕೊಂಡು ಇಲ್ಲಿ ವಿನೀತನಾದ. ‘ವಾಲ್ಮೀಕಿ’ಯ ರಾಮ ಹಾಗಲ್ಲ. ಮರೆಯಲ್ಲಿ ನಿಂತು ಕೊಂದದ್ದಕ್ಕೆ ಪಶ್ಚಾತ್ತಾಪವಿಲ್ಲ. ‘‘ವಾನರನ ಚಪಲ ಬುದ್ಧಿಯಿಂದಾಗಿ ನನ್ನನ್ನು ಬಯ್ಯುತ್ತಿದ್ದೀಯ, ರಾಜನಾದ ಭರತನ ಆಜ್ಞೆಯ ಅನುಸಾರ ಧರ್ಮ ಸಂಸ್ಥಾಪನೆಗಾಗಿ ನಾನು ಹಾಗೂ ಇತರ ಕೆಲವು ರಾಜರು ಪರ್ಯಾಟಿಸುತ್ತಿದ್ದೇವೆ ಎಂದು ಹೇಳಿ ವಾಲಿಗೆ ಸದ್ಗತಿ ತೋರಿಸುತ್ತಾನೆ.’’[೫೩]

ಪ್ರಸ್ತುತ ಕೃತಿಯಲ್ಲಿ ಹನುಮಂತ ಲಂಕೆಗೆ ಹಾರುವ ಪ್ರಸಂಗವಿಲ್ಲ. ಮೂಲ ರಾಮಾಯಣದಲ್ಲಿ ಹನುಮಂತ ಈಜಿಕೊಂಡು ಸಮುದ್ರವನ್ನು ದಾಟಿದ್ದು, ಕಪಿ ವೀರರೆಲ್ಲ ಸೇರಿ ಸೇತುವೆ ಕಟ್ಟಿ ನಂತರ ಹನುಮಂತನನ್ನು ಲಂಕೆಯ ವಸ್ತುಸ್ಥಿಯನ್ನು ತಿಳಿದು ಬರಲು ಕಳಿಸುತ್ತಾರೆ. ಲಂಕೆಯನ್ನು ರಾಕ್ಷಸರ ಲೋಕವೆನ್ನಬಹುದು. "ಆದರೆ ದ್ರಾವಿಡ ಜನಾಂಗಗಳ ಪುರಾಣಗಳಲ್ಲಿ ರಾಕ್ಷಸರೇ ಬರುವುದಿಲ್ಲ."[೫೪] ರೂಕ್ಷ ನಡವಳಿಕೆಯವರನ್ನು ರಾಕ್ಷಸರೆನ್ನಬಹುದು. ವಾಲ್ಮೀಕಿ ರಾಮಾಯಣದ ಲಂಕಿಣಿಯ ಬದಲು ಕುಂಭಕರ್ಣ, ಬೃಹದಾಕಾರವಾಗಿ ಲಂಕೆಯ ಬಾಗಿಲಲ್ಲಿ ಮಲಗಿದ್ದಾನೆ. ಕುಂಭಕರ್ಣನ ಜೋರಾದ ಉಸಿರಾಟವನ್ನು ನೋಡಲು ಹೋದ ಹನುಮಂತ ಆ ಉಸಿರಿನ ಸೆಳೆತಕ್ಕೆ ಸಿಕ್ಕಿ ಕುಂಬಕರ್ಣನ ಮೂಗಿಗೆ ಹೋಗಿ ಸಿಕ್ಕಿ ಕೊಳ್ಳುತ್ತಾನೆ. ಸತ್ತನಲ್ಲಾ ಎಂದು ರಾಮನನ್ನು ನೆನೆಸಿಕೊಳ್ಳುವಷ್ಟರಲ್ಲಿ, ಕುಂಭಕರ್ಣ ಬಲವಾಗಿ ಸೀನುತ್ತಾನೆ. ಆಗ ಹನುಮಂತ 'ಹನ್ನೆರಡು ಮುಡಿಗೆದ್ದೆ ತೆಲೆಗಡುಗೆ' ಹೋಗಿ ಬಿದ್ದನಂತೆ.

ಮಾವಿನ ತಪ್ಪಲಲ್ಲಿದ್ದ ಸೀತೆಯನ್ನು ನೋಡಿ, ಹನುಮಂತ ರಾಮನ ಮುದ್ರೆ ಉಂಗುರವನ್ನು ಸೀತೆಗೆ ಕೊಡುತ್ತಾನೆ. ಅರಮನೆಗೆ ಬಂದ ರಾವಣನ ಮಗ ಹನುಮನ ಬಾಲಕ್ಕೆ ಬೆಂಕಿ ಹಚ್ಚಿಸುತ್ತಾನೆ. ಹನುಮನ ಬಾಲ ಬೆಳೆಯಿತು. ಬಾಲಕ್ಕೆ ಎಣ್ಣೆ ಹಾಕುತ್ತಾರೆ. ಲಂಕೆಯನ್ನು ದಹನ ಮಾಡುತ್ತಾ ಬರುತ್ತಾನೆ. ಆದರೆ ಕುಶಲಿಗಳಾದ ಇಬ್ಬರು ಆಚಾರರು ಹೊಸದಾಗಿ ನಿರ್ಮಿಸುತ್ತಾರೆ. ಅವರು ಎಷ್ಟು ಪರಿಣಿತರೆಂದರೆ, ಒಂದು ಉಳಿ ಹೊಡೆದರೆ ಒಂದು ಸಾವಿರ ಮನೆಗಳು ಹೊಸದಾಗಿ ನಿರ್ಮಾಣಗೊಳ್ಳುತ್ತದೆ. ನಾಶಕ್ಕೆ ಪ್ರತಿ ಸೃಷ್ಟಿ ಮಾಡುತ್ತಾರೆ. ಹನುಮಂತ ಬಾಲದ ಬೆಂಕಿಯನ್ನು ಸಮುದ್ರದಲ್ಲಿ ನಂದಿಸಿ, ರಾಮನ ಬಳಿಗೆ ಮರಳಿ ಬರುತ್ತಾನೆ.

ಕಾವ್ಯದಂತೆ ಮೊದಲು ವಿಭೀಷಣ ರಾವಣನ ಮೇಲೆ ಯುದ್ಧ ಮಾಡಿ ಸೋಲನ್ನು ಅನುಭವಿಸುತ್ತಾನೆ. ರಾಮ ಬಲಶಾಲಿ. ಅವನನ್ನು ಸೋಲಿಸಲು ಸಾಧಕವಿಲ್ಲ ಯುದ್ಧ ಬೇಡ ಎಂದು ರಾವಣನಿಗೆ ಹೇಳುತ್ತಾನೆ. ಈ ಬಗ್ಗೆ ರಾವಣ, ಅವನನ್ನು ದೂಷಿಸಿದಾಗ ವಿಭೀಷಣ ರಾವಣನ ಪಕ್ಷ ತೊರೆದು ರಾಮನ ಪರವಾದ.

ಲಂಕೆಯ ಜನ ಒಂದು ಬುಡಕಟ್ಟು ಸಮಾಜದವರಾಗಿದ್ದು, ಅವರ ನಾಯಕ ಬಲಿಷ್ಟನಾದ ಹತ್ತು ತಲೆಗಳ, ಇಪ್ಪತ್ತು ತೋಳುಗಳ ರಾವಣ. "ಅಣ್ಣ ತಮ್ಮಂದಿರ ನಡುವೆ ಭಿನ್ನಾಭಿಪ್ರಾಯವಿದೆ. ಸೀತೆಯ ಅಪಹರಣವನ್ನು ವಿರೋಧಿಸಿದ ಕಾರಣಕ್ಕಾಗಿ ವಿಭೀಷಣನಿಗೂ ರಾವಣನಿಗೂ ಮನಸ್ತಾಪ ಉಂಟಾಯಿತೆಂಬ ಕಾವ್ಯೋದ್ದೇಶವನ್ನು ನಾವು ಒಪ್ಪಬಹುದಾದರೂ, ಅಧಿಕಾರದ ಆಸೆಯಿದ್ದ ವಿಭೀಷಣ, ರಾಮನ ಸಹಾಯದಿಂದ ಅದು ದೊರಕುತ್ತದೆ ಎಂಬುದು ಖಚಿತವಾದಾಗ ರಾಮನ ಬೆನ್ನಿಗೆ ಬೀಳುತ್ತಾನೆ ಎಂಬುದೂ ಅಷ್ಟೇ ವ್ಯವಹಾರಿಕ ಸತ್ಯ."[೫೫]

ಎರಡೂ ಕಡೆಯ ಯುದ್ಧದಲ್ಲಿ, ಸೋಲೆಂಬುದೇ ಇಬ್ಬರಿಗೂ ಇಲ್ಲವೇನೋ ಎಂಬಂತಿದೆ. ಇಲ್ಲಿ ಯುದ್ಧದ ವೈಭವೀಕರಣವಿಲ್ಲ. ಎರಡು ಗುಂಪುಗಳ ನಡುವಿನ ಹೋರಾಟದಂತೆ ನಡೆಯುತ್ತಿರುವ ಈ ಯುದ್ಧದಲ್ಲಿ ರಾವಣನ ಬಾಣ ಲಕ್ಷ್ಮಣನಿಗೆ ನಾಟಿತು. ಹನುಮಂತ ಲಕ್ಷ್ಮಣನನ್ನು ಬದುಕಿಸಲು ತರಬೇಕಾದರೆ ಮದ್ದಿನ ಗಿಡ ಹುಡುಕಲಾಗಲಿಲ್ಲವಾಗಿ, ಕೊನೆಗೆ ಸಂಜೀವಿನಿ ಪರ್ವತವನ್ನೇ ತರುತ್ತಾನೆ. ಮದ್ದನ್ನು ಲಕ್ಷ್ಮಣನ ಬಾಯಿಗೆ ಬಿಟ್ಟ ತಕ್ಷಣ ಲಕ್ಷ್ಮಣ ಎದ್ದು ಕುಳಿತ.

ಶಿಷ್ಟಕಾವ್ಯದಲ್ಲಿ ಯುದ್ಧದ ಮಾತು ಬಂದಾಗ "ನಮ್ಮ ಕವಿಗೆ ಎಷ್ಟನ್ನು ಹೇಳಬಹುದು, ಎಷ್ಟನ್ನು ಬಿಡಬಹುದು ಎಂಬ ಯೋಚನೆ ಮನಸ್ಸಿಗೆ ಬರುವುದೇ ಇಲ್ಲವೆಂಬಷ್ಟು"[೫೬] ವರ್ಣನೆಗಳನ್ನು ಮಾಡುತ್ತಾನೆ.

ಎಷ್ಟು ಬಾಣ ಹೊಡೆದರೂ ರಾವಣ ಸಾಯವುದಿಲ್ಲ. ರಾವಣನ ಎದೆಯಲ್ಲಿ 'ಅಮೃತ ಗಿಂಡ ಕಳಸ' ಇದೆ ಎಂಬ ರಹಸ್ಯವನ್ನು ಹಾಗೂ ಅದಕ್ಕೆ ಹೊಡೆದರೆ ಅವನು ಸಾಯುತ್ತಾನೆ ಎನ್ನುವುದನ್ನು ವಿಭೀಷಣ ಹೇಳುತ್ತಾನೆ. ಇದೊಂದು ಜನಪದ ಕಲ್ಪನೆ. ಅದರಂತೆ, ರಾಮ, ಬಾಣ ಬಿಟ್ಟು ರಾವಣನನ್ನು ಸಾಯಿಸುತ್ತಾನೆ. ರಾಮ ಲಕ್ಷ್ಮಣರು ಸೀತೆಯನ್ನು ಕರೆದುಕೊಂಡು ಅಯೋಧ್ಯೆಗೆ ಬರುತ್ತಾರೆ.

ತಂಬೂರಿ ರಾಮಾಯಣದಲ್ಲಿ ರಾಮ ಲಕ್ಷ್ಮಣರು ಮೊದಲು ಮಂಡೋದರಿ ಇದ್ದ ರವಳೇಶ್ವರ ಪಟ್ಟಣವನ್ನು ಪ್ರವೇಶಿಸುತ್ತಾರೆ. ಇಲ್ಲಿನ ಕಥೆಯಲ್ಲಿ ಎರಡು ಪಟ್ಟಣಗಳನ್ನು ಹೆಸರಿಸಲಾಗಿದ್ದು ಮಂಡೋದರಿ ರವಳೇಶ್ವರ ಪಟ್ಟಣದಲ್ಲಿದ್ದರೆ, ಸೀತೆ ಲಂಕಾಪುರಿಯಲ್ಲಿ. ಮಂಡೋದರಿ ರಾವಣನ ಸಮಸ್ತ ವಿಷಯವನ್ನೂ ರಾಮನಿಗೆ ಹೇಳುತ್ತಾಳೆ. ಕೊನೆಗೆ ರಾವಣನ ಪ್ರಾಣವಿರುವ ಜಾಗವನ್ನು ತಿಳಿಸುತ್ತಾಳೆ. ಕಪಿ ಸೈನ್ಯದಿಂದ ಸೇತುವೆಯನ್ನು ನಿರ್ಮಿಸಿ, ರಾವುಳನ ಪಟ್ಟಣಕ್ಕೆ ಲಗ್ಗೆ ಹಾಕುತ್ತಾರೆ. ರಾವಣನ ಮಡದಿಯ ಮೊಕವ ನೋಡುವ ನೆವದಲ್ಲಿ, ರಾವಣನಿಂದ ಸೀತೆ ಇದ್ದ ಅರಗಿನ ಮನೆ ಬಾಗಿಲನ್ನು ತೆಗೆಸಲಾಗುತ್ತದೆ. ಹನುಮಂತನ ಬಾಲಕ್ಕೆ ಬೆಂಕಿ ಹಚ್ಚಿ ಲಂಕಾ ದಹನ ಮಾಡಲಾಗುತ್ತದೆ. ರಾವಣ ರಾಮನ ಕ್ಷಮೆ ಕೇಳುತ್ತಿದ್ದರೂ ರಾಮ ಬಾಣ ಬಿಟ್ಟು ಕೊಲ್ಲುತ್ತಾನೆ. ಸೀತೆಯನ್ನು ರಾವಣನಿಂದ ಬಿಡಿಸಿದ ಮೇಲೆ, ಬರುವ ಸೀತಾ ಪರೀಕ್ಷಾ ಘಟನೆ ತಂಬೂರಿಯವರ ಸಂಪೂರ್ಣ ರಾಮಾಯಣದಲ್ಲಿ ಇಲ್ಲದಿದ್ದರೂ, ಜನಪದ ರಾಮಾಯಣದ ಹೊನ್ನಾಜಮ್ಮ ಹೇಳಿದ ಗೀತಭಾಗದಲ್ಲಿ ರಾಮ ಸೀತೆಗೆ ಮೂರು ಪರೀಕ್ಷೆಗಳನ್ನು ಒಡ್ಡುತ್ತಾನೆ. ಮರಳು ರಹಬಿಯಲ್ಲಿ ನೀರು ತರುವುದು. ಮತ್ತು ಸರ್ಪದ ಸಿಂಬಿ ಮಾಡಿಕೊಂಡು ಓಂದರೀಲಿ ನೀರು ತರುವುದು ಹಾಗೂ ಮುಡಿದ ಮಲ್ಲಿಗೆ ಬಾಡದಂತೆ ಉಟ್ಟ ಬಟ್ಟೆ ಮಾಸದಂತೆ, ಅರಿಶಿನ ಕುಂಕುಮ ಕೆಡಿಸದಂತೆ ಕೈಯ ಚಿಗುರೆಲೆ ಕನಗದಂತೆ ಕೊಂಡದಲ್ಲಿ ನಿಂತು ಕೊಳ್ಳುವುದು, ಇವೆಲ್ಲವೂ ಜನಪದ ಕಥನಗಳ ಆಶಯಗಳು. ರಾಮ, ಸೀತೆ, ಲಕ್ಷ್ಮಣರು ಅಯೋಧ್ಯೆಗೆ ಹೋಗುತ್ತಾರೆ. ರಾಮನಿಗೆ ಪಟ್ಟ ಕಟ್ಟಲಾಗುವುದು. ಈ ಪ್ರಸಂಗ ಶಿಷ್ಟ ಮತ್ತು ಮೌಖಿಕ ರಾಮಾಯಣಗಳಲ್ಲಿ ವ್ಯತ್ಯಾಸವಿಲ್ಲ.

''ಮೂಲ ರಾಮಾಯಣದ ಹಾಗೆ, ಗೊಂಡರ ರಾಮಾಯಣದಲ್ಲಿ ಅಗ್ನಿ ಪ್ರವೇಶದ ಪ್ರಸಂಗವಿಲ್ಲ. ಇಲ್ಲಿ ರಾವಣನ ಮೇಲಿನ ವಿಜಯ ಮುಖ್ಯ. ಆ ಮೂಲಕ ಅವನ ರಾಜ್ಯ ರಾಮನ ರಾಜ್ಯಾಕಾಂಕ್ಷೆಯನ್ನು ಸ್ಪಷ್ಟವಾಗಿ ನೋಡಬಹುದಾಗಿದೆ. ಈ ಯುದ್ಧ ಕಾಂಡದ ಪ್ರಸಂಗದಲ್ಲಿ''[೫೭] ''ಮೂಲ ರಾಮಾಯಣದ ಸೀತೆಯ ಅಗ್ನಿ ಪ್ರವೇಶದ ಪ್ರಸಂಗ ರಾಮನಿಗೆ ಸೀತೆಯ ಪ್ರೀತಿಗಿಂತ ಮುಖ್ಯವಾಗಿದ್ದುದು ರಾವಣನ ಸೋಲು, ಆ ಮೂಲಕ ಅವನ ರಾಜ್ಯ ಎನ್ನುತ್ತಾರೆ''[೫೮] ಡಾ.ಹಿ.ಚಿ.ಬೋರಲಿಂಗಯ್ಯನವರು.

ಅಗ್ನಿ ಪ್ರವೇಶದ ಪ್ರಸಂಗದಲ್ಲಿನ ರಾಮನ ನಿಷ್ಠುರದ ಮಾತುಗಳು ಇದಕ್ಕೆ ಪುಷ್ಟಿ ಕೊಡುತ್ತವೆ. ರಾವಣನ ಮರಣದ ನಂತರ ವಿಭೀಷಣನು ಸೀತೆಯನ್ನು ರಾಮನೆದುರಿಗೆ ಕೊಂಡೊಯ್ಯು, ಸೀತೆಯನ್ನು ಕಂಡಾಗ ರಾಮನಿಗೆ ಕ್ರೋಧಾವೇಶ ಹುಟ್ಟಿದಂತಾಗುತ್ತದೆ. ವಾನರರ, ರಾಕ್ಷಸರ ಸಮೂಹದ ನಡುವೆ ನಿಂತಿದ್ದ ಸೀತೆಗೆ ''ನಿನಗೋಸ್ಕರ ನಾನು ಈ ಯಾವುದನ್ನೂ ಮಾಡಿಲ್ಲ, ಹತ್ತು ದಿಕ್ಕುಗಳೂ ನಿನಗೆ ತೆರೆದಿವೆ, ನಿನ್ನ ಇಷ್ಟ ಬಂದ ಕಡೆ ಹೋಗು, ನನ್ನ ಅಪ್ಪಣೆಯಿದೆ, ನನಗೆ ನಿನ್ನ ಅಗತ್ಯವಿಲ್ಲ'' ಎಂದನು. ''ನೀನು ಯಾರ ಜೊತೆಯಲ್ಲಾದರೂ ಹೋಗಿರು, ಇಷ್ಟ ಬಂದ ಹಾಗೆ ಲಕ್ಷ್ಮಣನೋ, ಭರತನೊ ಸುಗ್ರೀವನೊ, ವಿಭೀಷಣನೋ ಯಾರ ಜೊತೆಯಲ್ಲಾದರೂ

ಸಂಸಾರ ಮಾಡಿಕೊಂಡಿರು ಅವರಲ್ಲಿ ಯಾರ ಜೊತೆಯಲ್ಲಾದರೂ ಬದುಕು ಎಂದ."[೫೯] ಸೀತೆಗೆ ತನ್ನ ಸ್ವಂತ ಗಂಡನ ಬರ್ಬರವಾದ ಮಾತುಗಳನ್ನು ಕೇಳಿ ಧಕ್ಕೆ ಬಡಿದಂತಾಗುತ್ತದೆ. ಅಂದರೆ ರಾವಣನ ಮೇಲಿನ ಯುದ್ಧ ಸಾಮ್ರಾಜ್ಯ ವಿಸ್ತರಣೆಯಾಗಿತ್ತೆ? ಸೀತೆ ಈ ಮಾತುಗಳಿಂದ ಚೇತರಿಸಕೊಳ್ಳುತ್ತಾ ನಿಧಾನವಾಗಿ ಹೀಗೆಂದಳು. "ನಿನ್ನ ಯೋಗ್ಯತೆಗಾಗಲಿ, ನನ್ನದಕ್ಕಾಗಲಿ ತಕ್ಕ ಮಾತುಗಳಲ್ಲ. ಒರಟು ಗ್ರಾಮ್ಯನೊಬ್ಬನು, ಇನ್ನೊಬ್ಬ ಗ್ರಾಮ್ಯನಿಗೆ ಆಡುವಂಥವು. ನೀನು ಯೋಚಿಸಿರುವಂತಹವಳಲ್ಲ ನಾನು. ಸ್ತ್ರೀ ಜಾತಿಯನ್ನೇ ಶಂಕಿಸುತ್ತಿದ್ದೀ"[೬೦] "ನನ್ನ ಮನಸ್ಸು ರಾಮನನ್ನು ಬಿಟ್ಟು ಬೇರೊಂದು ಪಾತ್ರಕ್ಕೆ ಸುಳಿಯಲಿಲ್ಲ, ಆತ್ಮ ತನ್ನದು, ಮನಸ್ಸು ತನ್ನದು, ಅವನ್ನು ತನ್ನ ಒಪ್ಪಿಗೆಯಿಲ್ಲದೆ, ಯಾರು ತುಡುಕುವಂತಿಲ್ಲ. ಮೈಯನ್ನು ತಾನು ಹಾಗೆ ರಕ್ಷಿಸಿಕೊಳ್ಳುವುದು ಸಾಧ್ಯವಲ್ಲ, ಅದನ್ನು ಯಾರೋ ಬಲವಂತದಿಂದ ಮುಟ್ಟಿದರೆ ಅದು ವಿಧಿಯ ದೋಷ ತನ್ನದಲ್ಲ."[೬೧] "ಶ್ರೇಷ್ಠ ಮಾನವನಾದ ನೀನು ಕೋಪವನ್ನೇ ಮುಂದುಮಾಡಿಕೊಂಡೆಯಾಗಿ ಗಂಡಾದ ಪ್ರಾಣಿ ಹೆಣ್ಣಿನ ಹೆಣ್ತನವನ್ನು ಬಹು ಹಗುರವಾಗಿ ಕಂಡಂತಾಯಿತು. ನನ್ನ ಭಕ್ತಿ ನನ್ನ ಶೀಲ ಇದೆಲ್ಲವನ್ನೂ ನೀನು ಹಿಂದುಗಡೆಗೆ ಎಸೆದುಬಿಟ್ಟೆ"[೬೨] ಎನ್ನುತ್ತಾಳೆ. ಲಕ್ಷ್ಮಣನಿಗೆ ಹೇಳಿ ಚಿತೆಯ ನಿರ್ಮಿಸಿಕೊಂಡು ಬೆಂಕಿಯನ್ನು ಹೊಕ್ಕಳು. ಅಗ್ನಿದೇವನು ಸೀತೆಯನ್ನು ಚಿತೆಯಿಂದ ಹಿಡಿದು ಎದ್ದು ಬಂದು ಸಚ್ಚರಿತ್ರೆಯಳೆಂದು ಹೇಳುತ್ತಾನೆ. ಸೀತೆಯ ಶೀಲದ ಬಗ್ಗೆ ಜನರ ಸಂದೇಹಕ್ಕಿಂತ ರಾಮನ ಸಂದೇಹವೇ ಅಧಿಕೃತವಾಗಿತ್ತೆನ್ನುವುದನ್ನು ನಾವು ಇಲ್ಲಿ ಕಾಣಬಹುದಾಗಿದೆ.

ಶುದ್ಧ ಜನಪದ ಆವರಣದಲ್ಲಿ ರಮ್ಯ ಮನೋಹರವಾಗಿ ಬೆಳೆದು ನಿಂತಿರುವ, ಪ್ರಸ್ತುತ ಪ್ರಕೃತಿಯ ಉತ್ತರ ಕಾಂಡದ ಕತೆ, ಸಾಮಾನ್ಯವಾಗಿ 'ಲವಕುಶರ ಕಾಳಗ' ಎಂದು ಪ್ರಸಿದ್ಧವಾಗಿದೆ. ಮಡಿವಾಳ ಮಾಚಯ್ಯ, ಹೆಂಡತಿಯ ಜೊತೆ ಜಗಳವಾಡುತ್ತಾ, 'ರಾಮ ಬಿಟ್ಟೆಣತಿ ಕರೆದಂಗಾ' ನಾನು ನಿನ್ನ ಕರೆಯುವುದಿಲ್ಲವೆನ್ನುತ್ತಾ ರಾಮನನ್ನು ಹೀಯ್ಯಾಳಿಸುತ್ತಾನೆ. ಗೂಢಾಚಾರನಾಗಿ ಬಂದಿದ್ದ ಹನುಮಂತ ಈ ವಿಚಾರವನ್ನು ರಾಮನಿಗೆ ಹೇಳುತ್ತಾನೆ. ರಾಮ ದುಃಖದಿಂದ ಸೀತೆಯನ್ನು ಕೊಲ್ಲುವ ಕೆಲಸವನ್ನು ವೃತ್ತಿಯಲ್ಲಿ ಕೊಲೆಗಡುಕರಾದ 'ಕಿರಾತ'ರಿಗೆ ವಹಿಸುತ್ತಾನೆ. ಕಾಡಿಗೆ ಕರೆದುಕೊಂಡು ಹೋದ ಕಿರಾತಕರು, ಸೀತೆಯನ್ನು ಕೊಲ್ಲಲು ಮುಂದಾದಾಗ, ಕತ್ತಿಯ ಅಲುಗಿನಲ್ಲಿ ಮಗುವಿನ ಮುಖ ಕಾಣಿಸಿದಾಗ, ಸೀತೆ ಗರ್ಭಿಣಿ ಎಂದು ತಿಳಿದು 'ಶಿಶು ಹತ್ಯಾದೋಷ' ಎಂದು ಕಿರಾತಕರು ಸೀತೆಯನ್ನು ಅಲ್ಲಿಯೇ ಬಿಟ್ಟು ಬರುತ್ತಾರೆ.

ರಾಗೌರವರ ಜನಪದ ರಾಮಾಯಣದ 'ಲವ ಕುಶರ ಕಾಳಗ'ದಲ್ಲಿ ಗಾಳಿ ಸೇವನೆ ಮಾಡುತ್ತಾ, ಸೀತೆಗೆ ಹುಣಸೆಕಾಯಿ ಹುಡುಕಿಕೊಂಡು ಬರುವಾಗ ಕೇಳಿಸಿಕೊಂಡ ಅಗಸನ ಮಾತಿನಿಂದಾಗಿ ಸೀತೆಯನ್ನು ಕಾಡಿಗೆ ಕಳುಹಿಸಿ ಕೊಲ್ಲುವ ಕೆಲಸವನ್ನು ವಹಿಸುವುದು ಲಕ್ಷ್ಮಣನಿಗೆ. ಅದರಲ್ಲೂ ಸೀತೆಯನ್ನು ಹುಟ್ಟಿದ ನಿರ್ವಾಣದಲ್ಲಿ ಕೊಲ್ಲಲು ಹೇಳುವ ಅಪೂರ್ವ ಜನಪದ ಕಲ್ಪನೆಯನ್ನು ಕಂಸಾಳೆಯವರಲ್ಲೂ ಮನಮಿಡಿಯುವ ಹಾಗೆ ಚಿತ್ರಿತವಾಗಿದೆ. ತಂಬೂರಿ ಸಂಪ್ರದಾಯದಲ್ಲಿ ಸೀತಾ ಪರಿತ್ಯಾಗದ ಕತೆ ಬದಲಾಗಿದ್ದು ಅಸಂಬದ್ಧತೆಯಿಂದ ಅಸ್ಪಷ್ಟವಾಗುತ್ತದೆ.

ಗೊಂಡರ ರಾಮಾಯಣದ ಸೀತೆ, ತಿರುಪತಿ ತಿಮ್ಮಪ್ಪನನ್ನು ನೆನೆಯುತ್ತಿರುವಾಗ ವಾಲ್ಮೀಕಿ ಋಷಿಗಳು ಬರುತ್ತಾರೆ. ಸೀತೆಗೆ ಮಗ ಲವ ಜನಿಸುತ್ತಾನೆ. ವಾಲ್ಮೀಕಿ ಮುನಿ ಆತಂಕದಿಂದ ಎರಡನೆಯ ಮಗುವನ್ನು

ದರ್ಭೆ ಹುಲ್ಲಿನಲ್ಲಿ ಸೃಷ್ಟಿಸುವ ರೀತಿ, ಲವಕುಶರ ಯುದ್ಧ ತಾಯಿಯಿಂದ ತಂದೆ ರಾಮ ಎಂದು ಲವಕುಶರು ತಿಳಿಯುವುದು ಎಲ್ಲರೂ ಒಂದಾಗಿ ಅಯೋಧ್ಯೆಗೆ ಹೊರಡುವವರೆಗಿನ ಅಪೂರ್ವ ಜನಪದ ಕಲ್ಪನೆಗಳು ಕಾವ್ಯದಲ್ಲಿ ಮೂಡಿ ಬಂದಿವೆ. ರಾಗೌರವರ ಜನಪದ ರಾಮಾಯಣದ ಲವಕುಶರ ಕಾಳಗದಲ್ಲಿ ಸೀತೆ ಅಡಿಗೆ ಮಾಡಿ ಬಡಿಸುವಾಗಿನ "ಮುತ್ತುಗದ ಎಲೆಯ ಸನ್ನಿವೇಶಗಳು, ಬಸುರಿ ಮರ ಮತ್ತು ಸೀತಾಫಲ ರಾಮಫಲಗಳ ಸೃಷ್ಟಿ ಅತ್ಯಪೂರ್ವ ಸಂದರ್ಭಗಳಾಗಿದ್ದು, ವಿವರಣಾತ್ಮಕ ಐತಿಹ್ಯಗಳೆನಿಸಿವೆ."[೬೩] ಬನ್ನಿಮರದಲ್ಲಿ ರಕ್ತ ಬರಿಸುವುದು, ರಾಮನ ಕಣ್ಣೀರಿನ ಹೊಳೆ ಅದರಲ್ಲಿ 'ಕುಶ್ಚಲವು'ಗಳೆಂಬ ಮೀನುಗಳ ಸೃಷ್ಟಿ, ಸೀತೆಯನ್ನು ರಕ್ಷಿಸುವುದು, ಸೀತೆ ಗಂಡು ಮಗುವಿಗೆ ಜನನ ನೀಡುವುದು. ನಂತರ ವಾಲ್ಮೀಕಿ ಮರು ಜವುಳೀ ಕಡ್ಡಿ ಮಂತ್ರಿಸಿ ಮತ್ತೊಂದು ಮಗುವನ್ನು ಸೃಷ್ಟಿಸಿದ ಪ್ರಸಂಗ, ಕುಶ್ಚಲು, ಅವುಲು ಅಂತ ಹೆಸರಿಡುವುದು, ರಾಮನೊಂದಿಗೆ ನಡೆಸುವ ಯುದ್ಧದ ವೈಖರಿ ವಾಲ್ಮೀಕಿ ರುಸಿಗಳು ಸತ್ತ ರಾಮ ಲಕ್ಷ್ಮಣ, ಭರತ ಶತ್ರುಜ್ಞರನ್ನು ಬದುಕಿಸುವ ರೀತಿ, ಸೀತೆ ಭೂದೇವಿಯಲ್ಲಿ ಐಕ್ಯವಾಗುವ ಪ್ರಸಂಗಗಳನ್ನು ಕಂಸಾಳೆಯವರು ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಗೊಂಡರ ರಾಮಾಯಣದಲ್ಲಿ ಎಲ್ಲರೂ ವಾಲ್ಮೀಕಿಯ ಆಶ್ರಮದಿಂದ ಅಯೋಧ್ಯೆಗೆ ಹೊರಟಾಗ ಸೀತೆ ಅಯೋಧ್ಯೆಯನ್ನು ಧಿಕ್ಕರಿಸುತ್ತಾಳೆ.

'ನಾನಿನ್ನಾದರೂ ಉಳಿಲಾರೆ
ಇಲ್ಲೂ ನಾನೊಂದೆ ಬಾಳಲಾರೆ
ಭೂಮಿ ಪಾಲಾಗಿ ಹೋಗುತೀದಾ'

(ಗೊಂಡರ ರಾಮಾಯಣ, ಪುಟ ೧೬೨)

ಎಂದು ಸೀತೆ ಭೂಮಿ ತಾಯಲ್ಲಿ ಐಕ್ಯವಾಗುತ್ತಾಳೆ.

ಬುಡಕಟ್ಟಿನ ಮುಕ್ತ ಸ್ತ್ರೀಯಂತೆ ಇಲ್ಲಿನ ಸೀತೆ ಒಬ್ಬ ಸ್ವಾಭಿಮಾನಿ ಹೆಣ್ಣು. ಮೂಲ ಉತ್ತರ ಕಾಂಡದ ಕತೆಯಲ್ಲಿ ಅಗಸರವನ ಮಾತಿಗೆ ಬೆಲೆ ಕೊಟ್ಟು ಸೀತೆ ಪರಿಶುದ್ಧಳೆಂದು ತಿಳಿದಿದ್ದರೂ, ಸಹ ಸೀತೆಯನ್ನು ಪರಿತ್ಯಜಿಸುವುದು ಕೊನೆಯಲ್ಲಿ ಲವಕುಶರು ತನ್ನ ಮಕ್ಕಳೆಂದು ತಿಳಿದ ಮೇಲೆ ರಾಮ ಸೀತೆಯನ್ನು ಅಶ್ವಮೇಧದ ಸಭೆಗೆ ಕರೆಸಿ ತನ್ನ (ಸೀತೆಯ) ಪರಿಶುದ್ಧಿಯನ್ನು ಆಣೆಯಿಟ್ಟು ಘೋಷಿಸಬೇಕೆಂದು ಹೇಳುತ್ತಾನೆ. ಆಗ ಸೀತೆ "ರಾಘುವನನ್ನು ಬಿಟ್ಟು... ರಾಮನಿಗಿಂತ ಬೇರೆಯವನನ್ನು ಅರಿತವಳಲ್ಲ ಎಂಬ ಮಾತು ಸತ್ಯವಾಗಿದ್ದರೆ, ಓ ಮಾಧವೀದೇವಿ ನನಗೆ ತೆರೆದು ಆಶ್ರಯ ಕೊಡು" ಎಂದು ಹೇಳುತ್ತಾಳೆ. ಮೂರು ಸಲ ಆಕೆ ಇದನ್ನು ಹೇಳಿದಳು. ಭೂಮಿ ತೆರೆಯಿತು... ಸೀತೆ ಲೋಕಕ್ಕೆ ಇನ್ನಿಲ್ಲದಂತೆ ತಾಯಿ ಅವಳನ್ನು ಒಳಕ್ಕೆ ಕೊಂಡು ಹೋದಳು. ರಾಮನು ಇಂಥ ಪರಿಣಾಮಕ್ಕೆ ಸಿದ್ಧನಾಗಿರಲಿಲ್ಲ. ಒಂದು ಕಡೆ ವ್ಯಸನ ಇನ್ನೊಂದು ಕಡೆ ಕೋಪ ಎರಡು ಉಂಟಾಗಿ ಸೀತೆಯನ್ನು ಹಿಂದಿರುಗಿ ತನಗೆ ಒಪ್ಪಿಸದಿದ್ದರೆ ಭೂಮಿಯನ್ನೇ ನಾಶ ಮಾಡುತ್ತೇನೆಂದು ಪ್ರತಿಜ್ಞೆ"[೬೪] ಮಾಡುತ್ತಾನೆ. ಇಲ್ಲಿ ವಿ.ಸೀತಾರಾಮಯ್ಯನವರು ವ್ಯಸನ ಎಂಬ ಪದವನ್ನು ಉಪಯೋಗಿಸುವುದಕ್ಕೆ ಬದಲು ತನ್ನ ರಾಮನ ಕ್ರಿಯೆಗೆ ನಾಚಿಕೆ ಉಂಟಾಯಿತೆಂದು ಹೇಳಿದ್ದರೆ, ಅದು ಸಮಂಜಸವು, ಸ್ತ್ರೀ ಸಂಕುಲಕ್ಕೆ ಸ್ವಲ್ಪವಾದರೂ ನ್ಯಾಯ ಒದಗಿಸಿದಂತಾಗುತ್ತಿತ್ತು. "ಸೀತೆಯನ್ನು ಭೂಮಿತಾಯಿ ತನ್ನ ತೋಳುಗಳಲ್ಲಿ ಮಗಳಾದ

ಸೀತೆಯನ್ನು ಅಪ್ಪಿಕೊಂಡು ಭೂಮಿಯೊಳಕ್ಕೆ ತವರಿಗೆ ಕರೆದುಕೊಂಡು ಹೋಗುವುದು, ತಾಯಿ ಮಗಳ ದುಃಖಕ್ಕೆ, ಕ್ಷಮೆಗೆ, ತಾಳ್ಮೆಗೆ ಸಂಕೇತಗಳು.''[೬೫] ಅನಾವಶ್ಯಕವಾಗಿ ಸೀತೆಯನ್ನು ದುಃಖಕ್ಕೆ ಈಡು ಮಾಡಲಾಗಿದೆ. ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯ ಕೊಡುಗೆ ಇದು. ಸೀತೆಯಲ್ಲಿ ಅವಿಶ್ವಾಸ ತೋರುವುದರ ಮೂಲಕ ರಾಮ ಆದರ್ಶ ರಾಜನಾಗಬೇಕಿತ್ತೇ? ರಾಜ ಧರ್ಮವನ್ನು ಪಾಲಿಸಬೇಕಾದವನಿಗೆ ಸಹ ಧರ್ಮಿಣಿಯೊಂದಿನ ಧರ್ಮವೂ ಇರಲಿಲ್ಲವೇ? 'ಶೀಲ ಪರಿಶುದ್ಧಿ' ಎಂಬ ಒಂದೇ ಪರೀಕ್ಷೆಗೆ (ಅಪರಾಧವೆಂದು ರಾಮನ ಭಾವನೆಯಾಗಿದ್ದರೆ) ಎರಡು ಬಾರಿ ದಂಡನೆಯೇ? ಇಷ್ಟೆಲ್ಲಾ ದುಃಖವನ್ನು ಸೀತೆ ಅನುಭವಿಸಿದ್ದೇಕೆ ಶ್ರೀರಾಮನ ಪತ್ನಿ ಎಂಬ ಕಾರಣದಿಂದಾಗಿ.

ಒಟ್ಟಿನಲ್ಲಿ ವಾಲ್ಮೀಕಿ ಚಿತ್ರಿಸಿರುವ ಸೀತೆಯು ಗಟ್ಟಿ ಹೆಂಗಸು, ಧೈರ್ಯಶೀಲೆ. ಆವೇಶಗೊಂಡಾಗಲೇ ಅವಳ ಇಚ್ಛೆಗೆ ಅಡ್ಡಿ ಆತಂಕ ಬಂದಾಗಲೊ, ಅವಳ ಹೆಣ್ತನಕ್ಕಾಗಲಿ, ಸತಿತ್ವದ ಮರ್ಯಾದೆಗೆ ಕೇಡು ಸುಳಿಯಿತೆಂದು ಕಂಡಾಗಲೋ ರೊಚ್ಚಿಗೇಳಬಲ್ಲವಳಾದರೂ, ಸೀತೆಯನ್ನು ಪ್ರಧಾನವಾಗಿ ರಾಮನ ದೃಷ್ಟಿಯಿಂದ ಬಾಳನ್ನು ನೋಡುವ ಕ್ರಮವಾಗಿ ಮೂಲ ರಾಮಾಯಣದಲ್ಲಿ ಪತಿವ್ರತಾ ಸ್ತ್ರೀಯಾಗಿ ಚಿತ್ರಿತವಾಗಿದ್ದರೆ, ''ಜನಪದ ರಾಮಾಯಣಗಳಲ್ಲಿ ಸೀತೆಯ ದೃಷ್ಟಿಯಿಂದ ಬಾಳನ್ನು ನೋಡುವ ಕ್ರಮಗಳಾಗಿ ಚಿತ್ರಿತವಾಗಿದ್ದು, ಸೀತಾ, ರಾವಣರ, ಸೀತಾ ಲಕ್ಷ್ಮಣರ ಸಂಬಂಧಗಳೊಳಗಿನ ಅನೇಕ ಆತ್ಮೀಯ ಎಳೆಗಳನ್ನು ಸಾಂಕೇತಿಕವಾಗಿ ಕಟ್ಟಿ ತೋರುವ, ಹೆಣ್ಣಿನ ಲೈಂಗಿಕ ಸ್ವಾತಂತ್ರ್ಯವನ್ನು ಮನ್ನಿಸುವ ದೃಷ್ಟಿಕೋನವುಳ್ಳ ಕಥನಗಳಿವು.''[೬೬] ಗೊಂಡರ ಸೀತೆ, ಬುಡಕಟ್ಟು ಸಮಾಜವೊಂದರ ಸ್ವಾಭಿಮಾನಿ ಹೆಣ್ಣಾಗಿ, ಮಾತೃಪ್ರಧಾನ ವ್ಯವಸ್ಥೆಯ ಶ್ರೇಷ್ಠತೆಯನ್ನು ಪ್ರತಿನಿಧಿಸುವ ಸ್ತ್ರೀಯಾಗಿ ಅಭಿವ್ಯಕ್ತಗೊಂಡಿದ್ದಾಳೆ.

## ೬.೨. ಜನಪದ ಮಹಾಭಾರತ - ದ್ರೌಪದಿ

ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳು ಭಾರತೀಯ ಶಿಷ್ಟ ಸಾಹಿತ್ಯದ ಎರಡು ಮೇರು ಕೃತಿಗಳು. ''ಮಹಾಭಾರತ ಬಹುದೊಡ್ಡ ಗ್ರಂಥ. ಗ್ರೀಕ್ ಜನರಿಗೆ ಭಾರತ, ರಾಮಾಯಣಗಳಂತಿರುವ ಇಲಿಯಡ್ ಮತ್ತು ಒಡೆಸ್ಸಿ ಗ್ರಂಥಗಳೆರಡನ್ನು ಒಟ್ಟು ಕೂಡಿಸಿದರೂ ಅದು ಮಹಾಭಾರತದ ಎಂಟರಲ್ಲಿ ಒಂದ ಭಾಗ ಮಾತ್ರವಾಗುತ್ತದೆ.''[೬೭] ಕೌರವರು ಮತ್ತು ಪಾಂಡವರಲ್ಲಿ ಹದಿನೆಂಟು ದಿನಗಳು ನಡೆದ ಮಹಾಕುರುಕ್ಷೇತ್ರ ಯುದ್ಧವು ಇದರ ಕೇಂದ್ರ ವಸ್ತು. ಪಾಂಡವರು, ಕೌರವರನ್ನು ಗೆದ್ದ ಕಥೆಯಾದುದರಿಂದ ಇದಕ್ಕೆ ಮೊದಲು 'ಜಯ' ಎಂಬ ಹೆಸರಿದ್ದು, ಅನಂತರ ಭರತ ವಂಶದವರ ಕಥೆಯಾದುದರಿಂದ ಇದಕ್ಕೆ 'ಭಾರತ' ಎಂದು ಹೆಸರಾಯಿತು. ''ಹೋಮರನ ಇಲಿಯಡ್ ಕಾವ್ಯಕ್ಕೆ ಗ್ರೀಕರಿಗೂ, ಏಷ್ಯಾ ಮೈನರ್‌ನ ಜನರಿಗೂ ನಡೆದ ಒಂದು ಘರ್ಷಣೆಯ ಕಥೆಯೇ ಮಹಾಭಾರತಕ್ಕೆ ಮೂಲ ಎನ್ನುತ್ತಾರೆ''[೬೮] ವಿದ್ವಾಂಸರು. ಈ ಕಾವ್ಯದ ಹಿರಿಮೆಯನ್ನು ಕವಿಯೊಬ್ಬರು, 'ಜಗತ್ತಿನಲ್ಲಿ ಇರುವುದೆಲ್ಲವೂ ಭಾರತದಲ್ಲಿದೆ. ಭಾರತದಲ್ಲಿ ಇಲ್ಲದ್ದು ಜಗತ್ತಿನಲ್ಲಿ ಇಲ್ಲ' ಎಂದಿದ್ದಾರೆ. ಮಹಾಕಾವ್ಯ ಮೂಲತಃ ಒಂದು ಕಥನಕಾವ್ಯ. ಹಿಂದೆ ಪ್ರಾಯೋಗಿಕವಾಗಿ ಬಾಯಿ ಪಾಠವಾಗಿದ್ದು, ಪೌರಾಣಿಕರು ಅದನ್ನು ಹೇಳುವಾಗ ಮಧ್ಯೆ ಮಧ್ಯೆ ವಿವರಣೆಗಳನ್ನು ಉಪಕಥೆಗಳನ್ನೂ ಹೇಳುತ್ತಾ ಅವು ಕ್ರಮವಾಗಿ ಮೂಲದಲ್ಲಿ ಸೇರಿ ಹೋಗಿದ್ದು, ಯಾವ ಯಾವ ಕಾಲದಲ್ಲಿ

ಇವು ಸೇರಿ ಕೊಂಡಿತೆಂಬುದನ್ನು ಪತ್ತೆ ಹಚ್ಚುವುದು ಸಾಧ್ಯವಿಲ್ಲದಷ್ಟು ಬೆಳೆದು ಆರಂಭದಲ್ಲಿ 'ಜಯ' ಎಂಬ ಗ್ರಾಂಥಿಕ ರೂಪವನ್ನು ತಾಳಿದಾಗ ಸುಮಾರು ೨೪,೦೦೦ ಶ್ಲೋಕವಾಗಿ ರಚನೆಗೊಂಡಿದ್ದು, ಕ್ರಮೇಣ ಒಂದು ಲಕ್ಷ ಶ್ಲೋಕಗಳ ಬೃಹದ್ಗ್ರಂಥವಾಯಿತು. "ಮಹಾಭಾರತದ ಹೆಚ್ಚಿನ ವಿಷಯಗಳನ್ನು ಬಿಟ್ಟು ಮೊದಲಿನ ಭಾರತ ಎಂಬ ಭಾಗ ಅಷ್ಟನ್ನು ಗ್ರಹಿಸಿ ನೋಡುವುದಾದರೆ ಗ್ರಂಥ ಸರಳವಾದ ಒಂದು ಕಥನ ಆಗುತ್ತದೆ."[೧೯]

ಶಿಷ್ಟ ಪರಂಪರೆಯಲ್ಲಿ ರಾಮಾಯಣ ಮತ್ತು ಮಹಾಭಾರತಗಳು ಎಲ್ಲಾ ಭಾರತೀಯ ಭಾಷೆಗಳಲ್ಲಿಯೂ ಪ್ರಮುಖಸ್ಥಾನ ಪಡೆದಿರುವುದಲ್ಲದೆ, ಜನರ ಮನೋಭಿತ್ತಿಯಲ್ಲಿಯೂ ಸ್ಥಾನವನ್ನು ಪಡೆದುಕೊಂಡಿದೆ. ಹಾಗಾಗಿ ಶಿಷ್ಟಸಾಹಿತ್ಯ ಪರಂಪರೆಯ ಜೊತೆಜೊತೆಯಲ್ಲಿಯೇ ಜನಪದ ಸಾಹಿತ್ಯದಲ್ಲಿಯೂ ರಾಮಾಯಣ, ಮಹಾಭಾರತ ಗಳು ಕಂಡುಬರುತ್ತಿವೆ. ಜನಪದ ಕಾವ್ಯಗಳು ಒಂದು ಮಹಾಕಾವ್ಯಕ್ಕೆ ಸರಿ ಸಮಾನವಾದ ಅಂಶಗಳನ್ನು ಪಡೆದು ಕೊಂಡು ಜನತೆಯಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿದೆ.

" 'ಮಹಾಭಾರತ'ದಂಥ ಸಂಸ್ಕೃತ ಮಹಾಕಾವ್ಯವು ತನ್ನ ವಿಶ್ವಕೋಶಾತ್ಮಕ ಪರಧಿಯಲ್ಲಿ ಬಹುತೇಕ ಜಾನಪದ ದ್ರವ್ಯಗಳನ್ನು ಒಳಗೊಂಡಿದ್ದು ಕತೆ, ನಂಬಿಕೆ, ಗಾದೆಮಾತುಗಳನ್ನು, ಜನಪದ ಮೂಲಗಳಿಂದ ಸ್ಪಷ್ಟವಾಗಿ ಎತ್ತಿಕೊಂಡಿದೆ. ಅಲ್ಲದೆ ಅವುಗಳನ್ನು ನವೀಕರಿಸುತ್ತಾ, ಸಂಸ್ಕೃತೀಕರಿಸುತ್ತಾ ಸಂಸ್ಕೃತ ಭಾಷೆಯ ಕಲಾನೈಪುಣ್ಯದ ನಿತ್ಯನೂತನತೆಯನ್ನು ಮೆರೆದಿದೆ. ಆದರೆ ಸುಸಂಬದ್ಧ ವಿಚಾರವೆಂದರೆ ಭಾರತದಂಥ ತೋಂಡಿ ಸಂಸ್ಕೃತಿಯಲ್ಲಿ ಸಂಸ್ಕೃತ ಮಹಾಭಾರತವೇ ಮೌಖಿಕವಾದ ಜಾನಪದ ಪರಂಪರೆಗಳೆಡೆ, ಹಿಂದಿರುಗಿ ಬಂದಿದೆಯಲ್ಲದೆ ರೂಪಾಂತರಕ್ಕೊಳಗಾದ ಮೂಲಧಾತುಗಳನ್ನು 'ಕಿರಿಯ' ಪರಂಪರೆಗಳಿಗೆ ಕೊಡುಗೆಯಾಗಿ ನೀಡಿದ್ದು ಮರುಪ್ರಸಾರ ಮತ್ತು ಮರುದರ್ಶನಗಳಿಗೆ ಎಡೆಗೊಟ್ಟಿದೆ"[೨೦] ಎನ್ನುತ್ತಾರೆ ಡಾ.ಎ.ಕೆ.ರಾಮಾನುಜಂ ರವರು.

"ಜನಪದ ಮಹಾಭಾರತ, ರಾಮಾಯಣದ ಕತೆಗಳು, ದೂರದ ಹಸ್ತಿನಾಪುರದಲ್ಲಿ ಅಯೋಧ್ಯೆಯ ಅರಮನೆಯಲ್ಲಿ ನಡೆದವುಗಳಲ್ಲ. ಅದು ಅವರಿಗೆ ತಮ್ಮದೇ ಬದುಕು ಬವಣೆಯ ಕತೆ. ತಮ್ಮದೇ ಜೀವನದ ಲೋಕಗ್ರಹಿಕೆ. ದ್ರೌಪದಿ ತಮ್ಮದೇ ಹಳ್ಳಿ, ಕೇರಿಯ ಹೆಣ್ಣುಮಗಳು. ಶಿಷ್ಟ ಮನಸ್ಸು ಕಾಲದ ದೂರವನ್ನು ಮೀರಿ ಅವು ಇಂದಿನ ಕತೆಗಳಾಗಿ ಪ್ರಸ್ತುತತೆಯನ್ನು ಪಡೆದುಕೊಳ್ಳುತ್ತವೆ."[೨೧]

ಮಹಾಭಾರತಕ್ಕೆ ಸಂಬಂಧಪಟ್ಟಂತೆ ನಾಡಿನ ಅನೇಕ ಕಡೆಗಳಲ್ಲಿ ಐತಿಹ್ಯ ಸ್ಥಳನಾಮಗಳು ಲಭ್ಯವಿವೆ. ಸುತ್ತಣ ಪ್ರಕೃತಿ ಜನಪದರಿಗೆ ಮಹಾಭಾರತದ ಕತೆಗಳನ್ನು ಹೇಳುತ್ತದೆ. ಪಾಂಡವರು ಆಲತಿಗಿರಿಯ ಗುಹೆಯಲ್ಲಿ ತಂಗಿದ್ದರು. ಬೆಳ್ಳೂರಿನ ಬಳಿಯ ಹೆಬ್ಬಂಡೆಯೊಂದರ ಮೇಲೆ ಭೀಮ ಪಾದ ಊರಿದ್ದ, ಪಾಂಡವಪುರದ ಸುತ್ತಲಿನಲ್ಲಿ ಮಕ್ಕಳನ್ನು ಕಟ್ಟಿಕೊಂಡು ಕುಂತಿ ಪಟ್ಟ ಬವಣೆ ಇತ್ಯಾದಿ ಕತೆಗಳು ಹೆಜ್ಜೆ ಹೆಜ್ಜೆಗೂ ಸಿಗುತ್ತವೆ. ಕುಂತಿಬೆಟ್ಟ, ಒನಕೆಬೆಟ್ಟ, ಕುಂತಿಕೊಳ, ಹಂಪಿಯ ಬಳಿಯಲ್ಲಿನ ಧರ್ಮರಗುಡ್ಡ ಮುಂತಾದ ವೈವಿಧ್ಯಮಯ ಐತಿಹ್ಯಗಳೂ ಇವೆ. 'ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯವಿಲ್ಲ', 'ಉತ್ತರನ ಪೌರುಷ ಒಲೆ ಮುಂದೆ' ಮುಂತಾದ ಗಾದೆಗಳೂ ವ್ಯಾಪಕವಾಗಿ ಪ್ರಚಲಿತವಾಗಿವೆ. ಇವುಗಳನ್ನು ಪರಿಶೀಲಿಸುವುದಾದರೆ "ಮಹಾಭಾರತದ ಕಥೆಗಳು ವಿದ್ವಾಂಸರಿಂದ ಜನಸಾಮಾನ್ಯರಿಗೆ ತಲುಪಿ ಜನಜನಿತವಾದ ಕಾಲದಿಂದ ಹಿಡಿದು ಕನ್ನಡ ದೇಶದಲ್ಲಿ

ಜಾನಪದ ಭಾರತ ರೂಪ ಪಡೆಯಲು ಪ್ರಾರಂಭವಾಯಿತೆಂದು ಹೇಳಬಹುದು. ರಾಮಾಯಣ, ಮಹಾಭಾರತಗಳ ಕಥಾವ್ಯಕ್ತಿಗಳೊಂದಿಗೆ ಅನೇಕ ಸ್ಥಳ ಕಥೆಗಳು ಸಮಾವೇಶಗೊಂಡು ಹೊಸಹೊಸ ಕಥಾವತಾರಗಳು ಸಂಭವಿಸಿದವು."[೨೨] ಜನಪದ ಮಹಾಭಾರತದಲ್ಲಿಯೂ ಪರ್ಯಾಯ ಪುರಾಣಗಳಿವೆ ಎಂಬುದು ದೃಢವಾಗುತ್ತದೆ. ಧರ್ಮರಾಜ ಪಗಡೆ ಆಟದಲ್ಲಿ ದ್ರೌಪದಿಯನ್ನು ಪಣವಿಟ್ಟು ಸೋತ ಬಳಿಕ, ದ್ರೌಪತಿ, ದುರ್ಯೋಧನನ ಜೊತೆ ಪಗಡೆ ಆಟ ಆಡಿ, ಧರ್ಮರಾಜ ಸೋತ ರಾಜ್ಯವನ್ನು ಪುನಃ ಮರಳಿ ಪಡೆಯುವ ಒಂದು ಕತೆ ಶಿಷ್ಟ ಪುರಾಣಕ್ಕೆ ಪರ್ಯಾಯ ಪುರಾಣ.

"ಪ್ರಾರಂಭದಲ್ಲಿ ಪುರಾಣಗಳ ಮೂಲಕವಾಗಿಯೂ ಅನಂತರ ಕಾವ್ಯ-ಕಥಾ ಕಾಲಕ್ಷೇಪಗಳ ಮುಖಾಂತರವಾಗಿಯೂ ಹರಡಿದ ಈ ಭಾರತ ಕಥೆಗಳು ಜಾನಪದ ನಾಟಕ/ಯಕ್ಷಗಾನ ಇತ್ಯಾದಿಗಳ ಮುಖಾಂತರವಾಗಿಯೂ ಜನಜೀವನದಲ್ಲಿ ಗಾಢವಾಗಿ ಬೇರೂರಿ ಹೊಸ ಹೊಸ ಕಥೆಗಳ ಬೆಳವಣಿಗೆಯನ್ನುಂಟು ಮಾಡಿದವು."[೨೩]

"ಜನಪದ ಮಹಾಭಾರತವು ಜನಪದ ಸಾಹಿತ್ಯದಲ್ಲಿಯೇ ಮನಮೋಹಕವಾದ ಮಹಾ ಶೃಂಗಾರ ಕಾವ್ಯ."[೨೪] ಜನಪದ ರಾಮಾಯಣಕ್ಕಿಂತಲೂ ಜನಪದ ಮಹಾಭಾರತ ಪ್ರಸಂಗಗಳಿಗೆ ಸಂಬಂಧಿಸಿದಂತೆ, ಅನೇಕ ಕಥನ ಗೀತೆಗಳು ಅತ್ಯಂತ ಸಮೃದ್ಧವಾಗಿದೆ. ಅದರಲ್ಲೂ "ಪುರಾಣ ಕಥೆಗಳನ್ನು ಪ್ರೌಢ ಕವಿಗಳು ಬಣ್ಣಿಸುವ ರೀತಿಗೂ, ಜನಪದ ಕವಿಗಳು ಬಣ್ಣಿಸುವ ರೀತಿಗೂ ಅಂತರವಿದೆ. ಜನಪದ ಕವಿಗಳ ಪೌರಾಣಿಕ ಪಾತ್ರಗಳು ಜಾನಪದರ ಬದುಕಿನಿಂದ ದೂರ ಸಿಡಿದು ನಿಲ್ಲುವುದಿಲ್ಲ."[೨೫]

ಕೊಂತಿ ಪೂಜೆಯ ಪದಗಳು ಕನ್ನಡ ಜನಪದ ಗೀತೆಗಳಲ್ಲಿ ವಿಶಿಷ್ಟಸ್ಥಾನ ಪಡೆದುಕೊಂಡಿದೆ. "ದಕ್ಷಿಣ ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಕುಂತಿಪೂಜೆಯೇ ಮಹಾಭಾರತದ ಕಥೆ ದಟ್ಟವಾಗಿ ಬೆಳೆಯಲು ಕಾರಣವಾಯಿತೆಂದು ಹೇಳಬಹುದೆನ್ನುತ್ತಾರೆ"[೨೬] ಡಾ.ಪಿ.ಕೆ.ರಾಜಶೇಖರವರು. ಬಹುಶಃ ಮಹಾಭಾರತ ಕಥೆಗಿಂತ ಹಿಂದೆಯೇ ಕೊಂತಿಯ ಕಥೆ ಜನಪದರಲ್ಲಿ ಪ್ರಚಾರದಲ್ಲಿದ್ದಿರಬೇಕು.

"ಕೊಂತಿ ಪೂಜೆಯು ಮಹಾಭಾರತದ ಕುಂತಿದೇವಿಗೆ ಸಂಬಂಧಪಟ್ಟ ಒಂದು ಆಚರಣೆ. ಕುಂತಿಯ ಮಕ್ಕಳಾದ ಪಾಂಡವರು, ಬೇಸಾಯದ ಮಾಲ ಪುರುಷರು ಎಂದು ಹೇಳಲಾಗಿದೆ. ರೈತರು ಈ ನಂಬಿಕೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಕಾಡಿನಲ್ಲಿ ವನವಾಸ ಮಾಡಿದ ಪಾಂಡವರು ರೈತರ ಬದುಕನ್ನೇ ಬದುಕಿದವರು."[೨೭] ಕೊಂತ್ಯಮ್ಮನ ಪೂಜೆ ಕಾರ್ತೀಕ ಮಾಸದ ಶುಕ್ಲಪಕ್ಷದಲ್ಲಿ ನಡೆಯುತ್ತದೆ. ಈ ಪೂಜೆ ಪ್ರಧಾನವಾಗಿ ಮಂಡ್ಯ ಮತ್ತು ಮೈಸೂರು ಜಿಲ್ಲೆಗಳಲ್ಲಿಯೂ ಶಿವಮೊಗ್ಗ, ಬೆಂಗಳೂರು, ತುಮಕೂರು ಜಿಲ್ಲೆಗಳಲ್ಲಿಯೂ ಆಚರಿಸುತ್ತಾರೆ. ಕೊಂತ್ಯಮ್ಮನ ಪದಗಳನ್ನು ಹಿರಿಯ ಹೆಂಗಸರು ಹೇಳುತ್ತಾರೆ. ಕುಂತಿಯ ಬಾಲ್ಯ, ಮೈನೆರೆದದ್ದು, ಮದುವೆ, ಅವಳಿಗೆ ಬಡತನ ಬಂದದ್ದು, ಭಿಕ್ಷೆ ಬೇಡಿದ್ದು ಮೊದಲಾದ ಘಟನೆಗಳನ್ನು ವರ್ಣಿಸುವ ಪದಗಳಿವೆ. "ಧರ್ಮರು ಮೆಟ್ಟಿದ ಭೂಮಿ ಬೆಳೆಯಲಿ ಎಂದು ಕೊಂತ್ಯಮ್ಮ ಭೂಲೋಕದ ಜನರಿಗೆ ವರ ಕೊಟ್ಟಿರುವಳೆಂದು ಗ್ರಾಮೀಣರ ನಂಬುಗೆ."[೨೮] "ಕುಂತಿ ಗುಡಿಯಲ್ಲಿ ಪ್ರತಿನಿತ್ಯ ಕುಂತಿಗೆ ಸಂಬಂಧಿಸಿದ ಬಿಡಿ ಹಾಡುಗಳನ್ನು ಹೇಳುವುದಲ್ಲದೆ, ಅರ್ಜುನ ಜೋಗಿಯ ಹಾಡನ್ನೂ ಹಾಡಿಸಲಾಗುತ್ತದೆ."[೨೯]

''ಕೊಂತಿಪೂಜೆ'ಯನ್ನು ಸವಿಸ್ತಾರವಾಗಿ ಅಧ್ಯಯನ ಮಾಡಿ ಅದಕ್ಕೆ ಸಂಬಂಧಿಸಿದ ಕಥನ ಗೀತೆಗಳನ್ನು ಸಂಗ್ರಹಿಸಿ ಪ್ರಕಟಿಸಿರುವ ಕ್ಯಾತನಹಳ್ಳಿ ರಾಮಣ್ಣ, ಡಿ.ಲಿಂಗಯ್ಯ[೮೦]ರವರ ಕೃತಿಗಳು ಹಾಗೂ ಡಾ.ಜೀ.ಶಂ. ಪರಮಶಿವಯ್ಯರವರ 'ಜನಪದ ಖಂಡಕಾವ್ಯ'[೮೧] ಎಂಬ ಸಂಕಲನದಲ್ಲಿ 'ಕೊಂತ್ಯಮ್ಮ' ಎಂಬ ಶೀರ್ಷಿಕೆ ಯಲ್ಲಿರುವ ಸುಂದರ ಭಾವಗೀತೆ ಮತ್ತು ಡಾ.ಸೋಮಣ್ಣರವರ 'ಕೊಂತಿ ಪೂಜೆ'[೮೨] ಕಿರು ಹೊತ್ತಿಗೆಗಳು ವಿದ್ವತ್ಪೂರ್ಣ ಅಧ್ಯಾಯಗಳಾಗಿವೆ. ಕುಂತಿಪೂಜೆ ಸಂಪ್ರದಾಯದ ಬಗ್ಗೆ ಉಪಯುಕ್ತ ಕಥಾಭಾಗಗಳನ್ನು ಈ ಸಂಕಲನಗಳು ಒಳಗೊಂಡಿವೆ.

ಡಾ.ಬಿ.ಎಸ್.ಗದ್ದಗಿಮಠರವರ 'ಕನ್ನಡ ಜಾನಪದ ಗೀತೆಗಳು'[೮೩] ಮಹಾಪ್ರಬಂಧದ ಅನುಬಂಧದಲ್ಲಿ ೭೫೫ ತ್ರಿಪದಿಗಳಿರುವ 'ಜೋಗಿ ಹಾಡು' ಪ್ರಕಟಿಸಲಾಗಿದೆ. ಇದು ಉತ್ತರದ ಕಡೆಯ ಪಾಠವಾಗಿದ್ದು, ಛಂದೋಬಂಧದಲ್ಲಿಯೂ ದಕ್ಷಿಣದ ಪಾಠಕ್ಕಿಂತ ಭಿನ್ನವಾಗಿದೆ.

ಕರಾಕೃರವರ ''ಜನಪದ ಗೀತೆಗಳಲ್ಲಿ ಮಹಾಭಾರತ''[೮೪] ಸಂಕಲನದಲ್ಲಿ ಅಭಿಮನ್ಯುವಿನ ಜನನಕ್ಕೆ ಸಂಬಂಧಿಸಿದಂತೆ ಹಾಗೂ ಧರ್ಮರಾಯನ ದ್ಯೂತಕ್ಕೆ ಸಂಬಂಧಿಸಿದಂತೆ ಎರಡು ಹಾಡುಗಳಿವೆ. ಇದೇ ಸಂಗ್ರಹ ಕಾರರ 'ಜಾನಪದ ಕಥನಗೀತೆಗಳು' ಸಂಕಲನದಲ್ಲಿ 'ಚೆನ್ನಿಗ ಜೋಗಯ್ಯ' ಎಂಬ ಜೋಗಿಯ ಹಾಡಿನ ಮತ್ತೊಂದು ಪಾಠ ಸಂಕಲಿತವಾಗಿದೆ. ಪಾಂಡವರ ಅಜ್ಞಾತ ವಾಸಕ್ಕೆ ಸಂಬಂಧ ಪಟ್ಟಂತೆ ಕೆಲವು ಗೀತೆಗಳು 'ಧರ್ಮರಪದ' ಎಂಬ ಶೀರ್ಷಿಕೆಯಲ್ಲಿ ಪ್ರಕಟಗೊಂಡಿವೆ. 'ಮಹಾಭಾರತಕ್ಕೆ ಸಂಬಂಧಿಸಿದಂತೆ ಪ್ರಕಟವಾಗಿರುವ ಸಾಹಿತ್ಯದ ಪರಿಶೀಲನೆಯಿಂದ, ಮಹಾಭಾರತದ ಸಮಗ್ರ ಕಥೆ ಅಖಂಡ ಕಾವ್ಯ ರೂಪದಲ್ಲಿ ಈವರೆಗೆ ಎಲ್ಲಿಯೂ ಪ್ರಕಟವಾಗಿಲ್ಲ. ಜೋಗಿಗಳು ಸಮಗ್ರ ಭಾರತದ ಅನೇಕ ವರ್ಗಗಳನ್ನು ಬಿಡಿಬಿಡಿಯಾಗಿ ಹಾಡುವರಾದರೂ ಅವರ ಸಾಹಿತ್ಯ ಇನ್ನೂ ಸಂಗ್ರಹವಾಗಬೇಕಾಗಿದೆ. ದಕ್ಷಿಣ ಕರ್ನಾಟಕದ ಜೋಗಿಗಳಲ್ಲಿ ಮಾತ್ರ 'ಅರ್ಜುನ ಜೋಗಿ ಹಾಡು' ಹೆಚ್ಚು ಜನಪ್ರಿಯವಾಗಿದೆ. ಸಮಗ್ರ ಭಾರತವನ್ನು ಹಾಡುವ ಕಲಾವಿದರು ವಿರಳವಾಗುತ್ತಿದ್ದಾರೆ

''ಬುಡಕಟ್ಟು ಗೀತೆಗಳು''[೮೫] ಸಂಕಲನದಲ್ಲಿನ 'ಕಥನಗೀತೆಗಳು' ವಿಭಾಗದಲ್ಲಿ 'ಕುಂತಿಕರ್ಣನನ್ನು ಪಡೆದ ಕಥೆ'ಯಲ್ಲಿ ವಿವಾಹ ಪೂರ್ವದಲ್ಲೇ ಕುಂತಿ ಕರ್ಣನನ್ನು ಪಡೆದು ಗಂಗೆಗೆ ಹಾಕಿ' 'ಗಂಗಮ್ಮ ತಾಯಿ ಸಲಹಿಕೊ' ಎನ್ನುವ ಕಥನಗೀತೆ. ಇಲ್ಲಿ ಕುಂತಿ ತನ್ನ ಅಂತರಂಗದಂತೆ ನಡೆಯುವ ಸ್ವತಂತ್ರ ಮನೋವೃತ್ತಿಯ ಸ್ತ್ರೀಯ ಪ್ರತಿನಿಧಿಯಾಗಿದ್ದಾಳೆ. ಗಂಡಸರ ಲಕ್ಷ್ಮಣರೇಖೆಯನ್ನು ಅಥವಾ ಸಾಂಪ್ರದಾಯಿಕ ಕಟ್ಟುಕಟ್ಟಳೆಗಳನ್ನು ದಾಟಲು ಸ್ತ್ರೀಯರು ಶಿಷ್ಟ ಕಾವ್ಯಗಳಲ್ಲಿ ಅಲ್ಲಲ್ಲಿ ಪ್ರಯತ್ನ ನಡೆಸಿದರೆ, ಈ ಸಂಗತಿ ಜಾನಪದ ಲೋಕದಲ್ಲಿ ಹೇರಳವಾಗಿ ಪ್ರಸ್ತಾಪವಾಗಿರುವುದು ಕಾಣುತ್ತದೆ.

ಎ.ಹಿರಿಯಣ್ಣನವರ ''ತೀರ್ಥಹಳ್ಳಿ ಸುತ್ತಲಿನ ಲಾವಣಿಗಳು''[೮೬] ಸಂಕಲನದಲ್ಲಿ ಶ್ರೀಕಂಠ ಕೂಡಿಗೆಯವರ 'ಅಂಟಿಕೆ ಪಂಟಿಕೆ'[೮೭] ಪದಗಳು ಸಂಕಲನದಲ್ಲಿ ಮತ್ತು ಎಂ.ಬಿ.ನಳಿನಿ ಅವರ 'ಕಾಡುಮಲ್ಲಿಗೆ'[೮೮] ಸಂಕಲನದಲ್ಲಿ, ಅರ್ಜುನಸ್ವಾಮಿ ಕಥೆಯನ್ನು ಕುರಿತ ಕಾವ್ಯವಿದ್ದು ಮೂರೂ ಒಂದೇ ಕಾವ್ಯದ ಭಿನ್ನಪಾಠಗಳಾಗಿವೆ.

ಎಸ್.ವಿ.ಕೃಷ್ಣಯ್ಯನವರ ''ಬಾಚಿಗೊಂಡನ ಹಳ್ಳಿ ಮತ್ತು ಏಣಗಿ ಬಸಾಪುರದ ಜನಪದ ಗೀತೆಗಳು''[೮೯] ಸಂಕಲನದ ಪೌರಾಣಿಕ ಗೀತೆಗಳು ವಿಭಾಗದಲ್ಲಿ, 'ಅಭಿಮನ್ಯು ಹುಟ್ಟು', 'ಅಭಿಮನ್ಯು ಹೆಣ್ಣನ್ನು ವರಿಸಿದ'

ಮತ್ತು 'ಲೆತ್ತದಾಟ ದ್ರೌಪದಿಯ-ಗೆಲವು' ಎಂಬ ಮೂರು ಜನಪದ ಮಹಾಭಾರತದ ಹಾಡುಗಳಲ್ಲಿ ಶಿಷ್ಟರೂಪದ ಮಹಾಭಾರತ ಕಾವ್ಯಗಳಿಗಿಂತ ಭಿನ್ನ ಆಶಯ, ಪ್ರಕಟಿಸುವ ವೈಶಿಷ್ಟವನ್ನು ಗಮನಿಸಬಹುದಾಗಿದೆ. ಅಭಿಮನ್ಯು ಹುಟ್ಟಿನ ಹಾಡಿನಲ್ಲಿ ಅಭಿಮನ್ಯುವಿನ ತಾಯಿ ದೇವಕಿ ಗರ್ಭಿಣಿಯಾದಾಗಿನ ಬಯಕೆಯ ಚಿತ್ರಣ ಈ ಹಾಡಿನಲ್ಲಿದೆ. ಹೆಣ್ಣಿನ ಬಯಕೆಯ ಆಶಯವನ್ನು ಅಂತರ್ಗತವಾಗಿಸಿದರೆ, ಅಭಿಮನ್ಯು ಬಳೆಗಾರನ ವೇಷದಲ್ಲಿ ವಧುವನ್ನು ಕಾಣುವ ಹಾಗೂ ನಾಟಕೀಯ ರೂಪದಲ್ಲಿ ಮದುವೆ ಕಾರ್ಯ ನೆರವೇರಿಸುವುದನ್ನು ಗಮನಿಸಬಹುದಾಗಿದೆ.

ಲೆತ್ತದಾಟಕ್ಕೆ ಕೌರವರು, ಪಾಂಡವರನ್ನು ಆಹ್ವಾನಿಸುತ್ತಾರೆ. ಸಕಲೈಶ್ವರ್ಯ ಹಾಗೂ ತಮ್ಮಂದಿರನ್ನು ಪಗಡೆ ಆಟದಲ್ಲಿ ಸೋತ ಧರ್ಮರಾಯ, ಅಂತಿಮವಾಗಿ ದ್ರೌಪದಿಯನ್ನು ಒತ್ತೆಯಿಟ್ಟು ಸೋಲುವನು. ತಾಯಿ ಕುಂತಿಗೆ ಈ ವಿಚಾರವನ್ನು ಮಕ್ಕಳೇ ತಿಳಿಸುವರು. ದ್ರೌಪದಿಯನ್ನು ಒತ್ತೆಯಾಳಾಗಿ ಇಡುವ ಬದಲು ನನ್ನನ್ನು ಒತ್ತೆ ಇಟ್ಟಿದ್ದರೆ ಒಳ್ಳೆಯದಾಗಿತ್ತು ಎನ್ನುತ್ತಾಳೆ ಕುಂತಿ ಆಗ ಪಾಂಡವರು.

'ಮಡದೀಯ ಸೋತರೇ ತರಿವೆನು ರಾಜ್ಯವ ಮ್ಯಾಲೆ
ತಾಯವ್ವ ನಮಗೆಲ್ಲಿ ಸಿಕ್ಕೀಯೇ'

(ಪುಟ ೧೦೮)

ಎನ್ನುವರು.

ಕೌರವ ದ್ರೌಪದಿಯನ್ನು ತನ್ನ ತೊಡೆ ಏರಿ ಕುಳಿತುಕೊಳ್ಳುವಂತೆ ಆಜ್ಞಾಪಿಸುವನು. ದ್ರೌಪದಿ ಅವನ ದರ್ಪವನ್ನು ಹಿಯಾಳಿಸುತ್ತಾ ಲೆತ್ತದಾಟಕ್ಕೆ ಆಹ್ವಾನಿಸಿ, ಕಳೆದುಕೊಂಡಿದ್ದ ಎಲ್ಲ ವಸ್ತುಗಳನ್ನು ಗೆದ್ದು, ತನ್ನ ಮನೆಗೆ ಹಿಂದಿರುಗಿದಾಗ, ಕುಂತಿ ಕೇಳುವಳು,

'ಎದ್ದು ಹೋದ ಹೆಣ್ಣು ಎದ್ದೂ ಬರೂವಾರೇನೇ
ಬುದ್ದಿ ಇಲ್ಲವೇನೆ ದ್ರೌಪದಿಗೆ'

ಎಂದಾಗ

'ಎದ್ದುನಾ ಬಂದಿಲ್ಲ ಗೆದ್ದು ನಾ ಬಂದೀನಿ'

(ಪುಟ ೧೧೧)

ಎನ್ನುತ್ತಾಳೆ ದ್ರೌಪದಿ.

ಸ್ವಾಭಿಮಾನದ ಹೆಣ್ಣಾಗಿ ದ್ರೌಪದಿಯನ್ನು ಚಿತ್ರಿಸಲಾಗಿದೆ. "ಜನಪದರ ಮನಸ್ಸಿನಲ್ಲಿ ಪಾಂಡವರ ಶಕ್ತಿಗಿಂತ ದ್ರೌಪದಿಯ ಶಕ್ತಿ ಹಿರಿದು. ಜಾನಪದರು ಅನಕ್ಷರಸ್ಥರಾಗಿದ್ದು, ಕಲ್ಪನೆಯಿಂದಲೇ ಕತೆಯನ್ನು ತುಂಬಾ ದೂರಕ್ಕೆ ಎಳೆಯ ಬಲ್ಲರು"[೬೦] ಎನ್ನುವುದನ್ನು ಈ ಗೀತೆ ಬಿಂಬಿಸುತ್ತದೆ.

ಉತ್ತರ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳ ಮತ್ತು ಉಡುಪಿ ಜಿಲ್ಲೆಗಳಲ್ಲಿ ಜಾನಪದದಲ್ಲಿನ ಹಾಡುಗಳಿಗೆ ಅಗ್ರಸ್ಥಾನ ಮೀಸಲಾಗಿದೆ. "ರಾಮಾಯಣ ಮತ್ತು ಮಹಾಭಾರತಗಳೆರಡೂ ಕಾಡಿನ ಕಥೆಗಳು. ಆರಂಭ

ವಾಗುವುದು ಅರಮನೆಯಲ್ಲಾದರೂ ಮುಂದುವರಿಯುವುದು ಅರಣ್ಯಗಳಲ್ಲಿ. ಎರಡೂ ಕಾವ್ಯಗಳ ಬಹುಭಾಗ ಕಾಡಿನ ಕಥೆಯೇ ಆಗಿದೆ. ಬುಡಕಟ್ಟುಗಳು ಕೂಡ ಕಾಡಿನ ಜನರೇ"[೯೧] ಇವರ ಕಲ್ಪನೆಯಲ್ಲಿ ಮಹಾಭಾರತದ ಬಗ್ಗೆ ಮಾಡುವ ಆಶಯವನ್ನು ಪರಿಶೀಲಿಸಲಿಚ್ಛಿಸುತ್ತೇನೆ.

"ಜನಪದ ಸಾಹಿತ್ಯವು ಕನ್ನಡ ಸಾಹಿತ್ಯದ ವಿಶಿಷ್ಟ ಆಸ್ತಿ. ಹೆಸರಿಲ್ಲದ ಹೆಸರೊಲ್ಲದ ಜನತೆ ರಚಿಸಿದ ಈ ಸಾಹಿತ್ಯದಲ್ಲಿ ಜನಜೀವನದ ಪ್ರತಿಯೊಂದು ವಿಷಯವೂ ವಸ್ತುವಾಗಿದೆ. ಈ ಜನತೆ, ಇಡೀ ದೇಶಕ್ಕೆ ಸಾಂಸ್ಕೃತಿಕ ಹಿನ್ನೆಲೆಯಾಗಿ ನಿಂತ ಮಹಾಭಾರತದಿಂದ ಸ್ಫೂರ್ತಿ ಪಡೆದದ್ದರಲ್ಲಿ ಆಶ್ಚರ್ಯವಿಲ್ಲ. ಆದರೆ ಇವರ ವಿಶೇಷವೆಂದರೆ ವಸ್ತುವಿನಲ್ಲಿ ಮೂಲ ದ್ರವ್ಯವಾಗುಳ್ಳ ಜನಪದರಿಗೆ ವಸ್ತುವಿನ ಗಾಂಭೀರ್ಯ ಯಾವತ್ತಿಗೂ ಮುಖ್ಯವಾಗಿಲ್ಲ. ತಮ್ಮ ನಂಬಿಕೆಗೆ, ಗ್ರಹಿಕೆಗೆ ವಸ್ತು ಸ್ಪಂದಿಸುತ್ತದೆಯೇ ಎಂಬುದೇ ಅವರಿಗೆ ಮುಖ್ಯ. ಹೀಗಾಗಿ ಮಹಾಕವಿಗಳ ಕಾವ್ಯಕ್ಕೆ ಜಾನಪದರ ಗೀತೆಗಳನ್ನು ಹೋಲಿಸುವುದೆಂದರೆ ಕಗ್ಗಲ್ಲ ಬಂಡೆಗೂ, ಕುಸುರಿ ಗೆಲಸದ ಶಿಲ್ಪಕ್ಕೂ ಹೋಲಿಸಿದಂತೆ."[೯೨]

ಉತ್ತರ ಕನ್ನಡ ಜಾನಪದ ಎಂದ ತಕ್ಷಣ ಮನಸ್ಸಿಗೆ ಬರುವುದು ಡಾ.ಎಲ್.ಆರ್.ಹೆಗಡೆ ಮತ್ತು ಡಾ. ಎನ್.ಆರ್.ನಾಯಕ್. ಎಲ್.ಆರ್.ಹೆಗಡೆಯವರ ಜನಪದ ಸಂಗ್ರಹ ರಾಶಿಯಲ್ಲಿರುವ ಮಹಾಭಾರತಕ್ಕೆ ಸಂಬಂಧಿಸಿದ ಕಥನ ಸಂಗ್ರಹಗಳನ್ನು ಅವಲೋಕಿಸಿದರೆ "ಬೆಳಿಯಮ್ಮನ ಹಾಡುಗಳು"[೯೩] ಸಂಕಲನದಲ್ಲಿ ಅಭಿಮನ್ಯು ಕನಕಾಂಗಿಯನ್ನು ವಿವಾಹವಾಗುವ ವಿಷಯ ಇದೊಂದು ಸುಂದರ ಕಾವ್ಯ.

"ತಿಮ್ಮಕ್ಕನ ಪದಗಳು"[೯೪] ಸಂಗ್ರಹದಲ್ಲಿನ ಉತ್ತರ ದೇವಿಯ ಹಾಡು ದುಃಖಾಂತವಾದದ್ದು. ಉತ್ತರ ದೇವಿಯ ಗಂಡನ ಹೆಸರು ಅರ್ಜುನ ಎಂದೇ ಪಾಠದಲ್ಲಿರುವುದರಿಂದ, ದ್ರೌಪದಿ ಎಂಬ ಹೆಸರಿನ ಅವನ ಹೆಂಡತಿ, ಅತ್ತೆಗೆ ಉತ್ತರ ಕೊಟ್ಟದ್ದರಿಂದ ಉತ್ತರ ದೇವಿಯೆಂಬ ಹೆಸರನ್ನು ಪಡೆದಿರಬೇಕೆನ್ನುತ್ತಾರೆ. ಡಾ.ಎಲ್.ಆರ್.ಹೆಗಡೆಯವರ ನಿರೂಪಣೆ ಕಲಾತ್ಮಕವಾಗಿದೆ. ಶಿಷ್ಟ ಮಹಾಭಾರತ ಕಥೆಯ ಜೀವಾಳವನ್ನು ಹಿಡಿದುಕೊಂಡು ಹಾಡಿರುವ ಸಾವಿತ್ರಿಯ ಕಥೆ ಕತೆಗಾರ್ತಿಯ ಕೈಯಲ್ಲಿ ಪುರಾಣ ಕಥೆ ತಳೆಯುವ ರೂಪಿಗೆ ಒಂದು ಒಳ್ಳೆಯ ಉದಾಹರಣೆ.

ಡಾ ಎಲ್.ಆರ್.ಹೆಗಡೆಯವರ "ಪರಮೇಶ್ವರಿಯ ಪದಗಳು"[೯೫] ಸಂಗ್ರಹದಲ್ಲಿ "ದ್ರೌಪದಿಯ ಜೂಜು" ಹಾಡಿನ ಈ ಕಥೆಯಲ್ಲಿ, ದ್ರೌಪದಿ ಸ್ವಪ್ನದಲ್ಲಿ ಬಸದಿಯೊಳಗೆ ಐದು ಕಲಶಗಳನ್ನು ಕಾಣುತ್ತಾಳೆ. ಸ್ವಪ್ನದಲ್ಲಿ ಬಸದಿ ಕಾಣುವುದು ಅಪಶಕುನ. ಐದು ಕಲಶಗಳು ಐದು ಜನ ಪಾಂಡವರು. ಇದು ಜನಪದರ ಭಾವನೆ ಎನ್ನಬಹುದು. ಹಂಡೆಮ್ಮೆಯನ್ನು ದಾನ ಕೊಡಬೇಕೆಂದು ಕುಂತಿಯಿಂದ ಪರಿಹಾರ ಸೂಚನೆ. ಕೆಟ್ಟ ಸ್ವಪ್ನದ ಪರಿಹಾರಕ್ಕೆ 'ಹಾಲಿನ ಪಾಯಸ' ಮಾಡಿ ಮೂಡಲಿನ ಜಲಧಿಗೆ ದಾನ ಕೊಡಬೇಕೆನ್ನುವನು ಅರ್ಜುನ.

ಕೌರವ ದ್ರೌಪದಿಯ ಮೇಲಿನ ಮೋಹದಿಂದಾಗಿ ಕರ್ಣನನ್ನು ಕಳಿಸಿ ಪಾಂಡವರನ್ನು ಪಗಡೆ ಆಡಲು ಕರೆಸಿ ಕೊಳ್ಳುತ್ತಾನೆ. ಪಣವಾಗಿ ಕೌರವನು,

"ನಾ ಸೋತರೆ ನ್ಯನ್ನ್ಯ ಅರಮ್ಯನಿ ಸ್ಯೆವಾಗಿ
ನನ್ ಹಿಂಡುತಿ ಸಯ್ವ್ಯಾಗೀ ನಿಮಗೇನೇ ತ್ಯಾನ್ಯು
ನೀ ಸೋತರೆ ನ್ಯಿಮ್ಮ್ಯ ಲರಮ್ಯನೆ ಸಯ್ವಾಗೀ
ನಿಮ್ ಹಿಂಡುತಿ ಸಯ್ವಾಗೀ ತನಗ್ಯೆಂ"ದ

(ಪರಮೇಶ್ವರಿ ಪದಗಳು, ಪುಟ ೨೦೯)

ಪಗಡೆ ಆಟದಲ್ಲಿ ಗೆದ್ದ ಕೌರವ, ಕರ್ಣನ ಹತ್ತಿರ, ದ್ರೌಪದಿಗೆ ತನಗೆ ಹಾಸಿಗೆ ಹಾಸಬೇಕೆಂದು ಕರೆಕಳಿಸುತ್ತಾನೆ. ದ್ರೌಪದಿ ತಾನು ಮುಟ್ಟಾಗಿದ್ದೇನೆ. ನಾಳೆ ಸಂಜೆ ಬಂದು ಕೌರವನಿಗೆ ಹಾಸಿಗೆ ಹಾಸುವುದಾಗಿ ಹೇಳಿಕಳಿಸಿ, ಕೃಷ್ಣನ ಬಳಿಗೆ ಹೋಗಿ ತನ್ನ ಮೂಗುತಿಯ ಬಲವನ್ನು ಕಾಪಾಡು ಎಂದು ಬಂದ ಆಪತ್ತನ್ನು ಹೇಳುತ್ತಾಳೆ. ಕೃಷ್ಣ ಪಗಡೆ ಆಡುವಾಗ ನಾನು ನಿನ್ನ ತಲೆಯ ಮೇಲ್ಬದಿ ಕೂತು ನೀನು ಗೆಲ್ಲುವ ಹಾಗೆ ಮಾಡುತ್ತೇನೆ ಎಂದು ಹೇಳಿ ಕಳುಹಿಸುತ್ತಾನೆ. ದ್ರೌಪತಿ ಕೌರವನ ಮನೆಗೆ ಹೋಗಿ 'ನಿನಗೆ ಹಾಸಿಗೆ ಹಾಸಲು ಬಂದಿದ್ದೇನೆ. ಪಗಡೆ ಆಟ ಆಡೋಣ ನಾನು ಸೋತರೆ ನಿನ್ನ ಹಾಸಿಗೆಗೆ ಬರುವೆ. ನೀನು ಸೋತರೆ ನಿನ್ನ ಅರಮನೆ ಸಹಿತವಾಗಿ ನನಗೆ ಸೇರಲಿ' ಎನ್ನುತ್ತಾಳೆ.

ಕೃಷ್ಣ ಹೇಳಿದ ಹಾಗೆ, ಪಗಡೆ ಆಟವನ್ನು ಗೆದ್ದು, ಪತಿಗಳನ್ನು ಬಿಡಿಸಿ ಕೌರವನನ್ನು ಆಳನ್ನಾಗಿ ಮಾಡಿಕೊಂಡು, ಕೌರವನ ಹತ್ತಿರ, 'ನನ್ನ ಅರಮನೆಯ ಕೊಟ್ಟಿಗೆಯ ಸಗಣಿಯನ್ನು ತೆಗೆಯಲಿಕ್ಕೆ ಬಾ' ಎಂದು ಹೇಳುತ್ತಾಳೆ.

"ಶಿಷ್ಟ ಮಹಾಭಾರತ ಕಥೆಯಲ್ಲಿ ದ್ರೌಪದಿ ಕೃಷ್ಣನ ಬಳಿಗೆ ಹೋಗುವುದಿಲ್ಲ. ಮೂಗುತಿಯ ಬಲವೆಂದರೆ, ಮುತ್ತೈದೆ ತನದ ಲಕ್ಷಣ ಮಾತ್ರವಲ್ಲದೆ, ಪಾತಿವ್ರತ್ಯದ ಸಂಕೇತವನ್ನು ಸಂಕೇತಿಸುತ್ತದೆ. ದ್ರೌಪದಿ ಕೃಷ್ಣನ ಸಹಾಯವನ್ನು ತೆಗೆದು ಕೊಂಡದ್ದು ವಿಶೇಷ ಶ್ಲಾಘ್ಯವಾದ ರೀತಿಯಾಗಿದೆ"[೬] ಎನ್ನುತ್ತಾರೆ ಡಾ.ಎಲ್.ಆರ್. ಹೆಗಡೆಯವರು.

ಡಾ. ಎಲ್.ಆರ್. ಹೆಗಡೆಯವರ "ಜನಪದ ಭಾರತ ಕಥೆಗಳು"[೭] ಗ್ರಂಥ ಜನಪದ ಮಹಾಭಾರತದ ಗೀತೆಗಳ ಸಂಕ್ಷಿಪ್ತವಾದ ಇಪ್ಪತ್ತೇಳು ಗದ್ಯ ಕಥನಗಳನ್ನು ಒಳಗೊಂಡಿದೆ. ದ್ರೌಪದಿಯ ಜೂಜು ಹಾಗೂ ದ್ರೌಪದೀ ವಸ್ತ್ರಾಪಹರಣ ಕಥೆಗಳ ಕುರಿತ ಕಾವ್ಯಗಳ ಭಿನ್ನ ಪಾಠಗಳಿವೆ.

ಗುಂಡ್ಮಿ ಚಂದ್ರಶೇಖರ ಐತಾಳರವರ "ಕೈಲಿಯ ಕರೆದ ನೊರೆಹಾಲು"[೮] ಸಂಕಲನದಲ್ಲಿನ ಪೌರಾಣಿಕ ಕಥನಗೀತೆಗಳು ವಿಭಾಗದಲ್ಲಿ ಮಹಾಭಾರತಕ್ಕೆ ಸಂಬಂಧಿಸಿದ ನಾಲ್ಕು ಕಥನಗೀತೆಗಳಿವೆ. ಇಲ್ಲಿ ಬರುವ ಕಥೆಗಳು ಜನಪದರ ಮನಸ್ಸಿನಲ್ಲಿ ಭಿನ್ನರೂಪ ತಳೆದು, ಹೆಂಗಸರ ಮನಸ್ಸು, ಕುಂತಿ, ದ್ರೌಪದಿಯವರ ಕಷ್ಟ ಸುಖಗಳಿಗೆ ತಮ್ಮ ಜೀವನದ ಕಷ್ಟ, ಕಾರ್ಪಣ್ಯಗಳನ್ನು ಆರೋಪಿಸಿಕೊಳ್ಳುವುದನ್ನು ಕಾಣಬಹುದು. ಕುಂತಿ ಕರ್ಣನನ್ನು ಪಡೆದ ಕತೆಯಲ್ಲಿ ಕುಂತಿ ಋತುಸ್ನಾನ ಮಾಡಲು ಜಲಧಿ ಸ್ನಾನಕ್ಕೆ ಹೋಗುತ್ತಾಳೆ. ಮಗನನ್ನು ಪಡೆಯಲೆಂದು ಸೂರ್ಯನನ್ನು ಪ್ರಾರ್ಥಿಸಿ ಅವನೊಡನೆ ಕೂಡಿ ವೀಳ್ಯಾಮೆಲಿದು ಗರ್ಭಿಣಿ ಆಗಿ ಬರುತ್ತಾಳೆ. ತಾಯಿ ಮಗಳನ್ನು ನಿಂದಿಸುತ್ತಾಳೆ. ಸೂರ್ಯದೇವರ ಸಹಾಯದಿಂದ ಮಗನನ್ನು ಹಡೆದು 'ತಾಯೀ ಗಂಗಮ್ಮ ಸಲಹಿಕೊಳ್ಳು' ಎಂದು ಮಗುವನ್ನು ಬೀಸಿ ಸಮುದ್ರಕ್ಕೆ ಎಸೆಯುತ್ತಾಳೆ. ಬೋವಿಗಳು 'ಬರುವಾಗ ಹೂವಿನ ಭಾರ, ಹೋಗುವಾಗ

ದಂಡಿಭಾರ, ಇದೇನೇ ಕುಂತೀ ಹೊಸ ಪರಿ' ಎಂದು ವಿನೋದಿಸುವುದು, ಬಸಿರು ಬಂದಾಗ ಆಗುವ ಭಾರವನ್ನು ಧ್ವನಿಸುತ್ತದೆ. ಜನಪದ ಮಹಾಭಾರತದ ಸುಂದರ ಕಲ್ಪನಾ ಸನ್ನಿವೇಶ.

"ಒಂದು ಪಾಠದಂತೆ, ಸನ್ಯಾಸಿಯು ಕುಂತಿಗೆ ಐದು, ಗಾಂಧಾರಿಗೆ ನೂರು ಅಕ್ಕಿಕಾಳುಗಳನ್ನು ಕೊಟ್ಟ ಫಲವಾಗಿ ಐವರು ಪಾಂಡವರೂ, ನೂರು ಮಂದಿ ಕೌರವರೂ ಹುಟ್ಟಿದರೆಂಬ ಜಾನಪದ ಕವಿ ಕಲ್ಪನೆ ಸ್ವಾರಸ್ಯವಾಗಿದೆ. ಕುಂತಿಗೆ ಕೊಟ್ಟ ಅಕ್ಕಿಕಾಳುಗಳಲ್ಲಿ ಒಂದು ಕಾಳು 'ಕಡಿಯಕ್ಕಿ.' ಕುಂತಿಯು ಅದನ್ನು ತಿಂದು ಭೀಮನು ಹುಟ್ಟಿದ ಕಾರಣ ಅವನಿಗೆ ಎಷ್ಟು ತಿಂದರೂ ಹೊಟ್ಟೆ ತುಂಬದಂಥ ಹಸಿವು ಉಂಟಾಗಿ"[೯೯] 'ಹೊಟ್ಟೆಬಾಕ' ಎಂದು ಕರೆಯುವ ಪ್ರತೀತಿ ಬಂದಿರಬಹುದೇ?

'ದ್ರೌಪದೀ ದೇವಿಯ ಕತೆ' ಪಾತಿವ್ರತ್ಯದ ಪರೀಕ್ಷೆಯನ್ನು ನಿರೂಪಿಸುವ ಜನಪದ ಕಲ್ಪಿತ ಕತೆ. ಮೂಲ ಮಹಾಭಾರತದಲ್ಲಿ ಯಾವ ಆಧಾರವೂ ಇಲ್ಲ. ಅರ್ಜುನನು ಜೋಗಿ ವೇಷದಲ್ಲಿ ಬಂದು ದ್ರೌಪದಿಯ ಪಾತಿವ್ರತ್ಯವನ್ನು ಪರೀಕ್ಷೆ ಮಾಡ ಬಂದಾಗ, ಕೃಷ್ಣ ನಿಜ ಸಂಗತಿ ತಿಳಿಸಿ ದ್ರೌಪದಿಯನ್ನು ಕಷ್ಟದಿಂದ ಪಾರು ಮಾಡುತ್ತಾನೆ. 'ದ್ರೌಪದಿಯನ್ನು ಕಣ್ಣು ಕಟ್ಟಿ ಕಾಡಿಗೆ ಬಿಟ್ಟ ಕತೆ'ಯಲ್ಲಿ ಕನ್ಯೆಯರು ಮದುವೆ ಆಗುವ ಮೊದಲೇ ಏನಾದರೂ ಮೈನೆರೆದರೆ ಅಂಥವರನ್ನು ಕಣ್ಣು ಕಟ್ಟಿಕಾಡಿಗೆ ಬಿಟ್ಟು ಬರುತ್ತಿದ್ದರು. ಮದುವೆಯಾಗದ ಋತುಮತಿ ಮಗಳನ್ನು ಮನೆಯಲ್ಲಿ ಇಟ್ಟುಕೊಳ್ಳುವುದು ಹೆತ್ತವರಿಗೆ, ಅವರ ಕುಲಕ್ಕೆ ಅವಮಾನ, ಅಪಕೀರ್ತಿ ಎಂದು ಭಾವಿಸುತ್ತಿದ್ದರು. ಜನಪದರ ಧಾರ್ಮಿಕ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹುಟ್ಟಿಕೊಂಡ ಒಂದು ನಂಬಿಕೆ, ದ್ರೌಪದಿಗೂ ಇಂಥ ಪರಿಸ್ಥಿತಿ ಬಂದಾಗ, ಬೇಟೆಗೆ ಬಂದ ಪಾಂಡವರು ದ್ರೌಪದಿಯನ್ನು ಕಂಡು, ಊರಿಗೆ ಕರೆದು ಕೊಂಡು ಬಂದು ತಾಯಿ ಕುಂತಿಗೆ 'ಹೆಣ್ಣುತಂದೆವು' ಎನ್ನುತ್ತಾರೆ. ಕುಂತಿಗೆ ಹೆಣ್ಣು ಎನ್ನುವ ಪದ 'ಹಣ್ಣು' ಎಂದು ಕೇಳಿಸಿ, ಐವರೂ ಹಂಚಿಕೊಳ್ಳಿ ಎನ್ನುತ್ತಾಳೆ. ಹೀಗಾಗಿ ದ್ರೌಪದಿಗೆ ಐವರು ಗಂಡಂದಿರು. 'ಸೌಭದ್ರಿ ಹಾಡು' ಇದರಲ್ಲಿ ಬಸುರಾಗಿದ್ದ ಸುಭದ್ರೆಗೆ ಪ್ರಯಾಣದಲ್ಲಿ ಕೃಷ್ಣ ಕಥೆ ಹೇಳುತ್ತಿದ್ದ, ಅವಳಿಗೆ ನಿದ್ದೆ ಬಂದ ಮೇಲೂ ಹೊಂಗುಟ್ಟುತ್ತಿದ್ದವರಾರೆಂದು ತಿಳಿದು, ಕೃಷ್ಣ ಸುದರ್ಶನ ಚಕ್ರವನ್ನು ಪ್ರಯೋಗಿಸಿ ಸುಭದ್ರೆಯ ಹೊಟ್ಟೆಯಲ್ಲಿರುವ ಮಗುವಿನ ಆಯಸ್ಸನ್ನು ಅರ್ಧಗೊಳಿಸಿದನು ಅವನೇ ಅಭಿಮನ್ಯು.

ಪ್ರೊ. ಸೋಮಶೇಖರ ಇಮ್ರಾಪುರರವರು ಸಂಗ್ರಹಿಸಿರುವ "ಜನಪದ ಮಹಾಭಾರತ"[೧೦೦] ಕೃತಿ ಆದಿಪರ್ವ ಮತ್ತು ಸಭಾಪರ್ವಗಳ ಕುರಿತ ಕತೆ. ಕಥಾರಂಭ ಗ್ರಾಮದೇವತೆಯನ್ನು ನೆನೆಯುವುದರಿಂದ ಮೂಲ ಮಹಾಭಾರತಕ್ಕೆ ಸಮೀಪವಾಗಿರುವುದರಿಂದ ಇಲ್ಲಿನ ಕಥೆ ಹಾಗೂ ಭಾಷೆ ಎರಡೂ ಜನಪದದಿಂದ ದೂರ ಸರಿದಿದೆ.

ಡಾ. ಪಿ. ಕೆ. ರಾಜಶೇಖರ ಅವರ "ಚುಂಚನಗಿರಿ ಬೈರವೇಶ್ವರ"[೧೦೧] ಕಾವ್ಯ ಸಂಕಲನದಲ್ಲಿ ಮಹಾಭಾರತದಿಂದ ತೆಗೆದುಕೊಂಡಿರುವ ಒಂದು ಭಾಗವಿದ್ದು, ಒಕ್ಕಲಿಗರೆಂದು ಹೆಸರು ಬರುವ ಬಗೆಗೆ ವಿವರಣಾತ್ಮಕ ಕಥೆ ಇದೆ.

ಡಾ. ಹಿ. ಚಿ. ಬೋರಲಿಂಗಯ್ಯನವರ "ಹಾಲಕ್ಕಿ ಒಕ್ಕಲಿಗರ ಜ್ಞಾನ ಪರಂಪರೆ"[೧೦೨] ಗ್ರಂಥದಲ್ಲಿ, ಹಾಲಕ್ಕಿ ಒಕ್ಕಲಿಗರ ಮಹಾಭಾರತದ ಎರಡು ಕಥೆಗಳನ್ನು ಪ್ರಸ್ತಾಪಿಸಿದ್ದಾರೆ. ಅರ್ಜುನ ಸನ್ಯಾಸಿ (ಸುಭದ್ರೆ) ಕತೆಯಲ್ಲಿ

ಸುಭದ್ರೆ ಮತ್ತು ಅರ್ಜುನ ಮದುವೆಯ ಪ್ರಸಂಗವಿದ್ದರೆ, 'ಕುಸುಮಾಲಿ' ಕತೆಯಲ್ಲಿ, ದ್ರೌಪದಿಯು 'ಕುಸುಮಾಲಿ, ತಾಟಗಿತ್ತಿ, ಜೋಗಿ ಜಂಗಮರ ಒಲುಮೆಯವಳು' ಎನ್ನುವ ಮಾತಿನ ಸತ್ಯಾಸತ್ಯತೆಯನ್ನು ಅರಿಯುವ ವಿವರಗಳಿವೆ.

ಡಾ.ಎನ್.ಆರ್.ನಾಯಕರವರ "ಕಾರವಾರ ಜಿಲ್ಲೆಯ ಜನಪದ ಗೀತೆಗಳು"[೧೦೩] ಮಹಾಪ್ರಬಂಧ, ಜನಪದ ನಂಬಿಕೆ, ಸಂಪ್ರದಾಯಗಳ ವಿಷಯದಲ್ಲಿ ಮಹತ್ವಪೂರ್ಣವಾದ ಸಂಶೋಧನ ಮಹಾಪ್ರಬಂಧವಿದು. ಕಥನ ಕವನಗಳು ವಿಭಾಗದಲ್ಲಿನ ಪುರಾಣ ಕಥೆಗಳಲ್ಲಿರುವ ಮಹಾಭಾರತದ ಕಥೆಗಳಲ್ಲಿ ಸುಭದ್ರೆ, ಕುಸುಮಾಲಿ, ಲಕುಮಣ, ಅಭಿಮನ್ಯು, ಧರ್ಮರ ಹಾಡು, ಸಾವಿತ್ರಿ ಹಾಡುಗಳಿವೆ.

ಸುಭದ್ರೆಯ ಹಾಡಿನಲ್ಲಿ ಅರ್ಜುನ ಜೋಗಿಯಾಗಿ ಒಲುಮೆಯ ಹೆಂಡತಿಯ ಪಡೆದರೆ, ಕುಸುಮಾಲಿಯ ಹಾಡಿನಲ್ಲಿ ಜೋಗಿಯಾಗಿ, ಪ್ರೀತಿಯ ಹೆಂಡತಿಯನ್ನು ಕಳೆದುಕೊಳ್ಳುವನು. ಲಕುಮಣನ ಹಾಡಿನಲ್ಲಿ ಹೆಣ್ಣಿನ ಪರೀಕ್ಷೆಗಾಗಿ ಜೋಗಿಯ ವೇಷ ಬರದೆ ಕೇವಲ ಅತ್ತೆಮಾವಂದಿರ ಕಣ್ಣಿಗೆ ಮಣ್ಣೆರಚಲು ಬರುತ್ತದೆ. ಈ ಮೂರು ಕಥೆಗಳು ತಮ್ಮದೇ ಆದ ವೈವಿಧ್ಯ ದೃಶ್ಯಗಳಿಂದ ನಮ್ಮ ಹೃದಯವನ್ನು ಸೆಳೆಯುತ್ತವೆ. ಈ ಹಾಡುಗಳು ಡಾ.ಗದ್ದಗಿಮಠರ ಅರ್ಜುನ ಜೋಗಿಯ ಹಾಡನ್ನು ಹೋಲುತ್ತವೆ.

ಸುಭದ್ರೆ, ಧರ್ಮರು, ಅಭಿಮನ್ಯು, ಸಾವಿತ್ರಿ ಹಾಡುಗಳು ಜನಪದ ಖಂಡಕಾವ್ಯಗಳೆನ್ನಬಹುದು. ಅಭಿಮನ್ಯುವಿನ ಹಾಡಿನಲ್ಲಿ ಅವನ ಹೋರಾಟ, ಮರಣ, ಅವಸಾನ ಕಾಲದಲ್ಲಿ ಕರ್ಣನನ್ನು ಕುರಿತು ಹೇಳುವ ಮಾತು ಅವನ ಪೌರುಷಕ್ಕೆ ನಿದರ್ಶನವಾಗಿದೆ. ಹಾಡಿನ ವರ್ಣನೆ, ಸಂಭಾಷಣೆಗಳು ತುಂಬಾ ಆಕರ್ಷಕವಾಗಿದೆ. ಧರ್ಮರ ಹಾಡಿನಲ್ಲಿ ದ್ರೌಪದಿಯ ದುಃಸ್ವಪ್ನ, ಅದರ ಶಾಂತಿ, ಕುರುರಾಯನ ಕರೆಗೆ ಓಗೂಟ್ಟು, ಧರ್ಮರು ತಮ್ಮಂದಿರ ಜೊತೆ ಹೊರಟು, ಪಗಡೆ ಆಡಿ, ತಮ್ಮಂದಿರು ಸಹಿತವಾಗಿ ಎಲ್ಲರನ್ನೂ ಸೋಲಿಸುವುದು, ದ್ರೌಪದಿಯನ್ನು ಕರೆಯಲು ಕರ್ಣನು ಹೋಗುವ ಸನ್ನಿವೇಶಗಳು, ಕುರುರಾಯನು ದ್ರೌಪದಿಯನ್ನು ಒಂದು ರಾತ್ರಿ ಅವನ ಜೊತೆ ಕಳೆಯಲು ಕೇಳುವುದು. ಅದಕ್ಕೆ ದ್ರೌಪದಿಯ ಬಿರುನುಡಿಗಳು, ದ್ರೌಪದಿ ಕುರುರಾಯನ ಹತ್ತಿರ ಪಗಡೆ ಆಡುತ್ತಾಳೆ. ಆ ಸಂದರ್ಭದಲ್ಲಿ ಗಾಳಿ ಬೀಸಿ, ದ್ರೌಪದಿಯ ಎದೆ ಸೆರಗು ಸರಿಯಿತು. ಕುರುರಾಯ ಸೋಲುತ್ತಾನೆ. ಪಾಂಡವರು ವನವಾಸಕ್ಕೆ ಹೋಗುತ್ತಾರೆ. ಗಾಳಿಗೆ ದ್ರೌಪದಿಯ ಸೆರಗು ಜಾರಿದಾಗ ಅವಳ ಮೈ, ಮೊಲೆಗಳ ಸೌಷ್ಠವನ್ನು ನೋಡುವುದರಲ್ಲಿ ಮೈಮರೆತು ತನ್ನ ಕೀಳು ಅಭಿರುಚಿಯಿಂದಾಗಿ ಸೋಲಿಗೆ ಕಾರಣನಾಗುತ್ತಾನೆ.

ಸಾವಿತ್ರಿ ಕಥೆಯಲ್ಲಿ ಅನೇಕ ಜನಪ್ರಿಯ ಜನಪದ ರೂಢಿ, ನಂಬಿಕೆ, ಸಂಪ್ರದಾಯಗಳು ಹಾಸುಹೊಕ್ಕ ಒಂದು ಉತ್ತಮ ಖಂಡಕಾವ್ಯ.

ಡಾ.ಎನ್.ಆರ್.ನಾಯಕ್‌ರವರ "ಗಾವೊಕ್ಕಲು ಮಹಾಭಾರತ"[೧೦೪] ಸಂಗ್ರಹವೇ ಈವರೆಗೆ ಪ್ರಕಟವಾಗಿರುವ ಮಹಾಭಾರತ ಕಥಾಭಾಗಗಳಲ್ಲಿ ಅತ್ಯಂತ ದೀರ್ಘವಾದುದು. "ಕನ್ನಡ ಜನಪದ ಖಂಡಕಾವ್ಯ ಪರಂಪರೆಗೆ ಕಿರೀಟ ಪ್ರಾಯವಾದುದು."[೧೦೫] ೨೯೭ ಪುಟಗಳು ವ್ಯಾಪಿಸಿರುವ ಈ ಸಂಕಲನದಲ್ಲಿ, ಧರ್ಮರು,

ಗೀಜಗ, ಸುಭದ್ರೆ, ಲಕ್ಷ್ಮಣ, ಅರ್ಜುನ, ಕುಸುಮಾಲಿ, ನಾಲ್ವರು ಹೆಂಡಿರು, ಕನಕಾಂಗಿ ಕಲ್ಯಾಣ, ಅಭಿಮನ್ಯು ಮತ್ತು ಸಾವಿತ್ರಿ ಎಂಬ ಹತ್ತು ಹಾಡುಗಳಿವೆ. ಇವು ಉತ್ತರ ಕನ್ನಡ ಜಿಲ್ಲೆಯ ಗಾಮೊಕ್ಕರಲ್ಲಿ ಪ್ರಚಲಿತವಿರುವ ಮಹಾಭಾರತ ಕಥೆಯನ್ನು ಈ ಸಂಕಲನದಲ್ಲಿ ಸಂಗ್ರಹಿಸಲಾಗಿದೆ. ಈ ಕಥೆಗಳು ಅನೇಕ ಬಗೆಯಲ್ಲಿ ಮಹಾಭಾರತ ದಿಂದ ಭಿನ್ನವಾಗಿದ್ದು, ಪ್ರತಿ ಹಾಡಿನ ಆದಿಯಲ್ಲಿ ದೇವತಾಸ್ತುತಿ, ಅಂತ್ಯದಲ್ಲಿ ಕಾವ್ಯ ಫಲವಿದೆ. ಕೆಲವು ಸಂಗ್ರಹದಲ್ಲಿ ಇದನ್ನು ಬಿಡಲಾಗಿದೆ. ಹಾಡುಗಳು ಸತ್ವಯುತವಾಗಿದ್ದು ಸುಂದರವಾಗಿ ಕಾವ್ಯದುದ್ದಕ್ಕೂ ಉತ್ತರ ಕನ್ನಡ ಜಿಲ್ಲೆಯ ರೂಢಿ, ನಂಬಿಕೆ, ಸಂಪ್ರದಾಯಗಳ ಚಿತ್ರವತ್ತಾದ ವರ್ಣನೆಗಳು ಬರುತ್ತವೆ.

ಇಲ್ಲಿಯವರೆಗೆ, ಮಹಾಭಾರತ ಕಥೆಗೆ ಸಂಬಂಧಿಸಿದ ಹಲವಾರು ಸಂಗ್ರಹ ಗ್ರಂಥಗಳನ್ನು ತುಂಬ ಸಂಕ್ಷಿಪ್ತವಾಗಿ ಅವಲೋಕಿಸಲಾಗಿದ್ದು, ಈಗ,

ಡಾ.ಎನ್.ಆರ್.ನಾಯಕರವರ 'ಗಾಮೊಕ್ಕಲ ಮಹಾಭಾರತ'ದಲ್ಲಿನ ಸಂಗ್ರಹದ 'ಧರ್ಮರು' ಹಾಡಿನ ವೈವಿಧ್ಯ ಮತ್ತು ಲಕ್ಷಣಗಳನ್ನು ಸಂಕ್ಷಿಪ್ತವಾಗಿ ನೋಡುತ್ತಾ ಜನಪದ ಮಹಾಭಾರತದ ಚಾಲಕ ಶಕ್ತಿಯಾದ ದ್ರೌಪದಿಯ ಹೆಣ್ಣುತನದ ವಾಸ್ತವ ನಡವಳಿಕೆಯನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

ಉತ್ತರ ಕನ್ನಡ ಜಿಲ್ಲೆಯ ಒಕ್ಕಲು ಬುಡಕಟ್ಟಿನ ಒಂದು ಶಾಖೆಯಾದ ಗಾಮೊಕ್ಕಲು ಕುಮಟಾ ಮತ್ತು ಹೊನ್ನಾವರ ತಾಲೂಕಿನ ಹಲವು ಹಳ್ಳಿಗಳಲ್ಲಿ ನೆಲೆಸಿದ್ದಾರೆ. ಕರಾವಳಿಯ ಬೈಲು ಗ್ರಾಮಗಳಲ್ಲಿ ವಾಸಿಸುವ ಇವರು ಕುಂಬ್ರಿ ಬೇಸಾಯಗಾರರಲ್ಲ, ಬೈಲು ವ್ಯವಸಾಯಗಾರರು. ಒಕ್ಕಲು ಬುಡಕಟ್ಟಿನ ಎಲ್ಲ ಪಂಗಡಗಳಂತೆ ಇವರು ತಮ್ಮನ್ನು ತಿರುಪತಿ ತಿಮ್ಮಪ್ಪನ ಭಕ್ತರೆಂದು ಕರೆದುಕೊಂಡು, ತಿರುಪತಿ ವೆಂಕಟರಮಣನನ್ನೇ ತಮ್ಮ ಕುಲದೇವತೆಯನ್ನಾಗಿ ಸ್ವೀಕರಿಸಿದ್ದಾರೆ. ವ್ಯವಸ್ಥಿತ ಬದುಕನ್ನು ಸಾಗಿಸುವ ಗಾಮೊಕ್ಕಲವರ ಜನಪದ ಸಾಹಿತ್ಯ ಕ್ಷೇತ್ರ ಸಮೃದ್ಧವಾಗಿದೆ. ಗದ್ಯ ಹಾಗೂ ಪದ್ಯಗಳೆರಡರಲ್ಲಿಯೂ ವಿವಿಧ ಬಗೆಯ ಕಥಾ ಪ್ರಕಾರಗಳು ದೊರೆ ಯುತ್ತವೆ.

"ಗಾಮೊಕ್ಕಲು ಹೆಂಗಸರು ಹೇಳುವ ಮಹಾಭಾರತ ಖಂಡಕಾವ್ಯ ಪರಂಪರೆ ಕನ್ನಡ ನಾಡಿಗೇ ಮಾದರಿ ಯಾಗುವಂತಿದ್ದು, ಕನ್ನಡ ಜನಪದ ಕಾವ್ಯ ಪ್ರಪಂಚದಲ್ಲಿಯೇ ಅಪರೂಪವಾಗಿರುವ ಈ ಖಂಡಕಾವ್ಯ ಅಭಿಜಾತ ಮಹಾಭಾರತದಿಂದ ಭಿನ್ನವಾದ ಇನ್ನೊಂದು ಬಗೆಯ ಜನಪದ ಮಹಾಭಾರತ ಪರಂಪರೆಯಿದ್ದಿರಬೇಕೆ ನ್ನುತ್ತಾರೆ"[೧೦೬] ಡಾ.ಎನ್.ಆರ್.ನಾಯಕ್. ಗಾಮೊಕ್ಕಲ ಮಹಾಭಾರತದಲ್ಲಿನ 'ಧರ್ಮರು' ಹಾಡಿನ ಕಥೆಯ ಕೇಂದ್ರ ವ್ಯಕ್ತಿ ದ್ರೌಪದಿ ಕತೆ ಆರಂಭವಾಗುವುದು ಅವಳ ಕನಸಿನಿಂದ.

ಧರ್ಮರ ಜೊತೆಯಲ್ಲಿ ಮಲಗಿದ್ದ ರೋಪತಿ (ದ್ರೌಪದಿ) ಕೆಟ್ಟ ಕನಸೊಂದನ್ನು ಕಂಡು ಎಚ್ಚೆತ್ತಳು. ಅತ್ತೆ ಕುಂತಿಗೆ 'ಸತ್ಯಕುಲದ ಪಾಂಡವರು ತಮ್ಮ ಜೊತೆಯಲ್ಲಿ ಆಡುವಾಗ, ಧರ್ಮರ ತಲೆ ಸೋಲಲೆಂದು ಗುರ್‍ರಾಯ (ಕುರುರಾಯ) ಬಯಸಿ ಬರೆದ ಕನಸು ಕಂಡೆ' ಎಂದು ಹೇಳುತ್ತಾಳೆ. ದುಸ್ವಪ್ನದ ಶಾಂತಿಗಾಗಿ ಬ್ರಾಹ್ಮಣರಿಗೆ ದಾನಮಾಡಬೇಕೆಂಬ ಅತ್ತೆಯ ಆದೇಶದಂತೆ ದ್ರೌಪದಿ ಧರ್ಮರೊಡಗೂಡಿ ಬ್ರಾಹ್ಮಣರಿಗೆ ದಾನ, ಧರ್ಮಗಳನ್ನು ಮಾಡಿ, ಸ್ವಪ್ನ ದೋಷ ಪರಿಹಾರವಾಯಿತೆಂದು ಸಂತೋಷದಿಂದಿರುವಾಗ ಕುರುರಾಯನ ಓಲೆಕಾರರು

ಧರ್ಮರೆಡೆಗೆ ಬರುತ್ತಾರೆ. ಧರ್ಮರು ಓಲೆಕಾರರು ಕೊಟ್ಟ ಓಲೆಯನ್ನು ಸಹದೇವನ ಹತ್ತಿರ ಓದಲು ಕೊಡುತ್ತಾರೆ. ಸಹದೇವನು ಓಲಿಯನ್ನೋದಿ ಕಣ್ಣೀರಿಡುತ್ತಾನೆ. ಕುಂತಿ 'ಓಲೆ ಹದುಳವೆ?' ಎಂದು ಪ್ರಶ್ನಿಸುತ್ತಾಳೆ. ಆಗ ಸಹದೇವ 'ಸತ್ಯನಿಷ್ಟರಾದ ದರುಮರು ಹಾಗೂ ಕುಸುಮ ಕೋಮಲೆ ರೋಪತಿ ತಮ್ಮ ಜೊತೆಯಲ್ಲಿ ಪಗಡೆಯಾಡಿ ಸೋಲ್ವದ ಬಯಸಿ, ಕುರುರಾಯ ಪತ್ರ ಬರೆದಿದ್ದಾನೆ' ಎನ್ನುತ್ತಾನೆ. ಈ ಮಾತನ್ನು ಕೇಳಿದ ಧರ್ಮರು 'ಅಣ್ಣನು ಆಟಕ್ಕೆ ಕರೆದಾಗ ಅದನ್ನು ಅಲಕ್ಷಿಸಬಾರದು ಎಂದು ತಮ್ಮಂದಿರ ಜೊತೆ ಹೋಗುವ ಸಿದ್ಧತೆ ಮಾಡುತ್ತಾರೆ. ಹೋಗುವ ಮೊದಲು ಬಾಗಿಲು ಪೂಜೆ ಮಾಡಿ, ಬಾಗಿಲಿಗೆ ಕಾಯೊಡೆಯುವಾಗ ಒಡೆದ ಕಾಯಿಕಡಿಯೊಂದು ಕವಚಿ ಬೀಳುತ್ತದೆ. ಇದು ಅಪಶಕುನ, 'ಈ ಹೊತ್ತು ನಮಗೆ ಕಾರ್ಯದಲ್ಲಿ ಜಯವಿಲ್ಲ, ಪ್ರಯಾಣ ಹೊರಡುವುದು ಬೇಡ'ವೆನ್ನುತ್ತಾನೆ ಸಹದೇವ. ಧರ್ಮರು ಇನ್ನೊಂದು ಕಾಯೊಡೆದು, ಜಯವನ್ನು ಹಾರೈಸಿ ತಮ್ಮಂದಿರೊಡನೆ ಕುರುರಾಯನೊಂದಿಗೆ ಪಗಡೆಯಾಡಲು ಹೊರಟರು. ಹೋಗುವಾಗ ಅನೇಕ ಅಪಶಕುನಗಳನ್ನು ಕಂಡ ಸಹದೇವ, ಧರ್ಮರ ಗಮನವನ್ನು ಸೆಳೆದರೂ ಧರ್ಮರು ಗಮನಿಸದೆ ಕುರುರಾಯನೆಡೆ ಬಂದು ಪಗಡೆಯಾಡುತ್ತಾರೆ.

ಶಿಷ್ಟ ಮಹಾಭಾರತದಲ್ಲಿ, ಧೃತರಾಷ್ಟ್ರ, ವಿದುರನನ್ನು ಖಾಂಡವ ಪ್ರಸ್ಥಕ್ಕೆ ಕಳಿಸಿ ಪಗಡೆಯಾಟ ಆಡಲು ಪಾಂಡವರನ್ನು ಆಮಂತ್ರಿಸುತ್ತಾನೆ.

ಮೊದಲಿನ ಎರಡು ಆಟಗಳನ್ನು ಧರ್ಮರೇ ಗೆದ್ದರು. ಆಗ ಕುರುರಾಯ ಆಟವನ್ನು ಮುರಿದು 'ಗಣನಾಥ'ನಿಗೆ ಗೆಲುವಿನ ಹರಕೆಯನ್ನು ಕಟ್ಟಿ, ಪುನಃ ಆಟ ಪ್ರಾರಂಭಿಸಿ 'ಅಯ್ದಾಟಾ ಆಡಿ' ಪಾಂಡವರೈವರನ್ನೂ ಅವರ ಛತ್ರ ಚಾಮರ ಸಹಿತವಾಗಿ ಗೆಲ್ಲುತ್ತಾನೆ. ಆಟದಲ್ಲಿ ಸೋತ ಧರ್ಮರು ತಲೆತಗ್ಗಿಸಿ ಕುಳಿತಾಗ ಕುರುರಾಯನು

'ಅದು ಏನು ಧರ್ಮರೆ ತಲೆಬಾಗಿ ಕೂತಿರಿ
ಕಕಿ ತನ್ನಿ ನಿಮ್ಮ ಅರಸೀಯ'

(ಗಾಮೊಕ್ಕಲ ಮಹಾಭಾರತ, ಪುಟ ೭೭)

ಎನ್ನುತ್ತಾನೆ.

ಶಿಷ್ಟ ಮಹಾಭಾರತದಲ್ಲಿ. ದುರ್ಯೋಧನನ ಪರವಾಗಿ ಶಕುನಿ ಆಡುತ್ತಾನೆ. ಯುಧೀಷ್ಠಿರ, ದ್ರೌಪದಿ ಸಮೇತ ಎಲ್ಲವನ್ನೂ ಕಳೆದುಕೊಳ್ಳುತ್ತಾನೆ. ಧರ್ಮರು, ದ್ರೌಪದಿ ಹತ್ತಿರ ಹೋಗಿ, ಸೋಲಿನ ವಿಷಯ ತಿಳಿಸಿ, ಅವಳನ್ನು ಆಟಕ್ಕೆ ಆಹ್ವಾನಿಸುತ್ತಾನೆ. ಆಗ ದ್ರೌಪದಿ 'ನಾನು ಮುಟ್ಟಾಗಿ ಮೂರನೆಯ ದಿನದ ಸ್ನಾನ ಮಾಡಿಲ್ಲ, ತುಳಸಿಯ ಕದಿರನ್ನು ಮುಡಿದಿಲ್ಲ. ಈ ಸ್ಥಿತಿಯಲ್ಲಿ ನಾನು ಆಟಕ್ಕೆ ಬರಲಾರೆ' ಎಂದು ಧರ್ಮರನ್ನು ಹಿಂದಕ್ಕೆ ಕಳಿಸುತ್ತಾಳೆ. ರೂಪತಿ ಆಟವಾಡಲೂ ಬರಲಾರದ ನಿರುಪಾಯ ಸ್ಥಿತಿಯನ್ನು ಧರ್ಮರು ವಿವರಿಸುತ್ತಾರೆ. ರೂಪಸಿಯಾದ ರೂಪತಿ ಜೊತೆ ಪಗಡೆಯಾಡುವ ಅವಕಾಶ ತಪ್ಪಿದ್ದಕ್ಕಾಗಿ ಕುರುರಾಯ ಹಳ ಹಳಿಸುತ್ತಾನೆ. ಆಕೆಯನ್ನು ಕರೆತರುವ ತನ್ನ ಹಂಬಲವನ್ನು ಬಿಡದೆ, ಕರ್ಣನಿಗೆ ಅವಳನ್ನು ಕರೆತರಲು ಹೇಳುತ್ತಾನೆ. ಸಾತ್ವಿಕನಾದ ಕರ್ಣ

'ಆರ್ನ್ ತಲಿತಾ ಅಂದ್ರತರ್ವೆ ಚೊರ್ನ್ ತಲಿತಾಅಂದ್ರತರ್ವೆ
ತರಲಾರೆ ಪರರಾ ಅರಸೀಯಾ'

(ಗಾಮೊಕ್ಕಲ ಮಹಾಭಾರತ, ಪುಟ ೭೯)

'ಯಾರ ತಲೆಯನ್ನಾದರೂ ಕತ್ತರಿಸಿ ತರುತ್ತೇನೆ. ಪರಸತಿಯನ್ನು ಮಾತ್ರ ತರಲಾರೆ' ಎಂಬುದು ಕರ್ಣನ ಸಜ್ಜನಿಕೆಯ ಮಾತು. 'ನನ್ನ ಅನ್ನಾ ಉಂಡೇ ನನ್ನ ಸುಣ್ಣಾ ತಿಂದೇ ನನ್ನ ಮಾತು ಕೇಳುವುದಿಲ್ಲವೇ?' ನನ್ನಿಂದ ಬೇರಾಗು ಅನ್ನುತ್ತಾನೆ. ಉಪಾಯವಿಲ್ಲದೆ ರೂಪತಿಯನ್ನು ಕರೆಯಲು ಹೋಗುತ್ತಾನೆ. ಆದರದಿಂದ ರೂಪತಿ ಕರ್ಣನನ್ನು ಬರ ಮಾಡಿಕೊಂಡು ಉಪಚರಿಸಿ, 'ಭಾವನವರೇ, ನನ್ನವರು ನನಗೆ ಸಣ್ಣಕಾಲಿನ ಮಂಚವನ್ನು ಕೊಟ್ಟಿದ್ದಾರೆ. ಅದರ ಮೇಲೆ ಇಬ್ಬರು ಕೂಡ್ರಲಾಗದು ಅರ್ಜುನನ ಸೆಳಮಂಚವನ್ನು ತರಲೊ ಎನ್ನುತ್ತಾಳೇ.' ಆಗ ಕರ್ಣ 'ನನ್ನ ತಮ್ಮಂದಿರು ಸೆರೆಯಲ್ಲಿರುವಾಗ ನನಗೇಕೆ ಸೆಳಮಂಚ? ನನಗೆ ಮಣೆಯೊಂದು ಸಾಕು' ಎನ್ನುತ್ತಾನೆ. ರೂಪತಿ ಕರ್ಣನಿಗೆ ತಾಂಬೂಲವನ್ನು ಕೊಟ್ಟು ತಾನೂ ತಾಂಬೂಲ ಸೇವಿಸುತ್ತಾಳೆ. ತಾಂಬೂಲ ಸೇವನೆಯಿಂದ ಅಡಿಕೆ 'ತಲೆಗೆ ಹತ್ತಿ' ರೂಪತಿ ತಲೆತಿರುಗಿ ಬೀಳುವಾಗ ಕರ್ಣನು ಅವಳನ್ನು ಕೈಯಿಂದ ಮುಟ್ಟದೆ ಹಚ್ಚಡದ ಸೆರಗಿನಿಂದ ಹಿಡಿಯುತ್ತಾನೆ. ಎಚ್ಚೆತ್ತ ರೂಪತಿ ಕರ್ಣನನ್ನು 'ಇದು ಎನು ಬಾವ್ನೋರೆ, ಹಚ್ಚಡದ ಸೆರಗಿನಿಂದ ನನ್ನನ್ನು ಹಿಡಿದಿರಿ? ಗೋವಳ ವಂಶದವರಿಗೂ ನಿಮಗೂ ಹೊಲೆ ಮೈಲಿಗೆಯೇನು' ಎಂದು ಕೇಳುತ್ತಾಳೆ. ಕರ್ಣ 'ಭಾವಮೈದುನಿಯನ್ನು ಮುಟ್ಟಬಾರದೆಂದು, ನಿನ್ನನ್ನು ನಾನು ಹಚ್ಚಡದ ಸೆರಗಿನಲ್ಲಿ ಹಿಡಿದೆನು' ಎಂದು ಹೇಳುತ್ತಾನೆ. ತಾನು ಬಂದ ಕಾರಣವನ್ನು ಕರ್ಣ ತಿಳಿಸಿದಾಗ ಅವನ ಜೊತೆ ಹೋಗಲು ರೂಪತಿ ನಿರಾಕರಿಸುತ್ತಾಳೆ. ಅವಳನ್ನು ಬಿಟ್ಟು ಹೋಗುವಾಗ, ದುರ್ಯೋಧನ ಮತ್ತು ದುಶ್ಯಾಸನರಿಂದ ಅವಳಿಗೆ ಆಗಬಹುದಾದ ಸಂಕಟಗಳನ್ನು ತಿಳಿಸಿ, ಮುಂಜಾಗ್ರತೆಯ ಮಾತುಗಳನ್ನಾಡುತ್ತಾನೆ.

ಶಿಷ್ಟ ಮಹಾಭಾರತದಲ್ಲಿ ದ್ರೌಪದಿಯನ್ನು ಕರೆತರಲು ಮೊದಲು ದುರ್ಯೋಧನ ಹೇಳುವುದು ವಿದುರನಿಗೆ. ದಾಸಿಯರ ಮಧ್ಯದಲ್ಲಿದ್ದುಕೊಂಡು ಕಸ ಗುಡಿಸಲೆಂದು, ನಂತರ ಪ್ರಾತಿಕಾಮಿಯನ್ನು ಕಳಿಸುತ್ತಾರೆ. ಕೊನೆಗೆ ಸಭೆಗೆ ಬಂದ ದ್ರೌಪದಿ, ಧೃತರಾಷ್ಟ್ರನ ಮುಂದೆ ನಿಲ್ಲುತ್ತಾಳೆ. ಆಗ ದುರ್ಯೋಧನ, ದುಶ್ಯಾಸನನಿಗೆ, ದ್ರೌಪತಿಯನ್ನು ತನ್ನೆಡೆಗೆ ಎಳೆದುಕೊಂಡು ಬರಲು ಹೇಳುತ್ತಾನೆ. "ಯುಧೀಷ್ಠಿರ, ದ್ರೌಪದಿಯನ್ನು ಜೂಜಿನಲ್ಲಿ ಸೋತಾಗ ಕರ್ಣ ತುಂಬ ಸಂತೋಷಪಡುತ್ತಾನೆ. ದುಶ್ಯಾಸನನು ದ್ರೌಪದಿಯನ್ನು ರಾಜಸಭೆಯಲ್ಲಿ 'ಲೇ ದಾಸೀ' ಎಂದು ನಗುತ್ತ ಬಲವಾಗಿ ಎಳೆದಾಗ, ಈ ಮಾತನ್ನು ಕೇಳಿ ಕರ್ಣನಿಗೂ ಶಕುನಿಗೂ ಸಂತೋಷ ವಾಗುತ್ತದೆ."[೧೦೭]

ಮೂಲ ಮಹಾಭಾರತದಲ್ಲಿ ಕರ್ಣನನ್ನು, ಸೂತಕುಲದವನೆಂದು ದ್ರೌಪದಿಯು ಸ್ವಯಂವರದಲ್ಲಿ ತಿರಸ್ಕರಿಸಿದ ಘಟನೆ, ಕರ್ಣನಿಗೆ ದ್ರೌಪದಿಯು ತನಗಾದ ಅಪಮಾನದ ಸಂಕೇತವಾಗಿ ಕಂಡರೆ, ಪಾಂಡವರು ದ್ಯೂತದಲ್ಲಿ ಸೋತಾಗ ತುಂಬಿದ ರಾಜಸಭೆಯಲ್ಲಿ ಕರ್ಣನ ವರ್ತನೆ 'ದ್ರೌಪದಿಗೆ ಕರ್ಣನು ಪ್ರತೀಕಾರಾತ್ಮಕ ನಿಲುವಿನ ಅಹಂಕಾರಿ' ಯಾಗಿ ಕಾಣುತ್ತಾನೆ.

ಧರ್ಮರ ಹಾಡಿನಲ್ಲಿ ಬರುವ ಕರ್ಣನ ಪಾತ್ರ ಅಭೂತಪೂರ್ವವಾಗಿದೆ. ಕರ್ಣ ಸ್ತ್ರೀ ಭೀರುವಾಗಿ ಪಾಂಡವರ ಪಕ್ಷಪಾತಿಯಾಗಿ ಚಿತ್ರಿತವಾಗಿದ್ದಾನೆ. ಪಾಂಡವರು ಪಗಡೆಯಾಟದಲ್ಲಿ ಸೋತ ಮೇಲೆ ಕುರುರಾಯನು

ದ್ರೌಪದಿಯನ್ನು ಕರೆತರಲು ಕರ್ಣನಿಗೆ ಆಜ್ಞಾಪಿಸಿದಾಗ, ಸಾತ್ವಿಕನಾದ ಕರ್ಣ ಪರಸತಿಯನ್ನು ತರಲಾರೆ ಎಂದು ನಿರಾಕರಿಸುತ್ತಾನೆ. ದ್ರೌಪದಿ ತಾಂಬೂಲ ಸೇವಿಸಿ ಕರ್ಣನ ಮುಂದೆ ತಲೆತಿರುಗಿ ಬಿದ್ದಾಗ 'ಅವಳನ್ನು ಕೈಯಿಂದ ಮುಟ್ಟದೆ, ತನ್ನ ಹಚ್ಚಡ ಸೆರಗಿನಿಂದ ಹಿಡಿದು 'ತನ್ನ ಸ್ತ್ರೀ ಭೀರುತ್ವ'ವನ್ನು ಪ್ರಕಟಿಸುತ್ತಾನೆ. ದ್ರೌಪದಿಗೆ ಮುಂದೆ ಬರಬಹುದಾದ ಸಂಕಟಗಳನ್ನು ತಿಳಿಸಿ, ಎಚ್ಚರಿಸಿ, ದ್ರೌಪದಿ ಹಾಗೂ ಪಾಂಡವ ಪಕ್ಷಪಾತಿಯಾಗಿಯೇ ವರ್ತಿಸುತ್ತಾನೆ. ಮಹಾಭಾರತದ ಖಳಚತುಷ್ಟಯದಲ್ಲಿ ಒಬ್ಬನಾದ ಕರ್ಣ ಗಾಮೊಕ್ಕಲ ಮಹಾಭಾರತದಲ್ಲಿ ಸಾತ್ವಿಕನಾಗಿದ್ದಾನೆ. ಪಾಂಡವ ಪಕ್ಷಪಾತಿಯಾಗಿದ್ದಾನೆ, ದಯಾ ಪರನಾಗಿದ್ದಾನೆ.

ಕರ್ಣ ದ್ರೌಪದಿಯನ್ನು ಪಗಡೆ ಆಟ ಆಡಲು ಕರೆತರದೆ ಹಿಂದಿರುಗಿದ್ದನ್ನು ನೋಡಿದ ಕುರುರಾಯ, ಅವಳನ್ನು ಕರೆತರಲು ತಮ್ಮ ದುಃಶ್ಯಾಸನನನ್ನು ಕಳಿಸುತ್ತಾನೆ. ಇದು ಇವನಿಗೆ ಸಂತೋಷದ ಕೆಲಸ.

"ಹಿತ್ತೀಲ ಕಣಕೇ ಚವ್ತೀಯ ನೆಟ್ಟೀದೆ
ನೆಟ್ಟವರಿಗರ್ಧಾ ನೆರಿಗರ್ಧಾ ಅಣ್ ತಂದಾಮಡದಿ
ಅಣ್ಣಗೆ ಅರ್ಧಾ ತನಗರ್ಧಾ"

(ಗಾಮೊಕ್ಕಲ ಮಹಾಭಾರತ, ಪುಟ ೮೭)

ಎಂದು ಮನದಲ್ಲಿಯೇ ಮಂಡಿಗೆ ತಿನ್ನುತ್ತಾ, ಮತ್ತಿನಿಂದ ಹೋದ ದುಶ್ಯಾಸನನು ದ್ರೌಪದಿಯನ್ನು 'ಅತ್ತಿಗೇ ಅತ್ತಿಗೇ' ಎಂದು ಎಷ್ಟು ಕೂಗಿದರೂ ಅವಳು ತನ್ನ ಮಣೆ ಮಾಡದಿಂದ ಹೊರಬರಲಿಲ್ಲ. ಆಗ ಆತನು ಸಿಟ್ಟಿನಿಂದ ಅವಳಿದ್ದ ಮನೆ ಮಾಡನ್ನು ಮುರಿದು ಒಳ ಪ್ರವೇಶಿಸಿ ದ್ರೌಪದಿಯ ಹತ್ತಿರ ಹೋಗಿ ಅವಳ ಸೀರೆಯ ಸೆರಗನ್ನು ಹಿಡಿದೆಳೆಯುತ್ತಾನೆ. ಆಗ ದ್ರೌಪದಿ ಶ್ರೀಹರಿಯನ್ನು ನೆನೆಯುತ್ತಾಳೆ. ಅವಳ ಮೆದುಲು ಸ್ಥಿರವಾಗುತ್ತದೆ. ದುಶ್ಯಾಸನ ಅವಳ ರಟ್ಟೆಗೆ ಕೈ ಹಾಕಿ ಅವಳನ್ನು ಬೀದಿಗೆಳೆಯುತ್ತಾನೆ. ಅವಳನ್ನು ಮೂದಲಿಸುತ್ತಾನೆ. 'ಅತ್ತಿಗೇ ಬಿಚ್ಚಿದ ಸೀರೆ ಉಟ್ಟುಕೋ, ಮುಡಿ ಕಟ್ಟಿಕೋ, ಕಂಡವರಿಗೆ ಅಪಶಕುನವಾಗಬಹುದು' ಎನ್ನುತ್ತಾನೆ. ದುಶ್ಯಾಸನನು ಮಾಡಿದ ಮಾನಭಂಗದಿಂದ ರೌದ್ರಾವತಾರ ತಾಳಿದ ರೂಪತಿ, ತನ್ನ ದೇವಾಂಗವನ್ನು ಅದ್ದಿಸಿ ಉಡುವ, ತನ್ನ ಬಿಚ್ಚಿದ ಮುಡಿಕಟ್ಟುವ, ಭೀಮಪ್ರತಿಜ್ಞೆ ಗೈಯುತ್ತಾಳೆ. ದುಶ್ಯಾಸನನ ಹಿಂದೆಯೇ ಕುರುರಾಯನ ಅರಮನೆಗೆ ಬರುತ್ತಾಳೆ. ಕುರುರಾಯ ಅವಳನ್ನು ರಮಿಸಿ ಮಾತನಾಡಿಸುವನು. ಆತಿಥ್ಯ ನೀಡಲು ತಾಯಿ ಬೊಸ್ಪತಿಗೆ ಹೇಳುವನು. ಆದರೆ ರೂಪತಿ ಆತಿಥ್ಯವನ್ನು ಸ್ವೀಕರಿಸು ವುದಿಲ್ಲ. ಕುರುರಾಯ ನೀಡುವ ತಾಂಬೂಲವನ್ನು ಮುಷ್ಟಿಯಲ್ಲಿ ಮುರಿಯುವಳು. ಆದರೆ ಕರ್ಣನ ಕೈವೀಳ್ಯವನ್ನು ಮೆಲ್ಲುತ್ತಾಳೆ.

ದುರ್ಯೋಧನ ಕೋಪಗೊಂಡು ಅವನನ್ನು 'ಅಂಬಿಗ'ನೆಂದು ಕರೆದು ಕರ್ಣನ ನಿಷ್ಠುರ ಕಟ್ಟಿಕೊಳ್ಳುವ ಹೊಸ ಆಶಯ ಇಲ್ಲಿ ಸೇರಿದೆ. ಕರ್ಣನ ತೇಜೋವಧೆಗಾಗಿ ದುರ್ಯೋಧನ ಈ ಮಾತನ್ನು ಆಡಿದರೂ ಈ ಪ್ರಸಂಗ ಕರ್ಣನ ಜನಪ್ರಿಯತೆಯನ್ನು ಹೆಚ್ಚಿಸುವಂತಿದೆ. ಮಹಾಭಾರತದ ಖಳಚತುಷ್ಟಯಗಳಲ್ಲಿ ಒಬ್ಬನಾದ ಕರ್ಣನು ಧರ್ಮರ ಹಾಡಿನಲ್ಲಿ ಉದಾತ್ತೀಕರಣಗೊಂಡು ಸಾತ್ವಿಕ ತೇಜದಿಂದ ಕಳಕಳಿಸಿದ್ದಾನೆ.

ಕುರುರಾಯ ದ್ರೌಪದಿಗೆ 'ಬೊಸ್ಪತಿಯ ಹತ್ತಿರ ಹೇಳಿ ಹೊನ್ನ ಹಸೆ ತಯಾರಿಸಿದ್ದೆ, ನಿನಗಾಗಿ ಹೊನ್ನ ಹಸೆ ಬಿಡಿಸಿದ್ದೇನೆ. ದ್ರೌಪದಿ ಒಂದು ರಾತ್ರಿ ನನ್ನ ಜೊತೆಯಲ್ಲಿ'' ಎಂದು ಅಂಗಲಾಚುತ್ತಾನೆ. ಕೋಪಾವಿಷ್ಟಳಾದ

ದ್ರೌಪದಿ 'ನಿನ್ನ ತಾಯಿಯನ್ನು ತಂದು ಜೊತೆಯಲ್ಲಿಟ್ಟುಕೋ ಎಂದು ಎಚ್ಚರಿಸುತ್ತಾಳೆ. ದ್ರೌಪದಿಯನ್ನು ಉರಿಬಿಸಿಲಿನಲ್ಲಿ ಒಂಟಿಗಾಲಿನ ಮೇಲೆ ನಿಲ್ಲಿಸುತ್ತಾನೆ. ಗಂಡಂದಿರೆಡೆ ಕೈಚಾಚಿ ಗೋಳಿಡುತ್ತಾಳೆ. ಭೀಮ ಕೆರಳುತ್ತಾನೆ. ಧರ್ಮರು ಭೀಮನನ್ನು ಸಂತೈಸುತ್ತಾನೆ.

ದ್ರೌಪದಿಯನ್ನು ಪಗಡೆಯಾಡಲು ಕುರುರಾಯ ಕರೆಯುತ್ತಾನೆ. ದ್ರೌಪದಿ, ಕುರುರಾಯನ ಕಳ್ಳ ಪಗಡೆಮಣೆಯನ್ನು ಪುಡಿ ಪುಡಿ ಮಾಡಿ, ಕರ್ಣನ ಮೂಲಕ ನಾರಾಯಣದೇವನಿಂದ ಹೊಸ ಹಲಿಗೆಯನ್ನು ತರಿಸಿಕೊಳ್ಳುತ್ತಾಳೆ. ತಂಗಿ ಪಗಡೆಯಾಟ ಗೆಲ್ಲುತ್ತಾಳೆಂದು ನಾರಾಯಣದೇವ ಹೇಳಿ ಹರಸಿರುತ್ತಾನೆ.

ಪಗಡೆಯಾಡಲು ಕುಳಿತಾಗ ತಂಗಾಳಿ ಬೀಸಿ, ದ್ರೌಪದಿಯ ಮೇಲುದ ಸೆರಗು ಮರಚಿ ಬೀಳುತ್ತದೆ. ಆಗ ಅವಳೆದೆಯ ಸೌಂದರ್ಯವನ್ನು ಕಂಡು ಗುಂಗಾದ ಕುರುರಾಯ ಪಗಡೆಯಾಟದಲ್ಲಿ ಸೋಲುತ್ತಾನೆ. ಪಾಂಡವರೈವರನ್ನೂ ಛತ್ರ ಚಾಮರ ಸಹಿತವಾಗಿ ಗೆದ್ದ ದ್ರೌಪದಿ, ಪಾಂಡವರನ್ನು ಸೆರೆಯಿಂದ ಮುಕ್ತಿಗೊಳಿಸುತ್ತಾಳೆ. ಧರ್ಮರು ಹನ್ನೆರಡು ವರ್ಷ ವನವಾಸಕ್ಕೆ ತಮ್ಮಂದಿರೊಡನೆ ಹೋಗುತ್ತಾರೆ. ಪಾಂಡವರು ವಿರಾಟರಾಯನ ಅರಮನೆಯಲ್ಲಿ ಕೆಲಸಕ್ಕೆ ಉಳಿಯುತ್ತಾರೆ.

'ಹೆಂಗಸರು ಗೆದ್ದ ರಾಜ್ಯದಲ್ಲಿ ಇರುವುದು ಸರಿಯಲ್ಲ' ಎನ್ನುವುದು ಹಾಲಕ್ಕಿ ಒಕ್ಕಲಿಗರ ಮಹಾಭಾರತ ಕಥೆಯಲ್ಲಿದೆ. ಅದರಂತೆ ಇಲ್ಲಿಯೂ "ಹೆಣ್ಣಿನ ಗಳಿಕೆಯಲ್ಲಿ ಜೀವನಸಾಗಿಸುವುದು ಗಂಡುತನಕ್ಕೆ ಅಪಮಾನವೆಂಬ ಹಿನ್ನೆಲೆಯಲ್ಲಿ ವನವಾಸಕ್ಕೆ ಹೋದಂತಿದೆ."[೧೦೮]

"ಗಾಮೊಕ್ಕಲ ಮಹಾಭಾರತ ವ್ಯಾಸಭಾರತದಿಂದ ಹಲವಾರು ಬಗೆಯಲ್ಲಿ ಭಿನ್ನವಾಗಿದ್ದು ಕನ್ನಡ ನಾಡಿನಲ್ಲಿ ವ್ಯಾಸಭಾರತದಿಂದ ಭಿನ್ನವಾದ ಜಾನಪದ ಪರಂಪರೆಯ ಇನ್ನೊಂದು ಮಹಾಭಾರತ ಪ್ರಚಲಿತವಿದ್ದುದನ್ನು ಸಾರುತ್ತದೆ."[೧೦೯]

ಧರ್ಮರ ಹಾಡಿನ ದ್ರೌಪದಿ ವ್ಯಾಸಭಾರತದ ದ್ರೌಪದಿಗಿಂತ ಗಟ್ಟಿಗಳು ದುಶ್ಯಾಸನನು ದ್ರೌಪದಿಯ ಸೀರೆ ಸೆಳೆಯುವುದರಿಂದ ಅಪಮಾನ ಮಾಡಿದ ಪ್ರಸಂಗದಲ್ಲಿ ಅಸಹಾಯಕ ಸ್ತ್ರೀಯಂತೆ ಗೋಗರೆಯದೆ ಸಿಟ್ಟಿನಿಂದ, ದುಶ್ಯಾಸನನ ರಕ್ತದಿಂದ ತನ್ನ ದೇವಾಂಗವನ್ನು ಅದ್ದಿ ಉಡುವ, ತನ್ನ ಬಿಚ್ಚಿದ ಮುಡಿ ಕಟ್ಟುವ ಪ್ರತಿಜ್ಞೆ ಮಾಡುತ್ತಾಳೆ. ಇದರಿಂದಾಗಿ, ಭಾರತೀಯ ಸಂಸ್ಕೃತಿಯ ಮಾನವುಳಿಯಿತೆಂದು ಸಮಾಧಾನ ಪಡುವ ಹಾಗಾಯಿತು. ಇದು ಧರ್ಮರ ಹಾಡಿನ ವಿನೂತನ ಅಗ್ಗಳಿಕೆ. ಪಗಡೆಯಲ್ಲಿ ಸೋತು, ಗಂಡಂದಿರು ಸೆರೆಯಾಳಾದರೂ ದ್ರೌಪದಿ ಅಪ್ರತಿಭಳಾಗಲಿಲ್ಲ. ಹಾಗೂ ದುರ್ಯೋಧನ,ದುಶ್ಯಾಸನರಿಗೆ ಹೆದರದೆ, ದಿಟ್ಟತನದ ಉತ್ತರ ಕೊಡುವಲ್ಲಿ ದ್ರೌಪದಿಯ ಕಲಿತನ ವ್ಯಕ್ತವಾಗುತ್ತದೆ.

ಮೂಲ ಮಹಾಭಾರತದಲ್ಲಿ ದ್ರೌಪದಿಯ ವಸ್ತ್ರಾಪಹರಣವು ತುಂಬಿದ ರಾಜಸಭೆಯಲ್ಲಿ ಭೀಷ್ಮ, ದ್ರೋಣ, ವಿದುರ, ಮುಂತಾದ ಧರ್ಮಿಷ್ಟರ ಎದುರಿನಲ್ಲಿ ಹಾಗೂ ಅವಳ ಪತಿಗಳ ಸಮ್ಮುಖದಲ್ಲಿ ಆಗುತ್ತದೆ. ಯಾರು ಪ್ರತಿಭಟಿಸದೆ, ಈ ಅನೀತಿಯುಕ್ತ ಕೃತ್ಯವನ್ನು ನಿಷ್ಕ್ರಿಯರಾಗಿ ಕುಳಿತು ನೋಡುತ್ತಿದ್ದುದು ವಿಪರ್ಯಾಸವಲ್ಲವೇ? ಆದರೆ, 'ಧರ್ಮರು ಪದದ' ಜಾನಪದ ಕವಿ, ಆ ಪ್ರಸಂಗವನ್ನೇ ಬದಲು ಮಾಡುವಲ್ಲಿ ತನ್ನ ಔಚಿತ್ಯಪ್ರಜ್ಞೆ

ಯನ್ನು ತೋರಿರುವುದು, ಜಾನಪದ ಕವಿಯ ಉನ್ನತ ಮಟ್ಟದ ಸಾಂಸ್ಕೃತಿಕ ಹಿನ್ನೆಲೆಯ ದರ್ಶನವಾಗದಿರದು.

ಚುರುಕು ಬುದ್ಧಿಯ ದ್ರೌಪದಿ, ಕುರುರಾಯನ ಕಪಟ ಪಗಡೆಯ ಮಣೆಯನ್ನು ಉಪಯೋಗಿಸಿ, ಧರ್ಮರನ್ನು ಸೋಲಿಸಿದ್ದನ್ನು ಬೇಗನೆ ಅರಿತು, ನಾರಾಯಣ ದೇವನಿಂದ ಹೊಸಮಣೆಯನ್ನು ತರಿಸಿಕೊಳ್ಳುತ್ತಾಳೆ. ಶಿಷ್ಟ ಮಹಾಭಾರತದಲ್ಲಿ ದ್ರೌಪದಿ ಪಗಡೆ ಆಡುವ ಪ್ರಸಂಗವಿಲ್ಲ. ಇದೇನಿದ್ದರೂ ಜಾನಪದ ಮಹಾಭಾರತದಲ್ಲಿ ಮಾತ್ರ.

ಇನ್ನು ದ್ರೌಪದಿಯ ಪಗಡೆ ಆಟ ವಿಶ್ಲೇಷಣೆಗೆ ಮುನ್ನ ಇನ್ನೊಂದು ವಿಭಿನ್ನ ಪಾಠವನ್ನು ಗಮನಿಸೋಣ.

ದ್ರೌಪದಿಯ ಜೂಜಿಗೆ ಸಂಬಂಧಿಸಿದಂತೆ ಜಾನಪದದಲ್ಲಿ ವಿವಿಧ ವಿಶಿಷ್ಟ ಕಥಾನಕಗಳು ದೊರೆಯುತ್ತವೆ. ಅದರಲ್ಲಿ ಈ ಕಾವ್ಯಕಥೆಗೆ ಸಂಬಂಧಿಸಿದುತೆ ಡಾ.ಗಾಯತ್ರಿ ನಾವಡರವರು ಉಡುಪಿ ಜಿಲ್ಲೆಯ ಮಂಜಿ ಹರಿಜನಗಳಿಂದ ದ್ರೌಪದಿ ಕುರಿತು ದಾಖಲಿಸಿಕೊಂಡಿರುವ "ದ್ರೌಪದಿ ಪಗ್ನಿ ಆಟೋ ಆಡಿದ್ದ್ ಜನಪದ ಕಾವ್ಯದ ಕಥೆ, ಶಿಷ್ಟ ಪರಂಪರೆಯ ಚೌಕಟ್ಟನ್ನು ಮುರಿದು ಪುನರ್ ಸೃಷ್ಟಿ ಪಡೆಯುವ ಕ್ರಿಯೆಯಾಗಿದೆ."[೧೧೦] "ಜನಪದ ಮಹಾಭಾರತದ ದ್ಯೂತ ಪ್ರಸಂಗದಲ್ಲಿ ಪಾಂಡವರು ಸೋತು ಅವಮಾನಿತರಾಗಿ, ಅಸಹಾಯಕ ರಾಗಿದ್ದಾಗ ದ್ರೌಪದಿ ಬಂದು ಕೌರವರನ್ನು ಪಗಡೆಯಾಟಕ್ಕೆ ಆಹ್ವಾನಿಸುತ್ತಾಳೆ. ಆಟಕ್ಕೆ ಕುಳಿತಾಗ ತನ್ನ ತೊಡೆತಟ್ಟಿ ಕೌರವನ ಗಮನವನ್ನು ಆ ಕಡೆಗೆ ಸೆಳೆದು ಚಾಲಕಿತನದಿಂದ ಆಟವನ್ನು ಗೆಲ್ಲುತ್ತಾಳೆ."[೧೧೧] "ಈ ನಡವಳಿಕೆಯನ್ನು ಹೆಣ್ಣು ತನದ ಒಂದು ವಾಸ್ತವ ಸಾಧ್ಯತೆಯಾಗಿ ಗುರುತಿಸಬೇಕೇ ಹೊರತು ಅಪವಾದವಾಗಿ, ಅಪಚಾರವಾಗಿ ಗ್ರಹಿಸಬಾರದು. ದ್ರೌಪದಿಯ ಗೆಲುವಿನ ಚಾಲಾಕಿತನ, ಕೌರವನ ಅಹಂನ್ನು ಮಣ್ಣು ಮುಕ್ಕಿಸುವ ಎದೆಗಾರಿಕೆ ಪಾಂಡವರನ್ನು ಬಿಡುಗಡೆಗೊಳಿಸುವ ಪರಿಯನ್ನು ಭಾರತೀಯ ಹೆಣ್ಣು ತನದ ಶಕ್ತಿ ರೂಪವಾಗಿ ಕಂಡುಕೊಳ್ಳುವಲ್ಲಿ ಹೆಚ್ಚಿನ ಅರ್ಥ ಇದೆ."[೧೧೨] "ಸ್ತ್ರೀಯರ ಲೈಂಗಿಕ ಬದುಕಿನಲ್ಲಿ ಹಸ್ತಕ್ಷೇಪವನ್ನು ನಡೆಸುತ್ತಲೇ ಬಂದ ಪುರುಷರ ಯಾಜಮಾನ್ಯ ಧೋರಣೆಗೆ ದೊಡ್ಡ ಆಘಾತ, ಎದುರಾದ ಸಂದರ್ಭಕ್ಕೆ ಅಥವಾ ಸವಾಲಿಗೆ ಅಸಾಂಪ್ರದಾಯಿಕ ರೀತಿಯಲ್ಲಿ ಪ್ರತಿಕ್ರಿಯಿಸುವ ಹೆಣ್ಣುಗಳನ್ನು ಚಾಲಾಕಿ ಹೆಣ್ಣುಗಳೆಂದು ಕರೆಯಲಿಚ್ಚಿಸುತ್ತಾರೆ."[೧೧೩]

"ಕಾರವಾರ ಭಾಗದ ಪಾಠದಲ್ಲಿ ದ್ರೌಪದಿ ತೊಡೆಯನ್ನು ತೋರಿಸುವುದಲ್ಲದೆ, ಕುಚಗಳನ್ನೂ ತೋರಿಸು ತ್ತಾಳೆ."[೧೧೪] ಡಾ.ಎಲ್.ಆರ್.ಹೆಗ್ಗಡೆಯವರು ಸಂಗ್ರಹಿಸಿರುವ ಜನಪದ ಭಾರತ ಕಥೆಗಳ 'ದ್ರೌಪದೀ ವಸ್ತ್ರಾಪ ಹರಣ' ಕತೆಯಲ್ಲಿ "ದ್ರೌಪದಿ ಕೌರವನೊಡನೆ ಜೂಜಾಟವನ್ನು ಆಡುವಾಗ ತನ್ನ ಸೆರಗನ್ನು ಒಮ್ಮೆ ತೆಗೆದಳು, ಆಗ ಅವಳ ತುಂಬಿದ ಎದೆಯ ಕಡೆಗೆ ಕೌರವನ ಕಣ್ಣುಗಳು ಹೋದವು. ಆ ಆಟ ಕೌರವನಿಗೆ ತಪ್ಪಿಹೋಯಿತು. ಹೀಗೆ ಹನ್ನೊಂದು ಜೂಜಾಟ ಆಡುವಾಗಲೂ ಹನ್ನೊಂದು ಸಲ ತನ್ನ ಸೆರಗನ್ನು ತೆರೆದಳು. ಕೌರವನ ಕಣ್ಣು ಅವಳ ತುಂಬಿದ ಎದೆಯ ಕಡೆಗೆ ಇದ್ದುದರಿಂದ ಅವನಿಗೆ ಹನ್ನೊಂದು ಜೂಜಾಟಗಳಲ್ಲಿಯೂ ಸೋಲಾಯಿತು."[೧೧೫] ಇನ್ನೊಂದು ಪಾಠದಲ್ಲಿ ದ್ರೌಪದಿಯು ಪಾರದರ್ಶಕ ಸೀರೆಯನ್ನುಟ್ಟು, ತನ್ನ ಅಂಗಾಂಗಗಳನ್ನು ದುರ್ಯೋಧನನಿಗೆ ಪ್ರದರ್ಶಿಸುತ್ತ ಆಟವಾಡಿ, ಅವನ ಚಿತ್ತ ಚಂಚಲಗೊಳಿಸಿ ಆಟವನ್ನು ಗೆದ್ದ ಪ್ರಸ್ತಾಪವಿದೆ."[೧೧೬] ದ್ರೌಪದಿ, ದುರ್ಯೋಧನನ ಜೊತೆಯಲ್ಲಿ ಪಗಡೆಯಾಡಿ ಸೋಲಿಸಿದ ಅಂಶ ಜಾನಪದ ಭಾರತದಲ್ಲಿ ಮಾತ್ರ ಬರುತ್ತದೆ.

"ಈ ರೀತಿಯ ಪ್ರಸಂಗಗಳು ನಮ್ಮ ಜನರಲ್ಲಿ ಬಹಳ ಪ್ರಿಯವಾದ ಹವ್ಯಾಸವಾಗಿದೆಯೆಂಬುದು ಹಾಡುಗಾರ್ತಿಯರು ಈ ಭಾಗವನ್ನು ಬಹಳ ಮೆಚ್ಚುಗೆಯಿಂದ ಹೇಳುವುದರಲ್ಲಿಯೇ ಕಂಡು ಬರುತ್ತದೆ. ಆದರೆ ಇದು ದ್ರೌಪದಿಯ ಪಾತ್ರದ ಘನತೆಗೆ ಕುಂದು ತರುವಂತಹದು ಎಂದು ಡಾ.ಎಲ್.ಆರ್.ಹೆಗಡೆಯವರು ಅಭಿಪ್ರಾಯಪಡುತ್ತಾರೆ. ಪರಮೇಶ್ವರಿಯ ಪಾಠದಲ್ಲಿ ಇದಲ್ಲದೆ, ದ್ರೌಪದಿ ಕೃಷ್ಣನ ಸಹಾಯವನ್ನು ಕೋರಿದಾಗ 'ನಾ ನಿನ್ನ ತಲಿ ಮೇನೆ ಕೂತಿರುತ್ತೆ' ಎನ್ನುತ್ತಾನೆ. ಹೀಗೆ ಕೃಷ್ಣನ ಸಹಾಯದಿಂದ ಗೆಲ್ಲುವುದು ವಿಶೇಷ ಶ್ಲಾಘ್ಯವಾದ ರೀತಿಯಾಗಿದೆ"[೧೧೭] ಎನ್ನುತ್ತಾರೆ ಡಾ.ಎಲ್.ಆರ್.ಹೆಗಡೆರವರು.

"ಧರ್ಮರ ಹಾಡಿನಲ್ಲಿ ದ್ರೌಪದಿಯ ಎದೆಯ ಸೆರಗು ಗಾಳಿಯಿಂದ ಹಾರಿದ ಪ್ರಯುಕ್ತ ದುರ್ಯೋಧನನಿಗೆ ದ್ರೌಪದಿಯ ವಕ್ಷಸ್ಥಲದ ದರ್ಶನವಾದುದ್ದು. ಈ ಬದಲಾವಣೆ ದ್ರೌಪದಿಯ ಶೀಲಕ್ಕೆ ಮಾರಕವಲ್ಲ. ಹೀಗೆ ಧರ್ಮರ ಹಾಡಿನಲ್ಲಿ ದ್ರೌಪದಿಯ ಪಾತ್ರ ತೇಜಸ್ಸು ಅವಳ ಜಾಣ್ಮೆ, ಸತೀತ್ವಗಳು ಹೊಡೆದು ಕಾಣುವಂತೆ ಚಿತ್ರಿತವಾಗಿದೆ"[೧೧೮] ಎಂದು ಡಾ.ಎನ್.ಆರ್.ನಾಯಕ್‌ರವರ ವಿಶ್ಲೇಷಣೆ.

ಆದರೆ ಡಾ.ಗಾಯತ್ರಿ ನಾವಡರವರು, ಇವರುಗಳ ಅಭಿಪ್ರಾಯವನ್ನು ಒಪ್ಪದೆ ಅವರ ವಿಮರ್ಶೆಯ ನೋಟ, "ದುರ್ಯೋಧನನಿಗೆ ಅವನ ಪತನಕ್ಕೆ ಕೇಂದ್ರಿತವಾಗಿದೆಯೇ ಹೊರತು ದ್ರೌಪದಿ ಗೆಲುವಿನ ಕಡೆಗಿಲ್ಲ. ದ್ರೌಪದಿಯ ಗೆಲುವಿನ ಸಾಧ್ಯತೆಯನ್ನು ತೆರೆದ ಅವಳ ಚಾಲಾಕಿತನದ ಬಗೆಗಾಗಲಿ, ಕೌರವನ ಅಹಂನಲ್ಲಿ ಮುಕ್ಕಿ ಮುರಿಯುವ ಆಕೆಯ ಎದೆಗಾರಿಕೆಗಾಗಲಿ, ಪಾಂಡವರನ್ನು ಬಿಡುಗಡೆಗೊಳಿಸುವ ರೀತಿಗಾಗಲಿ ಅವರು ಸ್ಪಂದಿಸುವುದಿಲ್ಲ"[೧೧೯] ಎನ್ನುತ್ತಾರೆ.

ನಾವು ನೋಡಿದ, ವಿವಿಧ ಪಾಠಗಳನ್ನು ವಿಮರ್ಶೆ ಮಾಡಿದರೆ, ಜನಪದ ಮಹಾಭಾರತದ ಬಹುಮುಖ ವ್ಯಕ್ತಿತ್ವದ ಮಹಾಶಕ್ತಿ ದ್ರೌಪದಿ. ಇವಳಲ್ಲಿ ಧೈರ್ಯ, ಸ್ಥೈರ್ಯ, ಆತ್ಮವಿಶ್ವಾಸಗಳು ಮೈವೆತ್ತಿವೆ. ಅನ್ಯಾಯದ ವಿರುದ್ಧ ಧ್ವನಿ ಎತ್ತುತ್ತಾಳೆ. ಆಕೆ ಬೌದ್ಧಿಕ ಮಟ್ಟದಲ್ಲಿ ಯಾವ ಗಂಡಸಿಗೂ ಕಡಿಮೆಯನಿಸದೆ, ಸತ್ವಪೂರ್ಣಳಾಗಿ ಕಂಡು ಬರುತ್ತಾಳೆ.

ಒಟ್ಟಿನಲ್ಲಿ ದ್ರೌಪದಿಯನ್ನು ಸಮಗ್ರ ಸ್ತ್ರೀತ್ವದ ಪ್ರತಿನಿಧಿಯಾಗಿ ಗುರುತಿಸಬಹುದು.

## ೬. ೩. ಬುರ್ರಕಥಾ ಕಾವ್ಯ - ಸ್ಯಾಸಿ ಚಿನ್ನಮ್ಮ

ಜನಪದ ಸಾಹಿತ್ಯ ಹುಟ್ಟಿದ್ದು ಜನ ಸಮೂಹದಲ್ಲಿ. ಜನ ಸಾಮಾನ್ಯರ ನಿರ್ಮಲ ಭಾವನೆಗಳೇ ಜನಪದ ಕಾವ್ಯ ಎನ್ನಬಹುದು. ಜನಪದ ಕಾವ್ಯ ಹುಟ್ಟಿದ್ದು ಮಾತ್ರ ಯಾವುದೇ ಫಲಾಪೇಕ್ಷೆಯಿಂದಲ್ಲ. ಜನಪದ ಮಹಾಕಾವ್ಯ ಒಂದು ಜನಾಂಗದ ಕೃತಿ. ಅದು ಒಂದು ಜನಾಂಗಕ್ಕೆ ಸೇರಿದ್ದು. ಅದರ ವಸ್ತು ಜನರ ನಂಬಿಕೆ ಜೀವನ ದೃಷ್ಟಿಯನ್ನು ಪ್ರತಿಬಿಂಬಿಸುತ್ತದೆ. ಒಂದು ಕಾಲಕ್ಕೆ ರಾಮಾಯಣ, ಮಹಾಭಾರತಗಳು ಜನಪದ ಕಾವ್ಯಗಳೇ ಆಗಿದ್ದವು. ವಾಲ್ಮೀಕಿ, ವ್ಯಾಸರು ಅವುಗಳನ್ನು ಸಂಗ್ರಹಿಸಿ ಶಿಷ್ಟಪರಂಪರೆಗೆ ತಂದರು. ರಾಜ ಮಹಾರಾಜರ ಜೀವನವನ್ನು ಚಿತ್ರಿಸುವುದೇ ಮುಖ್ಯ ಉದ್ದೇಶವಾಗಿತ್ತು. ಆದರೆ ಜನಪದ ಮಹಾಕಾವ್ಯಗಳಿಗೆ ಜನ ಸಾಮಾನ್ಯರ ಸಾಂಸ್ಕೃತಿಕ ಬದುಕನ್ನು ಒಟ್ಟಾರೆ ಚಿತ್ರಿಸುವುದು ಮುಖ್ಯ. ಭಾರತೀಯ ಮಹಾಕಾವ್ಯಗಳೆಲ್ಲ

ಸಾಮಾನ್ಯವಾಗಿ ಧಾರ್ಮಿಕ ಕಾವ್ಯಗಳು. 'ಜನಪದ ಮಹಾಕಾವ್ಯಗಳ ನಾಯಕರಾದ ಭಾರತೀಯ ದೇವರುಗಳು ಆಚರಣೆಗಳ ಕಾರಣದಿಂದಾಗಿ ಇಂದಿಗೂ ಜನಮನದಲ್ಲಿ ನೆಲೆನಿಂತಿರುವುದನ್ನು ಕಣ್ಣಾರೆ ಕಾಣಬಹುದು. ಇದು ಭಾರತೀಯ ಮಹಾಕಾವ್ಯದ ವಿಶಿಷ್ಟ ಲಕ್ಷಣ''[೧೨೦] ಎನ್ನುತ್ತಾರೆ ಡಾ. ತೀ.ನಂ.ಶಂಕರನಾರಾಯಣರವರು.

ಪ್ರಸ್ತುತ ಬುರ್ರಕಥಾ ಕಾವ್ಯ- ಸ್ಯಾಸಿ ಚಿನ್ನಮ್ಮನ ಕಾವ್ಯವನ್ನು ಬಳ್ಳಾರಿ ಜಿಲ್ಲೆಯ ಸೊಂಡೂರು ತಾಲೂಕಿನ ಹಳೆದರೋಜಿಯ ಬುಡುಗ ಜಂಗಮ ಜನವರ್ಗದ ಕಲಾವಿದೆ "ಶ್ರೀಮತಿ ಬುರ್ರಕಥಾ ಈರಮ್ಮ ಮತ್ತು ಸಂಗಡಿಗರಿಂದ ಸಂಗ್ರಹಿಸಿ, ಸಂಪಾದಿಸಿರುವವರು ಕನ್ನಡ ವಿಶ್ವವಿದ್ಯಾಲಯದ ಜನಪದ ವಿಭಾಗದಲ್ಲಿ ಮುಖ್ಯಸ್ಥರಾಗಿರುವ ಡಾ.ಸ.ಚಿ.ರಮೇಶ್‌ರವರು. ಕನ್ನಡ ವಿಶ್ವವಿದ್ಯಾಲಯ ಈ ಮಹಾಕಾವ್ಯವನ್ನು ೧೯೯೯ರಲ್ಲಿ ಪ್ರಕಟಿಸಿದೆ. ೧೯೯೮ನೇ ಸಾಲಿನ ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ ಪಡೆದಿರುವ 'ದರೋಜಿ ಈರಮ್ಮ' ಮಹಾಕಾವ್ಯಗಳ ಗಣಿ. ದೈತ್ಯ ಪ್ರತಿಭೆಯ ಕಲಾವಿದೆಯಾದ ಈರಮ್ಮನಲ್ಲಿ ಹತ್ತಾರು ಮಹಾಕಾವ್ಯಗಳು ಸೊಗಸಾಗಿ ಹೊರಹೊಮ್ಮುತ್ತವೆ. ಈ ಕಾವ್ಯವನ್ನು ಮೊದಲು ತೆಲುಗಿನಲ್ಲಿ ಹಾಡುತ್ತಿದ್ದು, ಈರಮ್ಮ ಇವುಗಳನ್ನು ಅವರ ತಾತನಿಂದ ಕಲಿತಿದ್ದಾಗಿಯೂ, ಅವರಿಗೆ ಅವರ ತಾತ ಕಲಿಸಿದ್ದಾಗಿಯೂ, ತೆಲುಗಿನಲ್ಲಿದ್ದದ್ದನ್ನು ಕನ್ನಡಕ್ಕೆ ಹೊಂದ್ಸಿ ಕಂಠಪಾಠ ಮಾಡಿರುವುದಾಗಿ ಹೇಳುತ್ತಾಳೆ.''[೧೨೧] ಜನಪದ ಕಾವ್ಯಗಳು ಮೌಖಿಕವಾಗಿ ಬೆಳೆದು ಬರುತ್ತಿರುವುದಕ್ಕೆ ಇದೊಂದು ನಿದರ್ಶನ.

ಶೈವ ಮತ್ತು ವೈಷ್ಣವ ಎರಡು ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಘರ್ಷದ ಕಥನ ಇದಾಗಿದೆ. ಶೈವ ಮತವು ಜನ ಸಾಮಾನ್ಯರನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳಲು ಪ್ರಯತ್ನಿಸಿದರೆ, ವೈಷ್ಣವ ಪಂಥ ತನ್ನ ಸಮುದಾಯವನ್ನು ತನ್ನಲ್ಲಿಯೇ ಉಳಿಸಿಕೊಂಡು ಶೈವ ಮತದವರನ್ನು ತನ್ನೆಡೆಗೆ ಸೆಳೆದುಕೊಳ್ಳುವ ಹುನ್ನಾರಗಳು ಕಾವ್ಯದಲ್ಲಿ ಬಹು ಸ್ವಾರಸ್ಯಕರವಾಗಿ ಮೂಡಿವೆ. ಕಾವ್ಯದ ನಾಯಕಿ ಸ್ಯಾಸಿ ಚಿನ್ನಮ್ಮಳ ಗುಣ ಕಥನವನ್ನೊಳ ಗೊಂಡ ಈ ಕಾವ್ಯ ಪದ್ಯಗದ್ಯ ಮಿಶ್ರಿತವಾಗಿ, ಜನಪದ ಚಂಪೂ ಶೈಲಿಯಲ್ಲಿದೆ. ಒಟ್ಟು ೨೪ ಸರ್ಗಗಳಲ್ಲಿ ೩,೮೦೧ ಗೆರೆಗಳೊಂದಿಗೆ ಕಾವ್ಯದ ಹರವು ಹರಡಿದೆ. ಕಾವ್ಯವು ಪ್ರಾರ್ಥನೆಯೊಂದಿಗೆ ಆರಂಭವಾಗಿ ಮಂಗಳ ಗೀತೆಯೊಂದಿಗೆ ಮುಕ್ತಾಯವಾಗುತ್ತದೆ. ಮುಖ್ಯ ಗಾಯಕಿ ವಿಭಿನ್ನ ಪಲ್ಲವಿಗಳನ್ನು ಹಾಡುವುದರೊಂದಿಗೆ ಕಾವ್ಯ ನಿರೂಪಿಸುತ್ತಾಳೆ. ಹಿನ್ನೆಲೆಯ ಗಾಯಕರು ಪದ್ಯದ ಅರ್ಥವನ್ನು ಗದ್ಯದಲ್ಲಿ ಸ್ಪಷ್ಟಪಡಿಸುತ್ತಾರೆ. ಇದು ಕಾವ್ಯ ನಿರೂಪಣೆಯ ವಿಧಾನ. ಛಂದಸ್ಸಿನ ದೃಷ್ಟಿಯಿಂದ ಈ ಕಾವ್ಯ ತನ್ನದೇ ಆದ ವೈಶಿಷ್ಟವನ್ನು ಪಡೆದಿದೆ. ಕಾವ್ಯದ ಲಯವು ತುಂಬ ಸಹಜವಾಗಿದ್ದು ಸಂದರ್ಭಕ್ಕೆ ತಕ್ಕಂತೆ ಅನುಪ್ರಾಸ, ಸರಳ ಶಬ್ದಗಳ ಬಳಕೆಯಿಂದ ಕಾವ್ಯದಲ್ಲಿ ಚದುರು ನುಡಿಗಳು ಬಹಳವಾಗಿವೆ. ಒಂದೊಂದು ಪದ್ಯವು ಜೀವನಾನುಭವದ ಹದವನ್ನು ಒಳಗೊಂಡಿದೆ. ಕಾವ್ಯವನ್ನು ರಾಗಬದ್ಧವಾಗಿ ಹಾಡುವಾಗ ತಂಬೂರಿ, ಡಿಮ್ಮಿ, ಗಗ್ಗಲಿ ಮುಂತಾದ ವಾದ್ಯಗಳು ಸಂದರ್ಭಕ್ಕೆ ತಕ್ಕಂತೆ ಏಕಾಭಿನಯ ಇವೆಲ್ಲವೂ ಪಠ್ಯದಲ್ಲಿ ಸಮಾವೇಶಗೊಳ್ಳುತ್ತದೆ. "ಕಾವ್ಯದಲ್ಲಿಯ ಭಾಷಾ ಬಳಕೆಯ ಸಾಮಾಜಿಕ ಆಯಾಮವು ಸಾಮಾಜಿಕ ಭಾಷಾಧ್ಯಯನದ ದೃಷ್ಟಿಯಿಂದ ತುಂಬ ಮಹತ್ವ ಪೂರ್ಣವಾಗಿದೆ. ಬಳ್ಳಾರಿ ಪ್ರದೇಶದಲ್ಲಿ ಪ್ರಚಲಿತದಲ್ಲಿರುವ ಆಡು ರೂಪಗಳು ಕಾವ್ಯದಲ್ಲಿ ಹೇರಳವಾಗಿವೆ.''[೧೨೨] ಮಲೆ ಮಾದೇಶ್ವರ ಕಾವ್ಯ ಅಥವಾ ಮಂಟೇಸ್ವಾಮಿ ಕಾವ್ಯಗಳಲ್ಲಿ ಬರುವ ಹಾಗೆ ಪವಾಡಗಳ ಸರಮಾಲೆಯನ್ನು ಒಳಗೊಂಡಿಲ್ಲವಾದರೂ ಅವುಗಳು ಹಿತಮಿತವಾಗಿ ಕಾವ್ಯದಲ್ಲಿ ತುಂಬಿವೆ.

“ಚಿನ್ನಮ್ಮ ಒಬ್ಬ ಆದರ್ಶ ಸೊಸೆಯಾಗಿ ಕಂಡುಬಂದು, ದೈವೀಶಕ್ತಿಯ ಪ್ರೀತಿಗೆ ಪಾತ್ರಳಾಗುತ್ತಾಳೆ. ಅವಳ ಇಷ್ಟ ದೈವ ತಿರುಪತಿ ವೆಂಕಟರಮಣನಾಗಿದ್ದು, ಆ ಧರ್ಮದ ಚಿಹ್ನೆಗಳಾದ ಬೋಡುತಲೆ, ಗರುಡಗಂಬ, ಜಾಗಟೆ, ಶಂಖ, ಬಿಳಿನಾಮ, ಜುಟ್ಟು, ಜನಿವಾರ ಇತ್ಯಾದಿಗಳನ್ನು ಬಹಳ ಭಕ್ತಿಯಿಂದ ಕಾಣುತ್ತಾಳೆ. ಕಾವ್ಯವು ಹುಟ್ಟಿ ಪ್ರಸಾರಗೊಳ್ಳುತ್ತಿರುವ ಬಳ್ಳಾರಿ ಹಾಗೂ ಪಕ್ಕದ ಆಂಧ್ರದ ಕೆಲವು ಭಾಗಗಳಲ್ಲಿ ಶೈವ ಸಮೂಹಗಳ ಜೊತೆ ಸಂಘರ್ಷ ನಡೆಸಬೇಕಾಗಿ ಬಂದ ಸಂದರ್ಭದಲ್ಲಿ ವೈಷ್ಣವ ಪರಿಕಲ್ಪನೆಯಿಂದ ತುಂಬಿದ ಈ ಕಾವ್ಯ ನಾಯಕಿ ಚಿನ್ನಮ್ಮಳನ್ನು ಜನ ಸಮೂಹ ತಮ್ಮ ಅನನ್ಯತೆಯ ಸಂಕೇತವಾಗಿ ಸ್ವೀಕರಿಸಿ ಅವಳನ್ನು ದೈವತ್ವಕ್ಕೇರಿಸಿರುವ ಸಾಧ್ಯತೆ ಕಂಡುಬರುತ್ತದೆ.”[೧೨೩] ಸ್ವಾಸಿ ಚಿನ್ನಮ್ಮನ ಕಾವ್ಯ ಜನಪದ ಮಹಾಕಾವ್ಯಗಳ ಎಲ್ಲ ಲಕ್ಷಣಗಳನ್ನು ಹೊಂದಿದೆ.

ಕರ್ನಾಟಕದಲ್ಲಿ ಸುಮಾರು ೮ ಮತ್ತು ೧೨ನೇ ಶತಮಾನಗಳ ನಡುವಿನ ಮಧ್ಯಯುಗೀನ ಧಾರ್ಮಿಕ ಆಂದೋಲನದ ಸಂದರ್ಭದಲ್ಲಿ ಈ ಮಹಾಕಾವ್ಯಗಳು ಹುಟ್ಟಿರಬಹುದು. ಕರ್ನಾಟಕದ ಸಾಮಾಜಿಕ ಹಾಗೂ ಧಾರ್ಮಿಕ ಇತಿಹಾಸದಲ್ಲಿ ೧೨ನೇ ಶತಮಾನ ಒಂದು ಮಹತ್ವಪೂರ್ಣ ಘಟ್ಟ. ವೈದಿಕ ಹಾಗೂ ಜೈನ ಧರ್ಮಗಳು ಜನ ಸಾಮಾನ್ಯರಿಂದ ದೂರವಾಗಿ ಕೇವಲ ರಾಜಾಶ್ರಯ, ಮಠಗಳಿಗೆ ಸೀಮಿತವಾಗಿದ್ದಾಗ ಜನ ಸಾಮಾನ್ಯರಿಗೆ ನ್ಯಾಯ ಒದಗಿಸಲೆಂದೇ ವೀರಶೈವ ಧರ್ಮ ಹುಟ್ಟಿಕೊಂಡಿತು. ಇಷ್ಟು ಹೊತ್ತಿಗಾಗಲೇ ತನ್ನ ಕಾಂತಿಯನ್ನು ಕಳೆದುಕೊಂಡ ಜೈನಮತ ತನ್ನ ಅಸ್ತಿತ್ವವನ್ನು ಉಳಿಸಿಕೊಂಡರೆ ಸಾಕಾಗಿತ್ತು. ವೈದಿಕ ಮತ ಕೇವಲ ಡಾಂಭಿಕತನ, ಅರ್ಥಹೀನ ಆಚಾರ, ಜಾತೀಯತೆಗಳಿಗೆ ಸೀಮಿತವಾಗಿದ್ದಿತು. ವೀರಶೈವ ಧರ್ಮದ ಗುರಿ ಜನ ಜಾಗೃತಿ, ಆತ್ಮೋದ್ಧಾರದ ಹೆದ್ದಾರಿ ಸರ್ವರ ಸ್ವತ್ತಾಗಬೇಕೆಂಬುದು ಅವರ ಬಯಕೆ. ಸಾಮಾನ್ಯರ ಭಾಷೆಯಲ್ಲಿ ಜ್ಞಾನ ಬೋಧೆ ಮಾಡಿದರು. ಸ್ತ್ರೀಯರು, ಶೂದ್ರರು ಆಧ್ಯಾತ್ಮದ ತಿಳುವಳಿಕೆಗೆ ಅನರ್ಹರು ಎಂಬ ಸಂಕುಚಿತ ಭಾವನೆ ಮಾಯವಾಗಿ, ಸರ್ವಸಮಾನತೆ, ಜಾತಿ, ಮತ, ಪಂಥಗಳ ಏರುಪೇರುಗಳನ್ನು ಹೆಣ್ಣು ಗಂಡೆಂಬ ಓರೆಕೋರೆಗಳನ್ನು ಶರಣರ ವಚನಗಳು ಅಳಿಸಿ ಹಾಕಿದವು. ಒಟ್ಟಿನಲ್ಲಿ ಸಕಲ ಮಾನವರೂ ಆಧ್ಯಾತ್ಮ ಜ್ಞಾನಕ್ಕೆ ಮೋಕ್ಷಕ್ಕೆ ಅರ್ಹರು ಎಂಬುದನ್ನು ಪ್ರತಿಪಾದಿಸಿದರು. ಈ ಸೌಲಭ್ಯ ಸಮಾಜದ ಎಲ್ಲಾ ಸ್ತರಗಳಿಂದಲೂ ಜನರನ್ನು ತಂಡತಂಡವಾಗಿ ವೀರಶೈವ ಧರ್ಮ ಒಂದು ಧ್ವಜದ ಅಡಿಯಲ್ಲಿ ಆಕರ್ಷಿಸಿತು.

ವೀರಶೈವ ಮತದ ಪ್ರಾಭಲ್ಯದಿಂದಾಗಿ ‘ವರ್ಣಾಶ್ರಮಗಳ ತಳಹದಿ’ಯ ಮೇಲೆ ನಿಂತಿದ್ದ, ವೈದಿಕ ಮತ ತತ್ತರಿಸಿತು. ಅದುವರೆಗೆ ವೈದಿಕ ಮತಾನುಯಾಯಿಗಳಾಗಿದ್ದವರು, ಗುಂಪು ಗುಂಪಾಗಿ ವೀರಶೈವ ಮತವನ್ನು ಆಲಂಗಿಸಿದುದನ್ನು ಕಂಡು, ವೈದಿಕ ಮತ ನಾಶವಾಗುವ ಭೀತಿ, ವೈದಿಕರನ್ನು ಕಾಡಿತು. ವೀರಶೈವ ಮತದವರ ರೀತಿಯಲ್ಲಿಯೇ ತಮ್ಮ ಧರ್ಮದ ಹೊಸ ಸಿದ್ಧಾಂತವನ್ನು ಸ್ಥಾಪಿಸಿ, ವೈಧಿಕ ಮತದಿಂದ ಹೊರಗೆ ಹೋಗುತ್ತಿದ್ದವರನ್ನು ತಡೆಯುವ ಪ್ರಯತ್ನ ನಡೆಯಿತು. ಈ ಪ್ರಯತ್ನದ ಫಲವೇ ದ್ವೈತ ಮತ ಸ್ಥಾಪನೆ.

ವೀರಶೈವ ಮತ್ತು ವೈಷ್ಣವ ಪಂಥಗಳೆರಡೂ ಭಕ್ತಿಗೆ ಪ್ರಥಮ ಸ್ಥಾನವನ್ನು ನೀಡಿದವು. ಮೋಕ್ಷದ ಹೆದ್ದಾರಿಗೆ ಅಡ್ಡವಾಗಿದ್ದ ಮತದ ಮುಳ್ಳು ಬೇಲಿಯನ್ನು ಕಿತ್ತು ಹಾಕುವುದರಲ್ಲಿ ಈ ಎರಡು ಮತಗಳೂ ಸಮಾನವಾಗಿ ಶ್ರಮಿಸಿದವು. ಎಲ್ಲ ವರ್ಗದವರಿಗೂ ಈ ಎರಡು ಮತಗಳ ಧ್ವಜದಡಿಯಲ್ಲಿ ಆಶ್ರಯ ದೊರಕಿತು.

ಇಬ್ಬರೂ ಜನಸಾಮಾನ್ಯರಲ್ಲಿ ಜ್ಞಾನ ಪ್ರಸಾರ ಮಾಡುವುದಕ್ಕೆ ಜನ ಸಾಮಾನ್ಯರ ನುಡಿಯನ್ನು ಆಶ್ರಯಿಸಿದರು. ಶಿವಶರಣರು ವಚನಗಳನ್ನು ಕಟ್ಟಿ ಹಾಡತೊಡಗಿದರೆ, ವೈಷ್ಣವ ಪಂಥಿಗಳು ಕೀರ್ತನೆಗಳ ಮೂಲಕ ಜನರನ್ನು ಒಲಿಸಿಕೊಳ್ಳುತ್ತಿದ್ದರು.

ಪ್ರಸ್ತುತ ಕಾವ್ಯದಲ್ಲಿನ ನಾಯಕಿ ಚಿನ್ನಮ್ಮ ವೀರಶೈವ ಧರ್ಮವನ್ನು ಒಪ್ಪಿಕೊಳ್ಳದೆ, ತನ್ನ ಜೀವದ ಜೀವವಾದ ತಿರುಪತಿ ದೇವರಿಗಾಗಿ ಹಂಬಲಿಸಿ ಆತನಲ್ಲಿ ಐಕ್ಯವಾಗುವುದನ್ನು ಕಾಣುತ್ತೇವೆ. ಇತಿಹಾಸದುದ್ದಕ್ಕೂ 'ಬಲತ್ಕಾರವಾಗಿ ಹಲವಾರು ಮತಾಂತರಗಳಾಗಿರುವುದನ್ನೂ, ಆಗುತ್ತಿರುವುದನ್ನೂ ಕಾಣುತ್ತಿರುವಾಗ, ಪ್ರಸ್ತುತ ಕಾವ್ಯದಲ್ಲಿಯೂ ಶೈವ ಮತ್ತು ವೈಷ್ಣವ ಧರ್ಮೀಯರು ಮತಾಂತರ ಮಾಡಲು ಬಳಸುವ ಹುನ್ನಾರಗಳು ಕಾವ್ಯದಲ್ಲಿ ದಾಖಲಾಗುವ ಚಿತ್ರಣ'ವನ್ನು ಕಾಣುತ್ತೇವೆ.

ಪ್ರಸ್ತುತ ಕಾವ್ಯದ ಕಥಾವಸ್ತು, ಶೈವ ಪಂಥವನ್ನು ವೈಷ್ಣವ ಪಂಥ ತನ್ನ ಬಲಾಬಲಗಳನ್ನು ಉಪಯೋಗಿಸಿಕೊಂಡು ಅವರನ್ನು ತಮ್ಮ ಮತಕ್ಕೆ ಸೇರಿಸಿಕೊಂಡ ಸಾಂಸ್ಕೃತಿಕ ಸಂಘರ್ಷ.

ಕದ್ರಿ ಗುಡ್ಡದಲ್ಲಿ ಸುಖವಾಗಿದ್ದ ನರಸಿಂಹಗೌಡ ಹಾಗೂ ಶೀಲಮ್ಮ ದಂಪತಿಗಳಿಗೆ ಅವರ ದೈವವಾದ ತಿರುಪತಿ ಸ್ವಾಮಿಯಿಂದ ವರಪ್ರಸಾದವಾಗಿ, ಏಳು ಮಂದಿ ಗಂಡು ಮಕ್ಕಳ ಅನುಗ್ರಹವಾಗುತ್ತದೆ. ಅವರಿಗೆ ಅನುಕ್ರಮವಾಗಿ ದೊಡ್ಡ ತಿರುಪತಿ, ನಾಗ ತಿರುಪತಿ, ದೇವ ತಿರುಪತಿ, ಮುನಿ ತಿರುಪತಿ, ಲೋಕ ತಿರುಪತಿ, ಚಿಕ್ಕ ತಿರುಪತಿ ಮತ್ತು ಭೋಗ ತಿರುಪತಿ ಎಂಬ ನಾಮಕರಣ ಮಾಡುತ್ತಾರೆ. ದಿನ ಕಳೆದಂತೆ ಆ ದಂಪತಿಗಳಿಗೆ, ಹೆಣ್ಣು ಸಂತಾನವಿಲ್ಲದ ಕೊರತೆ. ಏಳುಮಂದಿ ಗಂಡು ಮಕ್ಕಳಿದ್ದರೂ, ಸ್ವಾಮಿಯ ಗುಡಿಗೆ, ಗುಡ್ಡಕ್ಕೆ ಪಡಗ ಹೊರಲು ಆರ್ತಿ ಬೆಳಗಲು, ಕುಂಬತರಲು, ಸಾಸ್ಟಿ ಹಾಕಲು ಕೊನೆಗೆ ಕಳಸ ಇಡಲಾದರೂ ಒಂದು ಹೆಣ್ಣು ಮಗ ಬೇಕೆಂಬ ಬಯಕೆ.

'ಹೆಣ್ಣ ಮಕ್ಕಳೆ ಇಲ್ಲೆ ಸ್ವಾಮಿ
ಪೂಜೆ ಮಾಡಲಾಕ
ನಿನಗೆ ಪಡಗ ತರಲಿಕೆ'

(ಸ್ವಾಸಿ ಚಿನ್ನಮ್ಮನ ಕಾವ್ಯ, ಪುಟ ೨೯)

ಎಂದು ಆ ದಂಪತಿಗಳು ತಿರುಪತಿ ಸ್ವಾಮಿಯನ್ನು ಭಕ್ತಿಯಿಂದ ಕೋರುತ್ತಾರೆ.

ಜನಪದರಲ್ಲಿ ಹೆಣ್ಣು, ಹೆಣ್ತನದ ಸಾಫಲ್ಯವನ್ನು ಪಡೆಯುವುದು ತಾಯಿಯಾದಾಗ -ಗಂಡು ಸಂತಾನವನ್ನು ಪಡೆದಾಗ; ಆದರೆ ಗಂಡು ಮಗನನ್ನು ಪಡೆದ ಮಾತ್ರದಲ್ಲಿ, ತಾಯ್ತನದ ಹಂಬಲ ತೀರುವುದಿಲ್ಲ. ಕಳಸವನ್ನು ಹಿಡಿಯುವ ಮಗಳನ್ನು ಪಡೆದಲ್ಲಿ ಆಕೆ ತನ್ನ ಬದುಕು ಅರ್ಥಪೂರ್ಣವೆಂದು ಬಗೆಯುವಳು.

ಇವರ ಬೇಡಿಕೆಯನ್ನು ಸ್ವಾಮಿ ತನ್ನ ಪತ್ನಿ ಲಕ್ಷ್ಮಿಯ ಜೊತೆ ಚರ್ಚಿಸುತ್ತಾನೆ. ಲಕ್ಷ್ಮಿ ಈ ದಂಪತಿಗಳಿಗೆ ಹೆಣ್ಣು ಮಗು ಜನಿಸಿದರೆ, ಅದರಿಂದ ಅವಳಿಗೂ, ಅವಳ ಹೆತ್ತವರಿಗೂ, ಕರುಣಿಸುವ ನಮಗೂ ತೊಂದರೆಯ ಸರಮಾಲೆಗಳೇ ಎದುರಾಗುತ್ತದೆಂದು ಹೇಳುತ್ತಾಳೆ. ಆದರೆ ತಿರುಪತಿಸ್ವಾಮಿ, ತನ್ನ ಭಕ್ತ ದಂಪತಿಗಳಿಗೆ ಎಲ್ಲ

ತೊಂದರೆಗಳನ್ನು ತಿಳಿಸಿ ಮನವೊಲಿಸಲು ಪ್ರಯತ್ನಿಸಿದರೂ, ದಂಪತಿಗಳು ಹಟ ಮಾಡಿದಾಗ ಮುಂದೆ ಒದಗಬಹುದಾದ ಎಲ್ಲಾ ತೊಂದರೆಗಳಿಗೂ ನಾನು ಜವಾಬ್ದಾರನಲ್ಲ ಎನ್ನುತ್ತಾನೆ.

'ಪಾಪ ಕರ್ಮಾ ನಮ್ಮ ಮ್ಯೆ ಇರಲಿ'

(ಸ್ವಾಸಿ ಚಿನ್ನಮ್ಮನ ಕಾವ್ಯ, ಪುಟ ೩೪)

ಎಂದು ಸೆರಗೊಡ್ಡಿದರು. ಗೋವಿಂದ, ಗೋವಿಂದ ಎಂದು ಬೇಡುತ್ತಿರುವಾಗ ಸ್ವಾಮಿಯ ಪಾದದ ಬಳಿ ಇದ್ದ ಕಜ್ಜೇರು ಹಣ್ಣು ಮುತ್ತಿನ ವಡೆಯಾಗಿ ಶೀಲಮ್ಮ ತಾಯಿಯ ಸೆರಗಿನೊಳಕ್ಕೆ ಪ್ರಸಾದವಾಗಿ ಬೀಳುತ್ತದೆ. ಈ ಮಹಾಪ್ರಸಾದದಿಂದ ಹೆಣ್ಣು ಮಗು ಜನಿಸಿದರೆ

'ಏಳು ಸತಿ ದಾಸಿಂಗ ಮಾಡುತೀನಿ
ತಿರುಪತಿ ಸ್ವಾಮಿ
ಏಳು ಸತಿ ದಾಸಿಗ ಹಿಡ್ಸೀತ್ತಿನಿ
ಸ್ವಾಮಿ ಏಳು ಸರ್ತಿ ಓಲೆ ಮಾಡ್ಸಿ ಕೊಡ್ತಿನಿ
ನಿನ ಕೂದಲಿಗೆ
ನಿನ ಜಡೆ ಕೂದಲು ಕೊಡ್ತಿನಿ
ಏಳು ಕೂದಲೇ ಕೊಡ್ತಿನಿ ತಾಯೆ'

(ಸ್ವಾಸಿ ಚಿನ್ನಮ್ಮನ ಕಾವ್ಯ, ಪುಟ ೩೫, ೩೬)

ಎಂದು ಹರಕೆ ಮಾಡುತ್ತಾರೆ.

ಪ್ರಸಾದವನ್ನು ದಂಪತಿಗಳಿಬ್ಬರೂ ಭಕ್ತಿಯಿಂದ ಸ್ವೀಕರಿಸುತ್ತಾರೆ. ಒಂಬತ್ತು ತಿಂಗಳಾದ ಮ್ಯಾಲೆ ಶನಿವಾರದ ದಿನ ಮಧ್ಯಾಹ್ನದ ಹನ್ನೆರ್ಡ್ ಗಂಟೆಗೆ ಶೀಲಮ್ಮ ಹೆಣ್ಣು ಮಗುವಿಗೆ ಜನ್ಮ ನೀಡುತ್ತಾಳೆ. ಮಗುವಿನ ಹಣೆಯ ಮೇಲೆ ಸ್ವಾಮಿ 'ಮೂರು ನಾಮ ಸೀಲ್ ಹೊಡ್ದಂಗೆ' ಬರ್ದು ಬಿಟ್ಟಿದ್ದಾನೆ. ದಂಪತಿಗಳು ಅಪಾರ ಸಂತೋಷದಿಂದ ಬೀಗುತ್ತಾರೆ. ಅತ್ಯಂತ ಸಡಗರ-ಸಂಭ್ರಮದಿಂದ ಮಗುವಿಗೆ ನಾಮಕರಣ ಮಾಡಲು ದಿನಗೊತ್ತು ಮಾಡಿಕೊಂಡು ಸಕಲ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ. ಸಮಾರಂಭಕ್ಕೆ ಬರುವಂತೆ ಬಂಧು ಮಿತ್ರರಿಗೆ ಓಲೆ ಕಳಿಸಲಾಗುತ್ತಿದೆ. ಪಾಗೊಂಡದಲ್ಲಿರುವ ತನ್ನ ಒಬ್ಬಳೇ ತಂಗಿ ಗೌಡನಾಗಮ್ಮನನ್ನು ಕರೆದುಕೊಂಡು ಬರಲು ನರಸಿಂಹರೆಡ್ಡಿ, ತನ್ನ ಮಗ ದೊಡ್ಡ ತಿರುಪತಿಯನ್ನು ಕಳಿಸುತ್ತಾನೆ. ದೊಡ್ಡ ತಿರುಪತಿ, ಅತ್ತೆ ಮಾವನವರನ್ನು ತಂಗಿಯ ನಾಮಕರಣಕ್ಕೆ ಕದ್ರಿಗೆ ಬರಲು ಕೋರುತ್ತಾನೆ. ನಿನ್ನ ತಂಗಿಯನ್ನು ನನ್ನ ಮಗನಿಗೆ ಮದುವೆ ಮಾಡಿಕೊಡುವುದಾದರೆ ಬರುವುದಾಗಿ ಅತ್ತೆ ಹೇಳುತ್ತಾಳೆ. ಈ ವಿಚಾರದಲ್ಲಿ ತಂದೆ ತಾಯಿಯನ್ನು ಕೇಳುವುದು ಸೂಕ್ತ ಎನ್ನುತ್ತಾನೆ. ಗೌಡನಾಗಮ್ಮ, ಆಕೆಯ ಗಂಡ ಮಧುರೆಡ್ಡಿ ಮತ್ತು ಆಕೆಯ ಏಳುಮಂದಿ ಮಕ್ಕಳು ಕದ್ರಿ ಗ್ರಾಮಕ್ಕೆ ಬರುತ್ತಾರೆ.

ಗೌಡನಾಗಮ್ಮ ಮತ್ತು ಮಧುರೆಡ್ಡಿ ದಂಪತಿಗಳು ಶೈವಾರಾಧಕರು. ಅವರು ಈಶ್ವರ ಗುಡಿಗೆ ಪೂಜೆ ಮಾಡುತ್ತಾರೆ. ಲಿಂಗವೊಂದನ್ನು ಬಿಟ್ಟು ಬೇರೆ ದೇವರನ್ನು ಪೂಜಿಸುವವರಲ್ಲ. ವೈಷ್ಣವ ಧರ್ಮದ ಬಗ್ಗೆ

ಅವರಿಗೆ ಗೌರವವಿಲ್ಲ. ಹೇಗಾದರೂ ಮಾಡಿ ತನ್ನ ಅಣ್ಣ ಮತ್ತು ಆತನ ಮಕ್ಕಳನ್ನು ತಮ್ಮ ಮತಕ್ಕೆ ಸೇರಿಸಿ ಕೊಳ್ಳುವ ಹುನ್ನಾರ ಹೂಡುತ್ತಾರೆ.

ಕದ್ರಿ ಗ್ರಾಮಕ್ಕೆ ಬಂಡಿಯಲ್ಲಿ ಬಂದ ತಂಗಿಯನ್ನು ನರಸಿಂಹರೆಡ್ಡಿ ಮನೆಯೊಳಗೆ ಬರಲು ಸ್ವಾಗತಿಸುತ್ತಾನೆ. ಆದರೆ ಗೌಡನಾಗಮ್ಮ ನನ್ನ ಮನೆಗೆ ಮಗಳನ್ನು ಕೊಡಂಗಿದ್ದರೆ

'ನೀರಿಡಿತಿನಿ ನಾನು
ಸೇರಗಿ ನೀರಿಡಿತಿನಿ
ಇಲ್ಲವಿದ್ದರೆ ಇಡಿಯಾಂಗಿಲ್ಲ'

(ಸ್ವಾಸಿ ಚಿನ್ನಮ್ಮನ ಕಾವ್ಯ, ಪುಟ ೪೩)

ಎನ್ನುತ್ತಾಳೆ. ನರಸಿಂಹರೆಡ್ಡಿ ಮೊದಲು ಮಗುವಿನ ನಾಮಕರಣ ಮುಗಿಯಲಿ ಎಂದರೂ ತಂಗಿಯ ಒತ್ತಾಯಕ್ಕೆ ವಿಧಿಯಿಲ್ಲದೆ ಒಪ್ಪಿಕೊಳ್ಳುತ್ತಾನೆ. ನಂತರ ತಂಗಿ ತನ್ನ ಮುತ್ತಿನ ಸೆರಗನ್ನು ಹಿಡಿದುಕೊಂಡು ನೀರಿನ ಕೊಡವನ್ನು ಹಿಡಿಯುತ್ತಾಳೆ. ಮಗುವಿಗೆ ಹೆಸರನ್ನು ಇಡಲು ಮಗುವನ್ನು ತಂಗಿಯ ಕೈಗೆ ಕೊಡುತ್ತಾನೆ. 'ತಿರುಪತಿ ದೇವರ ವರ'ದಿಂದ ಹುಟ್ಟಿದವಳು ನಮ್ಮ ಜಾತಿಗೆ ಸಂಬಂಧಿಸಿದ ಹೆಸರನ್ನು ಇಡಲು ಹೇಳುತ್ತಾನೆ. ಆ ಮಗುವಿನ ಸಂಬಂಧ ಮಾಡಿದರೆ, ಎರಡು ಬೇರೆ ಬೇರೆ ಧರ್ಮಗಳು ಎದುರಾಗುತ್ತವೆಂದೂ ಯೋಚನೆ ಮಾಡಿ ನಿರ್ಧಾರ ವನ್ನು ತೆಗೆದುಕೊಳ್ಳಲು ತಂಗಿಗೆ ಹೇಳುತ್ತಾನೆ. ಆದರೆ ತಂಗಿ ಏನಾದರೂ ಆಗಲಿ ನಾನು ನಿನ್ನ ಮಗಳನ್ನೇ ನನ್ನ ಮಗನಿಗೆ ತಂದು ಕೊಳ್ಳುತ್ತೇನೆ ಎನ್ನುತ್ತಾಳೆ. ಸ್ವಾಮಿಯ ವರಪ್ರಸಾದದಿಂದ ಜನಿಸಿದ್ದರಿಂದ ಮಗುವಿಗೆ 'ಸ್ವಾಸಿ ಚಿನ್ನಮ್ಮ'[೧೨೪]ನೆಂದು ನಾಮಕರಣ ಮಾಡುತ್ತಾರೆ.

ಮತಾಂತರಕ್ಕೆ ಬೀಜಾರ್ಪಣೆ ಮಾಡಿದ ತಂಗಿ ಗೌಡನಾಗಮ್ಮನ ಬಲೆಯಲ್ಲಿ ಅಣ್ಣ ನರಸಿಂಹರೆಡ್ಡಿ ಮತ್ತು ಆತನ ಸಂಸಾರದ ಮಂದಿ ಸಿಲುಕುತ್ತಾರೆ. ಮಗುವಿನ ಜನನ ತಂದೆತಾಯಿಗಳಿಗೂ, ಆ ಮಗುವಿಗೂ ಅನೇಕ ಕಷ್ಟಗಳಿಗೆ ಎಡೆಮಾಡಿಕೊಡುತ್ತದೆನ್ನುವುದನ್ನು ಮೊದಲೇ ತಿರುಪತಿಸ್ವಾಮಿಯ ಪತ್ನಿ ಲಕ್ಷ್ಮಿ ತಿಳಿಸಿದ್ದು, ಅಣ್ಣನ ಹತ್ತಿರ 'ಹೆಣ್ಣುಮಗು'ವನ್ನು ತನ್ನ ಮನೆಗೆ ಸೊಸೆಯನ್ನಾಗಿ ಮಾಡಿಕೊಳ್ಳಲು ಭಾಷೆ ತೆಗೆದುಕೊಳ್ಳುವುದರಿಂದ, ವೈಷ್ಣವ ಧರ್ಮೀಯರನ್ನು ಶೈವ ಮತಕ್ಕೆ ಮತಾಂತರ ಮಾಡಿಸುವ ಹುನ್ನಾರಕ್ಕೆ ತಿರುವು ನೀಡುತ್ತದೆ.

ನಾಮಕರಣದ ನಂತರ ತಂಗಿಗೆ ಹೊಸ ಸೀರೆಯೊಂದನ್ನು ಕೊಟ್ಟು ಬಾಗಿನದೊಂದಿಗೆ ಅವರ ಊರಿಗೆ ಕಳುಹಿಸಿಕೊಡುತ್ತಾನೆ.

ಮಗು ಚಿನ್ನಮ್ಮನಿಗೆ, ಹರಕೆಯಂತೆ ಮೂರು ವರ್ಷದ ಒಳಗೆ ತಿರುಪತಿ ಸ್ವಾಮಿಗೆ ತಲೆ ಕೂದಲನ್ನು ಅರ್ಪಿಸುತ್ತಾರೆ. ಏಳು ದಾಸಿಂಗವನ್ನು ಮಾಡಿಸುತ್ತಾರೆ. ಈ ಶುಭ ಕಾರ್ಯಕ್ಕೆ ತಂಗಿ ಗೌಡನಾಗಮ್ಮನನ್ನು ಕರೆದರೂ 'ತಮ್ಮ ವಿರುದ್ಧ ಧರ್ಮದ ಆಚರಣೆ' ಎಂದು, ಇಷ್ಟವಿಲ್ಲದೆ ಹಲವು ನೆಪಗಳನ್ನು ಹೇಳಿ ತಪ್ಪಿಸಿ ಕೊಳ್ಳುತ್ತಾಳೆ.

ಒಂದು ಶುಭದಿನದಲ್ಲಿ ಮಗಳನ್ನು ಶಾಲೆಗೆ ಕಳಿಸುತ್ತಾರೆ. ಶಾನುಭೋಗರ ಗುರು ಕುಲಕ್ಕೆ ಸೇರಿದ ಚಿನ್ನಮ್ಮ ನಿಂದ ಮೊದಲು ಸಂಪ್ರದಾಯದಂತೆ, ತುಳಸಿ ಗಿಡಕ್ಕೆ ಪೂಜೆ ಮಾಡಿಸಿ ನೆಲದ ಮ್ಯಾಲೆ ಕುಂತ್ಕಂಡು ಬಲಗೈ ಬೆರಳಲ್ಲಿ ಮರಳಿನ ಮೇಲೆ 'ಸರಸ್ವತಿ ಓನಾಮ'ವನ್ನು ಬರೆಸುತ್ತಾನೆ. ದೇವ್ರು ವರದಲ್ಲಿ ಹುಟ್ಟಿದ ಚಿನ್ನಮ್ಮ

'ಏ್ಯ ಕಣ್ಣು ಬಿಟ್ಟರೆ ಕಂಠಪಾಠ
ಒಂದು ಬರ್ದದ್ರೆ ನಾಕು ಬರಿತಾಳೆ
ಎಷ್ಟು ತಿರುಬಿಲಿ ಬರಿತಾಳಮ್ಮೊ
ಒಂದು ವರ್ಸಲ ಎಲ್ಲಾ ವರ್ಸಲ
ಹನ್ನೆರಡು ವಯಸ ತನಕ ಬರ್ದಾಳೆ'

(ಸ್ಯಾಸಿ ಚಿನ್ನಮ್ಮನ ಕಾವ್ಯ, ಪುಟ ೫೪)

ಪವಾಡದ ರೀತಿ ವಿದ್ಯಾಭ್ಯಾಸ ಮಾಡುತ್ತಾಳೆ. ಆಕೆಗೆ ೧೨ ವರ್ಷ ತುಂಬುವಾಗ ತಂದೆ ನರಸಿಂಹರೆಡ್ಡಿ ಗುರುಗಳ ಬಳಿಗೆ ಬರುತ್ತಾನೆ. ಆಕೆಯ ಜಾಣತನವನ್ನು ಕಲಿಯುವ ಆಸಕ್ತಿಯನ್ನು ಗಮನಿಸಿದ ಗುರುಗಳು, ಚಿನ್ನಮ್ಮನನ್ನು ಇನ್ನೂ ಹೆಚ್ಚು ಓದಿಸಲು ಹೇಳುತ್ತಾರೆ. ಆದರೆ ನಮ್ಮ ಮತದಲ್ಲಿ ವಯಸ್ಸಿಗೆ ಬಂದ ಹೆಣ್ಣು ಮಗುವನ್ನು ಹೆಚ್ಚು ಓದಿಸುವುದು ಮನೆತನದ ಗೌರವಗಳಿಗೆ, ಧರ್ಮಕ್ಕೆ ಧಕ್ಕೆಯಾಗುವುದೆಂದು ಹೇಳಿ, ಮಗಳಿಗೆ ವಿದ್ಯಾಭ್ಯಾಸ ಮಾಡಿಸಿದ್ದಕ್ಕೆ ಗುರುಗಳಿಗೆ ಅಕ್ಕಿ, ಬ್ಯಾಳೆ, ಬಟ್ಟೆ ಹಣಕೊಟ್ಟು ಪಾದ ಮುಗಿದು ಸತ್ಕರಿಸುತ್ತಾರೆ.

ಗುರುಕುಲ ಪದ್ಧತಿ, ಗುರು ದಕ್ಷಿಣೆ, ಹೆಣ್ಣು ಮಕ್ಕಳ ವಿದ್ಯಾಭ್ಯಾಸ ಮುಂತಾದ ಪ್ರಾಚೀನ ಪದ್ಧತಿಗಳ ಮೇಲೆ ಕಾವ್ಯ ಬೆಳಕು ಚೆಲ್ಲುತ್ತದೆ.

ಗೌಡನಾಗಮ್ಮ, ಚಿನ್ನಮ್ಮ ಮದುವೆಯ ವಯಸ್ಸಿಗೆ ಬಂದದ್ದನ್ನು ತಿಳಿದು ಗಂಡ ಮತ್ತು ಮಕ್ಕಳೊಂದಿಗೆ ಅಣ್ಣನ ಮನೆಗೆ ಬರುತ್ತಾಳೆ. ತನ್ನ ಮಗ ಯಂಗಳರೆಡ್ಡಿಗೆ ಚಿನ್ನಮ್ಮನನ್ನು ಕೊಟ್ಟು ತನ್ನೂರಿನಲ್ಲಿಯೇ ಮದುವೆ ಮಾಡಿಕೊಡಬೇಕೆಂದು ಕೇಳುತ್ತಾಳೆ. ಆದರೆ ನರಸಿಂಹರೆಡ್ಡಿ, ತಿರುಪತಿಸ್ವಾಮಿಯ ಮುಂದೆ ಮದುವೆ ಮಾಡಿ ಕೊಡುವುದಾಗಿ ಹೇಳುತ್ತಾನೆ. ಕೊನೆಗೆ ಹೆಣ್ಣಿನ ಮನೆಯ ಮುಂದೆ ಮದುವೆ ಮಾಡಲು ಒಪ್ಪುತ್ತಾರೆ. ಶಾಸ್ತ್ರದ ಪ್ರಕಾರ ತಿರುಪತಿಸ್ವಾಮಿಗೆ ಮದುವೆಗೆ ಮುನ್ನ ಹತ್ತು ಸೇರು ಅಕ್ಕಿ, ಹತ್ತು ಸೇರು ಬೇಳೆ, ಐದು ತೆಂಗಿನಕಾಯಿ ಕೊಟ್ಟು ಬಂದ ಮ್ಯಾಲೆ ಲಗ್ನ ಮಾಡುವುದಾಗಿ ಅಣ್ಣಾ ಹೇಳಿದರೆ, ತಂಗಿ ಮದುವೆಯ ನಂತರ ಕೊಟ್ಟರಾಯಿತು ಎನ್ನುತ್ತಾಳೆ. ಎಂಜಲಾಗುವುದಿಲ್ಲವೇ ಎಂದರೆ, ಎಲ್ಲಾ ತೆಗೆದಿಟ್ರಾಯಿತು ಏನೂ ಆಗುವುದಿಲ್ಲ ಎನ್ನುತ್ತಾಳೆ. ವಿಧಿಯಿಲ್ಲದೆ ಒಪ್ಪಿಕೊಳ್ಳುತ್ತಾನೆ.

ಮುಡುಪು ಮೈಲಿಗೆಯಾಗುವಂತೆ ತಂಗಿ ತಂತ್ರ ಮಾಡುವುದು, ಎರಡು ಬೇರೆ ಬೇರೆ ಧರ್ಮದವರು ಈ ಮದುವೆಗೆ ಒಪ್ಪಿಕೊಂಡಿರುವುದು ಎರಡೂ ಕಡೆಯವರ ಕುಟಿಲತೆಯನ್ನು ತೋರಿಸುತ್ತದೆ. ಗೌಡನಾಗಮ್ಮ ಪ್ರಜ್ಞಾಪೂರ್ವಕವಾಗಿಯೇ ವೈಷ್ಣವ ಧರ್ಮದ ವಿಧಿ ಆಚರಣೆಯಲ್ಲಿ ಭಾಗವಹಿಸದಿರಲೂ ಹಾಗೂ ಅವರ ಆಚರಣೆಯಲ್ಲಿ ಲೋಪದೋಷಗಳಾಗುವಂತೆ ಹುನ್ನಾರವನ್ನು ಮಾಡುತ್ತಾಳೆ.

ಮದುವೆ ಮುಗಿಯುವ ತನಕ, ವೈಷ್ಣವ ಪಂಥದವರಂತೆ, ಮದುವೆಯ ಎಲ್ಲಾ ವಿಧಿ ವಿಧಾನಗಳನ್ನು, ಕಟ್ಟು ಕಟ್ಟಳೆಗಳನ್ನೂ ಅನುಸರಿಸುವಂತೆ, ಗೌಡನಾಗಮ್ಮ ತನ್ನ ಮಗ ಮತ್ತು ಸಂಬಂಧಿಕರಿಗೆ ತಾಕೀತು ಮಾಡುತ್ತಾಳೆ. ಮದುವೆ ಮನೆ ಸಿಂಗಾರವಾಗುತ್ತದೆ. ಮನೆಯ ಒಳಗೂ, ಹೊರಗೂ ಸಾರಿಸುತ್ತಾರೆ. ತೆಂಗಿನ ಗರಿಗಳಿಂದ, ಚಪ್ಪರ ಹಾಕುತ್ತಾರೆ. ಮದುವೆಯ ದಿನ ಹಂದರದಡಿಯಲ್ಲಿ ಕರಿಯ ಕಂಬಳಿಯನ್ನು ಹಾಸಿ ಅದರ ಮೇಲೆ ಸ್ವಾಸಿವೆ ಇಡುತ್ತಾರೆ. ಮದುಮಕ್ಕಳನ್ನು ಕೂಡಿಸುತ್ತಾರೆ. ಎಲ್ಲರೂ ಉದ್ದನಾಮ ಹಚ್ಚಿಕೊಂಡು ವೈಷ್ಣವ ಸಂಪ್ರದಾಯದಂತೆ 'ಗೋವಿಂದ' ಅಂತ ಮಂಗಳರೆಡ್ಡಿ ಚಿನ್ನಮ್ಮನಿಗೆ ತಾಳಿ ಕಟ್ಟಿ ನಾರಾಯಣ ಅಂತ ಗಂಟ್ಹಾಕಿದ. ಎಲ್ಲವೂ ಗೌಡನಾಗಮ್ಮನ ಸಂಚಿನಂತೆ ಮದುವೆ ಆಗುವತನಕ ಶೈವರೂ, ನಾರಾಯಣನ ಸಂಪ್ರದಾಯವನ್ನು ಅನುಸರಿಸುತ್ತಾರೆ.

ಇಲ್ಲಿಗೆ ಕಾವ್ಯದ ಒಂದು ಹಂತ ಮುಕ್ತಾಯವಾಗಿ, ಶೈವರು ಕೊಡುವ ಹಿಂಸೆಯನ್ನು ವೈಷ್ಣವ ಪಂಥದವರು ಸಹಿಸಿಕೊಳ್ಳುತ್ತಾ ಕೊನೆಗೆ ಶೈವರನ್ನು ಬಲತ್ಕಾರವಾಗಿ ವೈಷ್ಣವ ಪಂಥಕ್ಕೆ ಸೇರಿಸಿಕೊಳ್ಳುವ ಮುಂದಿನ ಚಿತ್ರಣ ಕೇಳುಗರ ಮನಸ್ಸನ್ನು ಬಿಗಿ ಹಿಡಿದು ನಿಲ್ಲಿಸುತ್ತದೆ.

ಮದುವೆಯ ನಂತರ ನರಸಿಂಹರೆಡ್ಡಿ ಸ್ವಾಮಿಗೆ ಮುಡುಪನ್ನು ಸಲ್ಲಿಸಲು ಗುಡ್ಡಕ್ಕೆ ಹೋಗುತ್ತಾನೆ. ಅಳಿಯ ಮಗಳು ತಂಗಿಯರನ್ನು ಕರೆದಾಗ, ನಾನಾ ಕಾರಣಗಳನ್ನು ಹೇಳಿ, ರೆಡ್ಡಿ ಒಬ್ಬನೇ ಹೋಗುವಂತೆ ಗೌಡನಾಗಮ್ಮ ಮಾಡುತ್ತಾಳೆ. ಶಾಸ್ತ್ರದ ಪ್ರಕಾರ ಮದುವೆಗೆ ಮುನ್ನ ಅರ್ಪಿಸಬೇಕಾಗಿದ್ದ ಮುಡುಪು ಸ್ವಾಮಿಗೆ ಮೈಲಿಗೆಯಾಗಿ ಕಂಡಿದ್ದರಿಂದ ಸ್ವಾಮಿ ನಿರಾಕರಿಸುತ್ತಾ, ಕದ್ರಿ ಮಂಚದಲ್ಲಿನ ನನ್ನ ತಮ್ಮ ದಾಸಪ್ಪ ಹನುಮಂತನ ಪೂಜೆ ಮಾಡುತ್ತಾನೆ,

'ಅವನ ಗರಡು ಕಂಬಕ್ಕೆ ನೋಡು
ಊಟ ಮಾಡಸ್ಸೆಯ್ಯ'

(ಸ್ವಾಸಿ ಚಿನ್ನಮ್ಮನ ಕಾವ್ಯ, ಪುಟ ೬೫)

ಎಂದು ಹೇಳುತ್ತಾನೆ.

ತನ್ನ ತಂಗಿಯಿಂದ ತಡವಾಯಿತೆಂದು ಹೇಳುತ್ತಾನೆ. ಆ ಹೆಣ್ಣು ಮಗುವಿಗೆ ಕಷ್ಟಗಳು ಬರುತ್ತವೆಂದು ಸ್ವಾಮಿ ಹೇಳುತ್ತಾನೆ, ದುಃಖದಿಂದ ಊರಿಗೆ ಬರುತ್ತಾನೆ.

ಕುಲಕ್ರಮಗತವಾಗಿ ಪೂಜಿಸಿಕೊಂಡು ಬಂದ ದೈವಕ್ಕೆ ಸಕಾಲದಲ್ಲಿ ಪೂಜೆ ಸಲ್ಲಿಸದಿದ್ದರೆ ಅನಾಹುತ ಬರುತ್ತದೆಂಬ ಭಯ ಜನಪದರಲ್ಲಿದೆ. ಸಿರಿ ಮಹಾಕಾವ್ಯದಲ್ಲಿ ಬರುವ ಸಿರಿ ಮಗಳು ಸೊನ್ನೆ ಹರಕೆ ಬಾಕಿಯನ್ನು ಸಕಾಲಕ್ಕೆ ತೀರಿಸದೆ ತನ್ನ ಅವಳಿ ಮಕ್ಕಳಾದ ಅಬ್ಬಗ-ದಾರಗರಿಗೆ ಮದುವೆ ಮಾಡಹೊರಟಾಗ ಬರ್ಮ ದೇವರು ಅವರಿಬ್ಬರನ್ನೂ ಬಲಿತೆಗೆದುಕೊಳ್ಳುತ್ತಾನೆ.

ಕಾವ್ಯದ ಈ ಭಾಗದವರೆಗೆ ಚಿನ್ನಮ್ಮನ ಜನನ, ನಾಮಕರಣ, ವಿದ್ಯಾಭ್ಯಾಸ, ಸಾಮಾಜಿಕ ಆಚರಣೆಯ ಕ್ರಮಗಳು ಹೊಸ ಧರ್ಮಕ್ಕೆ ಸೇರಿಸಿಕೊಳ್ಳಲು ಹೂಡುವ ಹುನ್ನಾರ, ಚಿನ್ನಮ್ಮನ ವಿವಾಹ ಎಲ್ಲವೂ ಅತ್ಯಂತ ಶಕ್ತಿಯುತವಾದ ಅಭಿವ್ಯಕ್ತಿಯನ್ನು ಪಡೆದಿವೆ.

ವೈಷ್ಣವ ಪಂಥದ ವಿಧಿ ವಿಧಾನಗಳನ್ನು ಮುಗಿಸಿಕೊಂಡ ನಾಗಮ್ಮ ತನ್ನ ಸೊಸೆಯನ್ನು ಊರಿಗೆ ಕರೆತರುತ್ತಾಳೆ. ಮನೆಗೆ ಬಂದ ಸೊಸೆಗೆ ತನ್ನ ಧರ್ಮದ ಕಟ್ಟು ಕಟ್ಟಲೆಗಳಂತೆ ಇರಬೇಕೆಂದು ಆಜ್ಞಾಪಿಸುತ್ತಾಳೆ. ಗಂಡನ ಮನೆಗೆ ಬಂದ ಮೇಲೆ ಗಂಡನನ್ನು, ದೇವರನ್ನು ಪೂಜಿಸಬೇಕು. ಬೆಳ್ಳಿ ಲಿಂಗವನ್ನು ಹಾಕಿ ಅಡ್ಡನಾಮವನ್ನು ಧರಿಸಬೇಕು ಎನ್ನುತ್ತಾಳೆ.

'ಗಂಡನ ಮನೆಗೆ ಬಂದಿ ಮ್ಯಾಲೆ
ಗಂಡನ ಪೂಜೆ ಮಾಡಬೇಕೆ ರಾಮ ರಾಮ
ಗಂಡ ದೇವ್ರು ಪೂಜೆ ಮಾಡಲೆಬೇಕು
ಎಮ್ಮಾ ಹೆಣ್ಣು ದೇವ್ರು ಪೂಜೆ ಕಿಡಿಯಬೇಕು
ತಾವು ಮನೆದೇವ್ರು ಮರಿಬೇಕು
ತಾವು ಮನೆ ದೇವ್ರು ಬಿಟ್ಟು
ಗಂಡನ ದೇವ್ರು ನಡೆಯಮ್ಮ
ಅಚ್ಚವಮ್ಮ ಶಿವವಿಬೂತಿ ನೀನು
ಎಮ್ಮಾ ಆಕವಮ್ಮ ಶಿವಲಿಂಗ ತಾಯಿ
ಕೊಳ್ಳಾಗ ಲಿಂಗ ಹಾಕು
ಅಚ್ಚವಮ್ಮ ಈಬೂತಚ್ಚಿ
ಹಾಕವಮ್ಮ ಕೊಳ್ಳಾಗ ಲಿಂಗ ರಾಮ ರಾಮ

(ಸ್ಯಾಸಿ ಚಿನ್ನಮ್ಮನ ಕಾವ್ಯ, ಪುಟ ೭೦)

ಪರರ ಮನೆಯ ಸೊತ್ತಾದ ಹೆಣ್ಣು, ಅತ್ತೆಯ ಮನೆಯಲ್ಲಿ ಅವರ ಕೌಟುಂಬಿಕ, ಸಾಮಾಜಿಕ ಹಾಗೂ ಧಾರ್ಮಿಕವಾದ ಕಟ್ಟು ಪಾಡುಗಳ ಮಿತಿಯಲ್ಲಿ ಜೀವಿಸುತ್ತಾ, ಅತ್ತೆ, ನಾದಿನಿ, ಸವತಿಯರಿಂದ ನಾನಾ ವಿಧದ ಕಿರುಕುಳವನ್ನು ಅನುಭವಿಸುವುದು ಜನಪದರಲ್ಲಿ ಗಮನಿಸಬಹುದಾದ ಅಂಶ.

ಇಲ್ಲಿ ಗೌಡನಾಗಮ್ಮ ತನ್ನ ಸೊಸೆ ಅನುಸರಿಸಬೇಕಾಗಿರುವ ಶೈವಸಂಪ್ರದಾಯದ ಕಟ್ಟು ಕಟ್ಟಳೆಗಳಾದ "ಶೈವ ಶಕ್ತಿಯ ಎಲ್ಲ ಸಂಕೇತಗಳಾದ ಗುರುವಿಗೆ ವಿಧೇಯತೆ ತೋರುವುದು, ಲಿಂಗಪೂಜೆ, ಜಂಗಮರಲ್ಲಿ ಭಕ್ತಿ, ವಿಭೂತಿಯನ್ನು ಧರಿಸುವುದು, ರುದ್ರಾಕ್ಷಿಧಾರಣೆ, ಗುರು ಅಥವಾ ಜಂಗಮರ ಪಾದೋದಕವನ್ನು ಕುಡಿಯುವುದು, ಅವರಿಗೆ ಆಹಾರವನ್ನು ಅರ್ಪಿಸಿ ಪ್ರಸಾದವನ್ನು ಭಜಿಸುವುದು ಮತ್ತು ಪಂಚಾಕ್ಷರ ಮಂತ್ರ, ನಮಃ ಶಿವಾಯವನ್ನು ಜಪಿಸುವುದು ಇವು ಶೈವರಿಗೆ ನಿರಾಕಾರ ದೈವಶಕ್ತಿಯ ಸಂಕೇತಗಳೆಂದು"[೧೨೫] ತಿಳಿಸುತ್ತಾಳೆ.

ಶೈವ ಪ್ರಧಾನ ಸಂಸ್ಕೃತಿಯಲ್ಲಿ ಶಿವ, ವೀರಭದ್ರ, ಗಣ ಸಮೂಹ, ಕೈಲಾಸ, ರುದ್ರಭೂಮಿ, ಬೂದಿಭಸ್ಮ ಒಂದು ವರ್ಗವಾಗಿದ್ದು, ಶೈವ ಧಾರ್ಮಿಕ ಆಚರಣೆಗಳು ಮತ್ತು ವ್ಯಕ್ತಿಗಳ ಭಕ್ತಿ-ಶಕ್ತಿಗಳ ಮೂಲಕ ಯಜ್ಞರಹಿತ ಸಂಸ್ಕೃತಿಯನ್ನು ಹುಟ್ಟು ಹಾಕುವ ವಿಷಯ ಗಮನಾರ್ಹವಾದುದಾದರೆ, ಇನ್ನೊಂದೆಡೆ ಇಂದ್ರ, ವಿಷ್ಣು ಮೊದಲಾದವರು ವೈಷ್ಣವ ಧಾರ್ಮಿಕ ಸಂಸ್ಕೃತಿಯ ಪ್ರಧಾನ ವ್ಯಕ್ತಿಗಳಾಗಿ ಕಂಡುಬರುತ್ತಾರೆ.

ಆದರೆ ಚಿನ್ನಮ್ಮ ತಾನು ನಂಬಿಕೊಂಡು ಬಂದಿರುವ ವೈಷ್ಣವ ಧಾರ್ಮಿಕ ಆಚರಣೆಗಳನ್ನು ಬಿಡಲು ಸಿದ್ಧವಿಲ್ಲ. ತಿರುಪತಿ ವೆಂಕಟರಮಣನ ಪ್ರಸಾದದಿಂದ ಹುಟ್ಟಿದ ಆಕೆ ಆತನನ್ನೇ ತನ್ನ ಸರ್ವಸ್ವವೆಂದು ನಂಬಿ ನಡೆಯುತ್ತಿರುವವಳು. ಈ ಜಗತ್ತಿನ ಸ್ವಾಮಿ ಶ್ರೀ ವೆಂಕಟರಮಣನೆಂದು ನಂಬಿರುವವಳು. ಅವನಿಗಾಗಿ ತನ್ನ ಜೀವವನ್ನು ಅರ್ಪಿಸಲು ಸಿದ್ಧಳೇ ಹೊರತು, ಶೈವ ಸಂಪ್ರದಾಯವನ್ನು ಒಪ್ಪಿಕೊಳ್ಳಲು ಸಿದ್ಧಳಿಲ್ಲ.

'ಜಲ್ಮ ಹೋಗಲಿ ನಾನು ಮರೋೀಯೋದಿಲ್ಲೋ
ಎಮ್ಮಾ ನಾರಾಯಣೆಂಬೊದು ಬಿಡಿಯೋದಿಲ್ಲ
ಜಲ್ಮ ಹೋದರೆ ಮರೆಯೋದಿಲ್ಲೊ
ಶಿವ ಶಿವ ಅಂಬದ ನಡೆಸೋದಿಲ್ಲೊ
ನನ್ನ ಜೀವ ಹೋಗಲಿ ಲಿಂಗ್ಹಾಕದಿಲ್ಲ'

(ಸ್ಯಾಸಿ ಚಿನ್ನಮ್ಮನ ಕಾವ್ಯ, ಪುಟ ೭೧)

ಶೈವ ಸಂಪ್ರದಾಯದ ಒಳಗೆ ಜೀವಿಸುತ್ತಿದ್ದರೂ, ಶಿವಲಿಂಗ ಪೂಜೆ ಮಾಡುವುದಿಲ್ಲ. ನನ್ನ ಜೀವದ ಜೀವ ವೆಂಕಟರಮಣ ಎನ್ನುತ್ತಾಳೆ. ನನ್ನ ಮನೆಗೆ ಸೊಸೆಯಾಗಿ ಬಂದ ಮೇಲೆ, ನಮ್ಮ ಧರ್ಮದ ಕಟ್ಟು ಕಟ್ಟಳೆಗಳಂತೆ ನಡೆಯದಿದ್ದರೆ,

'ಏಃ ನಾರಾಣಂದ್ರೆ ನಾಲಿಗೆ ಕಿಳತಿನಿ ನಿನ್ನಾಗಿನೋಡಿ
ಗೋವಿಂದಂದ್ರೆ ಕುತ್ಗೆ ಕುಯ್ತಿನಿನ ಮಾತ ನೋಡು
ಚರ್ಮ ಸುಲಿತನಕ ನಾನು ಬಡಿತಿನಿ ಕೇಳಲೇರಂಡೆ
ಜೀವ ಹೋಗತ್ಯೆತಂದ್ರೆ ನೀರ್ಹಾಕದಿಲ್ಲ
ಸಾಯತನಕ ಕೂಳ್ಹಾಕದಿಲ್ಲ'

(ಸ್ಯಾಸಿ ಚಿನ್ನಮ್ಮನ ಕಾವ್ಯ, ಪುಟ ೭೨)

ಎನ್ನುತ್ತಾನೆ.

ಅತ್ತೆ ಗೌಡನಾಗಮ್ಮ ಚಿನ್ನಮ್ಮನಿಗೆ ಅನೇಕ ಕಷ್ಟಗಳನ್ನು ಕೊಡುತ್ತಾಳೆ. ಉಗ್ರವಾಗಿ ಬೈಯುತ್ತಾಳೆ. ಮೇಲಿನ ಅಭಿವ್ಯಕ್ತಿಗಳನ್ನು ಗಮನಿಸಿದರೆ ಅತ್ತೆಯ ನಿರ್ಭಿತ ಗ್ರಾಮ್ಯ ಒರಟುತನ, ಆ ಬೈಗುಳಗಳ ಹಿಂದಿರುವ ಸಾಮಾಜಿಕ ಆಚರಣೆಯ ಕ್ರಮಗಳು, ಹೊಸ ಧರ್ಮಕ್ಕೆ ಸೇರಿಸಿಕೊಳ್ಳುವ ಒತ್ತಾಯ ಸೇರದಿದ್ದರೆ ಆಗುವ ಪರಿಣಾಮಗಳು, ಅತ್ಯಂತ ಶಕ್ತಿಯುತವಾಗಿ ಅಭಿವ್ಯಕ್ತಿಯನ್ನು ಪಡೆಯುತ್ತದೆ.

ಚಿನ್ನಮ್ಮನ ಅತ್ತೆ ಮನೆಯಲ್ಲಿ 'ಮಾವಂದು ನಡೆಯೋದಿಲ್ಲ. ಏಳು ಮಂದಿ ಮಕ್ಕಳದು ನಡೆಯೋದಿಲ್ಲ.' ಎಲ್ಲಾ ಅತ್ತೆಯ ದರ್ಬಾರು. ಮಾವ ಮತ್ತು ಗಂಡನ ಪಾತ್ರಗಳು ಗೌಣ. ಮಾತೃಮೂಲ ಕುಟುಂಬದ ಪಳೆಯುಳಿಕೆಯಾಗಿ ಕಂಡುಬರುವ ಗೌಡನಾಗಮ್ಮನಿಗೆ ಸ್ವಾಭಿಮಾನ ಒಂದು ಮಹತ್ವದ ವಿಚಾರವಾಗುತ್ತದೆ. ಯಾವ ಕಾರಣಕ್ಕೂ ತನ್ನ ಅಸ್ತಿತ್ವವನ್ನು ಬಿಟ್ಟು ಕೊಡಲೊಪ್ಪದ ಚಿನ್ನಮ್ಮನ ಸ್ವಾಭಿಮಾನ, ಗೌಡನಾಗಮ್ಮನಿಗೆ ಅಹಂಕಾರ

ವಾಗಿ, ಸೊಕ್ಕಾಗಿ ಕಾಣುತ್ತದೆ. ತನ್ನ ಮಾತು ಕೇಳದ ಸೊಸೆಯನ್ನು ಊರಾಚೆಯಿರುವ ತಾಳನ ಗುಡಿಸಲಿನಲ್ಲಿ ಇಟ್ಟು ಹಿಂಸಿಸಿದರೆ, ನನ್ನ ಮಾತು ಕೇಳಬಹುದೆನ್ನುವ ಉದ್ದೇಶದಿಂದ, ದೊಡ್ಡ ಸೊಸೆ ಗೌರಮ್ಮನೊಂದಿಗೆ ಅಲ್ಲಿಗೆ ಕಳಿಸುತ್ತಾಳೆ. ತಾಳನ ಗುಡಿಸಲು ಹತ್ತು ಎಕರೆ ತೋಟ, ಹತ್ತಿರದಲ್ಲಿ ಸ್ಮಶಾನ. ತೋಟದಲ್ಲಿ ತೆಂಗು, ಬಾಳೆ, ದ್ರಾಕ್ಷಿಬಳ್ಳಿ, ಖರ್ಜೂರ, ಲಿಂಬೆ ಇನ್ನೂ ಹಲವಾರು ಹಣ್ಣಿನ ಗಿಡಗಳಿಂದ ಸುತ್ತುವರಿದಿದ್ದು, ಹತ್ತಾರು ಜೊತೆ ಎತ್ತುಗಳನ್ನು ಕಟ್ಟಲು ಕಟ್ಟಿದ್ದ ಗುಡಿಸಲೇ ಈ ತಾಳನ ಗುಡಿಸಲು. ಜೀವನ ನಡೆಸುವುದೇ ದುಸ್ತರವಾದ ಈ ಜಾಗದಲ್ಲಿ ಗೋವಿಂದನನ್ನು ನೆನೆದು ದಿನ ನೂಕಿದಳು. ಇಂತಹ ಕೆಟ್ಟ ಅತ್ತೆಯ ಮನೆಯ ಸೊಸೆಯಾಗಿ ಹೇಗೆ ಬಂದೆ ಎಂದು ಹಿರಿಯ ಸೊಸೆ ಗೌರಮ್ಮನನ್ನು ಪ್ರಶ್ನಿಸಿದರೆ, ತಂದೆ ತಾಯಿಗಳು ತೀರಿಹೋದ ಮೇಲೆ ಮಾಡಿದ್ದ ಸಾಲವನ್ನು ತಮ್ಮ ತೀರಿಸಲಾಗದಿದ್ದಾಗ, ಅವರ ಮಾತಿನಂತೆ ಈ ಮನೆ ಸೊಸೆಯಾದೆ, ಬರಿ ಚಾಕರಿ ಮಾಡಿಸುತ್ತಾರೆ. ಹೊಟ್ಟೆಗೆ ಸರಿಯಾಗಿ ಕೊಡುವುದಿಲ್ಲ ಎನ್ನುವ ಪರಿತಾಪದ ಉತ್ತರ. ಅತ್ತೆಯ ಹೊಡೆತಗಳು, ಉಗ್ರ ಬೈಗುಳಗಳನ್ನು ತನ್ನ ಜೀವದ ಸ್ವಾಮಿಗಾಗಿ ಸಹಿಸಿಕೊಳ್ಳುವ ಚಿನ್ನಮ್ಮನ ದುಡವನ್ನು ಮೆಚ್ಚಬೇಕಾದುದೆ. ಸೊಸೆ ಗೋವಿಂದನನ್ನು ನೆನೆಯುವುದು ಅತ್ತೆಗೆ ಸಹಿಸಲಾಗಲಿಲ್ಲ.

ಅತ್ತೆ, ಹತ್ತು ಖಂಡುಗ ನವಣೆಯನ್ನು ಎರಡು ಕಬ್ಬಿಣದ ಒನಕೆಗಳಿಂದ ಕುಟ್ಟಲು ಹೇಳುತ್ತಾಳೆ. ಮಗನನ್ನು ಹೆಂಡತಿಯ ಬಳಿ ಸುಳಿಯಬಾರದೆಂದು ಕಟ್ಟಪ್ಪಣೆ ಮಾಡುತ್ತಾಳೆ. ಚಿನ್ನಮ್ಮನಿಗೆ ಊಟ, ತಿಂಡಿ ಏನನ್ನೂ ಕೊಡದ ಹಾಗೆ ನೋಡಿಕೊಳ್ಳುತ್ತಾಳೆ. ಅತ್ತೆಯ ಮನೆಯಲ್ಲಿ ಚಿನ್ನಮ್ಮನ ಬದುಕು ಶೋಚನೀಯವಾದುದು. ಅತ್ತೆ ನೀಡುವ ಕಾಟವನ್ನು ತಾಳಲಾರದೆ, ಬೇಸತ್ತು ತನ್ನ ತಂದೆ, ತಾಯಿ, ಅಣ್ಣಂದಿರಿಗೆ, ತನ್ನ ಆರಾಧ್ಯ ದೈವಕ್ಕೆ ಶಾಪ ಹಾಕುತ್ತಾಳೆ.

'ಹೆಣ್ಣ ಮಕ್ಕಳಾಗಿ ಹುಟ್ಟೊ ಬದಲು
ನನ್ನ ದಾರಿ ಒಳಗೆ ಗಿಡ ಮಾಡುಬಾರ್ದ ರಾಮಾ ರಾಮಾ'

(ಸ್ಯಾಸಿ ಚಿನ್ನಮ್ಮನ ಕಾವ್ಯ, ಪುಟ ೭೯)

ಎಂದು ದೈವವನ್ನು ಪ್ರಾರ್ಥಿಸುತ್ತಾಳೆ.

ಜನಪದ ಸಂಸ್ಕೃತಿಯಲ್ಲಿ ಹೆಣ್ಣಿಗೆ ಸ್ವಂತಿಕೆ ಇಲ್ಲ. ಸ್ವತಂತ್ರ ವ್ಯಕ್ತಿತ್ವವಾಗಲಿ, ಸ್ವಂತ ಅಭಿಪ್ರಾಯವಾಗಲಿ, ಭಾವನೆಗಳಾಗಲಿ ಇಲ್ಲ. ಆ ಭಾವನೆಗಳಿಗೆ ಬೆಲೆ ಮೊದಲೇ ಇಲ್ಲ.

ಅತ್ತೆಯ ಮನೆಯಲ್ಲಿ ಹೆಣ್ಣು ನಡೆಸಬೇಕಾಗಿರುವ ಕಷ್ಟದ ದುಡಿಮೆ ಪ್ರೀತಿ, ಒಲುಮೆಗಳ ಕೊರತೆ. ಸದಾ ಇನ್ನೊಬ್ಬರ ಪೀಡನೆಗೆ, ಸುಖಕ್ಕೆ, ಇವಳ ಸುಖ-ಸಂತೋಷಗಳು ಬಲಿಯಾಗಬೇಕು. ಕೈಹಿಡಿದ ಗಂಡನ ಅನಾದರ, ಕೌಟುಂಬಿಕ ಕಿರುಕುಳ, ಬಂಜೆತನ, ವೈಧವ್ಯ ಮೊದಲಾದವು ಆಕೆಯ ಸಂಕಟಮಯ ಬದುಕಿನ ವಿವಿಧ ಮುಖಗಳು. ಅನ್ಯಾಯದ ವಿರುದ್ಧ ಯಾವ ದನಿಯನ್ನೂ ಎತ್ತುವ ಅವಕಾಶವಿಲ್ಲ. ಕೊನೆಗೆ ತನ್ನ ಕಷ್ಟಗಳನ್ನು ಬಗೆ ಹರಿಸಿಕೊಳ್ಳುವುದಿರಲಿ, ಮುಕ್ತವಾಗಿ ಬೇರೆಯವರಲ್ಲಿ ಹೇಳಿಕೊಳ್ಳುವ ಅವಕಾಶವೂ ಇಲ್ಲ. ಹೆತ್ತ ತಾಯಿಯೊಬ್ಬಳನ್ನು ಹೊರತುಪಡಿಸಿ.

ಕೆಲವು ಸಂದರ್ಭಗಳಲ್ಲಿ, ಸಾಂದರ್ಭಿಕ ಒತ್ತಡಗಳಿಂದಾಗಿ ಹೆಣ್ಣಿಗೆ ಅನ್ಯಾಯವಾಗುವುದನ್ನು ಕಾಣುತ್ತೇವೆ. ಚಿನ್ನಮ್ಮ ಸ್ವಾಮಿಯ ವರದಿಂದ ಹುಟ್ಟಿದವಳು. ಸ್ವಾಮಿಯ ಪರಮ ಭಕ್ತಳು. ಗುರುಕುಲದಲ್ಲಿ ಆಸಕ್ತಿ ಇಂದ ಕಲಿತವಳು. ಶಿಷ್ಟದಲ್ಲಿದ್ದು, ಜನಪದ ಸಂಸ್ಕೃತಿಯನ್ನು ಉಳಿಸಿಕೊಂಡಿರುವ ಹೆಣ್ಣು. ವೈಷ್ಣವ ಧರ್ಮೀಯಳು. ಇಂಥವಳನ್ನು ಅನ್ಯ ಧರ್ಮೀಯರಾದ ಶೈವ ಪಂಥದ ಗೌಡನಾಗಮ್ಮನ ಮಗನಿಗೆ ಮದುವೆ ಮಾಡಿ ಕೊಡುವಾಗ ಇವಳ ಅಭಿಪ್ರಾಯವನ್ನು ಕೇಳುವುದಿಲ್ಲ. ಅವಳ ಭಾವನೆಗಳಿಗೆ ಹೆತ್ತವರು ಸ್ಪಂದಿಸದೆ ತಂಗಿಗೆ ಹಿಂದೆ ಕೊಟ್ಟ ಮಾತೆ ಮುಖ್ಯವೆಂದು ಭಾವಿಸಿದರು. ಅತ್ತೆಯ ಮನೆಯಲ್ಲಿ ಮೈ ನಡುಗಿಸುವ ಕ್ರೌರ್ಯ. ಇಂತಹ ಸಂದರ್ಭದಲ್ಲಿ ಹೆಣ್ಣು ತನ್ನವರನ್ನು ಶಪಿಸಿದರೂ, ಮರುಗಳಿಗೆಯಲ್ಲಿಯೇ ತಾಯಿಯ ವಾತ್ಸಲ್ಯಕ್ಕೆ ತುಡಿಯುತ್ತಾಳೆ. ಹೆಣ್ಣಾಗಿ ಹುಟ್ಟುವ ಬದಲಾಗಿ, ದಾರಿಯೊಳಗಿನ ಗಿಡವಾದರೆ, ದಾರಿಹೋಕರಿಗೆ ನರಳಾದರೂ ಆಗುತ್ತಿದ್ದೆ, ಪಶುಪಕ್ಷಿಗಳಿಗೆ ಹಣ್ಣು ಹಂಪಲು ನೀಡಿ, ಹಸಿವು ನೀಗಿಸುತ್ತಿದ್ದೆ ಎನ್ನುವ ತುಡಿತ. ದೀಪವು ತಾನು ಉರಿದು ಇನ್ನೊಬ್ಬರಿಗೆ ಬೆಳಕು ನೀಡುವಂತೆ, ಜೀವನದ ಸಾರ್ಥಕತೆಯನ್ನು ಪಡೆಯುವುದು ಹೆಣ್ಣಿನ ಆಶಯ.

'ಕೊಟ್ಟು ಕಷ್ಟ ಕೊಡಬ್ಯಾಡಪ್ಪ
ಏ ಯಂಕಟರಮಣ
ನನ ಜಲ್ಮ ನೋಡ'

(ಸ್ವಾಸಿ ಚಿನ್ನಮ್ಮನ ಕಾವ್ಯ, ಪುಟ ೭೯-೮೦)

ಎಂದು ತನ್ನ ಇಷ್ಟ ದೈವ ತಿರುಪತಿ ಸ್ವಾಮಿಯನ್ನು ಚಿನ್ನಮ್ಮ ಪ್ರಾರ್ಥಿಸುತ್ತಾಳೆ. ''ಸ್ತ್ರೀ ತನ್ನಲ್ಲಿರುವ ಸ್ವಾತಂತ್ರ್ಯಾಭಿಲಾಷೆಯನ್ನು ಕಳೆದು ಹೋದ ಹಕ್ಕನ್ನು ಒಮ್ಮೆ ನೋವಿನ ನರಳುವಿಕೆಯಿಂದ ಇನ್ನೊಮ್ಮೆ ದೇವರ ಮೊರೆ ಹೋಗುವ ಮೂಲಕ, ಮತ್ತೊಮ್ಮೆ ತ್ಯಾಗದ ಮೂಲಕ, ಮಗದೊಮ್ಮೆ ಸಿಡಿದೇಳುವ ಮೂಲಕ ಜನಪದ ಸಾಹಿತ್ಯ ಮಾಧ್ಯಮದಲ್ಲಿ ಅಭಿವ್ಯಕ್ತಗೊಳಿಸಿದ್ದಾಳೆ.''[೧೨೬]

ತಿರುಪತಿ ಸ್ವಾಮಿ ತನ್ನ ಭಕ್ತೆಯ ಕೂಗಿಗೆ ಸ್ಪಂದಿಸಿ ದಾಸಪ್ಪನ ವೇಷಧರಿಸಿ ತಾಳನ ಗುಡಿಸಲಿಗೆ ಬಂದು ಅವಳ ಕಷ್ಟ ವಿಚಾರಿಸಿ ಪರಿಹರಿಸುತ್ತಾನೆ. ನವಣೆಯನ್ನು ಎರಡು ಕಬ್ಬಿಣದ ಒನಕೆಗಳಿಂದ ಕುಟ್ಟುವುದು, ಐದು ಪಲ್ಲರಾಗಿ ಬೀಸುವುದು ಮುಂತಾದ ಕೆಲಸಗಳನ್ನು ಪವಾಡ ರೀತಿಯಲ್ಲಿ ದಾಸಪ್ಪ ತನ್ನ ಗುರುತನ್ನು ಹೇಳದೆ ಮಾಡುತ್ತಾನೆ. ಆದರೆ ಅತ್ತೆ 'ಚಿನ್ನಮ್ಮನಿಗೆ ಮಾಯ ಮಂತ್ರ ಐತೆ' ಎನ್ನುತ್ತಾಳೆ.

ಕಾವ್ಯದ ಮುಂದಿನ ತಿರುವು ಚಿನ್ನಮ್ಮನ ಸತ್ವ ಪರೀಕ್ಷೆ. ಚಿನ್ನಮ್ಮ ಐವತ್ತು ಸೇರು ಅಂಬಲಿ ಮಾಡಲು, ಪಡಗವನ್ನು ಕುಂಬಾರ ಗುಂಡಣ್ಣನಿಂದ ಅತ್ತೆ ಮಾಡಿಸುತ್ತಾಳೆ. ಚಂದಾದ ಪಡಗದ ಮೇಲೆ, ನವಿಲು, ಹಸು, ಎಮ್ಮೆ, ನಾಯಿ, ಕೋಗಿಲೆ, ಕಪ್ಪೆ, ಮೀನು, ಗಿಳಿ ಇತ್ಯಾದಿ ಚಿತ್ರಗಳನ್ನು ಕೊರೆದು ಬಣ್ಣ ತುಂಬಿ ಅಡ್ಡ ಮೂರು ನಾಮಗಳು, ಉದ್ದಾಗೆ ಮೂರು ನಾಮ ಇಟ್ಟು ಮಡಕೆಯನ್ನು ಭಕ್ತಿಯಿಂದ ಪೂಜಿಸಿ, ಗುಂಡಣ್ಣ 'ಗೋವಿಂದಾ' ಅಂತ ಹೇಳುತ್ತಾನೆ. ಗೌಡ ನಾಗಮ್ಮನ ಏಳು ಮಂದಿ ಮಕ್ಕಳು ಪಡಗ ತೆಗೆದುಕೊಂಡು ಹೋಗಲು ಬರುತ್ತಾರೆ. ಆದರೆ ಎತ್ತಲು ಆಗುವುದಿಲ್ಲ. ಗೌಡನಾಗಮ್ಮ, ಅವಳ ಗಂಡ ಮತ್ತು ಹಿರಿಯ ಸೊಸೆ ಗೌರಮ್ಮ ಇವರು ಮಕ್ಕಳೊಂದಿಗೆ ಸೇರಿ, ಪಡಗ ಹೊತ್ತುಕೊಂಡು ತಾಳನ ಗುಡಿಸಲಿಗೆ ಬರುತ್ತಾರೆ.

ಮೂರು ಕಲ್ಲು ಗುಂಡುಗಳ ಮೇಲೆ ಮಡಕೆಯನ್ನು ಇಡುತ್ತಾರೆ. ಐವತ್ತು ಸೇರು ರಾಗಿ ಹಿಟ್ಟನ್ನು ಹಾಕಿ ಅಂಬಲಿ ತಯಾರಿಸುತ್ತಾರೆ. ಏಳು ಮಂದಿ ಮಕ್ಕಳು ಹೊಲದ ಕೆಲಸಕ್ಕೆ ಹೋಗಿರುತ್ತಾರೆ. ಅವರಿಗೂ ಏಳು ಜೊತೆ ಎತ್ತುಗಳಿಗೂ ಅಂಬಲಿಯನ್ನು ಕೊಟ್ಟು ಬರಲು ಚಿನ್ನಮ್ಮನಿಗೆ ಹೇಳಲಾಗುತ್ತದೆ. ಅತ್ತೆಯ ಮಾತಿನಂತೆ ಬಾವಿಯಲ್ಲಿ ಮುಳುಗಿ ಸ್ನಾನ ಮಾಡಿ ತನ್ನ ಮುತ್ತಿನ ಸೆರಗನ್ನು ಸಿಂಬೆ ಮಾಡಿಕೊಂಡು, ಸ್ವಾಮಿಯನ್ನು ಭಕ್ತಿಯಿಂದ ನೆನೆದು ಅಂಬಲಿ ಪಡಗವನ್ನು ತಲೆ ಮೇಲೆ ಹೊತ್ತು ಹೊಲದ ಕಡೆ ಹೊರಡುತ್ತಾಳೆ.

ತಿರುಪತಿಸ್ವಾಮಿ, ಚಿನ್ನಮ್ಮನ ಭಕ್ತಿಯ ಸತ್ವಪರೀಕ್ಷೆ ಮಾಡಬೇಕೆಂದು ಹಳ್ಳದ ಪಕ್ಕದಲ್ಲಿರುವ ಮರದ ಕೆಳಗೆ ಕುಳಿತಿರುತ್ತಾನೆ. ಹಸಿವೆಯಾಗುತ್ತಿದೆ ಎಂದು ಚಿನ್ನಮ್ಮನನ್ನು ನೋಡಿ ಕೇಳುತ್ತಾನೆ. ಅಂಬಲಿಯ ವಿಚಾರ ತಿಳಿಸುತ್ತಾಳೆ. ಆದರೂ ಅಂಬಲಿಯನ್ನು ಕೇಳಿ ಪಡೆದು, ತಾನೊಬ್ಬನೇ ಕುಡಿದು, ಪಡಗ ಖಾಲಿ ಮಾಡಿದರೂ, ಹಸಿವು ತೀರದೆ, ಪಡಗವನ್ನು ನೀರಿನಿಂದ ತೊಳೆದು ತನ್ನ ಬೊಗಸೆಗೆ ಬಗ್ಗಿಸಿಕೊಂಡು ಕುಡಿಯುತ್ತಾನೆ. ಖಾಲಿ ಮಡಕೆಯನ್ನು ಮೊದಲಿನಂತೆ ಮುಚ್ಚಿ ಮಣ್ಣಿನ ಬೀಗವನ್ನು ಒತ್ತಿ, ಹೊತ್ತುಕೊಂಡು ಹೊಲದ ಕಡೆ ನಡೆಯುತ್ತಾಳೆ. ಉಳುಮೆ ಮಾಡಿದ್ದ ಗೌಡನಾಗಮ್ಮನ ಮಕ್ಕಳಿಗೆ ಖಾಲಿ ಮಡಿಕೆಯನ್ನು ನೋಡಿ ಕೋಪಗೊಂಡು ಬಾರುಕೋಲಿನಿಂದ ತಳಿಸುತ್ತಾರೆ. ಖಾಲಿ ಮಡಕೆಯೊಳಗೆ ನೇಗಿಲು, ನೊಗ, ಹಗ್ಗ ಮುಂತಾದ ಸಲಕರಣೆಗಳನ್ನು ತುಂಬಿ ಮನೆಗೆ ತರಬೇಕೆಂದು ಚಿನ್ನಮ್ಮನಿಗೆ ಹೇಳಿ ಅವರೆಲ್ಲರೂ ಮನೆ ಕಡೆಗೆ ನಡೆಯುತ್ತಾರೆ. ದಾರಿಯಲ್ಲಿ ಅಡ್ಡಲಾಗಿ ಹಳ್ಳವೊಂದು ತುಂಬಿ ಹರಿಯುತ್ತಿತ್ತು. ಎತ್ತುಗಳು ಹಳ್ಳವನ್ನು ಈಜಿ ದಡ ಸೇರಿದವು. ಚಿನ್ನಮ್ಮನು ದಡ ಸೇರಿದಳು. ಆದರೆ ಸ್ವಾಮಿ, ಚಿನ್ನಮ್ಮನಿಗೆ ಬಾರುಕೋಲಿನಿಂದ ತಳಿಸಿದ್ದಕ್ಕೆ ಕೋಪಗೊಂಡು ಆ ಏಳು ಮಂದಿಯನ್ನು ನೀರಿನಲ್ಲಿ ಮುಳುಗಿಸುತ್ತಾನೆ. ಪ್ರಾಣ ಭಯದಿಂದ ತಮ್ಮ ದೇವರಾದ 'ಶಿವ'ನನ್ನು ಪ್ರಾಣ ಉಳಿಸಲು ಬೇಡುತ್ತಾರೆ. ಬಂಗಾರದ ಲಿಂಗ, ಬೆಳ್ಳಿ ಲಿಂಗ ಮತ್ತು ಲೆಕ್ಕಿಯ ತೇರನ್ನು ಮಾಡಿಸುವುದಾಗಿ ಹರಕೆ ಹೊರುತ್ತಾರೆ. ಆದರೆ ಅವರ ದೇವರು ಅವರನ್ನು ರಕ್ಷಿಸುವುದಿಲ್ಲ.

ಮಲೆಯಮಾದೇಶ್ವರ ಕಾವ್ಯದ ಸರಗೂರಯ್ಯನ ಸಾಲಿನಲ್ಲಿ ರಾಮವ್ವ ಮತ್ತು ಆಕೆಯ ಪತಿ ಮೂಗು ದ್ಯಾವ್ರುಗಳು ಬಿಳಿಗಿರಿ ರಂಗಸ್ವಾಮಿ ಮತ್ತು ಮುಡುಕುತೊರೆ ಮಲ್ಲಪ್ಪನ ಭಕ್ತರು ಮಾದೇಶ್ವರ ಮೂಗುದ್ಯಾವ್ರು ಅನ್ನು ತನ್ನ ಎಣ್ಣೆ ಮಜ್ಜನ ನಡೆಸುವ ಭಕ್ತನನ್ನಾಗಿ ಪಡೆಯಲು ಅವರ ಆರಾಧ್ಯ ದೈವಗಳ ಒಪ್ಪಿಗೆ ಪಡೆಯುತ್ತಾನೆ. ಆದರೆ ಈಗಾಗಲೇ ತಲೆಮಾರುಗಳಿಂದ ತಾವು ಒಪ್ಪಿ ಆಶ್ರಯಿಸಿ ಆರಾಧಿಸುತ್ತಿರುವ ದೈವವನ್ನು ತೊರೆದು ಅನ್ಯ ದೈವಕ್ಕೆ ಶರಣಾಗಲು ಬಡಪಟ್ಟಿಗೆ ದಂಪತಿಗಳು ಒಪ್ಪುವುದಿಲ್ಲ. ಆಗ ಮಾದೇವ ನಾನಾ ತಂತ್ರಗಳನ್ನು ಆಶ್ರಯಿಸಿ ಕೊನೆಗೆ ದಂಡಕ್ಕೆ ಕೈ ಹಚ್ಚಿದಾಗ ಇನ್ನು ನಂಬಿದ್ದ ದೈವ ನಮ್ಮ ಕೈ ಬಿಟ್ಟನೆಂದು ಪರದೈವ ನಮ್ಮ ಸಂಕಷ್ಟಕ್ಕೆ ಸ್ಪಂದಿಸುವುದನ್ನು ಖಚಿತಪಡಿಸಿಕೊಂಡ ನಂತರವೇ ಮಾದೇವನ ಒಕ್ಕಲಾಗುತ್ತಾರೆ.

ಇಲ್ಲಿ ಗೌಡನಾಗಮ್ಮನ ಮಕ್ಕಳನ್ನು ಅವರ ದೈವ ಶಿವ ರಕ್ಷಿಸಲು ಮುಂದಾಗದಿದ್ದಾಗ ಆ ಸಮಯವನ್ನೇ ಕಾಯುತ್ತಿದ್ದ ತಿರುಪತಿ ಸ್ವಾಮಿ ಅವರ ನೆರವಿಗೆ ಧಾವಿಸುತ್ತಾನೆ.

ದಾಸಪ್ಪನನ್ನು ನೀರಿನಿಂದ ನಮ್ಮ ಪ್ರಾಣ ಉಳಿಸಲು ಗೌಡ ನಾಗಮ್ಮನ ಏಳು ಮಕ್ಕಳೂ ಬೇಡುತ್ತಾರೆ. ನೀವು 'ಗೋವಿಂದ' ಎನ್ನುವುದಾದರೆ, ತಿರುಪತಿ ಗುಡ್ಡಕ್ಕೆ ಬಂದು ಏಳು ಸಾರಿ ತಲೆ ಬೋಳಿಸುವುದು, ಏಳು

ಸಾರಿ ದಾಸಿಂಗ ಮಾಡುವುದಾಗಿ ಮುಡುಪು ಕಟ್ಟುವುದಾದರೆ ಪ್ರಾಣ ಉಳಿಸುವುದಾಗಿ ಹೇಳುತ್ತಾನೆ. ಅದಕ್ಕವರು ಒಪ್ಪಿ ದಾಸಪ್ಪ ಹೇಳಿದ ಹಾಗೆ ಅವರ ಹತ್ತಿರ ಇದ್ದ ಎಂಟಾಣೆಯನ್ನು ತೊಳೆದು ತಿರುಪತಿ ದೇವರಿಗೆ ಹರಕೆ ಕಟ್ಟುತ್ತಾರೆ. ಆಗ ದಾಸಪ್ಪ 'ಏಳು ಜುಟ್ಲ ಇಡಕಂಡು ಗಡ್ಡೆಗೆ ಒಗದು ಬಿಟ್ಟಾ' ಪ್ರಾಣ ಉಳಿಸಿದ್ದಕ್ಕಾಗಿ ಏಳು ಮಂದಿ ದಾಸಪ್ಪನ ಪಾದಕ್ಕೆ ಬಕ್ಕಬಾರ್ಲುಬಿದ್ದರು. ಮನೆ ಸೇರಿ ತಾಯಿಗೆ ನಡೆದ ಸಂಗತಿಯನ್ನು ತಿಳಿಸುತ್ತಾರೆ.

ಚಿನ್ನಮ್ಮ ಹೊತ್ತು ತಂದ ಮಡಿಕೆಯನ್ನು ನೋಡಿದಾಗ, ರಾಗಿ ಅಂಬಲಿ ಮತ್ತು ವ್ಯವಸಾಯದ ಉಪಕರಣ ಗಳು ಇರುತ್ತವೆ. ರಾಗಿ ಅಂಬಲಿಯನ್ನು ಚಿನ್ನಮ್ಮನನ್ನು ಬಿಟ್ಟು, ಎಲ್ಲರೂ ಊಟ ಮಾಡಿ ಉಳಿದಿದ್ದನ್ನು ಎತ್ತುಗಳಿಗೆ ಹಾಕಿ, ಚಿನ್ನಮ್ಮನಿಗೆ ಮುಗ್ಗಲು ಬಂದಿರುವ ಜೋಳ, ಏಳು ಮೆಣಸಿನಕಾಯಿ, ಎರಡು ಬೆಳ್ಳುಳ್ಳಿ ಯನ್ನು ಕೊಟ್ಟು ಖಾಲಿ ಪಡಗವನ್ನು ತಾಳನ ಗುಡಿಸಿಲಿಗೆ ತೆಗೆದುಕೊಂಡು ಹೋಗಲು ಹೊರಿಸಿ ಕಳುಹಿಸುತ್ತಾರೆ. ಚಿನ್ನಮ್ಮ ಗುಡ್ಲಿಗೆ ಬಂದು ಸ್ನಾನ ಮಾಡಿಕೊಂಡು, ಜೋಳದ ಮುದ್ದೆ ಮಾಡಿ, ಮೆಣಸಿನ ಹಾಗೂ ಬೆಳ್ಳುಳ್ಳಿ ಚಟ್ನಿ ಮಾಡಿಕೊಂಡು, ಪಡಗಕ್ಕೆ ಪ್ರದಕ್ಷಿಣೆ ಮಾಡಿ ಮೆಲುದನಿಯಲ್ಲಿ ಸ್ವಾಮಿಯನ್ನು ನೆನೆಯುತ್ತಾಳೆ. ತಕ್ಷಣ ದಾಸಪ್ಪ ಬಂದು ಅವಳು ಮಾಡಿದ್ದ ಊಟವನ್ನು ಮಾಡಿ ಗೋವಿಂದ ಎಂದು ಹೇಳುತ್ತಾನೆ. ಸ್ವಾಮಿ ಒಡ್ಡುವ ಎಲ್ಲಾ ಪರೀಕ್ಷೆಗಳಲ್ಲಿಯೂ ಚಿನ್ನಮ್ಮ ಜಯಗಳಿಸುತ್ತಾಳೆ. ಜನಪದರು ದೇವರೊಡನೆ ತಮ್ಮ ಮನೆಯ ಸದಸ್ಯನಂತೆ ಸಂಭಾಷಿಸುವುದನ್ನು ಕಾವ್ಯದಲ್ಲಿ ಕಾಣಬಹುದು.

ಕಾವ್ಯದ ಅಂತಿಮ ಘಟ್ಟದಲ್ಲಿ ವೈಷ್ಣವ ಸಮೂಹವನ್ನು ಶೈವ ಸಮೂಹಕ್ಕೆ ಸೇರಿಸುವ ಹುನ್ನಾರ ವಿಫಲಗೊಂಡು ಕೊನೆಗೆ ಶೈವ ಸಮುದಾಯವೇ ಬಲತ್ಕಾರವಾಗಿ ವೈಷ್ಣವ ಪಂಥಕ್ಕೆ ಸೇರ್ಪಡೆಯಾಗುವ ಚಿತ್ರಣ ಹಾಗೂ ಚಿನ್ನಮ್ಮ ದೈವೀ ಶಕ್ತಿಗೆ ಏರಿ ಆ ಮೂಲಕ ಸಮುದಾಯದ ಒಬ್ಬ ಆದರ್ಶ ಮಹಿಳೆಯಾಗಿ ಅವರ ಅನನ್ಯತೆಯ ಸಂಕೇತವಾಗಿ ಉಳಿಯುವುದನ್ನು ಕಾವ್ಯ ಸೊಗಸಾಗಿ ಚಿತ್ರಿಸುತ್ತದೆ.

ದಾಸಪ್ಪ ಚಿನ್ನಮ್ಮನ ಗುಡ್ಲಿನಿಂದ ನೇರವಾಗಿ, 'ಆರು ಜನ ದಾಸಪ್ಪ'[೨೨]ಗಳೊಂದಿಗೆ ಗರುಡ ಗಂಬದ ದೀಪ ಸಮೇತ ಗೌಡನಾಗಮ್ಮನ ಮನೆಗೆ ಬಂದು ಗೋವಿಂದ ಇಕ್ಕುತ್ತಾರೆ. ಗೌಡ ನಾಗಮ್ಮ ಸಿಟ್ಟಿನಿಂದ ಬಾರು ಕೋಲಿನಲ್ಲಿ ಥಳಿಸಲು ಮುಂದಾಗುತ್ತಾಳೆ. ಕಸಬಳಿಯಲು ಹೇಳುತ್ತಾಳೆ. ಬಾರುಕೋಲಿನ ಜಾಟಿಗೆ ದಾಸಪ್ಪನ ಗರುಡ ಗಂಬದ ದೀಪದಿಂದ ಬೆಂಕಿ ಹಿಡಿದು ಗೌಡನಾಗಮ್ಮನ ಸೀರೆಗೆ ತಗುಲಿ ಧಗ ಧಗನೆ ಉರಿಯುತ್ತದೆ. ಉರಿತಾಳಲಾರದೆ ಬಾಯಿ ಬಾಯಿ ಬಡಿದುಕೊಳ್ಳುತ್ತಾಳೆ. ದಾಸಪ್ಪನನ್ನು ರಕ್ಷಿಸಲು ಕೇಳುತ್ತಾಳೆ. "ಗೋವಿಂದ ಎಂದು ಹೇಳುವುದಾದರೆ, ತಲೆ ಬೋಳಿಸುವುದಾದರೆ, ಸ್ವಾಮಿಯ ಗುಡಿಗೆ ಬರುವುದಾದರೆ" ನಿನ್ನನ್ನು ಈ ಸಂಕಟದಿಂದ ಪಾರು ಮಾಡುವುದಾಗಿ ಹೇಳುತ್ತಾನೆ. ಎಲ್ಲದಕ್ಕೂ ಗೌಡ ನಾಗಮ್ಮ ಒಪ್ಪುತ್ತಾಳೆ. ದಾಸಪ್ಪ ತಕ್ಷಣ ಬೆಂಕಿಯನ್ನು ಆರಿಸುತ್ತಾನೆ.

ದಾಸಪ್ಪನ ಅಣತಿ ಮೇರೆಗೆ ಸ್ವಾಮಿಯ ಸನ್ನಿಧಿಗೆ ಬಂಡಿಯಲ್ಲಿ ಗಂಡ ಮತ್ತು ಸೊಸೆಯಂದಿರನ್ನು ಬಿಟ್ಟು ತಾಯಿ ಮತ್ತು ಏಳು ಮಕ್ಕಳು ಹೊರಡುತ್ತಾರೆ. ಊರ ಅಗಸೆಯ ಬಳಿ ಬಂಡಿ ಮುರಿಯುತ್ತದೆ. ನಮ್ಮ ದೈವ ಶಿವನಿಗೆ ಸಿಟ್ಟು ಬಂದಿರುವುದೇ ಈ ಎಲ್ಲಾ ತೊಂದರೆಗಳಿಗೆ ಕಾರಣವೆಂದು, ಪಡಗದಲ್ಲಿ ತುಂಬಿದ್ದ ಅನ್ನವನ್ನು ಬಾವಿಗೆ ಸುರಿಯುತ್ತಾರೆ. ಈ ತೊಂದರೆಗಳು ಚಿನ್ನಮ್ಮನನ್ನು ಬಿಟ್ಟು ಹೊರಟ್ಟಿದ್ದರಿಂದ ಎಂಬುದು ಹೊಳೆ ಯುವುದಿಲ್ಲ.

ಈಗ ವೆಂಕಟರಮಣ ಸ್ವಾಮಿ,

"ಕೂದಲಿಗೊಂದು ಮುತ್ತಾವು ಪೋಣಿಸ್ಯಾನಮ್ಮ
ಬೆಳ್ಳಿ ಕುಬಸ ಬಂಗಾರ ಸೀರೆ ತಾ ಮಾಡ್ಯಾನಮ್ಮಾ
ನಾನ್ನೂರು ಮೊಳ ತಾಳಿ ಕಟ್ಯಾನಮ್ಮ
ಬೆಳ್ಳಿ ಬಳೆ ಹರಿಸಿಣ ಬಳಿ ಹಾಕ್ಯಾನಮ್ಮ"

(ಸ್ಯಾಸಿ ಚಿನ್ನಮ್ಮನ ಕಾವ್ಯ, ಪುಟ ೧೩೩)

ಕೊರವಂಜಿ ವೇಷದಲ್ಲಿ ಗೌಡನಾಗಮ್ಮನಿಗೆ ಎದುರಾಗುತ್ತಾನೆ. ಸೊಸೆ ನನ್ನ ಮಾತು ಕೇಳುವುದಿಲ್ಲ. ಇದಕ್ಕೆ ಪರಿಹಾರ ಸೂಚಿಸಲು ಕೊರವಂಜಿಯನ್ನು ಕೇಳುತ್ತಾಳೆ. ಶಾಸ್ತ್ರ ಹೇಳಲು ಕೊರವಂಜಿ ಆಸೆಪಟ್ಟಂತೆ ಬೆಕ್ಕಿನ ಮಾಂಸವನ್ನು ಅನಿವಾರ್ಯವಾಗಿ ಒದಗಿಸಿದ ನಂತರ ಪರಿಹಾರ ದೊರೆಯುತ್ತದೆ.

ಕೊರವಂಜಿಯ ಮಾತಿನಂತೆ, ಬಡಿಗೆಯವರಿಂದ ಗಿಳಿಬಂಡಿಯನ್ನು ಮಾಡಿಸಿಕೊಂಡು, ಅದನ್ನು ಬಣ್ಣದಿಂದ ಅಲಂಕರಿಸಿ, ಯಾತ್ರೆ ಹೊರಡಲು ತಯಾರಾಗುತ್ತಾರೆ. ಯಾತ್ರೆಗೆ ಚಿನ್ನಮ್ಮನ ತಂದೆ ತಾಯಿಗಳನ್ನು ಕರೆಸುತ್ತಾರೆ. ಸೊಸೆಯನ್ನು ಕರೆದು ಏಳು ಹಗ್ಗವನ್ನೂ, ಕೊಡಲಿಯನ್ನು ಕೊಟ್ಟು, ಕಟ್ಟಿಗೆ ತರಲು ಹೇಳುತ್ತಾರೆ. ಸ್ವಾಮಿಯ ಸಹಾಯದಿಂದ ಏಳು ಹೊರೆ ಕಟ್ಟಿಗೆ ತರುತ್ತಾಳೆ. ಪುನಃ ಐದು ಹೊರೆ ಹುಲ್ಲನ್ನು ತರಲು ಹೇಳುತ್ತಾರೆ. ಅದನ್ನೂ ಸ್ವಾಮಿಯ ಪವಾಡದಿಂದಲೇ ತರುತ್ತಾಳೆ.

ಚಿನ್ನಮ್ಮ ಪಲಾಯನವಾದಿ ಹೆಣ್ಣಲ್ಲ. ಅತ್ತೆಯ ಹಿಂಸೆ ಮತ್ತು ಪರೀಕ್ಷೆಗಳನ್ನು ಕೊನೆಯವರೆಗೂ ಸ್ವಾಭಿಮಾನದ ಹೆಣ್ಣಾಗಿ, ಬರುವ ಎಲ್ಲಾ ತೊಂದರೆಗಳಿಗೂ ಮುಖಾಮುಖಿಯಾಗಿ ನಿಂತು ಗೆಲುವು ಸಾಧಿಸುವ ದಿಟ್ಟತನವನ್ನು ತೋರುವ ಹೆಣ್ಣು.

ಸ್ಯಾಸಿ ಚಿನ್ನಮ್ಮ ಐವತ್ತು ಸೇರು ಅನ್ನ ತುಂಬಿದ ಪಡಗವನ್ನು, ಆಕೆಯ ತಾಯಿ ಶೀಲಮ್ಮ ಕಳಸವನ್ನು ಹೊತ್ತು ಸ್ವಾಮಿಯ ಸನ್ನಿದಾನಕ್ಕೆ ಮಡಿಯಲ್ಲಿ ಹೋಗುತ್ತಿದ್ದರೆ, ಪಡಗದ ಹಿಂದೆ ಗೌಡ ನಾಗಮ್ಮ ಮತ್ತು ಆಕೆಯ ಪತಿ, ಮಕ್ಕಳು ಚಿನ್ನಮ್ಮನ ಅಣ್ಣಂದಿರು ಕಳಸ ಮತ್ತು ಪಡಗವನ್ನು ಡೊಳ್ಳು ಮೇಳಗಳಿಂದ ಕರೆದುಕೊಂಡು ಹೋಗುತ್ತಾರೆ.

ಭಾರವಾದ ಪಡಗ ಹೊತ್ತು ಸ್ವಾಮಿಯ ಗುಡಿಗೆ ಹೋಗುವಾಗ ಒಂದೊಂದು ಮೆಟ್ಟಿಲು ಏರುವಾಗಲೂ ತನ್ನ ಜೀವದ ಜೀವವಾದ ದೈವವನ್ನು ನೋಡುವ ಕಾತುರ ಚಿನ್ನಮ್ಮಳಿಗೆ. ಅನೇಕ ಸುಳ್ಳು ನೆಪ ಹೇಳಿ ಅತ್ತೆ ಮೆಟ್ಟಲೇರುವುದಿಲ್ಲ. ಶೀಲಮ್ಮ ಮತ್ತು ಅವಳ ಮಗಳು ಸ್ಯಾಸಿ ಚಿನ್ನಮ್ಮ ಸ್ವಾಮಿಯ ಎದುರು ನಿಂತು ಪೂಜೆ ಸಲ್ಲಿಸುತ್ತಾರೆ. ಕೊರವಂಜಿ ಹೇಳಿದ ರೀತಿಯಲ್ಲಿ ಅವರೆಲ್ಲರೂ ತಲೆ ಬೋಳಿಸಿಕೊಂಡು, ದಾಸಿಂಗ ಮಾಡುತ್ತಾರೆ. ಅತ್ತೆಯ ಬೋಳು ತಲೆಯ ಮೇಲೆ ಹಣತೆಯ ದೀಪ ಉರಿಸುತ್ತಾರೆ. ಪಡಗಕ್ಕೆ ಪೂಜೆ ಸಲ್ಲಿಸುತ್ತಾರೆ.

ಗೌಡನಾಗಮ್ಮನನ್ನು ಗರುಡ ಗಂಬವನ್ನಾಗಿಯೂ ಅವಳ ಗಂಡ ಮತ್ತು ಮಕ್ಕಳನ್ನು ತಲೆಬೋಳಿಸುವ ಕಾಯಕಕ್ಕೆ ಸ್ವಾಮಿ ನೇಮಿಸುತ್ತಾನೆ. ಮಹಾಭಕ್ತೆ ಚಿನ್ನಮ್ಮಳನ್ನು ಪಡಗದ ಮೇಲೆ ಕೂರಿಸಿ ಸ್ವಾಮಿಯು ತನ್ನಲ್ಲಿ ಐಕ್ಯ ಮಾಡಿಕೊಳ್ಳುತ್ತಾನೆ.

ಮಲೆಯಮಾದೇಶ್ವರರ, ಬೇವಿನಕಾಳಿ ಮೊದಲು ಬಡವಿಯಾಗಿದ್ದು, ಮಾದೇಶ್ವರರ ಕರುಣೆಯಿಂದಲೇ ಐಶ್ವರ್ಯವನ್ನು ಪಡೆದು ಅದರ ಸೊಕ್ಕಿನಲ್ಲಿ ಮೈಮರೆತು ಉದ್ಧಟತನದಿಂದ ವರ್ತಿಸಿದ ಈ ಹೆಂಗಸಿನ ಸೊಕ್ಕನ್ನು ಮಾದೇವ ಮುರಿದು ಗೋಗಲ್ಲು ಮಾಡಿದರೆ, ಮತಾಂಧತೆಯಿಂದ ಮೈಮರೆತ ದರ್ಪಿಷ್ಟ ಹೆಂಗಸಾದ ಗೌಡ ನಾಗಮ್ಮನನ್ನು ತಿರುಪತಿ ಸ್ವಾಮಿ ಗರುಡ ಗಂಬವನ್ನಾಗಿಸುತ್ತಾನೆ.

ಒಂದು ಕಡೆಯ ಗೆಲವು ಮತ್ತೊಂದು ಕಡೆಯ ಸೋಲಿಗೆ ಪ್ರೇರಕಶಕ್ತಿಯಾಗಿ ನಿಲ್ಲುವ ತಿರುಪತಿ ಸ್ವಾಮಿ ವೈರುಧ್ಯದ ವ್ಯಕ್ತಿಯಾಗಿ ಕಂಡರೂ, ವೈಷ್ಣವ ಧರ್ಮವನ್ನು ಅದರಲ್ಲೂ, ತಿರುಪತಿಸ್ವಾಮಿಯ ಸರ್ವೋತ್ತಮತ್ವವನ್ನು ಸಾರುತ್ತಾ ತನ್ನ ಭಕ್ತ ವೃಂದವನ್ನು ಉಳಿಸಿಕೊಂಡು, ಬೆಳೆಸಿಕೊಳ್ಳುವುದೇ ಕಾವ್ಯದ ಗುರಿಯಾದರೂ ಇದು ಪೂರ್ಣವಾಗಿ ಸ್ತ್ರೀ ಪ್ರಧಾನ ಕಾವ್ಯ ಹಾಗೂ ಸ್ತ್ರೀ ಅಭಿವ್ಯಕ್ತಿ ಸ್ವಾತಂತ್ರ್ಯದ ಹಕ್ಕನ್ನು ಸ್ಯಾಸಿ ಚೆನ್ನಮ್ಮ ಪ್ರತಿಪಾದಿಸುತ್ತಾಳೆ.

## ಅಡಿಟಿಪ್ಪಣಿಗಳು

೧. ಡಾ.ಎನ್.ಆರ್.ನಾಯಕ್ (ಸಂ); ಗಾಮೊಕ್ಕಲ ಮಹಾಭಾರತ, ೧೯೯೨, ಪ್ರಸ್ತಾವನೆ, ಕರ್ನಾಟಕ ವಿ.ವಿ.

೨. ಸೋಮಶೇಖರ ಇಮ್ರಾಪುರ (ಸಂ); ಜನಪದ ಮಹಾಭಾರತ, ೧೯೭೬, ಪ್ರಸ್ತಾವನೆ ೮

೩. ಡಾ.ಜಿ.ಎಸ್.ಶಿವರುದ್ರಪ್ಪ; ಮಹಾಕಾವ್ಯ ಸ್ವರೂಪ, ಪುಟ ೩೪, ೩೫, ಉಲ್ಲೇಖ: ಗಾಮೊಕ್ಕಲ ಮಹಾಭಾರತ, ಎನ್.ಆರ್. ನಾಯಕ (ಸಂ); ಪ್ರಸ್ತಾವನೆ ೨

೪. ಡಾ.ಪಿ.ಕೆ.ರಾಜಶೇಖರ, ರಾಗೌ, ಎಸ್.ಬಸವಯ್ಯ (ಸಂ); ಜನಪದ ರಾಮಾಯಣ, ೧೯೭೩, ಪ್ರಸ್ತಾವನೆ XI

೫. ಡಾ.ಸರಸ್ವತಿ ವಿಜಯಕುಮಾರ್; ಸಾಧನೆ, ಸಂಪುಟ-೨೩, ಸಂಚಿಕೆ-೧,೨, ಜನವರಿ, ಜೂನ್ ೧೯೯೪, ಪುಟ ೧

೬. ಡಾ.ಅರವಿಂದ ಮಾಲಗತ್ತಿ; ಪುರಾಣ ಜಾನಪದ ಮತ್ತು ದೇಶಿವಾದ, ೧೯೯೯, ಪುಟ ೮೮

೭. ಡಾ.ಪಿ.ಕೆ.ರಾಜಶೇಖರ, ರಾಗೌ, ಎಸ್.ಬಸವಯ್ಯ (ಸಂ); ಜನಪದ ರಾಮಾಯಣ, ೧೯೭೩, ಪ್ರಸ್ತಾವನೆ ೧೧

೮. ಪ್ರೊ.ಎಚ್.ಜೆ.ಲಕ್ಕಪ್ಪಗೌಡ (ಸಂ); ಎಂ.ಆರ್.ಲಕ್ಷ್ಮೀದೇವಿ, ಕುಮಾರವ್ಯಾಸ ಮತ್ತು ಜನಪದ, ೧೯೯೭, ಪ್ರಸ್ತಾವನೆ V

೯. ಎ.ಎಸ್.ಪ್ರಭಾಕರ; ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ೨೦೦೦, ಪುಟ ೬೯

೧೦. ಡಾ.ಎನ್.ಆರ್.ನಾಯಕ್; ಕಾರವಾರ ಜಿಲ್ಲೆಯ ಜನಪದ ಗೀತೆಗಳು, ೧೯೮೨, ಪುಟ ೧೬೨

೧೧. ಡಾ.ಜೀ.ಶಂಪರಮಶಿವಯ್ಯ (ಸಂ); ಜನಪದ ಖಂಡಕಾವ್ಯ, ೧೯೯೬, ಪುಟ ೮೨, ೮೩

೧೨. ಡಾ.ಜೀ.ಶಂ.ಪರಮಶಿವಯ್ಯ (ಸಂ); ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೧೯೭

೧೩. ಅದೇ, ಪುಟ ೨೮೩

೧೪. ಡಾ.ಜೀ.ಶಂ.ಪರಮಶಿವಯ್ಯ (ಸಂ); ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೨೮೪

೧೫. ಟಿಪ್ಪಣಿ : ರಾಮಾಯಣದ ಎಲ್ಲ ಪ್ರಸಂಗಗಳ ಮೇಲೂ ಬಿಡಿ ಪದ್ಯಗಳು ಕರ್ನಾಟಕದ ಬೇರೆ ಬೇರೆ ಕಡೆ ಲಭ್ಯವಾಗುವುದರಿಂದ ಕರ್ನಾಟಕದಾದ್ಯಂತ ಈ ಕೃತಿ ಪ್ರಚಾರದಲ್ಲಿತ್ತೆಂಬುದಂತೂ ಸ್ಪಷ್ಟವಾಗುತ್ತದೆ. ಚೆನ್ನಪಟ್ಟಣದ

ನಾಗವಾರದ ಓರ್ವ ವೃದ್ಧೆಯಿಂದ ಇಲ್ಲಿನ ಬಹುಪಾಲು ತ್ರಿಪದಿಗಳನ್ನು ಶ್ರೀ ಎನ್.ಆರ್.ರಂಗಯ್ಯನವರು ಸಂಗ್ರಹಿಸಿದ್ದಾರೆ. ರಾಮಾಯಣದ ಇನ್ನೂ ಅನೇಕ ಭಾಗಗಳು ಅವರಿಗೆ ಬರುತ್ತವೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಅವರು ಸಂಗ್ರಹಿಸಿದ ತ್ರಿಪದಿಗಳ ಜೊತೆಗೆ ಇತರೆಡೆಯಲ್ಲಿ ದೊರೆತ ತ್ರಿಪದಿಗಳನ್ನ ಅಳವಡಿಸಿ ರಾಮಾಯಣದ ರೂಪವನ್ನು ಇಲ್ಲಿ ಕೊಡಲಾಗಿದೆ.

೧೬. ಡಾ.ಜೀ.ಶಂ.ಪರಮಶಿವಯ್ಯ (ಸಂ); ಜನಪದ ಕಾವ್ಯ ಕತೆಗಳು, ೧೯೯೦, ಪುಟ ೨೨೬

೧೭. ಡಾ. ತೀ.ನಂ.ಶಂಕರನಾರಾಯಣ (ಸಂ); ಡಾ. ಪಿ.ಕೆ.ರಾಜಶೇಖರ, ಕರ್ನಾಟಕದ ಜನಪದ ಮಹಾಕಾವ್ಯ, ೧೯೯೮, ಪುಟ ೯೮

೧೮. ಅದೇ, ಪುಟ ೧೦೧

೧೯. ಮತಿಘಟ್ಟ ಕೃಷ್ಣಮೂರ್ತಿ (ಸಂ); ಕನ್ನಡ ಜನಪದ ಸಾಹಿತ್ಯ ಭಂಡಾರ ಸಂಪುಟ ೨, ೧೯೮೨

೨೦. ಡಾ.ಕಾಳೇಗೌಡ ನಾಗವಾರ (ಸಂ); ಬಯಲು ಸೀಮೆಯ ಲಾವಣಿಗಳು, ೧೯೭೩, ಮೈಸೂರು ವಿ.ವಿ.

೨೧. ಅದೇ, ಪ್ರಸ್ತಾವನೆ XXXIX

೨೨. ಡಾ.ಎ.ಹಿರಿಯಣ್ಣ (ಸಂ); ತಂಬೂರಿ ಸಂಪ್ರದಾಯದ ಕಾವ್ಯಗಳು, ೧೯೮೦, ಮೈ.ವಿ.ವಿ

೨೩. ಗುಂಡ್ಮಿ ಚಂದ್ರಶೇಖರ ಐತಾಳ (ಸಂ); ಕೈಲಿಯ ಕರೆದ ನೊರೆಹಾಲು, ೧೯೭೦, ಮೈ.ವಿ.ವಿ

೨೪. ಎಸ್.ಎ.ಕೃಷ್ಣಯ್ಯ (ಸಂ); ಬಾಚಿಗೊಂಡನ ಹಳ್ಳಿ ಮತ್ತು ಏಣಿಗೆ ಬಸಾಪುರದ ಜನಪದ ಗೀತೆಗಳು, ೧೯೯೨

೨೫. ಡಾ.ಎನ್.ಆರ್.ನಾಯಕ್ (ಸಂ); ಹಳ್ಳೇರ ಜಾನಪದ ಸಾಹಿತ್ಯ, ೨೦೦೦

೨೬. ಡಾ.ಎನ್.ಆರ್.ನಾಯಕ್; ಕಾರವಾರ ಜಿಲ್ಲೆಯ ಜನಪದ ಗೀತೆಗಳು, ೧೯೮೨, ಕ.ವಿ.ವಿ

೨೭. ಡಾ.ಎಲ್.ಆರ್.ಹೆಗಡೆ (ಸಂ); ಪರಮೇಶ್ವರಿಯ ಪದಗಳು, ೧೯೭೨

೨೮. ಡಾ.ಎಸ್.ವಿ.ಪ್ರಭಾವತಿ; ಸ್ತ್ರೀವಾದದ ಪ್ರಸ್ತುತತೆ, ೨೦೦೦, ಪುಟ ೫೭

೨೯. ಡಾ.ಪಿ.ಕೆ.ರಾಜಶೇಖರ, ಡಾ. ರಾಗೌ, ಎಸ್.ಬಸವಯ್ಯ (ಸಂ); ಜನಪದ ರಾಮಾಯಣ, ೧೯೭೩, ಪ್ರಸ್ತಾವನೆ XXXIII, XXXV

೩೦. ಅದೇ, ಪ್ರಸ್ತಾವನೆ XVII

೩೧. ಡಾ.ದೇ.ಜವರೇಗೌಡ; ಜಾನಪದ ಅಧ್ಯಯನ, ೧೯೯೧, ಪುಟ ೧೭೮

೩೨. ಡಾ.ಪಿ.ಕೆ.ರಾಜಶೇಖರ, ಡಾ.ರಾಗೌ, ಎಸ್.ಬಸವಯ್ಯ (ಸಂ); ಜನಪದ ರಾಮಾಯಣ, ೧೯೭೩ ಪ್ರಸ್ತಾವನೆ XXXIII

೩೩. ಡಾ.ಕೆ.ಎಂ.ಮೈತ್ರಿ (ಸಂ); ಕೃಷ್ಣಗೊಲ್ಲರ ಕಥನಕಾವ್ಯಗಳು, ೨೦೦೦, ಪ್ರಸ್ತಾವನೆ ೯

೩೪. ಡಾ.ಹಿ.ಚಿ.ಬೋರಲಿಂಗಯ್ಯ; ವಿಸ್ಮೃತಿ ಮತ್ತು ಸಂಸ್ಕೃತಿ, ೨೦೦೧, ಪುಟ ೧೪೬, ೧೪೭

೩೫. ಡಾ. ಹಿ.ಚಿ.ಬೋರಲಿಂಗಯ್ಯ, ಡಾ.ಕಾಳೇಗೌಡ ನಾಗವಾರ (ಸಂ); ಗಿರಿಜನ ಕಾವ್ಯ ೨೦೦೦, ಪ್ರಸ್ತಾವನೆ ೨೦

೩೬. ಡಾ. ಹಿ.ಚಿ.ಬೋರಲಿಂಗಯ್ಯ; ಗೊಂಡರ ರಾಮಾಯಣ, ೧೯೯೯, ಕ.ವಿ.ವಿ.

೩೭. ವಿ.ಸೀತಾರಾಮಯ್ಯ; ವಾಲ್ಮೀಕಿ ರಾಮಾಯಣ, ೧೯೯೬ ೨ನೇ ಮುದ್ರಣ ಪುಟ ೧೬

೩೮. ಡಾ.ಹಿ.ಚಿ.ಬೋರಲಿಂಗಯ್ಯ; ಗೊಂಡರ ರಾಮಾಯಣ, ೧೯೯೯, ಪ್ರಸ್ತಾವನೆ ೬

೩೯. ಸೀತಾಸುತ; ಮಥಿತಾರ್ಥದಲ್ಲಿ ಸಂಕ್ಷಿಪ್ತ ವಾಲ್ಮೀಕಿ ರಾಮಾಯಣ, ೧೯೮೮, ಪ್ರಸ್ತಾವನೆ ೬

೪೦. ಡಾ.ಕಾಳೇಗೌಡ ನಾಗವಾರ, ಎನ್.ಹುಚ್ಚಪ್ಪ ಮಾಸ್ತರ, ಡಾ.ಹಿ.ಚಿ.ಬೋರಲಿಂಗಯ್ಯ (ಸಂ); ಗಿರಿಜನ ಸಂಸ್ಕೃತಿ, ೨೦೦೦, ಪುಟ ೧೫೭

೪೧. ಡಾ.ಪಿ.ಕೆ.ರಾಜಶೇಖರ, ಡಾ.ರಾಗೌ, ಎಸ್.ಬಸವಯ್ಯ (ಸಂ); ಜನಪದ ರಾಮಾಯಣ, ೧೯೭೩, ಪ್ರಸ್ತಾವನೆ XXII

೪೨. ಅದೇ, ಪ್ರಸ್ತಾವನೆ XX

೪೩. ಡಾ.ಹಿ.ಚಿ.ಬೋರಲಿಂಗಯ್ಯ, ಗೊಂಡರ ರಾಮಾಯಣ, ೧೯೯೯, ಪ್ರಸ್ತಾವನೆ ೧೩

೪೪. ಡಾ.ಕಾಳೇಗೌಡ ನಾಗವಾರ, ಎನ್.ಹುಚ್ಚಪ್ಪ ಮಾಸ್ತರ, ಡಾ.ಹಿ.ಚಿಬೋರಲಿಂಗಯ್ಯ (ಸಂ), ಗಿರಿಜನ ಸಂಸ್ಕೃತಿ, ೨೦೦೦, ಪುಟ ೧೫೯, ೧೬೦

೪೫. ಡಾ.ಎಸ್.ವಿ.ಪ್ರಭಾವತಿ, ಸ್ತ್ರೀವಾದದ ಪ್ರಸ್ತುತತೆ, ೨೦೦೦, ಪುಟ ೫೭

೪೬. ಡಾ.ಹಿ.ಚಿ.ಬೋರಲಿಂಗಯ್ಯ; ಗೊಂಡರ ರಾಮಾಯಣ, ೧೯೯೯, ಪ್ರಸ್ತಾವನೆ ೧೨

೪೭. ಡಾ.ಪಿ.ಕೆ.ರಾಜಶೇಖರ; ಡಾ.ರಾಗೌ, ಬಸವಯ್ಯ ಎಸ್., (ಸಂ) ಜನಪದ ರಾಮಾಯಣ, ೧೯೭೩, ಪ್ರಸ್ತಾವನೆ XXII, XXIII

೪೮. ವಿ.ಸೀತಾರಾಮಯ್ಯ; ವಾಲ್ಮೀಕಿ ರಾಮಾಯಣ, ೧೯೯೬ ೨ನೇ ಮುದ್ರಣ ಪುಟ ೯೪

೪೯. ಡಾ.ಪಿ.ಕೆ.ರಾಜಶೇಖರ, ಡಾ.ರಾಗೌ, ಎಸ್.ಬಸವಯ್ಯ (ಸಂ); ಜನಪದ ರಾಮಾಯಣ, ೧೯೭೩ ಪ್ರಸ್ತಾವನೆ XXVI

೫೦. ಡಾ.ಹಿ.ಚಿ.ಬೋರಲಿಂಗಯ್ಯ; ವಿಸ್ಮೃತಿ ಮತ್ತು ಸಂಸ್ಕೃತಿ, ೨೦೦೦, ಪುಟ ೮೧

೫೧. ಡಾ.ಕಾಳೇಗೌಡ ನಾಗವಾರ ಎನ್.ಹುಚ್ಚಪ್ಪ ಮಾಸ್ತರ, ಡಾ.ಹಿ.ಚಿ.ಬೋರಲಿಂಗಯ್ಯ (ಸಂ); ಗಿರಿಜನ ಸಂಸ್ಕೃತಿ, ೨೦೦೦, ಪುಟ ೧೭೫

೫೨. ಟಿಪ್ಪಣಿ: ಮುಂದೆ ಶ್ರೀಕೃಷ್ಣನ ಅವತಾರದಲ್ಲಿ ವ್ಯಾಧನ ಜನ್ಮವೆತ್ತಿ ಜರನಾಗಿ ಬಂದ ವಾಲಿಯ ಕೃಷ್ಣನನ್ನು ಬಾಣದಿಂದಲೇ ಸಾಯಿಸಬೇಕಾಯಿತು ಎಂಬುದರ ಸಿದ್ಧಾಂತರ ಅದಮ್ಯತೆಯನ್ನು ನೋಡಬಹುದು

೫೩. ಡಾ.ಕಾಳೇಗೌಡ ನಾಗವಾರ, ಎನ್.ಹುಚ್ಚಪ್ಪ ಮಾಸ್ತರ, ಡಾ.ಹಿ.ಚಿ.ಬೋರಲಿಂಗಯ್ಯ (ಸಂ); ಗಿರಿಜನ ಸಂಸ್ಕೃತಿ, ೨೦೦೦, ಪುಟ ೧೭೭

೫೪. ಎಸ್.ಎಸ್.ಹಿರೇಮಠ; ಜಾತ್ರೆಗಳು, ೧೯೯೩, ಪುಟ ೧೦೧

೫೫. ಡಾ.ಕಾಳೇಗೌಡ ನಾಗವಾರ, ಎನ್.ಹುಚ್ಚಪ್ಪ ಮಾಸ್ತರ, ಡಾ.ಹಿ.ಚಿ.ಬೋರಲಿಂಗಯ್ಯ (ಸಂ); ಗಿರಿಜನ ಸಂಸ್ಕೃತಿ, ೨೦೦೦, ಪುಟ ೧೮೧

೫೬. ಮಾಸ್ತಿ ವೆಂಕಟೇಶ ಅಯ್ಯಂಗಾರ್; ಆದಿಕವಿ ವಾಲ್ಮೀಕಿ, ೧೯೯೫, ೫ನೇ ಮುದ್ರಣ, ಪುಟ ೨೩೮

೫೭. ಡಾ.ಕಾಳೇಗೌಡ ನಾಗವಾರ, ಎನ್.ಹುಚ್ಚಪ್ಪ ಮಾಸ್ತರ, ಡಾ.ಹಿ.ಚಿ.ಬೋರಲಿಂಗಯ್ಯ (ಸಂ); ಗಿರಿಜನ ಸಂಸ್ಕೃತಿ, ೨೦೦೦, ಪುಟ ೧೮೨

೫೮. ಡಾ.ಹಿ.ಚಿ.ಬೋರಲಿಂಗಯ್ಯ; ಗೊಂಡರ ರಾಮಾಯಣ, ೧೯೯೯, ಪ್ರಸ್ತಾವನೆ ೩೫

೫೯. ವಿ.ಸೀತಾರಾಮಯ್ಯ; ವಾಲ್ಮೀಕಿ ರಾಮಾಯಣ, ೧೯೯೬ ೨ನೇ ಮುದ್ರಣ ಪುಟ ೧೦೪

೬೦. ಅದೇ, ಪುಟ ೧೦೪, ೧೦೫

೬೧. ಮಾಸ್ತಿ ವೆಂಕಟೇಶ ಅಯ್ಯಂಗಾರ್; ಆದಿಕವಿ ವಾಲ್ಮೀಕಿ, ೧೯೯೫, ೫ನೇ ಮುದ್ರಣ, ಪುಟ ೨೦೨

೬೨. ಮಾಸ್ತಿ ವೆಂಕಟೇಶ ಅಯ್ಯಂಗಾರ್; ಸಂಕ್ಷಿಪ್ತ ವಾಲ್ಮೀಕಿ ರಾಮಾಯಣ, ೧೯೯೪ ೨ನೇ ಮುದ್ರಣ, ಪುಟ ೩೦೫

೬೩. ಡಾ.ಪಿ.ಕೆ.ರಾಜಶೇಖರ, ಡಾ.ರಾಗೌ, ಎಸ್.ಬಸವಯ್ಯ (ಸಂ); ಜನಪದ ರಾಮಾಯಣ, ೧೯೭೩ ಪ್ರಸ್ತಾವನೆ XXXII

೬೪. ವಿ.ಸೀತಾರಾಮಯ್ಯ; ವಾಲ್ಮೀಕಿ ರಾಮಾಯಣ, ೧೯೯೬ ೨ನೇ ಮುದ್ರಣ ಪುಟ ೪೦, ೪೧

೬೫. ಅದೇ, ಪುಟ ೧೦೮

೬೬. ಡಾ.ರಹಮತ್ ತರೀಕೆರೆ; ಮರದೊಳಗಣ ಕಿಚ್ಚು, ೨೦೦೨, ಪುಟ ೨೧೦

೬೭. ಎ.ಆರ್.ಕೃಷ್ಣಶಾಸ್ತ್ರಿ; ವಚನ ಭಾರತ, ೧೯೯೭ (೯ ನೇ ಮುದ್ರಣ), ಪೀಠಿಕೆ ಪುಟ ೧೭

೬೮. ಡಾ.ಜಿ.ಎಸ್.ಶಿವರುದ್ರಪ್ಪ; ಸಮಗ್ರ ಗದ್ಯ ಸಂಪುಟ- ೩, ೧೯೯೬, ಪುಟ ೧೪೩

೬೯. ಮಾಸ್ತಿವೆಂಕಟೇಶ ಅಯ್ಯಂಗಾರ್; ಅಂತರಗಂಗೆ, ೨೦೦೦ (೩ ನೇ ಮುದ್ರಣ) ಪುಟ ೧೮೧

೭೦. ಮೂಲ : ಎ.ಕೆ.ರಾಮಾನುಜನ್; ಅನು: ಚಂದ್ರಶೇಖರ ನಂಗಲಿ, ಕನ್ನಡ ಅಧ್ಯಯನ (ಚಳಿಸಂಚಿಕೆ) ಸಂಪುಟ ೭, ಸಂಚಿಕೆ ೩, ೨೦೦೧, ಪುಟ ೬೬

೭೧. ಡಾ.ಗಾಯತ್ರಿ ನಾವಡ; ಮಹಿಳಾ ಅಧ್ಯಯನ, ಸಂಪುಟ-೧, ಸಂಚಿಕೆ-೨, ಜುಲೈ ೧೯೯೯, ಪುಟ ೧೫

೭೨. ಡಾ.ಎಲ್.ಆರ್.ಹೆಗಡೆ; ಜನಪದ ಭಾರತ ಕಥೆಗಳು, ೧೯೮೦, ಪ್ರಸ್ತಾವನೆ ೧

೭೩. ಅದೇ, ಪ್ರಸ್ತಾವನೆ ೨

೭೪. ಡಾ.ಬಿ.ಎಸ್.ಗದ್ದಗಿಮಠ; ಗದ್ದಗಿಮಠರ ಬರಹಗಳು, ಕನ್ನಡ ಅಧ್ಯಯನ ಸಂಸ್ಥೆ, ೧೯೮೮, ಪುಟ ೧೨೬

೭೫. ಡಾ.ಎನ್.ಆರ್.ನಾಯಕ್; ಕಾರವಾರ ಜಿಲ್ಲೆಯ ಜನಪದ ಗೀತೆಗಳು, ೧೯೮೨, ಪುಟ ೧೬೨

೭೬. ಡಾ.ತೀ.ನಂ.ಶಂಕರನಾರಾಯಣ (ಸಂ); ಡಾ.ಪಿ.ಕೆ.ರಾಜಶೇಖರ, ಕರ್ನಾಟಕ ಜನಪದ ಮಹಾಕಾವ್ಯಗಳು, ೧೯೯೮, ಪುಟ ೧೦೨

೭೭. ಡಾ.ಜೀ.ಶಂ.ಪರಮಶಿವಯ್ಯ; ೧೯೭೫, ಪುಟ ೧೧೦, ಉಲ್ಲೇಖ:ಡಾ.ಸೋಮಣ್ಣ, ಕೊಂತಿಪೂಜೆ, ೨೦೦೦,ಪುಟ ೬

೭೮. ಮತಿಘಟ್ಟ ಕೃಷ್ಣಮೂರ್ತಿ; ಜನಪದ ಸಾಹಿತ್ಯ, ೧೯೭೮, ಪುಟ ೧೧೬

೭೯. ಡಾ.ತೀ.ನಂ.ಶಂಕರನಾರಾಯಣ (ಸಂ); ಡಾ.ಪಿ.ಕೆ.ರಾಜಶೇಖರ, ಕರ್ನಾಟಕ ಜನಪದ ಮಹಾಕಾವ್ಯಗಳು, ೧೯೯೮, ಪುಟ ೧೦೨

೮೦. ಅದೇ, ಪುಟ ೧೦೩

೮೧. ಡಾ.ಜೀ.ಶಂ.ಪರಮಶಿವಯ್ಯ; ಜನಪದ ಖಂಡಕಾವ್ಯ, ೧೯೯೬, ಪುಟ ೮೨

೮೨. ಡಾ.ಸೋಮಣ್ಣ; ಕೊಂತಿ ಪೂಜೆ, ಕನ್ನಡ ವಿ.ವಿ., ೨೦೦೦

೮೩. ಉಲ್ಲೇಖ (ಸಂ) ತೀ.ನಂ. ಶಂಕರನಾರಾಯಣ, ಡಾ.ಪಿ.ಕೆ.ರಾಜಶೇಖರ; ಜನಪದ ರಾಮಾಯಣ ಮತ್ತು ಮಹಾಭಾರತ, ಕರ್ನಾಟಕ ಜನಪದ ಮಹಾಕಾವ್ಯಗಳು, ೧೯೯೮, ಪುಟ ೧೦೩

೮೪. ಡಾ.ಜೀ.ಶಂ.ಪರಮಶಿವಯ್ಯ; ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ೧೯೭೯, ಪುಟ ೨೮೩

೮೫. ಕೃಷ್ಣಮೂರ್ತಿ ಹನೂರು (ಸಂ) ಜನಪದ ಮತ್ತು ಬುಡಕಟ್ಟು ಗೀತೆಗಳು, ೧೯೯೮, ಪುಟ ೧೪೭

೮೬. ಎ.ಹಿರಿಯಣ್ಣ (ಸಂ); ತೀರ್ಥಹಳ್ಳಿ ಸುತ್ತಿನ ಲಾವಣಿಗಳು, ೧೯೭೬, ಮೈಸೂರು ವಿ.ವಿ.

೮೭. ಕೆ.ಶ್ರೀಕಂಠ ಕೂಡಿಗೆ; ಅಂಟಿಗೆ ಪಂಟಿಕೆ ಪದಗಳು, ೧೯೭೩, ಮೈಸೂರು ವಿ.ವಿ

೮೮. ಎಂ.ಬಿ.ನಳಿನಿ (ಸಂ); ಕಾಡುಮಲ್ಲಿಗೆ, ೧೯೮೨, ಮೈಸೂರು ವಿ.ವಿ

೮೯. ಎಸ್.ಎ.ಕೃಷ್ಣಯ್ಯ (ಸಂ); ಬಾಚಿಗೊಂಡನ ಹಳ್ಳಿ ಮತ್ತು ಏಣಗಿ ಬಸಾಪುರದ ಜನಪದ ಗೀತೆಗಳು, ೧೯೯೨

೯೦. ಡಾ.ಎಸ್.ವಿ.ಪ್ರಭಾವತಿ; ದ್ರೌಪದಿ-ಒಂದು ಅಧ್ಯಯನ ೧೯೯೬, ಪುಟ ೨೪

೯೧. ಡಾ.ಹಿ.ಚಿ.ಬೋರಲಿಂಗಯ್ಯ; ಹಾಲಕ್ಕಿ ಒಕ್ಕಲಿಗರ ಜ್ಞಾನ ಪರಂಪರೆ, ೨೦೦೨ ಪುಟ ೪೮

೯೨. ಡಾ.ಎಸ್.ವಿ.ಪ್ರಭಾವತಿ; ದ್ರೌಪದಿ- ಒಂದು ಅಧ್ಯಯನ, ೧೯೯೬, ಪುಟ ೧೨೭

೯೩. ಡಾ.ತೀ.ನಂ.ಶಂಕರನಾರಾಯಣ (ಸಂ) ಡಾ.ಪಿ.ಕೆ.ರಾಜಶೇಖರ; ಕರ್ನಾಟಕ ಜನಪದ ಮಹಾಕಾವ್ಯಗಳು, ೧೯೯೮, ಪುಟ ೧೦೪

೯೪. ಡಾ.ಎಲ್.ಆರ್.ಹೆಗಡೆ (ಸಂ); ತಿಮ್ಮಕ್ಕನ ಪದಗಳು, ೧೯೬೯, ಮೈಸೂರು ವಿ.ವಿ

೯೫. ಡಾ.ಎಲ್.ಆರ್.ಹೆಗಡೆ (ಸಂ); ಪರಮೇಶ್ವರಿ ಪದಗಳು, ೧೯೭೨, ಕರ್ನಾಟಕ ವಿ.ವಿ

೯೬. ಅದೇ, ಪ್ರಸ್ತಾವನೆ ixxix

೯೭. ಡಾ.ಎಲ್.ಆರ್.ಹೆಗಡೆ (ಸಂ); ಜನಪದ ಭಾರತ ಕಥೆಗಳು, ೧೯೮೦

೯೮. ಗುಂಡ್ಮಿ ಚಂದ್ರಶೇಖರ್ ಐತಾಳ (ಸಂ); ಕೈಲಿದು ಕರೆದ ನೊರೆಹಾಲು, ೧೯೭೦, ಮೈಸೂರು ವಿ.ವಿ

೯೯. ಡಾ.ಎಲ್.ಆರ್.ಹೆಗಡೆ (ಸಂ); ಜನಪದ ಭಾರತ ಕಥೆಗಳು ೧೯೮೦, ಪ್ರಸ್ತಾವನೆ III

೧೦೦. ಡಾ.ತೀ.ನಂ.ಶಂಕರನಾರಾಯಣ (ಸಂ); ಡಾ.ರಾಜಶೇಖರ ಪಿ.ಕೆ., ಕರ್ನಾಟಕ ಜನಪದ ಮಹಾಕಾವ್ಯಗಳು, ೧೯೯೮, ಪುಟ ೧೦೫

೧೦೧. ಅದೇ, ಪುಟ ೧೦೭

೧೦೨. ಡಾ.ಹಿ.ಚಿ.ಬೋರಲಿಂಗಯ್ಯನರು; ಹಾಲಕ್ಕಿ ಒಕ್ಕಲಿಗರ ಜ್ಞಾನ ಪರಂಪರೆ, ೨೦೦೨

೧೦೩. ಡಾ.ಎನ್.ಆರ್.ನಾಯಕ್; ಕಾರವಾರ ಜಿಲ್ಲೆಯ ಜನಪದ ಗೀತೆಗಳು, ಕರ್ನಾಟಕ ವಿ.ವಿ.೧೯೮೨

೧೦೪. ಡಾ.ಎನ್.ಆರ್.ನಾಯಕ್ (ಸಂ); ಗಾಮೊಕ್ಕಲ ಮಹಾಭಾರತ, ಕರ್ನಾಟಕ ವಿ.ವಿ., ೧೯೯೨

೧೦೫. ಪ್ರೊ.ಎಚ್.ಜೆ.ಲಕ್ಕಪ್ಪಗೌಡ (ಸಂ) ಡಾ.ಎನ್.ಆರ್.ನಾಯಕ್; ಕರ್ನಾಟಕ ಬುಡಕಟ್ಟುಗಳು ಸಂಪುಟ-೧, ೧೯೯೮, ಪುಟ ೫೪೩

೧೦೬. ಅದೇ, ಪುಟ ೫೪೧

೧೦೭. ಎ.ಆರ್.ಕೃಷ್ಣಶಾಸ್ತ್ರಿ: ವಚನ ಭಾರತ, ೧೯೯೭, ಪುಟ ೧೬೪

೧೦೮. ಡಾ.ಎನ್.ಆರ್.ನಾಯಕ್ (ಸಂ); ಗಾಮೊಕ್ಕಲ ಮಹಾಭಾರತ, ೧೯೯೨, ಪ್ರಸ್ತಾವನೆ ೧೭

೧೦೯. ಪ್ರೊ.ಎಚ್.ಜೆ.ಲಕ್ಕಪ್ಪಗೌಡ (ಸಂ); ಡಾ.ಎನ್.ಆರ್.ನಾಯಕ್, ಕರ್ನಾಟಕ ಬುಡಕಟ್ಟುಗಳ ಸಂಪುಟ-೧, ೧೯೯೮, ಪುಟ ೫೪೫

೧೧೦. ಡಾ.ಗಾಯತ್ರಿ ನಾವಡ; ಮಹಿಳಾ ಅಧ್ಯಯನ, ಸಂಪುಟ-೧, ಸಂಚಿಕೆ-೨, ಜುಲೈ ೯೯, ಕನ್ನಡ ವಿ.ವಿ. ಪುಟ ೧೫

೧೧೧. ಡಾ.ಬಸವರಾಜ ನೆಲ್ಲಿಸರ (ಸಂ); ಡಾ.ಗಾಯತ್ರಿ ನಾವಡ, ಜಾನಪದ ೧೯೯೬, ಪುಟ ೪೫

೧೧೨. ಡಾ.ಗಾಯತ್ರಿ ನಾವಡ; ಭಾರತೀಯ ಸ್ತ್ರೀವಾದ :ಒಂದು ಸಂಕಥನ, ೨೦೦೦, ಪುಟ ೨೪

೧೧೩. ಡಾ.ಬಸವರಾಜ ನೆಲ್ಲಿಸರ (ಸಂ); ಡಾ.ಗಾಯತ್ರಿ ನಾವಡ, ಜಾನಪದ ೧೯೯೬, ಪುಟ ೪೫

೧೧೪. ಡಾ.ಎಲ್.ಆರ್.ಹೆಗಡೆ (ಸಂ); ಪರಮೇಶ್ವರಿ ಪದಗಳು, ೧೯೭೨, ಪೀಠಿಕೆ XXVIII

೧೧೫. ಡಾ.ಎಲ್.ಆರ್.ಹೆಗಡೆ (ಸಂ); ಜನಪದ ಭಾರತ ಕಥೆಗಳು, ೧೯೮೦, ಪುಟ ೯೫

೧೧೬. ಡಾ.ಎಲ್.ಆರ್.ಹೆಗಡೆ (ಸಂ); ಗಾಮೊಕ್ಕಲ ಮಹಾಭಾರತ, ೧೯೯೨, ಪ್ರಸ್ತಾವನೆ ೧೭

೧೧೭. ಡಾ.ಎಲ್.ಆರ್.ಹೆಗಡೆ (ಸಂ); ಪರಮೇಶ್ವರಿ ಪದಗಳು, ೧೯೭೨, ಪೀಠಿಕೆ XXIX

೧೧೮. ಡಾ.ಎನ್.ಆರ್.ನಾಯಕ್ (ಸಂ); ಗಾಮೊಕ್ಕಲ ಮಹಾಭಾರತ. ೧೯೯೨, ಪ್ರಸ್ತಾವನೆ ೧೭

೧೧೯. ಡಾ.ಗಾಯತ್ರಿ ನಾವಡ; ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು ೧೯೯೯, ಪುಟ ೯೭

೧೨೦. ಡಾ.ತೀ.ನಂ.ಶಂಕರನಾರಾಯಣ; ಜನಪದ ಮಹಾಕಾವ್ಯ, ಕರ್ನಾಟಕ ಸಂಘ ಪುತ್ತೂರು, ೧೯೯೬, ಪುಟ ೧೧

೧೨೧. ಡಾ.ಸ.ಚಿ.ರಮೇಶ್ (ಸಂ); ಸ್ವಾಸಿ ಚಿನ್ನಮ್ಮನ ಕಾವ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪುಟ ೧೬೭-೧೬೮

೧೨೨. ಡಾ.ಎಸ್.ಎಸ್.ಅಂಗಡಿ ಜಾನಪದ ಕರ್ನಾಟಕ, ಸಂಪುಟ-೧, ಸಂಚಿಕೆ-೨, ಡಾ.ಮಂಜುನಾಥ ಬೇವಿನಕಟ್ಟಿ(ಸಂ); ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪುಟ ೪೬, ೪೮

೧೨೩. ಡಾ.ಸ.ಚಿ.ರಮೇಶ್ (ಸಂ); ಸ್ಯಾಸಿ ಚಿನ್ನಮ್ಮನ ಕಾವ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪ್ರಸ್ತಾವನೆ ಪುಟ ೧೪

೧೨೪. ಟಿಪ್ಪಣಿ: ಸ್ಯಾಸಿ ಎಂದರೆ ಕಲ್ಯಾಣ ಕರ್ನಾಟಕದ ಆಡುನುಡಿಯಲ್ಲಿ 'ಸೊಸೆ' ಎನ್ನುವ ಅರ್ಥವಿರಬಹುದು.

೧೨೫. ಡಾ.ಸ.ಚಿ.ರಮೇಶ್ (ಸಂ); ಸ್ಯಾಸಿ ಚಿನ್ನಮ್ಮನ ಕಾವ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪ್ರಸ್ತಾವನೆ ಪುಟ ೯, ೧೦

೧೨೬. ಶಾಂತಿ ನಾಯಕ್; ಜನಪದ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ ಮತ್ತು ಕುಟುಂಬ ವ್ಯವಸ್ಥೆ, ಲೇಖನ, ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪುಟ ೨೯೭

೧೨೭. ಟಿಪ್ಪಣಿ: ದಾಸಪ್ಪ ವೈಷ್ಣವ ಸಂಪ್ರದಾಯದ ಗುಡ್ಡ. ತಿರುಪತಿ ಇವರ ಧಾರ್ಮಿಕ ಕೇಂದ್ರ. ಆಯಾಯ ಸ್ಥಳೀಯ ವೈಷ್ಣವ ದೇವಸ್ಥಾನಗಳಿಗೆ ನಡೆದುಕೊಳ್ಳುತ್ತಾರೆ. ಇವರು ದೀಕ್ಷೆಯನ್ನು ಪಡೆದ ಮೇಲೆ ಮೂರು ನಾಮ, ಶಂಕು, ಜಾಗಟೆಗಳನ್ನು ಹಿಡಿದು ಭಿಕ್ಷೆ ಮಾಡುತ್ತಾರೆ.

# ಅಧ್ಯಾಯ ೭

# ಸಮಾರೋಪ

ಜನಪದ ಸಾಹಿತ್ಯದಲ್ಲಿ ಮಹಾಕಾವ್ಯಗಳು ತಮ್ಮದೇ ಆದ ವಿಶಿಷ್ಟ ಗುಣಗಳಿಂದ ಪ್ರಮುಖ ಸ್ಥಾನವನ್ನು ಪಡೆದುಕೊಂಡಿರುವುದರಿಂದ ಈ ಕಾವ್ಯಗಳನ್ನು ರಾಷ್ಟ್ರೀಯ ಸಾಂಸ್ಕೃತಿಕ ಆಸ್ತಿ ಎಂದು ಪರಿಗಣಿಸಬೇಕು. ಭಾರತದಲ್ಲಿ ಜನಪದ ಮಹಾಕಾವ್ಯಗಳ ಸಮೃದ್ಧ ಗಣಿಯನ್ನೇ ಕಾಣಬಹುದು. ಒಟ್ಟಿನಲ್ಲಿ ಜಾನಪದ ದಿನ ಬದುಕಿನ ಸಂಗತಿಯಾಗಿ ಜನತೆಯ ಮೇಲೆ ಬೀರುವ ಪ್ರಭಾವ ಹಿರಿದಾದುದು.

ಜನಪದ ಜೀವನದ ಮತ್ತು ಸಂಸ್ಕೃತಿಯ ಕೇಂದ್ರ ಬಿಂದು ಹೆಣ್ಣು. ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣಿನ ಬಗ್ಗೆ ಇರುವ ಪರಿಕಲ್ಪನೆಗಳು ಶೀಲ, ಚಾರಿತ್ರ್ಯತೆ, ಪಾತಿವ್ರತ್ಯ, ತ್ಯಾಗ ಬಲಿದಾನಗಳೇ ಆಗಿವೆ. ಹೆಣ್ಣಿನ ಸ್ಥಾನ ಮಾನ, ಸ್ಥಿತಿಗತಿಗಳು ಎಲ್ಲ ಸಂಸ್ಕೃತಿಗಳಲ್ಲಿ ಒಂದೇ ರೀತಿ ಇರುವುದಿಲ್ಲ. ಶಿಷ್ಟ ಸಂಸ್ಕೃತಿ ಸ್ತ್ರೀ ಬಗ್ಗೆ ಕೆಲವು ಮೌಲ್ಯ, ಮಾದರಿಗಳನ್ನು ಸ್ಥಾಪಿಸುವ ಪ್ರಯತ್ನ ಮಾಡುತ್ತಿರುವಾಗಲೇ ಪರ್ಯಾಯ ಸಾಂಸ್ಕೃತಿಕ ಚಿಂತನೆಗಳು, ಆ ಪ್ರಯತ್ನವನ್ನು ಒಡೆಯುವ ಪ್ರಕ್ರಿಯೆಯಲ್ಲಿ ತೊಡಗಿರುತ್ತವೆ. ಈ ಪ್ರಕ್ರಿಯೆಗಳಿಗೆ ಮೌಖಿಕ ಪರಂಪರೆಯ ಜನಪದ ಮಹಾಕಾವ್ಯಗಳಾದ ಜನಪದ ರಾಮಾಯಣ, ಮಹಾಭಾರತಗಳನ್ನು ಹಾಗೂ ಧಾರ್ಮಿಕ ಜನಪದ ಮಹಾಕಾವ್ಯಗಳನ್ನು ಅಧ್ಯಯನ ನಡೆಸಿದಾಗ ಸ್ತ್ರೀ ಸಂವೇದನೆಯ ಸ್ವರೂಪ ಈ ಜನಪದ ಮಹಾಕಾವ್ಯಗಳಲ್ಲಿ ಕಾಲಕಾಲಕ್ಕೆ ಬೇರೆ ನೆಲೆಗಳಿಂದ ಪ್ರೇರಿತವಾಗಿ ಬೇರೆ ರೀತಿಯಾಗಿ ಕಾಣಬಹುದು. ಸ್ತ್ರೀ ಸಂವೇದನೆ ಎಂದು ನಾವು ಗುರುತಿಸುವ ಪರಿಭಾಷೆ ಮತ್ತು ಪರಿಕಲ್ಪನೆಗಳನ್ನು ದೇಸಿಯ ಸಾಂಸ್ಕೃತಿಕ ನೆಲೆಯ ಹಿನ್ನೆಲೆಯಲ್ಲಿ ಗುರುತಿಸಿದಾಗ ಅನೇಕ ವಿಷಯಗಳು ಹೊರ ಬೀಳಬಹುದು. ಆದ ಕಾರಣ ನಾನು ಧಾರ್ಮಿಕ ಜನಪದ ಮಹಾ ಕಾವ್ಯಗಳಾದ ಮಲೆಯಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಬುರ್ರಕಥಾ ಕಾವ್ಯ ಸ್ವಾಸಿ ಚಿನ್ನಮ್ಮ ಹಾಗೂ ಬುಡಕಟ್ಟು ಜನಪದ ಕಾವ್ಯಗಳಾದ ಗೊಂಡರ ರಾಮಾಯಣದಲ್ಲಿ ಸೀತೆ ಮತ್ತು ಗಾಮೊಕ್ಕಲ ಮಹಾಭಾರತ ಕಥನ ಕಾವ್ಯದಲ್ಲಿ ದ್ರೌಪದಿ ಪಾತ್ರಗಳನ್ನು ಅಧ್ಯಯನಕ್ಕೆ ಆಯ್ದುಕೊಂಡು ಅವುಗಳ ಅಧ್ಯಯನ ನೆಲೆಯಲ್ಲಿ ಸ್ತ್ರೀ ಸಂವೇದನೆಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಿದ್ದೇನೆ. ಇಲ್ಲಿ ಪುನಃ ಪ್ರತಿ ಅಧ್ಯಾಯಗಳ ಆಶಯ ಗಳನ್ನು ಸ್ಥೂಲವಾಗಿ ಸಂಗ್ರಹಿಸಿ ಬಿಡಿಸುವುದಕ್ಕಿಂತ ಈ ಅಧ್ಯಯನದ ಫಲಿತಾಂಶಗಳು ಬಿಂಬಿಸುವ ಹಿನ್ನೆಲೆಯಲ್ಲಿ ಅದು ಕಟ್ಟಿಕೊಡುವ ಸ್ತ್ರೀ ಸಂವೇದನೆಯನ್ನು ಮಂಡಿಸುವುದು ಪ್ರಸ್ತುತವಾಗುತ್ತದೆಂಬ ಅನಿಸಿಕೆ. ಬದುಕಿನ ಎಲ್ಲ ಆಯಾಮಗಳನ್ನು ತನ್ನ ತೆಕ್ಕೆಯಲ್ಲಿ ಇರಿಸಿಕೊಂಡಿರುವ ಜಾನಪದವು, ಮನುಷ್ಯನ ಮೂಲಭೂತ ಪ್ರವೃತ್ತಿ ಗಳನ್ನು ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿನ ಮೇಲೆ ಕಂಡುಬರುವ ದಬ್ಬಾಳಿಕೆ ಕ್ರೌರ್ಯಗಳನ್ನು, ಸಂಶಯ

ಪ್ರವೃತ್ತಿಗಳನ್ನು ನನ್ನ ಅಧ್ಯಯನದಲ್ಲಿ ಬರುವ ಜಾನಪದ ಮಹಾಕಾವ್ಯಗಳ ನಾಯಕಿಯರು ಬೆತ್ತಲು ಮಾಡುವ ಪ್ರವೃತ್ತಿಯನ್ನು ನೋಡುವ ಮೊದಲು ಪುರುಷ ಪ್ರಧಾನ ಸಮಾಜದಲ್ಲಿನ ಹೆಣ್ಣಿನ ನೋವಿನ ದನಿಯನ್ನು ಗಮನಿಸಲು ಪ್ರಯತ್ನ ಮಾಡಲಾಗಿದೆ.

ಮಾತೃದೇವತಾ ಕಲ್ಪನೆ, ಮಾನವ ಸಂಸ್ಕೃತಿಯ ಇತಿಹಾಸದಲ್ಲಿ ಬಹಳ ಹಳತು, ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ, ಕೃಷಿ, ಕೈಗಾರಿಕೆ ಹೀಗೆ ವಿವಿಧ ಹಂತಗಳನ್ನು ದಾಟಿ ಬಂದ ಮನುಷ್ಯ ಸಂಸ್ಕೃತಿಯು, ಕೃಷಿ ಚಟುವಟಿಕೆಯ ಮೂಲದಲ್ಲಿದ್ದ ಹೆಣ್ಣಿನ ಪ್ರಾಧಾನ್ಯತೆ ಪಶುಪಾಲನೆ ಬೇಟೆಗಾರಿಕೆ ಹಂತಗಳಲ್ಲಿ ಕೊಂಚ ಅಲ್ಲಾಡಿದರೂ ಅದು ನಿರ್ಣಾಯಕವಾಗಿ ಪುರುಷನ ತೆಕ್ಕೆಗೆ ಬಂದದ್ದು ಖಾಸಗೀ ಆಸ್ತಿಯ ಹುಟ್ಟಿನೊಂದಿಗೆ.

ಸ್ತ್ರೀಯ ಜೈವಿಕ ರಚನೆಯ ಕಾರಣದಿಂದಾಗಿ ಆಕೆ ಮಕ್ಕಳನ್ನು ಹೊರುವ, ಹೆರುವ ಕೆಲಸ ಮಾಡಿದರೂ, ಆಕೆ ದೈಹಿಕವಾಗಿ ಅತ್ಯಂತ ಕಷ್ಟಕರವಾದಂಥ ಕೆಲಸಗಳನ್ನು ನಿರ್ವಹಿಸುತ್ತಾಳಾದರೂ, ಹೊರಗಿನ ಉತ್ಪಾದನೆಯಲ್ಲಿ ಬಾಗಿಯಾಗುವ ಅವಕಾಶಗಳು ಹೆಣ್ಣಿಗೆ ಕಡಿಮೆಯಾದಂತೆ, ಆರ್ಥಿಕವಾಗಿ ಸಾಮಾಜಿಕವಾಗಿ ಗಂಡಿನ ಅಧೀನವಾಗುವುದು ಅನಿವಾರ್ಯವಾಯಿತು. ಹೀಗೆ 'ಪುರುಷ ಪ್ರಧಾನ್ಯತೆ' ಮಾತೃ ಪ್ರಾಧಾನ್ಯವನ್ನು ನಿರ್ಮೂಲಗೊಳಿಸಿತು. ಹೆಣ್ಣನ್ನು ತನ್ನ ತೆಕ್ಕೆಯಲ್ಲಿ ನಿರ್ಬಂಧಿಸುವ ಸಲುವಾಗಿ ಹೆಣ್ಣಿನ ಶೀಲ, ಪಾತಿವ್ರತ್ಯ, ತಾಯ್ತನ, ಪತಿ ವಿಧೇಯತೆ, ನಯ, ವಿನಯ, ತಾಳ್ಮೆ, ಪರಾಧೀನತೆ, ಪತಿಯಲ್ಲಿ ಪ್ರಶ್ನಾತೀತವಾದ ನಂಬಿಕೆ ಇತ್ಯಾದಿಗಳಲ್ಲಿ ಹೆಚ್ಚು ಒತ್ತುಕೊಟ್ಟು ಇವನ್ನು ಆದರ್ಶ ನಾರಿ ಗುಣಗಳೆಂದು ಘೋಷಿಸಲಾಯಿತು. ತಾಯ್ತನಕ್ಕೆ ಹೆಚ್ಚು ಒತ್ತುಕೊಟ್ಟು ಬಂಜೆತನದ ದಾರುಣ ಚಿತ್ರವನ್ನು ಚಿತ್ರಿಸುತ್ತಾ ತನ್ನೆಲ್ಲ ದೋಷಗಳನ್ನು ಮುಚ್ಚಿಹಾಕಿ ಕೊಂಡು ಆ ದೋಷವನ್ನು ಹೆಣ್ಣಿನ ತಲೆಗೆ ಕಟ್ಟಿ ಮರುಮದುವೆಯ ಹಕ್ಕನ್ನು ಪುರುಷ ಪಡೆದುಕೊಂಡ. ಪುರುಷ ಸಮಾಜ ಷಡ್ಯಂತ್ರಗಳನ್ನು ರೂಪಿಸುತ್ತಾ, ತನ್ನ ಅನುಕೂಲಕ್ಕೆ ತಕ್ಕಂತೆ ಸ್ತ್ರೀ ಪುರುಷ ಮಾದರಿಗಳನ್ನು ನಿರ್ಮಿಸಿ ಹೆಣ್ಣನ್ನು ಸಂಪೂರ್ಣವಾಗಿ ತನ್ನ ನಿಯಂತ್ರಣದಲ್ಲಿ ಇರಿಸಿಕೊಳ್ಳಲಾರಂಭಿಸಿದ. ತನ್ನ ಕಪಿಮುಷ್ಟಿಯಿಂದ ಜಾರಿ ಹೋಗದಂತೆ ಸದಾ ಜಾಗ್ರತನಾಗಿರುತ್ತಾನೆ. ಈ ಹಿಡಿತವನ್ನು ಇನ್ನಷ್ಟು ಬಿಗಿಗೊಳಿಸಲು ಆತನ ಕೈಯಲ್ಲಿರುವ ಪ್ರಬಲ ಅಸ್ತ್ರ ಸಾಮಾಜಿಕ ಬಹಿಷ್ಕಾರ. ಇದು ಹೀಗಾದದ್ದು ಹೇಗೆ, ಏಕೆ ಎಂಬ ಚರ್ಚೆ ಇಲ್ಲದ ಹಾಗೆ, ಪುರುಷ ನಿರ್ಮಿತವಾದ ಚರಿತ್ರೆಯ ಮಾದರಿಗಳನ್ನೇ ಪ್ರಧಾನ ಧಾರೆಯೆಂದು, ಇವೇ ವಾಸ್ತವವೆಂದೂ, ಪರಮ ಸತ್ಯಗಳೆಂದೂ ಜನಪದ ಹೆಣ್ಣು ಒಪ್ಪಿ ಕೌಟುಂಬಿಕ ಸಾಮಾಜಿಕ ಹಾಗೂ ಧಾರ್ಮಿಕವಾದ ಕಟ್ಟುಪಾಡುಗಳ ಮಿತಿಯಲ್ಲಿ ಸಿಲುಕಿ, ಯುಗ ಯುಗಗಳಿಂದ ನಿರಂತರವಾಗಿ ತಾವೆಷ್ಟು ತುಳಿತಕ್ಕೆ ಒಳಗಾಗಿದ್ದೇನೆಂಬುದರ ಅರಿವಿಲ್ಲ ದಷ್ಟು ವೇದನೆಗೆ ಒಳಗಾಗಿ ನರಳಿದ್ದಾಳೆ. ಹೆಣ್ಣಿನ ಹಿರಿಮೆಗೆ ಏನಾದರೂ ಸಂದಿದ್ದರೆ ಅದು ಗಂಡನ ಸೇವೆಗೆ, ಅವಳ ಮಹತ್ವವೆಲ್ಲ ಅವಳ ಅಂಗಾಂಗಳ ಸೌಂದರ್ಯಕ್ಕೆ, ಅವಳ ಬದುಕಿನ ಸಾರ್ಥಕತೆ ಮಕ್ಕಳನ್ನು ಹೆರುವುದಕ್ಕೆ ಸಮೀಕರಿಸಿ, ಅವಳು ತನ್ನ ಗಂಡನ ನೆರಳಾಗಿ ಬಾಳಿದ್ದಳೆಂಬುದಕ್ಕೆ ಮಾತ್ರ.

ಹೀಗೆ ಶೂನ್ಯದಲ್ಲಿ ಜೀವಿಸುತ್ತಿರುವ ಹೆಣ್ಣಿನ ಇರುವಿಕೆಯನ್ನು ಗುರುತಿಸಲು ಚಲನಶೀಲತೆಯೆಂಬ ಪ್ರಾಣವಾಯುವನ್ನು ನೀಡಿ ಎಚ್ಚರಿಸಿ, ಪುರುಷ ಇತಿಹಾಸ ಕಟ್ಟಿಕೊಡದ ಸ್ತ್ರೀತ್ವವನ್ನು ಮರು ಸೃಷ್ಟಿಸಿ ಅವಳ

ಅನನ್ಯತೆಯನ್ನು ಪ್ರತಿಪಾದಿಸಬೇಕಾಗಿದೆ. ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯ ಪುರುಷಪ್ರಧಾನ ಸಮಾಜದಲ್ಲಿ ಸ್ತ್ರೀಯ ಧ್ವನಿಯನ್ನು ಹುಡುಕುತ್ತಾ ಹೋದರೆ, ಧ್ವನಿಯ ವಿವಿಧ ಒಳ ನೋಟಗಳು ದೊರೆಯುತ್ತವೆ.

ಮಾತೃ ಪ್ರಾಧಾನ್ಯತೆ ಇನ್ನೂ ಅಸ್ತಿತ್ವದಲ್ಲಿರುವ ಬುಡಕಟ್ಟು ಸಮಾಜದಲ್ಲಿ ಸ್ತ್ರೀಯರು ದುರ್ಬಲರಲ್ಲ. ಅಲ್ಲಿ ಪಾತಿವ್ರತ್ಯ ಅಥವಾ ಶೀಲವೊಂದೇ ಎಲ್ಲವನ್ನೂ ನಿರ್ಧರಿಸುವ ಮೌಲ್ಯವಲ್ಲ. ಸಾಮಾನ್ಯ ಜನಪದಗಳಲ್ಲಿ ಆದಿವಾಸಿ, ಅಲೆಮಾರಿ ಮತ್ತು ಕೆಳವರ್ಗಗಳಲ್ಲಿರುವ ಬಂಜೆ ಮತ್ತು ವಿವಾಹ ವಿಚ್ಛೇದನದ ಪರಿಕಲ್ಪನೆಗಳು ಸಕಾರಾತ್ಮಕವಾದವು. ಶಿಷ್ಟ ಜನಪದದ ಕಲ್ಪನೆ ನಕಾರಾತ್ಮಕವಾದುದು. ಸಾಮಾನ್ಯ ಜನಪದರಲ್ಲಿ ಹೆಣ್ಣಿನ ಬಂಜೆತನ ಹೆಣ್ಣಿನಲ್ಲಿ ಮಾತ್ರ ಕೇಂದ್ರೀಕೃತವಾಗಿಲ್ಲ. ಆಕೆ ತನಗೆ ಮಕ್ಕಳಾಗದಿದ್ದಾಗ ಹಾಲಿ ಗಂಡನನ್ನು ಬಿಟ್ಟು ಬೇರೊಬ್ಬನನ್ನು ಕೂಡಿ ಮಕ್ಕಳನ್ನು ಪಡೆದು ತಾನು ಬಂಜೆಯಲ್ಲವೆಂಬುದನ್ನು ಸಾಬೀತುಪಡಿಸಬಹುದು. ಆದರೆ ಶಿಷ್ಟ ಜನಪದದಲ್ಲಿ ಹೆಣ್ಣಿಗೆ ಇದು ಈ ಜನ್ಮದಲ್ಲಿ ಸಾಧ್ಯವಿಲ್ಲ. ಜನಪದವೆಂಬುದು ವ್ಯಾಪಕವಾದ ಅರ್ಥವನ್ನು ಪಡೆದ ವಿಶಾಲ ಕ್ಷೇತ್ರ. ಬುಡಕಟ್ಟು ಅದರೊಳಗಿನ ಒಂದು ಪ್ರಭೇದ. ಕೆಲವು ಬುಡಕಟ್ಟು ಸಮಾಜದಲ್ಲಿ ಪುರುಷ ತನ್ನ ಬುಡಕಟ್ಟಿನ ಕಸಬುಗಳ ವಿದ್ಯೆಗಳನ್ನು, ಕಲೆಗಳನ್ನು ಕಲಿಯುವಂತೆ, ಸ್ತ್ರೀಯೂ ಕಲಿಯುತ್ತಾಳೆ. ಅಂದಿನ ಬುಡಕಟ್ಟುಗಳಲ್ಲಿ ಸಾಮಾನ್ಯವಾಗಿ ಇದ್ದ ಪದ್ಧತಿಯಂತೆ ಒಬ್ಬ ಸೋದರ ಹೆಂಡತಿಯನ್ನು ಬಿಟ್ಟು ಅಕಾಲ ಮರಣಕ್ಕೀಡಾದರೆ, ಮತ್ತೊಬ್ಬ ಸೋದರ ಅವಳನ್ನು ಕೂಡುವುದಕ್ಕೆ ಅವಕಾಶವಿತ್ತು. ಆದಿ ಸಮಾಜಗಳಲ್ಲಿ ಇದು ಸಾಮಾನ್ಯವಾದ ರೂಢಿ. ಜನಪದ ಸಮಾಜ ಮತ್ತು ಬುಡಕಟ್ಟು ಸಮಾಜಗಳ ನಡುವಿನ ಅಂತರ, ಅವರಲ್ಲಿನ ಲೋಕದೃಷ್ಟಿಯೂ ಭಿನ್ನತೆಯನ್ನು ತಂದುಕೊಟ್ಟಿದೆ.

ಆದರೆ ಭಾರತೀಯ ಜನಪದ ಮಹಾಕಾವ್ಯಗಳು ರೂಪಿಸಿರುವ ಕರ್ಷಣದ ತೀವ್ರ ಸ್ವರೂಪವನ್ನು ಅವುಗಳ ಸ್ತ್ರೀ ಪಾತ್ರಗಳಲ್ಲಿ ಕಾಣಬಹುದು. ಒಂದು ಕಡೆ ಪುರುಷ ಕೇಂದ್ರಿತ ಪ್ರಭಾವಿ ಪಾತಿವ್ರತ್ಯದ ಪರಿಕಲ್ಪನೆ ಮತ್ತೊಂದು ಕಡೆ ಪುರುಷರಷ್ಟೇ ಸಮಾನವಾಗಿ ದುಡಿಯುವ ಶ್ರಮಿಕ ವರ್ಗದ ಸ್ತ್ರೀಯರ ಬಗ್ಗೆ ಇರುವ ಗೌರವ, ಇವೆರಡರ ನಡುವೆ ಈ ಜನಪದ ಮಹಾಕಾವ್ಯಗಳ ಸ್ತ್ರೀ ಪಾತ್ರಗಳು ಉಸಿರಾಡುತ್ತಿವೆ. ಪುರುಷ ನಿರ್ದೇಶಿತ ಸಮಾಜದಲ್ಲಿ ಬದುಕಿಯೂ ಸ್ತ್ರೀ ನೆಲ ಕಚ್ಚಲಿಲ್ಲ. ತನ್ನ ನೋವಿನ ಪ್ರತಿಭಟನೆ ಕ್ಷೀಣಿಸಿದ್ದರೂ, ಸ್ವಾಭಿಮಾನಕ್ಕೆ ಪೆಟ್ಟು ಬಿದ್ದಾಗ, ಮುಖಾಮುಖಿಯಾಗಿ ಸಿಡಿದು ನಿಲ್ಲುವ, ಧಿಕ್ಕರಿಸಿ ಹೋರಾಡುವ ಮಹಾ ಛಲಗಾತಿಯೇ ಹೊರತು ಆಕೆ ಎಲ್ಲಿಯೂ ಪಲಾಯನವಾದಿಯಲ್ಲ.

ಸ್ತ್ರೀ ಸಂವೇದನೆಯ ಮಾತು ಇತ್ತೀಚಿನದಾದರೂ ಸಂವೇದನೆ ಇತ್ತೀಚಿನದಲ್ಲ. ಸಂವೇದನೆಯ ಸ್ವರೂಪ ಕಾಲ ಕಾಲಕ್ಕೆ ಬೇರೆ ರೀತಿಯಾಗಿ ಬೇರೆ ಬೇರೆ ನೆಲೆಗಳಿಂದ ಪ್ರೇರಿತವಾಗಿರಬಹುದು. ಸ್ತ್ರೀ ಸಂವೇದನೆಗಳು ಸಾಹಿತ್ಯಕವಾಗಿ ಯಾವ ರೀತಿಯಾಗಿ ಜನಪದ ಮಹಾಕಾವ್ಯಗಳಲ್ಲಿವೆ ಎಂಬುದನ್ನು ಗುರುತಿಸುವಾಗ ಸದ್ಯದ ಸ್ತ್ರೀವಾದದ ಹಿನ್ನೆಲೆಯನ್ನು ಗಮನಿಸಲಾಗಿದೆ. ಜನಪದ ಮಹಾಕಾವ್ಯಗಳಲ್ಲಿ ಅನೇಕ ರೀತಿಯ ಸ್ತ್ರೀ ಸಂವೇದನೆಗಳು ಕಾಣಸಿಗುತ್ತವೆ. ಅದರಲ್ಲೂ ಅಲ್ಲಿನ ಸ್ತ್ರೀ ಸಂವೇದನೆಗಳಲ್ಲಿ ಬರಿ ವೇದನೆಗಳಿವೆ. ಅದು ಕೊನೆಯಾಗ ಬೇಕೆನ್ನುವ ಆಶಯ, ಜನಪದ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ ದ್ವಿಮುಖವಾಗಿದ್ದು, ಒಂದು ವ್ಯವಸ್ಥೆಯ ಪರವಾಗಿದ್ದು, ಕೃತ್ರಿಮವಾದದ್ದು. ಇದಲ್ಲದೆ ಜನಪದ ಕಾವ್ಯವನ್ನು ರಚಿಸುವ ಕವಿಯ ಬಗ್ಗೆ

ಇರುವ ಅಂದರೆ ಸ್ತ್ರೀ ಅಥವಾ ಪುರುಷ ನಿರ್ಮಿತ ಎಂಬ ಖಚಿತತೆಯಿಲ್ಲ. ಇಲ್ಲಿ ಗಂಡಸಿನ ಪರಮಾಧಿಕಾರವನ್ನು ಒಪ್ಪಿಕೊಂಡಿರುವ ತನ್ನನ್ನು ಗಂಡಿಗಿಂತ ಕೀಳಾಗಿ ತಿಳಿಯುವ ಹೆಣ್ಣುಗಳು ಇನ್ನೂ ಇದ್ದಾರೆ. ಗಂಡಸಿನ ಅಹಂಕಾರದ ವಲಯಗಳನ್ನು ಛಿದ್ರಗೊಳಿಸಿದ ಹೆಣ್ಣುಗಳೂ ಇದ್ದಾರೆ. ಇವೆಲ್ಲವನ್ನೂ ಮೀರಿದ ಆಚರಣೆಗಳಿವೆ. ಇವೆಲ್ಲ ರಿಂದಲೂ ಸ್ತ್ರೀ ಸಂವೇದನೆ ಸ್ವರೂಪವನ್ನು ಗುರುತಿಸಿಕೊಳ್ಳಲು ತೊಡಕುಂಟಾಗುವುದು. ಕಾವ್ಯಗಳನ್ನು ಸ್ತ್ರೀ ಕೇಂದ್ರಿತ ದೃಷ್ಟಿಕೋನದಿಂದ ಸೂಕ್ಷ್ಮವಾಗಿ ಅಧ್ಯಯನ ಮಾಡಿ, ಸಾಮಾಜಿಕ ಸಂಪ್ರದಾಯದಲ್ಲಿ, ಭೌತಿಕ ರೂಪದಲ್ಲಿ ಸ್ತ್ರೀ ಸ್ಥಾನಮಾನಗಳನ್ನು ಸ್ತ್ರೀಪರವಾದ ದೃಷ್ಟಿಕೋನದಿಂದ ವಿಶ್ಲೇಷಿಸಿ, ಪರಿಶೀಲಿಸಿ ಗುರುತಿಸ ಲಾಗಿದೆ.

ಸ್ತ್ರೀ ಸಂವೇದನೆ, ಪುರುಷ ಜಗತ್ತಿನಲ್ಲಿರುವಂತೆಯೇ ಚಿತ್ರ ವೈಚಿತ್ರ್ಯಪೂರ್ಣವಾಗಿದೆ. ಪುರುಷರಂತೆ ಇಲ್ಲಿ ಸ್ತ್ರೀಯರೂ ಸಹ ರಾಗ ದ್ವೇಷಾದಿ ಗುಣಗಳಿಂದ ಕೂಡಿರುತ್ತಾರೆ. ಒಳ್ಳೆಯವರು ಕೆಟ್ಟವರು ಬಡವ ಬಲ್ಲಿದರು, ಶೋಷಿತರು ಎಲ್ಲರೂ ಇದ್ದಾರೆ. ವಿಚಾರ ಹೀನರು ದುಷ್ಟಬುದ್ಧಿಯವರು, ಮುಗ್ಧರು, ವಂಚಕಿಯರು, ಮಾತ್ಸರ್ಯವುಳ್ಳವರು, ಜಾರೆಯರು, ನೀರೆಯರು ಮುಂತಾದವರೆಲ್ಲರೂ ತುಂಬಿ ಹೋಗಿರುವುದನ್ನೂ ದೇವತಾ ಸ್ತ್ರೀಯರು ಸಹ ಮನುಷ್ಯನ ಸಹಜ ಪ್ರಕೃತಿಯುಳ್ಳವರೆ ಆದರೂ ಅವರೂ ಪುರುಷಾಧಿಪತ್ಯಕ್ಕೆ ಸಿಲುಕಿರುವವರೆ. ಶಿಷ್ಟ ಕಥನಗಳಲ್ಲಿ ಸ್ತ್ರೀಯರಿಗೆ ಇಲ್ಲದಿರುವ ದನಿಯನ್ನು ಹಾಗೂ ಪಿತೃಪ್ರಧಾನ ವ್ಯವಸ್ಥೆ ಸ್ತ್ರೀಯನ್ನು ತುಳಿದಿರುವ ವ್ಯವಸ್ಥೆಯ ವಿರುದ್ಧ ಅವರಲ್ಲಿ ಮೂಡುವ ಪ್ರತಿಭಟನೆಯನ್ನು ಖಚಿತವಾಗಿ ಮೌಖಿಕ ಕಥನಗಳು ದಾಖಲಿ ಸುತ್ತವೆ. ಈ ಕಥನಗಳಲ್ಲಿ ಸ್ತ್ರೀಪರ ಸ್ಪಷ್ಟವಾದ ನಿಲುವಿದೆ.

ನಮ್ಮ ದೇಶೀಯ ಹೆಣ್ಣುತನಕ್ಕೂ ಮತ್ತು ಪುರುಷ ನಿರ್ವಚನ ಹಾಗೂ ಪಶ್ಚಿಮದ ಸ್ತ್ರೀವಾದ ಮಂಡಿಸುವ ಸ್ತ್ರೀತನಕ್ಕೂ ವೈರುಧ್ಯವಿದೆ ಎನ್ನುವ ಅರಿವಿನೊಂದಿಗೆ ನನ್ನ ಅಧ್ಯಯನದಲ್ಲಿರುವ ಎಲ್ಲಾ ಧಾರ್ಮಿಕ ಜನಪದ ಕಾವ್ಯಗಳನ್ನು ದೇಶೀಯ ಸಾಂಸ್ಕೃತಿಕ ಪರಂಪರೆಗೆ ಸಾಮಾಜಿಕ ಸಂದರ್ಭಗಳ ಹಿನ್ನೆಲೆಯಲ್ಲಿ, ಸ್ತ್ರೀ ಸಂವೇದನೆ ಯನ್ನು ಸಂಗ್ರಹಿಸುವ ಚಿಂತನೆಯನ್ನು ಮಾಡಿದ್ದೇನೆ ಹಾಗೂ ಅದರ ಅಗತ್ಯವನ್ನು ನನ್ನ ಅಧ್ಯಯನ ಒತ್ತಾಯಿಸು ವುದು.

ಭಾರತೀಯ ಜನಪದ ಮಹಾಕಾವ್ಯಗಳು ಆಯಾ ನಾಡಿನ ನಂಬಿಕೆ, ನಡವಳಿಕೆ, ಆಚಾರ, ವಿಚಾರ ಕಟ್ಟು ಕಟ್ಟಳೆಗಳ ವಿಧಿ ನಿಷೇಧಗಳ ನ್ಯಾಯ ನೀತಿಗಳ, ಗಂಡು ಹೆಣ್ಣಿನ ನಡವಳಿಕೆಗಳ, ಆರ್ಥಿಕ, ರಾಜಕೀಯ, ಸಾಮಾಜಿಕ ಸ್ಥಿತಿ ಗತಿಗಳ ಸಂಬಂಧ ಸಂಘರ್ಷಗಳನ್ನು ವಿವರವಾಗಿ ಪ್ರಕಟಿಸುವ ಮೌಖಿಕ ದಾಖಲೆಗಳಾಗಿವೆ. ನನ್ನ ಅಧ್ಯಯನಕ್ಕೆ ಆಯ್ದುಕೊಂಡ ಜನಪದ ಮಹಾಕಾವ್ಯಗಳ ಒಂದೊಂದು ಕಾವ್ಯ ಭಾಗದಲ್ಲಿಯೂ ನಾಯಕಿಯರಲ್ಲಿರುವ ಸ್ತ್ರೀ ಶಕ್ತಿ ಸಂವೇದನೆಯನ್ನು ಗುರುತಿಸಿ ವಿಶ್ಲೇಷಣೆ ಮಾಡಲಾಗಿದೆ.

ಮಲೆಯಮಾದೇಶ್ವರ ಕಾವ್ಯದಲ್ಲಿ ಪುರುಷ ಸ್ಥಾಪಿತ ಪಾತಿವ್ರತ್ಯದ ಪರಿಕಲ್ಪನೆಯನ್ನು ಮರು ರಚಿಸುವ ಪರಿಧಿಯೊಳಗೆ ಬಂಜೆತನದ ನಿವಾರಣೆಯೇ ಇಲ್ಲಿ ಧ್ವನಿಸುವ ಅಂಶ. ಹೆಣ್ಣು ಕೈಲಾಗದ ಗಂಡಂದಿರ ವಿರುದ್ಧ ಸಂತಾನ ಪಡೆಯುವುದಕ್ಕಾಗಿ ಗೆರೆ ದಾಟುವಾಗಿನ ಹೆಣ್ಣಿನ ಮನೋಭಾವವನ್ನು ಸಾಂಸ್ಕೃತಿಕ ಚರ್ಚೆಗೆ ಒಳ ಪಡಿಸಲಾಗಿದೆ.

ಹೆಣ್ಣು ಕಟ್ಟುಪಾಡುಗಳಿಂದ ಸಿಡಿದು ಹೊರಬರಲು ಹಂಬಲಿಸಿದರೆ ಗಂಡು ಕಟ್ಟು ಕಟ್ಟಳೆಯ ತಡೆಗೋಡೆ ನಿರ್ಮಿಸುತ್ತಾ, ಪುರುಷನ ಪರಮಾಧಿಕಾರ ಸ್ಥಾಪಿಸುವ ಪ್ರಯತ್ನ ಮಾಡುತ್ತಾನೆ. ಹೆಣ್ಣಿನ ಮುಕ್ತತೆಯನ್ನು ಅಗೌರವಿಸುವ ಗಂಡಿನ ಕ್ರೌರ್ಯವನ್ನು ಬಿಂಬಿಸಿದೆ.

ಒಂದು ಬುಡಕಟ್ಟಿನಲ್ಲಿ ಮಾತೃಪ್ರಧಾನ ಸಂಸ್ಕೃತಿಯು ಪಿತೃಪ್ರಧಾನ ಸಂಸ್ಕೃತಿಗೆ ಅವಸ್ಥಾಂತರಗೊಳ್ಳುವಲ್ಲಿ ಹೆಣ್ಣಿಗೆ ಎದುರಾಗುವ ಸಂಘರ್ಷದ ಸ್ಥಿತಿ ಸಂಕಮ್ಮನದು. ತನ್ನ ಅಸ್ತಿತ್ವವನ್ನು ನೆಲೆಗೊಳಿಸಿದ್ದಾಳೆ. ಪುರುಷ ಪ್ರಧಾನ ಸಮಾಜದಲ್ಲಿ ಪುರುಷನಿಗೆ ಸ್ತ್ರೀ ಬಗ್ಗೆ, ಅದರಲ್ಲೂ ಪತ್ನಿಯ ಶೀಲದ ಬಗೆಗಿನ ಸಂಶಯ, ದಬ್ಬಾಳಿಕೆ, ಕ್ರೌರ್ಯಗಳು ಎಷ್ಟೊಂದು ತೀವ್ರ ಹಾಗೂ ಘೋರ ಪರಿಣಾಮಗಳನ್ನು ಬೀರುತ್ತವೆಂಬುದನ್ನು ಸಂಕಮ್ಮನ ಪ್ರಸಂಗ ಬೆತ್ತಲು ಮಾಡುತ್ತದೆಯಲ್ಲದೆ ಮುಕ್ತತೆ ಬಯಸುವ ಸಮಾಜವೊಂದರ ಲೋಕದೃಷ್ಟಿ ವ್ಯಕ್ತವಾಗುತ್ತದೆ. ಅವಳು ಸ್ತ್ರೀ ಸಮುದಾಯದ ಪ್ರತಿಭಟನೆಯ ಧ್ವನಿಯಾಗಿ ಪ್ರತಿನಿಧಿಸುತ್ತಾಳೆ.

ಮಲೆಯಮಾದೇಶ್ವರರ ಕಥನವನ್ನು ಮಹಾಕಾವ್ಯವಾಗಿಸಿದ ಸಾಲುಗಳೆಂದರೆ ಸಂಕಮ್ಮನ ಸಾಲು ಮತ್ತು ಬೇವಿನಹಟ್ಟಿಕಾಳಮ್ಮನ ಸಾಲುಗಳು. ಮೇಲುನೋಟಕ್ಕೆ ದುಷ್ಟ ಹಾಗೂ ಗಯ್ಯಾಳಿ ಗುಣಗಳ ಪ್ರತೀಕವಾಗಿ ಕಾಳಮ್ಮ ಕಂಡರೂ, ಅವಳನ್ನು ಅವಮಾನಿಸಿದ ಘಟನೆಗಳ ವಿವರಣೆಯೂ ಕಾವ್ಯದಲ್ಲಿದೆ. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಕೆಟ್ಟ ಸ್ತ್ರೀಯಾಗಿ ನಿರೂಪಿತಳಾಗಿದ್ದಾಳೆ. ಕಾಳಮ್ಮ ಮಾತೃಮೂಲ ಕುಟುಂಬದ ನಾಶದ ಪ್ರತೀಕ ವಾಗಿ ಕಂಡರೂ, ಪುರುಷ ಪ್ರಧಾನ ಸಂಸ್ಕೃತಿಯ ಮೇಲೆ ಗೆಲುವು ಸಾಧಿಸಲು ಹೋರಾಡುವ ಛಲಗಾತಿಯಾಗಿ ಕಾಣುತ್ತಾಳೆ. ಪಿತೃಪ್ರಧಾನ ಸಂಸ್ಕೃತಿಯಲ್ಲೂ ಮಾತೃಪ್ರಧಾನದ ಸಂಕೇತವಾಗಿ ಉಳಿಯುತ್ತಾಳೆ ಎನ್ನುವುದನ್ನು ದಾಖಲಿಸಲಾಗಿದೆ.

ಮಲೆಯಮಾದೇಶ್ವರ ಕಾವ್ಯದಲ್ಲಿ ಬರುವ ಸ್ತ್ರೀ ಪಾತ್ರಗಳು ಮನಸೆಳೆಯುತ್ತವೆ ಆರ್ದ್ರಗೊಳಿಸುತ್ತವೆ. ತಮ್ಮ ಸಾತ್ವಿಕ ತೇಜಸ್ಸಿನಿಂದ ಸಂಕಮ್ಮ, ರಾಮವ್ವ ಮುಂತಾದ ಪಾತ್ರಗಳು ಅಪೂರ್ವ ರತ್ನಗಳಿಂದ ಮಾತೃಮೂಲ ಕುಟುಂಬದ ಪ್ರತಿರೂಪಗಳಾಗಿದ್ದಾರೆ.

ಮಂಟೇಸ್ವಾಮಿ ಕಾವ್ಯ ಇದೊಂದು ಅಖಂಡ ಕಾವ್ಯ. ಕಂಠಸ್ಥ ಸಂಪ್ರದಾಯದಲ್ಲಿದ್ದು, ಕ್ರಮಬದ್ಧವಾದ ಏಕಸೂತ್ರಕ್ಕೆ ಒಳಪಡುವ ಕಾವ್ಯ. ನಿರ್ದಿಷ್ಟ ನೆಲೆಯಿಂದ ಹರಿದು ತನ್ನ ಪಥದಲ್ಲಿ ಗುರಿತಪ್ಪದೆ ಹರಿದು ಸುಸಂಬದ್ಧತೆಯಿಂದ ಅಂತ್ಯವನ್ನು ಕಾಪಾಡಿಕೊಂಡಿರುವ ಅಪ್ರತಿಮ ರಮ್ಯ ಕಲಾಕೃತಿಯಾಗಿದೆ. ಈ ಕಾವ್ಯದ 'ಜಗತ್ತು ಸೃಷ್ಟಿಯ ಸಾಲಿ 'ನಲ್ಲಿ ಆದಿಶಕ್ತಿ ತನ್ನ ಮಕ್ಕಳನ್ನು ಕೂಡದಿದ್ದರೂ, ಕೂಡಲಿಚ್ಛಿಸುವ ಸಂಗತಿ ವ್ಯಕ್ತವಾಗುತ್ತದೆ. ಇದು ಮಾತೃಪ್ರಧಾನ ಸಂಸ್ಕೃತಿ ಮತ್ತು ಪುರುಷಪ್ರಧಾನ ಸಂಸ್ಕೃತಿಗಳ ಸಂಘರ್ಷವನ್ನು ಆದಿಶಕ್ತಿ ಮತ್ತು ತ್ರಿಮೂರ್ತಿಗಳ ನಡುವಿನ ಸಂಭಾಷಣೆ ಸೂಚಿಸುತ್ತದೆ. ಮೊದಲು ಮಾತೃಪ್ರಧಾನ ಸಂಸ್ಕೃತಿಯ ಪ್ರತಿರೂಪವಾದ ಆದಿಶಕ್ತಿ ಗೆದ್ದರೆ ಅವಳ ಎಲ್ಲ ವಿದ್ಯೆಗಳನ್ನು ಕೈವಶಮಾಡಿಕೊಂಡು, ಮಂಟೇಸ್ವಾಮಿ ಅವಳನ್ನು ಬೂದಿ ಮಾಡುತ್ತಾನೆ. ಅಂದರೆ ಮಾತೃಪ್ರಧಾನ ಸಂಸ್ಕೃತಿ ತನ್ನೆಲ್ಲಾ ಸತ್ವಗಳನ್ನು ಪಿತೃಪ್ರಧಾನ ಸಂಸ್ಕೃತಿಗೆ ಸಮರ್ಪಿಸಿತೆನ್ನಬಹುದು.

ಮಂಟೇಸ್ವಾಮಿ ಕಾವ್ಯದ ದೊಡ್ಡಮ್ಮ ತಾಯಿ, ರಾಚಪ್ಪಾಜಿಯವರ ಪತ್ನಿ ದೊಡ್ಡಮ್ಮ ತಾಯಿಯವರ ಪಾತ್ರ ಹಿರಿದು. ಸ್ತ್ರೀ ಕುಲದ ಸಂಕೇತವಾಗಿ ನೀಲಗಾರರಿಗೆ ಕಾಣುತ್ತಾಳೆ. ಮಂಟೇಸ್ವಾಮಿ ಪಂಥದ ಎಲ್ಲಾ ಧಾರ್ಮಿಕ ಕ್ರಿಯೆಗಳಲ್ಲೂ ತಾಯ್ತನದ ಸ್ಥಾನದಲ್ಲಿ ನಿಲ್ಲುವವರು. ನೀಲಗಾರರು ಇವರನ್ನು 'ದೃಡವುಳ್ಳ ದೊಡ್ಡಮ್ಮ' ಎನ್ನುತ್ತಾರೆ. ಸಿದ್ದಪ್ಪಾಜಿಗೆ ದೀಕ್ಷೆ ಕೊಡುವಾಗ ರಾಚಪ್ಪಾಜಿ ದೊಡ್ಡಮ್ಮ ತಾಯಿಗಳ ಸ್ಥಾನದಲ್ಲಿ ನಿಂತು ಧಾರೆ ಯೆರೆದು ಕೊಡುತ್ತಾರಲ್ಲದೆ, ದೊಡ್ಡಮ್ಮ ತಾಯಿ ಹಲಗೂರಿನ ಪವಾಡಗಳಲ್ಲಿ ಸಿದ್ದಪ್ಪಾಜಿಯವರಿಗೆ ನೈತಿಕವಾಗಿ, ಭೌತಿಕವಾಗಿ ನಿಲ್ಲುತ್ತಾರೆ.

ಮಲೆಯಮಾದೇಶ್ವರ, ಜುಂಜಪ್ಪ ಮೊದಲಾದ ಅನೇಕ ಸಾಂಸ್ಕೃತಿಕ ನಾಯಕರು, ತಮ್ಮ ತಾಯಿಯ ಯೋನಿ ಯಲ್ಲಿ ಹುಟ್ಟಿ ಹೆಣ್ಣಿ ಹಂಗಿಗೆ ಒಳಗಾಗಲು ಇಷ್ಟಪಡದೆ ಅವರ ತಾಯಿ ಬೆನ್ನಲ್ಲಿ ಹುಟ್ಟಿ ಬರುತ್ತಾರೆ. ಆದರೆ ಇವರು ಸಂತರಾಗಿ ಹೆಣ್ಣಿಗೆ ಸಂತಾನ ಕೊಡುವುದಕ್ಕೆ ಹೆಸರಾಗಿರುವರಾದರು ಆಕೆಯ ಸಂತಾನವಾಗಲು ಹಿಂಜರಿಕೆ. ಇದು ಪುರುಷ ಪ್ರಧಾನ ಸಂಸ್ಕೃತಿಯ ಪರಮೋಚ್ಚ ಅಧಿಕಾರದ ಸ್ಥಿತಿಯನ್ನು ತೋರಿಸುತ್ತದೆ. ಇಲ್ಲಿ ಹೆಣ್ಣಿನ ಧ್ವನಿಯಿಲ್ಲದಿದ್ದರೂ ತಾಯಿಯ ಮೇಲೆ ಅಪಾರ ಮಮತೆ ಮಾತೃಮೌಲ್ಯಗಳನ್ನು ಗೌರವಿಸುವುದು ಕಂಡು ಬರುತ್ತದೆ.

ಮಲೆಯಮಾದೇಶ್ವರರು ಮತ್ತು ಮಂಟೇಸ್ವಾಮಿಗಳು ಮಾರಿಯರನ್ನು ತಮ್ಮ ಕೈವಶ ಮಾಡಿಕೊಂಡು ಅವರಿಂದ ಕೆಲಸ ತೆಗೆಯುತ್ತಾರೆ. ಮಾರಿಯರನ್ನು ಹಿಂಸಿಸಿ ಪೀಡಿಸುತ್ತಾರೆ. ಅವರಿಗೆ ಬುದ್ಧಿಕಲಿಸಿ, ಅವರನ್ನು ಕಟ್ಟಿ ಆಳುತ್ತಾರೆ. ಸಿದ್ದಪ್ಪಾಜಿ ಮಾರೀರ-ಮಸಣೀರ ಗಂಡ-ದುರ್ಗಿ ಚೌಡೀರ ಮಿಂಡ ಎಂದು ಕರೆಯುತ್ತಾರೆಂದರೆ, ಇದು ಪುರುಷ ಪ್ರಭುತ್ವದ ಪ್ರಾಬಲ್ಯವನ್ನು ಎತ್ತಿ ಹಿಡಿಯುತ್ತದಾದರೂ, ನಾಡಿನ ಧಾರ್ಮಿಕ ಆಚರಣೆಗಳಲ್ಲಿ ಮಹಿಳೆಯರ ಪಾತ್ರ ಹಿರಿದು- ನೂರಕ್ಕೆ ತೊಂಬತ್ತು ಪಾಲು ದೈವಗಳು ಸ್ತ್ರೀಯರೇ ಆಗಿದ್ದಾರೆ. ಇಷ್ಟೆಲ್ಲ ಪುರುಷ ಅವಸ್ಥಾಂತರಗಳ ನಡುವೆಯೂ ಮಾತೃಪ್ರಧಾನ ಮೌಲ್ಯಗಳು ನಶಿಸಿ ಹೋಗುತ್ತಿದ್ದರೂ ಸಹ ಸಾಂಕೇತಿಕ ವಾಗಿ ಇಂದೂ ಇರುವುದನ್ನು ಗ್ರಾಮೀಣ ಪ್ರದೇಶಗಳಲ್ಲಿನ ಧಾರ್ಮಿಕ ಆಚರಣೆಯಲ್ಲಿ ಅಧಿಕೃತವಾಗಿ ಕಾಣಬಹು ದಾಗಿದೆಯಲ್ಲದೆ ಹೆಣ್ಣು ಶಕ್ತಿ ದೇವತೆಯ ಹಬ್ಬಗಳು ಗಮನಾರ್ಹವಾಗಿ ಉಳಿದಿರುವುದೊಂದು ವಿಶೇಷ.

ಜುಂಜಪ್ಪನ ಬಗ್ಗೆ ನಾಡಿನಾದ್ಯಂತ ಹತ್ತಾರು ಮೌಖಿಕ ಮಹಾಕಾವ್ಯಗಳು ಲಭ್ಯವಿವೆ. ಅದರಲ್ಲೂ ಬುಡಕಟ್ಟು ಸಮಾಜಗಳ ಕಾವ್ಯಗಳಂತೂ ಆದಿಮಾನವ ಸಂಸ್ಕೃತಿಯ ಹಲವು ಮಜಲುಗಳನ್ನು ನಮ್ಮ ಮುಂದೆ ತೆರೆದಿಡುತ್ತದೆ. ಕರ್ನಾಟಕದ ಪ್ರಮುಖ ಬುಡಕಟ್ಟುಗಳಲ್ಲಿ ಪ್ರಮುಖವಾದ ಜನಾಂಗ ಕಾಡುಗೊಲ್ಲರು. ಜುಂಜಪ್ಪ ಈ ಜನಾಂಗದ ಸಾಂಸ್ಕೃತಿಕ ವೀರ. ಇವನ ಕುಟುಂಬವೊಂದರ ಮೂರು ತಲೆಮಾರುಗಳ ಕತೆಯೇ ಜುಂಜಪ್ಪನ ಕಾವ್ಯ.

ಸ್ತ್ರೀಯ ಶೀಲದ ಸಾರ್ವಜನಿಕ ಪರೀಕ್ಷೆ ಒಂದು ಅನೂಚಾನ ವರ್ತನೆಯೆಂದು ಕಾಣುತ್ತದೆ. ಸಿನ್ನಮ್ಮಳ ಸತ್ಯಪರೀಕ್ಷೆ ಸ್ತ್ರೀ ಸಂಕುಲವನ್ನು ಪುರುಷ ಸಮಾಜದ ಹಿಡಿತಕ್ಕೆ ತೆಗೆದುಕೊಳ್ಳುವ, ಆದರೆ ಸಿನ್ನಮ್ಮ ಸ್ಥಾಪಿತ ಪಾತಿವ್ರತ್ಯದ ಚೌಕಟ್ಟನ್ನು ಮೀರಿಯೂ ಪುರುಷ ಒಡ್ಡುವ ದಿವ್ಯಗಳನ್ನು ಗೆದ್ದು ತನ್ನ ಪಾತಿವ್ರತ್ಯವನ್ನು ಸಾಬೀತುಪಡಿಸುತ್ತಾಳೆ. ಸಿನ್ನಮ್ಮ ಪುರುಷಪ್ರಧಾನ ಸಮಾಜದೊಳಗಡೆಯಲ್ಲಿ ಇದ್ದು ಮಾತೃಸಂಸ್ಕೃತಿಯ ಆದರ್ಶ ಸ್ತ್ರೀಯಾಗಿ ಕಂಡು ಬರುತ್ತಾಳೆ.

ಕಾಡುಗೊಲ್ಲ ಜನಾಂಗದಲ್ಲಿ ಸ್ತ್ರೀಯರ ಧ್ವನಿಗಳನ್ನು ಒತ್ತಿಡಲಾಗಿದ್ದು ಯಾವ ಹಂತದಲ್ಲೂ ಶೋಷಣೆಯನ್ನೆದುರಿಸಲು ಸಾಧ್ಯವಾಗದಂತಹ ಧಾರ್ಮಿಕ ಕಟ್ಟುಪಾಡುಗಳನ್ನು ಈ ಜನಾಂಗದ ಸ್ತ್ರೀಯರ ಮೇಲೆ ಇದೇ ಜನಾಂಗದ ಪುರುಷಪ್ರಧಾನ ವ್ಯವಸ್ಥೆ ಹೇರಿ ತನ್ನ ಹಿಡಿತದಲ್ಲಿಟ್ಟುಕೊಂಡಿದೆ ಎಂಬ ಅಂಶವನ್ನು ಗಮನಿಸಲಾಗಿದೆ. ಇವು ಹೆಣ್ಣಿನ ಲೈಂಗಿಕ ಕಾಮನೆಯನ್ನು ಅದುಮಲ್ಪಡುತ್ತದಲ್ಲದೆ, ಸ್ತ್ರೀಯ ಲೈಂಗಿಕತೆಯ ಮೇಲಿನ ನಿರ್ಬಂಧಗಳನ್ನು ಹೇರುವ ಹುನ್ನಾರ, ಪಿತೃಸಂಸ್ಕೃತಿ, ಮಾತೃಸಂಸ್ಕೃತಿಯ ಮೇಲೆ ಪೂರ್ಣ ಹತೋಟಿ ಸಾಧಿಸಿದ ಅಧೀನ ಸ್ಥಿತಿ ಇಲ್ಲಿನ ಹೆಣ್ಣಿನದಾದರೂ, ಸಿನ್ನಮ್ಮ ಒಂದಿಲ್ಲೊಂದು ಬಗೆಯಲ್ಲಿ ತನ್ನ ಆಸ್ಮಿತತೆಯನ್ನು ಸ್ಥಾಪಿಸಿದ್ದಾಳೆ.

ಪ್ರಾದೇಶಿಕ ಸಂಸ್ಕೃತಿಯ ತಿರುಳನ್ನು ಮೈಗೂಡಿಸಿಕೊಂಡು ರಚಿತವಾಗಿರುವ, ಮಹಾಭಾರತ ಜನಪದ ಕಾವ್ಯ ಜಗತ್ತಿನ ಸ್ತ್ರೀಪಾತ್ರ ಸಮೂಹದಲ್ಲಿನ ದ್ರೌಪದಿಯ ಪಾತ್ರ ಹಾಗೂ ಜನಪದ ರಾಮಾಯಣದಲ್ಲಿನ ಸೀತೆಯ ಪಾತ್ರಗಳೆರಡೂ ಮಹತ್ವದ್ದಾಗಿವೆ.

ಶಿಷ್ಟದಲ್ಲಿ ದ್ರೌಪದಿಯ ಪಾತ್ರ ಸ್ವಾಭಿಮಾನ, ಸ್ವಗೌರವಗಳ ಸಂಕೇತವಾಗಿ ಮೂಡಿ ಬಂದಿದ್ದರೂ, ಶಿಷ್ಟದಲ್ಲಿ ಸೀತೆಯನ್ನು ವೈಭವೀಕರಿಸಿದಷ್ಟು ಆಕೆಯನ್ನು ಭಾರತೀಯ ಸಂಸ್ಕೃತಿ ಸಮ್ಮತಿಸಿಲ್ಲ ಎನ್ನುವುದು ಹೆಣ್ಣಿನ ಸ್ವಾತಂತ್ರ್ಯಕ್ಕಿಂತ ಆಕೆಯ ದಾಸ್ಯತ್ವವನ್ನು ಅದು ಎತ್ತಿ ಹಿಡಿಯುತ್ತದೆ.

ಭಾರತೀಯ ಸ್ತ್ರೀಯ ಆದರ್ಶದ ಒಂದು ಕವಲು ಸೀತೆಯಾದರೆ ಇನ್ನೊಂದು ಕವಲು ದ್ರೌಪದಿ.

ಶಿಷ್ಟ ರಾಮಾಯಣ ಪಿತೃಪ್ರಧಾನ ಕುಟುಂಬವ್ಯವಸ್ಥೆಯ ಅಡಿಯಲ್ಲಿದ್ದರೆ, ಗೊಂಡರ ರಾಮಾಯಣ ಮಾತೃ ಕುಟುಂಬ ವ್ಯವಸ್ಥೆಯ ಕೊಡುಗೆಯಾಗಿದೆ.

ಮೂಲ ರಾಮಾಯಣದಲ್ಲಿ ಶೂರ್ಪನಖಿಯ ಮೂಗು ಮತ್ತು ಕಿವಿಯನ್ನು ಕೊಯ್ಯುವ ಪ್ರಸ್ತಾಪವಿದ್ದರೆ, ಗೊಂಡರ ರಾಮಾಯಣದಲ್ಲಿ ಅವಳ ಮೂಗು, ಮೊಲೆಗಳನ್ನು ಕೊಯ್ದು ಅತ್ಯಂತ ತುಚ್ಛವಾಗಿ ಮಾನಭಂಗವನ್ನು ಮಾಡುವಂತೆ ರಾಮ ಲಕ್ಷ್ಮಣನಿಗೆ ಆಜ್ಞಾಪಿಸುತ್ತಾನೆ. ಈ ಪ್ರಸಂಗ ರಾಮಾಯಣದ ಗತಿಯನ್ನೇ ಅದ್ಭುತ ರುದ್ರರಮ್ಯವಾಗಿ ಬದಲಾಯಿಸಿದ ಕೀರ್ತಿ ಶೂರ್ಪಣಕಿಯದಾಗುತ್ತದೆ. ಪುರುಷ ವ್ಯವಸ್ಥೆ ಹೆಂಗಸಿನ ಶೀಲದ ಬಗ್ಗೆ ಎಷ್ಟೊಂದು ಕ್ರೌರ್ಯದಿಂದ ನಡೆದುಕೊಂಡಿದೆ ಎಂಬುದನ್ನು ಗಮನಿಸಬೇಕಾಗುತ್ತದೆ. ಗೊಂಡರ ರಾಮಾಯಣದ ಸೀತೆ, ಶಿಷ್ಟ ರಾಮಾಯಣದ ಮಹಾಪತಿವ್ರತಾ ಸ್ತ್ರೀಯಾದ ಗಂಡನ ಯಾವ ಮಾತನ್ನೂ ಮೀರದ ಸಾಧ್ವಿಮಣಿಯಾದ ಆ ಸೀತೆಯಲ್ಲ. ಇಲ್ಲಿನ ಸೀತೆಯನ್ನು ಬುಡಕಟ್ಟು ಸಮಾಜವೊಂದರ ಸ್ವಾಭಿಮಾನಿ ಹೆಣ್ಣಾಗಿ ಚಿತ್ರಿಸಿ ಮಾತೃಪ್ರಧಾನ್ಯದ ತಮ್ಮ ಲೋಕದೃಷ್ಟಿಯನ್ನು ಗೊಂಡರು ತೋರ್ಪಡಿಸಿದ್ದಾರೆ.

ಇಲ್ಲಿ ಗೊಂಡರು ವಾಸ್ತವ ಬದುಕಿಗೆ ಹೆಚ್ಚು ಹತ್ತಿರವಾಗಿರುವಂತೆ ಕಾಣುತ್ತಾರಲ್ಲದೆ ಇದೇ ಗೊಂಡರ ಅನನ್ಯತೆ.

ಮೂಲ ರಾಮಾಯಣದಲ್ಲಿ ಸೀತೆ, ಪತಿವ್ರತಾ ಸ್ತ್ರೀಯಾಗಿ ಚಿತ್ರಿತವಾಗಿದ್ದರೆ, ಬುಡಕಟ್ಟು ಸಮಾಜವೊಂದರ ಗೊಂಡರ ಸೀತೆ ಸ್ವಾಭಿಮಾನಿ ಹೆಣ್ಣಾಗಿ, ಸಾತ್ವಿಕತೆಯ ಉತ್ತುಂಗ ಶಿಖರಕ್ಕೇರಿ ಎಲ್ಲರ ಹೃದಯದಲ್ಲಿಯೂ ನೆಲೆಯಾಗಿ ನಿಲ್ಲಬಲ್ಲ ಅಮರನಾರಿಯಾಗಿ, ಮಾತೃಪ್ರಧಾನ ವ್ಯವಸ್ಥೆಯ ಶ್ರೇಷ್ಠತೆಯನ್ನು ಪ್ರತಿನಿಧಿಸುವ ಸ್ತ್ರೀಯಾಗಿಯೂ ಮಿಂಚಿದ್ದಾಳೆ.

ಗಾಮೊಕ್ಕಲ ಮಹಾಭಾರತ ಪ್ರಾದೇಶಿಕ ಸಂಸ್ಕೃತಿಯ ತಿರುಳನ್ನು ಮೈಗೂಡಿಸಿಕೊಂಡಿರುವ ಇದುವರೆಗೂ ಪ್ರಕಟವಾಗಿರುವ ಜನಪದ ಮಹಾಭಾರತದ ಕಥೆಗಿಂತ, ಭಿನ್ನವಾದ ಹೊಸ ಪಾತ್ರಗಳ ಸೇರ್ಪಡೆಯಿಂದಾಗಿ, ಅಪರೂಪದ ಹೊಸತನವನ್ನು ಪಡದು, ಹೊಸ ಹೊಸ ಸ್ತ್ರೀ ಆಶಯಗಳನ್ನು ಹೊಮ್ಮಿರುವ 'ಗಾಮೊಕ್ಕಲ ಮಹಾಭಾರತ'ವನ್ನು ಹಿರಿಯ ಜಾನಪದ ವಿದ್ವಾಂಸರಲ್ಲಿ ಒಬ್ಬರಾಗಿರುವ ಡಾ.ಎನ್.ಆರ್.ನಾಯಕರು ಸಂಪಾದಿಸಿ ಜಾನಪದ ಅಧ್ಯಯನ ಕ್ಷೇತ್ರಕ್ಕೆ ಹೊಸ ಮಹತ್ವಪೂರ್ಣ ದೇಸೀಯ ಜನಪದ ಕಾವ್ಯವನ್ನು ಸಂಗ್ರಹಿಸಿಕೊಟ್ಟಿದ್ದಾರೆ.

ಸ್ತ್ರೀಯರ ಲೈಂಗಿಕ ಬದುಕಿನಲ್ಲಿ ಅನಾದಿ ಕಾಲದಿಂದಲೂ ಹಸ್ತಕ್ಷೇಪವನ್ನು ನಡೆಸುತ್ತಲೇ ಬಂದ ಪುರುಷರ ಯಜಮಾನ್ಯ ಧೋರಣೆಯನ್ನು ಧಿಕ್ಕರಿಸುತ್ತಾಳೆ. ತನ್ನ ಬೌದ್ಧಿಕ ಶಾರೀರಿಕ ಅವಶ್ಯಕತೆಗಳನ್ನು ಮುಕ್ತವಾಗಿ ಗುರುತಿಸಿಕೊಳ್ಳುವ ಮೂಲಕ ಸಮಗ್ರ ಸ್ತ್ರೀತ್ವದ ಪ್ರತಿನಿಧಿಯಾಗಿ ಹೆಚ್ಚು ಸ್ವಾಭಿಮಾನ, ಸ್ವಗೌರವಗಳ, ಬಹುಮುಖಿ ವ್ಯಕ್ತಿತ್ವದ ಮಹಾವ್ಯಕ್ತಿಯಾಗಿ ದ್ರೌಪದಿ ಕಾಣುತ್ತಾಳೆ.

ಜನಪದ ಕಾವ್ಯ ಪ್ರಪಂಚದಲ್ಲಿ ಸ್ತ್ರೀ ಪಾತ್ರ ಸಮುದಾಯದಲ್ಲಿ, ದ್ರೌಪದಿಯ ಪಾತ್ರ ರಾಮಾಯಣದ ಸೀತೆಯ ಪಾತ್ರಗಳೆರಡೂ ಬಹುಮಹತ್ವದ್ದು.

ಸ್ವಾಸಿ ಚಿನ್ನಮ್ಮಳ ಸ್ತ್ರೀ ಶೋಷಣೆಯು ಪುರುಷರಿಂದ ಮಾತ್ರವಲ್ಲದೆ ಸ್ತ್ರೀಯರಿಂದಲೂ ನಡೆಯುತ್ತದೆ ಹಾಗೂ ಸ್ತ್ರೀಯರಿಂದಲೇ ಅಧಿಕ ಎನ್ನುವ ಹಾಗೆ 'ಸ್ವಾಸಿ ಚಿನ್ನಮ್ಮ ಕಥನ ಕಾವ್ಯ' ದಾಖಲಿಸಿದೆ.

ಶೈವ ಮತ್ತು ವೈಷ್ಣವ ಎರಡು ಪಂಥಗಳ ಸಾಂಸ್ಕೃತಿಕ, ಧಾರ್ಮಿಕ ಸಂಘರ್ಷದ ಕಥಾನಕ 'ಸ್ವಾಸಿ ಚಿನ್ನಮ್ಮ' ಮತ ವಿಸ್ತರಣೆಯ ಘಟನೆ ಈ ಕಾವ್ಯದ ವಸ್ತು. ವೈಷ್ಣವ ಪಂಥದ ಚಿನ್ನಮ್ಮನನ್ನು ಸೊಸೆಯಾಗಿ ಪಡೆದರೆ ಸೊಸೆ ಮನೆಯವರೆಲ್ಲರನ್ನು ಶೈವ ಪಂಥಕ್ಕೆ ಸೇರಿಸಿಕೊಳ್ಳುವುದು ಚಿನ್ನಮ್ಮನ ಅತ್ತೆ ಗೌಡನಾಗಮ್ಮನ ಹುನ್ನಾರ. ಈ ಎರಡು ಬಣಗಳ ನಡುವೆ ಸಿಲುಕಿ, ನೊಂದು, ಬೆಂದು, ದರ್ಪ, ದೌರ್ಜನ್ಯಕ್ಕೆ ಸ್ವಾಸಿ ಚಿನ್ನಮ್ಮ ಒಳಗಾದರೂ ತಾನು ನಂಬಿದ ಧರ್ಮವನ್ನು ಯಾವುದೇ ಒತ್ತಡಕ್ಕೂ ಬಿಡದ ದೈವ ಭಕ್ತೆ. ಅತ್ತೆ ನೀಡುವ ಎಲ್ಲಾ ಒಳಹಿಂಸೆ ಯನ್ನು ತನ್ನ ಜೀವನದ ದೇವರಿಗಾಗಿ ಸಹಿಸಿಕೊಳ್ಳುತ್ತಾಳಾದರೂ ತನ್ನ ದೈವವಾದ ತಿರುಪತಿ ವೆಂಕಟರಮಣನನ್ನು ಪೂಜಿಸುವುದನ್ನು ಬಿಡುವುದಿಲ್ಲ. ಇದು ನಂಬಿಕೆ. ಇಲ್ಲಿ ಸಂಪ್ರದಾಯ, ಆಚರಣೆ, ಅಭಿವ್ಯಕ್ತಿ ಮೌಲ್ಯ ಮುಂತಾದ ಅಂಶಗಳು ಅಡಕವಾಗಿರುತ್ತದೆ. ಇಲ್ಲಿ ಸ್ತ್ರೀ ಶಕ್ತಿಯ ಪ್ರತಿಪಾದನೆ, ನೈತಿಕತೆಯ ಕಲ್ಪನೆ, ಸ್ತ್ರೀ ವಿವೇಚನೆ ವಿಶಿಷ್ಟವಾದದ್ದು. ಸ್ತ್ರೀಯರಿಗೆ ಸ್ಫೂರ್ತಿಯ ನೆಲೆಯಾಗಿ ಚಿನ್ನಮ್ಮ ಚಿತ್ರಿತವಾಗಿದ್ದಾಳೆ.

ಒಟ್ಟಾರೆಯಾಗಿ ಜನಪದ ಮಹಾಕಾವ್ಯಗಳು ಸ್ತ್ರೀ ಸಂಸ್ಕೃತಿಯೊಂದರ ಅಧ್ಯಯನಕ್ಕೆ ಹೊಸ ದಾರಿಗಳನ್ನು ತೆರೆಯುತ್ತವೆ. ಭಾರತದಲ್ಲಿನ ಜನಪದ ಅಧ್ಯಯನ ಬಹುಮಟ್ಟಿಗೆ ಪುರುಷ ಪ್ರಧಾನ ಸಂಸ್ಕೃತಿಯ ಪರವೇ ಆಗಿದ್ದು, ಇದಕ್ಕೆ ಪ್ರತಿಯಾಗಿ ಮಾತೃಪ್ರಧಾನ ಸಂಸ್ಕೃತಿಯ ಪರಂಪರೆಯನ್ನು ವಿಶ್ಲೇಷಿಸುವ ಮೂಲಕ ಸ್ತ್ರೀ ಪರವಾದ ಅಧ್ಯಯನಕ್ಕೆ ಒತ್ತುಕೊಡುವುದು ಈ ಮಹಾಪ್ರಬಂಧದ ಪ್ರಧಾನ ಉದ್ದೇಶ ಎಂದು ಹೇಳಬಹುದು.

## ಅನುಬಂಧಗಳು

೧. ನಕ್ಷೆ

೨. ಸಾಂಸ್ಕೃತಿಕ ಪದಕೋಶ

೩. ಪರಾಮರ್ಶನ ಗ್ರಂಥಗಳು

# ಧಾರ್ಮಿಕ ವೃತ್ತಿಗಾಯಕರ ನೆಲೆಗಳು

ಚಿತ್ರದುರ್ಗ

ತುಮಕೂರು

ಹಾಸನ

ಬೆಂಗಳೂರು

ಮಂಡ್ಯ

ಮೈಸೂರು

ಚಾಮರಾಜನಗರ

● ಕಂಸಾಳೆಯವರು 

△ ನೀಲಗಾರರು 

▪ ಗಣೆಯವರು 

# ಸಾಂಸ್ಕೃತಿಕ ಪದಕೋಶ

ಅಂಕಣ : ಮನೆಯ ಒಂದು ತೊಲೆಗೂ ಇನ್ನೊಂದು ತೊಲೆಗೂ ನಡುವೆ ಇರುವ ಅಂತರ

ಅಂಬಲಿ : ರಾಗಿ ಹಿಟ್ಟಿನಿಂದ ಸಿದ್ಧಪಡಿಸಿದ ಗಂಜಿ

ಆದಿಕಲ್ಯಾಣ : ೧೨ನೇ ಶತಮಾನದ ಚಾರಿತ್ರಿಕ ಕಲ್ಯಾಣವನ್ನು ನೀಲಗಾರರು ಪುರಾಣೀಕರಿಸಿಕೊಂಡಿದ್ದಾರೆ. ಆದ್ದರಿಂದ ಕಾವಿಕಲ್ಯಾಣ, ಕಡೇಕಲ್ಯಾಣ, ಆದಿಕಲ್ಯಾಣ ಎನ್ನುವ ಪರಿಕಲ್ಪನಾತ್ಮಕ ಕಲ್ಯಾಣಗಳನ್ನು ತರುತ್ತಾರೆ. ಆದಿಕಲ್ಯಾಣ, ಕಾವಿಕಲ್ಯಾಣ ಕಡೇ ಕಲ್ಯಾಣಕ್ಕಿಂತ ಪೂರ್ವದ್ದು.

ಅಮಾವಾಸ್ಯೆ ಪೂಜಾರಿ : ಕಾಡುಗೊಲ್ಲರಲ್ಲಿ ಸತ್ತ ಹಿರಿಯರ ಪೂಜೆಯನ್ನು ಮಾಡಲು, ಹಟ್ಟಿಯವರೆಲ್ಲ ಸೇರಿ ಒಬ್ಬ ಪೂಜಾರಿ ಯನ್ನು ನೇಮಿಸಿರುತ್ತಾರೆ ಇವನನ್ನು "ಅಮಾವಾಸ್ಯೆ ಪೂಜಾರಿ" ಎನ್ನುವರು

ಅರಗಣ್ಣು ಕಿರುಗಣ್ಣು : ತೀಕ್ಷ್ಣ ದೃಷ್ಟಿ

ಅಸ್ಮಿತತೆ : ಗುರುತಿಸಿಕೊಳ್ಳುವಿಕೆ

ಆನಂದದ ನೀಲಿ : ಭಂಗಿ ಸೇದಿದಾಗ ಉಂಟಾಗುವ ೮೮ ನೀಲಿಗಳಲ್ಲಿ ಒಂದು. ಈ ಹೆಸರಿನ ರಸಸಿದ್ದನೊಬ್ಬನಿದ್ದನೆಂದು ನೀಲಗಾರರು ನಂಬುತ್ತಾರೆ.

ಇಂದುರು : ಇಂದ್ರ

ಉಬ್ಬೆ : ಮೈಲಿಗೆ ಬಟ್ಟೆಗಳನ್ನು ಬೇಯಿಸುವ ಒಂದು ದೊಡ್ಡ ಒಲೆ. ಮಂಟೇಸ್ವಾಮಿಗಳು ಮಾಚಯ್ಯನ ಉಬ್ಬೆ ಒಲೆಯ ಜಾಗವನ್ನು ಊಳಿಗಾರ ಮನೆಯಾಗಿ ಪಡೆಯುತ್ತಾರೆ.

ಉರಿಗದ್ದುಗೆ : ಗುರುಮಠಗಳಲ್ಲಿ ಇರುವ ಪವಿತ್ರಪೀಠ/ಜ್ವಾಲೆಯುಳ್ಳ ಪೀಠ. ಬೊಪ್ಪೇಗೌಡನ ಕುರಿ ಹುಂಡಿಯನ್ನೇ ಮಂಟೇದರು ಉರಿಗದ್ದುಗೆಯನ್ನಾಗಿ ಮಾರ್ಪಡಿಸಿ ಕೊಂಡರು. ಜಾತ್ರೆಗಳ ಮತ್ತು ಮಠಗಳ ಆಚರಣೆಗಳಲ್ಲಿ ಉರಿಗದ್ದುಗೆಯೇರುವುದೊಂದು ಆಚರಣೆ ಪಟ್ಟಕ್ಕೆ

ಬಂದ ಗುರುಗಳು ವರ್ಷಕ್ಕೊಮ್ಮೆ ಕಪ್ಪಡಿಯಲ್ಲಿ ನಡೆಯುವ ಜಾತ್ರೆಯಲ್ಲಿ ಉರಿಗದ್ದುಗೆಯೇರಿ ನೂರೊಂದು ಮಣಿಗಳನ್ನು ಎಣಿಸಿ, ಧ್ಯಾನಿಸಿ ನಂತರ ಇಳಿಯುತ್ತಾರೆ. ಹಾಗೆ ಉರಿಗದ್ದುಗೆಯೇರುವ ಮೊದಲು ಎಳ್ಳು ಜೀರಿಗೆಯನ್ನು ಎರಚುತ್ತಾರೆ. ಅವು ಪುಟಪುಟನೆ ಸಿಡಿಯುತ್ತವೆ ಎನ್ನುವ ನಂಬಿಕೆಯಿದೆ. ಕಪ್ಪಡಿಯಲ್ಲಿ ಮಠದ ಸ್ವಾಮಿಗಳು ಈ ಆಚರಣೆ ನಡೆಸಿಕೊಡುವಾಗ ಅಪಾರ ಜನಸ್ತೋಮ ಸೇರಿರುತ್ತದೆ.

ಉರಿಮದ್ದು : ಆರೋಗ್ಯವನ್ನು ಹಾಳುಮಾಡುವ ಔಷಧಿ.

ಉರಿ ಚಮ್ಮಾಳಿಗೆ : ಮನುಷ್ಯನ ಚರ್ಮದ ಚಪ್ಪಲಿ.

ಉರ್ಸಿಂಗಿ ಕೊರಡು : ಚುರುಚುರು ಉರಿಯನ್ನುಂಟುಮಾಡುವ ಚಾವಟಿ.

ಎತ್ತಪ್ಪ : ಕಾಡುಗೊಲ್ಲರ ಪ್ರಥಮ ಸಾಂಸ್ಕೃತಿಕ ವೀರಪುರುಷ. ಇವನು ಹೆತ್ತ ತುಪ್ಪದಲ್ಲಿ ಹುಟ್ಟಿದವನು ಎಂದು ಎತ್ತಪ್ಪನ ಪುರಾಣ ಹೇಳುವುದರಿಂದ ಇವನಿಗೆ 'ಹೆತ್ತಪ್ಪ' ಎಂಬ ಹೆಸರು ಬಂದಿತು. ಗ್ರಾಮ್ಯದಲ್ಲಿ ಇದು 'ಎತ್ತಪ್ಪ' ಎಂದಾಗಿದೆ. ಕಾಡುಗೊಲ್ಲ ಜನಾಂಗದ ಸಂಸ್ಕೃತಿಯನ್ನು ರೂಪಿಸಿದ ಮೂಲಪುರುಷ.

ಎದುರು ಸೇವೆ : ಯುಗಾದಿ ಹಬ್ಬದ ಅಮಾವಾಸ್ಯೆ ದಿನ ಬೊಪ್ಪೇಗೌಡನಪುರದಲ್ಲಿ ನಡೆಯುವ ಒಂದು ದಿನದ ಜಾತ್ರೆಗೆ 'ಎದುರು ಸೇವೆ' ಎಂದು ಕರೆಯುತ್ತಾರೆ, ಕಪ್ಪಡಿಯಲ್ಲಿ ಇಪ್ಪತ್ತೈದು ದಿನಗಳ ಜಾತ್ರೆಯನ್ನು ಮುಗಿಸಿಕೊಂಡು ಬಂದ ಪರುಸೆಯನ್ನು ಮತ್ತು ಸ್ವಾಮಿಗಳನ್ನು ಮಠದಲ್ಲಿ ಆ ವರ್ಷ ಉಳಿದ ಸ್ವಾಮಿಗಳು, ತಮ್ಮ ಬಸವ, ಪತ್ತಿಗೆ, ಕಂಡಾಯ ಪರಿವಾರದೊಡನೆ ಎದುರುಗೊಂಡು ಮಠಕ್ಕೆ ಬರಮಾಡಿಕೊಳ್ಳುತ್ತಾರೆ. ಹೀಗೆ ಮಳವಳ್ಳಿ ಮಠದವರು, ಬೊಪ್ಪಣಪುರದ ಮಠದವರು, ಪರಸ್ಪರ ಮುಖಾಮುಖಿಯಾಗಿ ಅಮಾವಾಸ್ಯೆದಿನ ಮಠ ಪ್ರವೇಶ ಮಾಡುವ ಈ ಆಚರಣೆಯನ್ನು ಎದುರು ಸೇವೆ ಎಂದು ಕರೆಯುತ್ತಾರೆ.

ಒಕ್ಕಲು : ಯಾವುದಾದರೂ ಒಂದು ದೇವರಿಗೆ ನಡೆದುಕೊಳ್ಳುವಂತಹ ಭಕ್ತರ ಒಂದು ಕುಟುಂಬ.

ಕಂಡಾಯ : ಮಂಟೇಸ್ವಾಮಿಗಳು ಹಿಡಿದಿದ್ದರೆನ್ನಲಾದ ಒಂದು ಆಯುಧ ವಿಶೇಷ. ನೀಲಗಾರ ಪರಂಪರೆಯ ಒಂದು

ಪವಿತ್ರವಾದ ಸಂಕೇತ. ಕತ್ತಿ ಎನ್ನುವ ಅರ್ಥವಿದೆ. ಈ ಪರಂಪರೆಯ ಒಬ್ಬೊಬ್ಬ ಶರಣನ ಸಂಕೇತವಾಗಿ ಒಂದೊಂದು ಕಂಡಾಯವಿದೆ.

ಕಂಡೇಗೌಡ : ಬೇವಿನಟ್ಟಿ ಕಾಳಮ್ಮನ ಗಂಡ

ಕಂಬೇರುಗೊಲ್ಲರು : ಕಾಡುಗೊಲ್ಲರಲ್ಲಿನ ಒಂದು ಬೆಡಗು

ಕಂಸಾಳೆ : ಮಲೆಯಮಾದೇಶ್ವರ ಸಂಪ್ರದಾಯದ ಶಿಶುಮಕ್ಕಳು ಭಿಕ್ಷೆ ಮಾಡಲು ಬಳಸುವ ಕಂಚಿನ ತಾಳ.

ಕದ್ರಿಗುಡ್ಡ : ಸ್ಯಾಸಿ ಚಿನ್ನಮ್ಮ ಹುಟ್ಟಿದ ಊರು.

ಕಟ್ಟೇಮನೆ : ಕಾಡುಗೊಲ್ಲರ ನ್ಯಾಯ ತೀರ್ಮಾನ ಮಾಡುವ ಮುಖ್ಯ ಸ್ಥಳ. ಚಂದಮುತ್ತಿಯ ಕುಲದ ಕಟ್ಟೇಮನೆ ತಾಳವಟ್ಟಿಯಲ್ಲಿದೆ. ಮೊದಲು ಚಿತ್ತಮುತ್ತಿಕುಲದ ಕಟ್ಟೇಮನೆ ಹಿರಿಯೂರು ತಾಲ್ಲೂಕು ಯರಬಳ್ಳಿಯಲ್ಲಿದ್ದರೆ, ಈಗ, ಕರೇಓಬೇನಹಳ್ಳಿಯಲ್ಲಿದೆ. ರಾಮೇಗೌಡನ ಕುಲದವರಿಗೆ ರಾಮನಹಳ್ಳಿ ಕಟ್ಟೇಮನೆ. ಈಗ ಕಟ್ಟೆಮನೆಗಳಿಗೆ ಮೊದಲಿನ ಮಹತ್ವವಿಲ್ಲ.

ಕಪ್ಪುಧೂಳ್ತ : ನೀಲಗಾರರು ಬಳಸುವ ಮಹಿಮೆಯ ಭಸ್ಮ ಅಥವಾ ತಿಲಕಗಳು. ಗಾಳಿ ಗಾಚಾರ ಬಿಡಿಸುವುದಕ್ಕೆ ಈ ಕಪ್ಪುಧೂಳ್ತವನ್ನು ಬಳಸುತ್ತಾರೆ.

ಕಾಕಿ : ಕಾಗೆ

ಕ್ವಾರಣ್ಯ : ಭಿಕ್ಷೆ-ಗುಡ್ಡನು ಭಿಕ್ಷೆ ಮಾಡುವುದನ್ನು ಕ್ವಾರಣ್ಯ ಎನ್ನುತ್ತಾರೆ.

ಗಗ್ಗರ : ಗರಗರನಾದ ಹೊಮ್ಮಿಸುವ ಒಂದು ಜನಪದ ತಾಳವಾದ್ಯ. ಕಂಸಾಳೆ ನೃತ್ಯದ ಸಮಯದಲ್ಲಿ ಉಪಯೋಗಿಸುತ್ತಾರೆ.

ಗಣೆ : ಕಾಡುಗೊಲ್ಲರು ಬಳಸುವ ಗಣೆ ಮಾರುದ್ದದ ಬಿದಿರಿನಿಂದ ಮಾಡಲಾದ ಒಂದು ವಾದ್ಯ. ಇದಕ್ಕೆ ಐದು ಅಥವಾ ಏಳು ತೂತುಗಳು ಇರುತ್ತವೆ. ಜುಂಜಪ್ಪನ ಭಕ್ತರು ಊರಾಡುವಾಗ ಹೆಗಲ ಮೇಲೆ ಹೊತ್ತುತರುವ ಬಿದಿರಿನ ಕೋಲು ಇದನ್ನು ನಾನಾ ರೀತಿಯ ವಸ್ತ್ರಗಳಿಂದ ನಾಗರಹೆಡೆ ನವಿಲುಗರಿಗಳಿಂದ ಅಲಂಕರಿಸಿರುತ್ತಾರೆ. ಹೇಳಿಕೆ ಗಣೆ, ದೇವಸ್ಥಾನಗಳಲ್ಲಿ

ಊದಿ ಭವಿಷ್ಯ ಹೇಳುತ್ತಾರೆ. ಗಣೆ ಕಾಡುಗೊಲ್ಲರ ಸಂಸ್ಕೃತಿಯ ಸಂಕೇತ.

ಗಾಬು ಸಿಗಿಯುವುದು : ಒಂದು ಅಚ್ಚ ಕರಿಯ ಹೋತದ ಗಂಟಲಿನ ಚರ್ಮವನ್ನು ಹಲ್ಲಿನಿಂದ ಸಿಗಿದು ಕೊಲ್ಲುವುದನ್ನು 'ಗಾಬು ಸಿಗಿಯುವುದು' ಎಂದು ಕರೆಯುತ್ತಾರೆ. ಅದರ ರಕ್ತವನ್ನು ದೇವರಿಗೆ ಅರ್ಪಿಸುತ್ತಾರೆ.
ಇದು ಕಾಡುಗೊಲ್ಲರ ಜಾತ್ರೆಗಳೆಲ್ಲೆಲ್ಲಾ ರೋಮಾಂಚನ ಕಾರಿಯಾದುದು.

ಗುಡ್ಡಿಯರು : ಮಲೆಯಮಾದೇಶ್ವರನ ಹೆಸರಿನಲ್ಲಿ ದೀಕ್ಷೆ ಪಡೆಯುವ ಹೆಂಗಸಿಗೆ ಗುಡ್ಡಿಯರೆನ್ನುತ್ತಾರೆ.

ಗುಬ್ಬ : ಕಾಡುಗೊಲ್ಲರ ಗೋಳಾಕಾರದ ದೇವಸ್ಥಾನವನ್ನು ಗುಬ್ಬ ಎನ್ನುವರು.

ಗೊಲ್ಲಕಡಗ : ಕಾಡುಗೊಲ್ಲರ ಹೆಂಗಸರು ಕೈಗೆ ಧರಿಸುವ ಹಿತ್ತಾಳೆ ಬಳೆ ಅವರಿಗೆ ಸೌಭಾಗ್ಯದ ಸಂಕೇತ. ಮದುವೆಗೆ ಮೊದಲು ಬೆಳ್ಳಿಯ ಕಡಗವನ್ನು ತೊಡುವ ಈ ಹೆಂಗಸರು, ಮದುವೆಯ ಸಂಧರ್ಭದಲ್ಲಿ ಎಡಗೈಗೆ ಹಿತ್ತಾಳೆಯ ಗೊಲ್ಲಕಡಗವನ್ನು ತೊಡುತ್ತಾರೆ. ಇದನ್ನು 'ಕೃಷ್ಣ ಕಡಗ' ಎಂದು ಕರೆಯುತ್ತಾರೆ. ಗಂಡ ಸತ್ತರೆ ಕಾಡುಗೊಲ್ಲ ಹೆಂಗಸರಿಗೆ ವೈಧವ್ಯದ ಚಿಂತೆ ಇಲ್ಲ. ಕೃಷ್ಣನ ಕಡಗ ಇರುವವರೆಗೂ ಅವರನ್ನು ಮುತ್ತೈದೆಯರೆಂದೇ ತಿಳಿಯುತ್ತಾರೆ.

ಘನ ನೀಲಿ : ಎಂಬತ್ತೆಂಟು ನೀಲಿಗಳಲ್ಲಿ ಘನನೀಲಿಯೂ ಒಂದು. ಈ ಘನ ನೀಲಿಯನ್ನು ಪಡೆದವನು ಸಿದ್ಧಪ್ಪಾಜಿ. ಅವನಿಗೆ ನೀಲಿಸಿದ್ಧಪ್ಪಾಜಿ ಎನ್ನುವ ಹೆಸರು ಇದೆ.

ಚಂದುರು : ಚಂದ್ರ

ಚನ್ನಾಜಮ್ಮ : ಮಂಟೇಸ್ವಾಮಿಗಳ ಶಿಷ್ಯೆ, ವಿಜಯನಗರದ ಗಾರುಡಿಗರ ಮಗಳು. ರಾಚಪ್ಪಾಜಿ ಗಾರುಡಿಗರನ್ನು ಸೋಲಿಸಿ, ಇವಳನ್ನು ಪಡೆಯುತ್ತಾರೆ.

ಚಿಕ್ಕಲ್ಲೂರು : ಕೊಳ್ಳೇಗಾಲ ತಾಲ್ಲೂಕಿನಲ್ಲಿದೆ. ಪ್ರತಿ ವರ್ಷ ಜನವರಿ ತಿಂಗಳ ಪುಷ್ಯ ಶುದ್ಧ ಚತುರ್ದಶಿಯಂದು ಚಿಕ್ಕಲ್ಲೂರಿನಲ್ಲಿ ಮಂಟೇಸ್ವಾಮಿಗಳ ಶಿಷ್ಯ 'ಸಿದ್ಧಪ್ಪಾಜಿ' ಯವರ ಜಾತ್ರೆ ಆರಂಭವಾಗಿ ಐದು ದಿನಗಳು ನಡೆಯುತ್ತದೆ.

ಚಿಪ್ಪಗೊಡಲಿ : ತೆಳುವಾದ ಬಾಯಿಯನ್ನು ಹೊಂದಿರುವ ಕೈಕೊಡಲಿ

ಜಂಗಿನ ಶಬ್ದ : ಜಂಗಮರು ಮೊಣಕಾಲುಗಳಿಗೆ ಧರಿಸುವ ಒಂದು ಬಗೆಯ ದಪ್ಪನಾದ ಹಿತ್ತಾಳೆಯ ಗೆಜ್ಜೆ.

ಜಾಲು ವಿದ್ಯೆ : ಜಾದು ವಿದ್ಯೆ.

ಜುಂಜಪ್ಪ : ಕಾಡುಗೊಲ್ಲರ ಆರಾಧ್ಯ ಧೈವ, ಜುಂಜಪ್ಪ ಸಿನ್ನಮ್ಮನ ಮಗ. ಜುಂಜಪ್ಪನ ಸಾಹಸ, ಪವಾಡಗಳ ಕತೆಯನ್ನು ಗಣೆ ಎಂಬ ಕೊಳಲನ್ನೂದಿಕೊಂಡು ಹಾಡುತ್ತಾರೆ. ಜುಂಜಪ್ಪನ ಹೆಸರು ಹೇಳಿ ಕಾಣಿಕೆ ಕಟ್ಟಿದರೆ ಮನೆಯಲ್ಲಿ ಹಾವು, ಚೇಳು ಕಾಣಿಸಿಕೊಳ್ಳುವುದಿಲ್ಲ ಎಂಬ ನಂಬಿಕೆ ಇದೆ.

ತಂಬೂರಿ : ನೀಲಗಾರ ಸಂಪ್ರದಾಯದವರು ಬಳಸುವಂತಹ ತಂತಿವಾದ್ಯ, ಮುತತ್ತಿರಾಯನನ್ನು ಸಿದ್ಧಪ್ಪಾಜಿ ಭೇಟಿ ಮಾಡಿದ ಸಂದರ್ಭದಲ್ಲಿ ಸೌಹಾರ್ದತೆಯ ನೆನಪಾಗಿ ನೀಡಿದಂತಹ ವಾದ್ಯ. ತಂಬೂರಿಯು ಸುಮಾರು ಎರಡುಮೊಳ ಉದ್ದವಿದ್ದು, ನಾಲ್ಕು ತಂತಿಗಳಿರುತ್ತವೆ. ಇದರ ತುದಿಯಲ್ಲಿ ನಾಗರಹೆಡೆ ಅಥವಾ ಸಿಂಹದ ಮುಖವನ್ನು ಬಿಡಿಸಿರುತ್ತಾರೆ.

ತಮ್ಮಡಿ : ಪೂಜಾರಿ–ಸೋಲಿಗರ ದೇವಾಲಯದ ಪೂಜಾರಿಗೆ ತಮ್ಮಡಿ ಎಂದು ಕರೆಯುತ್ತಾರೆ.

ತುರುಗಾಹಿಗಳು : ದನಗಳನ್ನು ಕಾಯುವ ಗೊಲ್ಲರು.

ತೆರ : ಮದುವೆಯ ಸಂದರ್ಭದಲ್ಲಿ ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೆ ಒಪ್ಪಿಸುವ ಹಣ.

ದಮ್ಮಡಿ : ಕೈಯಲ್ಲಿ ಹಿಡಿದು ನುಡಿಸುವ ಗೆಜ್ಜೆಗಳುಳ್ಳ ಚಿಕ್ಕ ತಮಟೆಯಾಕಾರದ ಒಂದು ಚರ್ಮವಾದ್ಯ.

ದಾಸಯ್ಯ : ವೈಷ್ಣವ ಸಂಪ್ರದಾಯದ ಗುಡ್ಡ–ತಿರುಪತಿ ಇವರ ಧಾರ್ಮಿಕ ಕೇಂದ್ರ,

ದಾಸಿಂಗ : ತಿರುಪತಿ ಸ್ವಾಮಿಗೆ ಅರ್ಪಿಸುವ ಒಂದು ವಿಧದ ಮುಡುಪು.

ದೇವಾಂಗ : ಶ್ರೇಷ್ಠವಾದ ಒಂದು ಬಗೆಯ ಬಟ್ಟೆ–ರೇಷ್ಮೆ ವಸ್ತ್ರ

ದೇವರಗುಡ್ಡ : ದೇವರ ಪೂಜಾರಿಯನ್ನು ದೇವರಗುಡ್ಡ ಎಂದು ಕರೆಯುವುದು ವಾಡಿಕೆ. ಕೆಲವು ಕಡೆ ಕಾರಣಿಕದ

ಗೊರವನನ್ನು ದೇವರಗುಡ್ಡ ಎಂದು ಗುರುತಿಸಲಾಗುತ್ತದೆ. ಮಲೆಯಮಾದೇಶ್ವರನ ಭಕ್ತರಾದ ಕಂಸಾಳೆಯವರನ್ನು ದೇವರಗುಡ್ಡ ಎಂದು ಕರೆಯುತ್ತಾರೆ.

ನೀಲಗಾರ : ಮಂಟೇಸ್ವಾಮಿ ಗುಡ್ಡರು, ಕರ್ನಾಟಕದ ಮಹತ್ವದ ವೃತ್ತಿಗಾಯಕ ಪರಂಪರೆಗೆ ಸೇರಿದವರು.

ಪಡಗ : ದೊಡ್ಡಮಡಕೆ–ತಿರುಪತಿ ತಿಮ್ಮಪ್ಪನ ಸನ್ನಿದಿಗೆ ಸ್ಯಾಸಿ ಚಿನ್ನಮ್ಮನ ಮನೆಯವರು ಹೋಗುವಾಗ ಐವತ್ತು ಸೇರು ಅನ್ನವನ್ನು ಪಡಗದಲ್ಲಿ ತುಂಬಿಕೊಂಡು ಹೋಗುತ್ತಾರೆ.

ಪರಸೆ : ಜಾತ್ರೆಯಲ್ಲಿ ಸೇರುವ ಜನ ಸಮುದಾಯಕ್ಕೆ ಪರಸೆ ಎನ್ನುತ್ತಾರೆ.

ಪಾಗುಂಡ : ಒಂದು ಊರಿನ ಹೆಸರು–ಸ್ಯಾಸಿ ಚಿನ್ನಮ್ಮನ ಗಂಡನ ಊರು.

ಪುರುಸಾನಿ : ನೀಲಗಾರರಿಗೆ ದೀಕ್ಷೆ ನೀಡುವಂತಹ ಹಿರಿಯ ಗುರುಗಳು. ಹತ್ತಾರು ಊರುಗಳಿಗೆ ಸೇರಿ ಒಬ್ಬ ಪುರುಸಾನಿಯನ್ನು ನೇಮಿಸುತ್ತಾರೆ.

ಬಂಜೆ : ಮಕ್ಕಳಿಲ್ಲದ ಹೆಣ್ಣಿಗೆ ಬಂಜೆ ಎನ್ನುತ್ತಾರೆ.

ಬರಗ : ಹುಲಿ

ಬಾಕ್ : ಕಟಾರಿ/ತಿವಿಯುವ ಒಂದು ಆಯುಧ : ಚೂರಿ

ಬಾನುಗುರಿ (ಭಾನ್ಸುರಿ) : ಹರಕೆಯ ಕುರಿ

ಬ್ಯಾಟಿ : ಬೇಟೆ.

ಭಂಗಿ : ಸಿದ್ದುಪತ್ರ, ಗಾಂಜಾ ಎನ್ನುವ ಹೆಸರು ಇವೆ. ನೀಲಗಾರ ಪರಂಪರೆಯಲ್ಲಿ ಪವಿತ್ರವಾದ ವಸ್ತು ಮಂಟೇಸ್ವಾಮಿಗಳು ಪವಾಡಗಳನ್ನು ಮಾಡುವ ಪೂರ್ವದಲ್ಲಿ ಭಂಗಿ ಸೇದುತ್ತಾರೆ.

ಮಂಟೇಸ್ವಾಮಿ : ನೀಲಗಾರರೆಂಬ ವೃತಿಗಾಯಕರ ಆರಾಧ್ಯ ದೈವ. ದಕ್ಷಿಣ ಕರ್ನಾಟಕದಲ್ಲಿ ಪೂಜೆಗೊಳ್ಳುವ ದೈವ. ಈತನನ್ನು ಅಲ್ಲಮಪ್ರಭುವಿನ ಅವತಾರವೆಂದು, ಧರೆಗೆ ದೊಡ್ಡವರೆಂದು ಕರೆಯುತ್ತಾರೆ. ಇವರು ಅನೇಕ ಪವಾಡಗಳನ್ನು ಮೆರೆದು ದೈವತ್ವವನ್ನು ಪಡೆದ ಸಾಂಸ್ಕೃತಿಕ ವೀರ. ನೀಲಗಾರರು ತಮ್ಮ ಆರಾಧ್ಯ

ದೈವವಾದ ಮಂಟೇಸ್ವಾಮಿ ಕಾವ್ಯವನ್ನು ಹಾಡುತ್ತಾರೆ.

ಮಾಟಗಾರ : ಗಾರುಡಿವಿದ್ಯೆ, ಮಂತ್ರಮಾಟಗಳನ್ನು ಬಲ್ಲವನು.

ಮಾದೇಶ್ವರ : ಒಬ್ಬ ಧಾರ್ಮಿಕ ಮಹಾಪುರುಷ. ಈತನ ಬಗ್ಗೆ ಜನಪದ ಕಾವ್ಯಗಳು ರಚನೆಯಾಗಿವೆ. ಈತನು ಕಂಸಾಳೆಯವರ ಆರಾಧ್ಯ ದೈವ. ಈತನನ್ನು ಮಾದಪ್ಪ, ಮಾದಯ್ಯ, ಮಾದೇವ ಎಂದು ಕರೆಯುತ್ತಾರೆ.

ಮುಟ್ಟನಹಳ್ಳಿ : ಮಂಟೇಸ್ವಾಮಿಗಳ ಶಿಷ್ಯೆ. ದೊಡ್ಡಮ್ಮತಾಯಿ ಇಲ್ಲಿ ಮುಟ್ಟಾದ ಕಾರಣ ಇದಕ್ಕೆ ಮುಟ್ಟಿನಹಳ್ಳಿ ಎಂದು ಹೆಸರು ಬಂತು ಎನ್ನುತ್ತಾರೆ ನೀಲಗಾರರು.

ಮುರುಗನು : ಮೃಗ

ಮೂಗ್ಹುತ್ತ : ಕೋವೆಗಳಿಲ್ಲದ ಹುತ್ತ, ಆಗತಾನೇ ಹುಟ್ಟಿದ ಮಕ್ಕಳು ಸತ್ತರೆ ಮೂಗ್ಹುತ್ತಕ್ಕೆ ಹಾಕುತ್ತಾರೆ.

ರಜ : ಧೂಳು

ರಜಕ : ಅಗಸ

ರೂಪತಿ/ರೋಪತಿ : ದ್ರೌಪದಿ

ಲಗ : ಕಬ್ಬಿಣದ ಆಯುಧ, ಮಂಟೇಸ್ವಾಮಿಯವರಿಗೆ ಪಾತಾಳಬಾವಿಯಲ್ಲಿ ಪವಡಿಸಲು, ಬಾವಿಯೊಂದನ್ನು ಸಿದ್ಧಗೊಳಿಸಲು ಬೇಕಾದ ಒಂಬತ್ತು ಬಗೆಯ ಸಲಕರಣೆಗಳು, ಹಾರೆ ಮೂರು, ಎಲಗುದ್ಲಿಮೂರು, ದಬುಕಮೂರು.

ಲಾಕಾಸು : ಆಕಾಶ

ಸ್ಯಾಸಿ : ಸೇಸೆ, ಮಂಗಳಕಾಯಕದಲ್ಲಿ ಅಕ್ಕಿಯಿಂದ ಬರೆಯುವ ರಂಗೋಲಿ.

ಸೀಲ್ : ಮೊಹರು

ಹಚ್ಚಡ : ಹೊದಿಕೆ/ದುಪ್ಪಟ

ಹಟ್ಟಿ : ಕಾಡುಗೊಲ್ಲರು ವಾಸಿಸುವ ಸ್ಥಳವನ್ನು ಹಟ್ಟಿ ಎನ್ನುವರು.

ಹಸೆ : ಮಂಗಳಕಾರ್ಯಗಳಲ್ಲಿ ಹಾಕುವ ಪೀಠ; ಗದ್ದುಗೆ.

ಹಲಗೂರು : ಮಳವಳ್ಳಿ ತಾಲೂಕಿನ ಗ್ರಾಮ. ಪೂರ್ವದಲ್ಲಿ

ಸಾಂಪ್ರದಾಯಿಕ ಕುಲುವೆಗಳಿಂದ ಕಬ್ಬಿಣ ಉತ್ಪಾದನೆಯನ್ನು ಮಾಡುತ್ತಿದ್ದ ಶ್ರೀಮಂತ ಪಟ್ಟಣ ಪಾಂಚಾಳದವರ ಉತ್ಪಾದನಾ ಚಟುವಟಿಕೆ ಕೇಂದ್ರ, ಹಲಗೂರಿನ ಪಾಂಚಾಳಾದವರ ಮನೆತನದವನಾದ ಕೆಂಪಾಚಾರಿಯನ್ನು ಸಿದ್ದಪ್ಪಾಜಿಯಾಗಿ ಪರಿವರ್ತಿಸಿ ಮಂಟೇಸ್ವಾಮಿಗಳು ಶಿಷ್ಯನನ್ನಾಗಿ ಪಡೆಯುತ್ತಾರೆ. ಇಲ್ಲಿರುವ ಭಾರಿ ಗಾತ್ರದ ತೊಲಗಂಬಗಳನ್ನು ಸಿದ್ಧಪ್ಪಾಜಿ ಮಾಡಿದ ಪವಾಡದ ಕತೆಗಳಿಗೆ ಸಮೀಕರಿಸುತ್ತಾರೆ.

ಹಾಲರಬೆ : ಹೂವು, ವಿಭೂತಿ, ಅರಿಶಿನ, ಕುಂಕುಮಗಳಿಂದ ಅಲಂಕರಿಸಿದ ಮೀಸಲು ಗಂಟುಕಟ್ಟಿದ ಹಾಲು ತುಂಬಿದ ಕೊಡ. ಅಲಂಬಾಡಿಯ ಜುಂಜೇಗೌಡನ ಮನೆಯಿಂದ ಮಲೆಯಮಾದೇಶ್ವರನ ಸೇವೆಗೆ ಹಾಲರಬೆ ಬರುತ್ತಿತ್ತು.

# ಪರಾಮರ್ಶನ ಗ್ರಂಥಗಳು


೧. ಅಂಬಳಿಕೆ ಹಿರಿಯಣ್ಣ (ಸಂ) : ೧೯೭೬, ತೀರ್ಥಹಳ್ಳಿ ಸುತ್ತಿನ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨. ಅಂಬಳಿಕೆ ಹಿರಿಯಣ್ಣ (ಸಂ) : ೧೯೭೮, ಕಾಡುಗೊಲ್ಲರ ಜನಪದ ಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೩. ಅಂಬಳಿಕೆ ಹಿರಿಯಣ್ಣ : ೧೯೮೦, ತಂಬೂರಿ ಸಂಪ್ರದಾಯದ ಕಾವ್ಯಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೪. ಅಂಬಳಿಕೆ ಹಿರಿಯಣ್ಣ (ಸಂ) : ೧೯೮೫, ಲೌಕಿಕ ಸಂಪ್ರದಾಯದ ಚೌಡಿಕೆ ಕಾವ್ಯಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೫. ಅಂಬಳಿಕೆ ಹಿರಿಯಣ್ಣ : ೧೯೮೮, ಜಾನಪದ ಪರಿಶೋಧನ, ಪ್ರಜ್ವಲ ಪ್ರಕಾಶನ, ಮೈಸೂರು

೬. ಅಂಬಳಿಕೆ ಹಿರಿಯಣ್ಣ (ಸಂ) : ೧೯೯೪, ಜಾನಪದ : ಕೆಲವು ಅಧ್ಯಯನಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೭. ಅಂಬಳಿಕೆ ಹಿರಿಯಣ್ಣ : ೧೯೯೬, ಜಾನಪದ ಕೆಲವು ವಿಚಾರಗಳು, ಚೇತನ ಬುಕ್ ಹೌಸ್, ಮೈಸೂರು

೮. ಅಂಬಳಿಕೆ ಹಿರಿಯಣ್ಣ : ೧೯೯೮, ಜನಪದ ಮಹಾಕಾವ್ಯಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೯. ಅಂಬಳಿಕೆ ಹಿರಿಯಣ್ಣ : ೧೯೯೯, ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೦. ಅಂಬಳಿಕೆ ಹಿರಿಯಣ್ಣ : ೨೦೦೦, ಜಾನಪದ ಪ್ರಕ್ರಿಯೆ, ಹಾಂಕೊದೃಷ್ಟಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೧. ಅಮೃತ ಸೋಮೇಶ್ವರ : ೧೯೭೮, ಅವಿಲು, ಕನ್ನಡ ಸಂಘ, ವಿವೇಕಾನಂದ ಕಾಲೇಜು, ಪುತ್ತೂರು, ದ.ಕ.

೧೨. ಅರವಿಂದ ಮಾಲಗತ್ತಿ (ಸಂ) : ೧೯೯೯, ಜಾನಪದ ತತ್ವಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೩. ಅರವಿಂದ ಮಾಲಗತ್ತಿ : ೧೯೯೯, ಪುರಾಣ ಜಾನಪದ ಮತ್ತು ದೇಶೀವಾದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೪. ಅರವಿಂದ ಮಾಲಗತ್ತಿ (ಸಂ) : ೨೦೦೦, ಮಲೆಯಮಾದೇಶ್ವರ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೫. ಅವಧಾನಿ ಜಿ.ಎಸ್. (ಸಂ), : ೧೯೯೫, ದೀಪಾರಾಧನೆ, ಜಾನಪದ ಪ್ರಕಾಶನ, ಹೊನ್ನಾವರ, ಉ.ಕ.

೧೬. ಆನಂದಮೂರ್ತಿ ಜಿ.ವಿ (ಸಂ) : ಜುಲೈ–ಡಿಸೆಂಬರ್ ೧೯೯೯, ಜಾನಪದ ಸಮಾಚಾರ (ವಿಶೇಷ ಸಂಚಿಕೆ) ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೭. ಆನಂದಮೂರ್ತಿ ಜಿ.ವಿ. (ಸಂ) : ೨೦೦೦, ಗಂಧರ್ವಲೋಕದ ಗೆಣೆಕಾರರು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೮. ಈಶ್ವರಪ್ಪ ಎಂ.ಜಿ. : ೧೯೮೮, ಮ್ಯಾಸ ಬೇಡರು, ಐಬಿಎಚ್ ಪ್ರಕಾಶನ, ಬೆಂಗಳೂರು

೧೯. ಈಶ್ವರಪ್ಪ ಎಂ.ಜಿ. : ೧೯೯೯, ಜಾನಪದ ಇಬ್ಬನಿಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೨೦. ಕಲಬುರ್ಗಿ ಎಂ.ಎಂ.(ಸಂ) : ೧೯೮೭, ಜಾನಪದ ಸಾಹಿತ್ಯ ದರ್ಶನ (ಭಾಗ–೧೧) ಕನ್ನಡ ಅಧ್ಯಯನ ಪೀಠ, ಧಾರವಾಡ

೨೧. ಕಲಬುರ್ಗಿ ಎಂ.ಎಂ. (ಸಂ) : ೧೯೯೪, ಜಾನಪದ ಸಾಹಿತ್ಯದರ್ಶನ (ಭಾಗ–೧೨), ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ

೨೨. ಕರ್ನಾಟಕ ಕೈಪಿಡಿ : ೧೯೯೬, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಕರ್ನಾಟಕ ಸರ್ಕಾರ

೨೩. ಕರೋವ್ಕಿನ್ ಎಫ್ : ೧೯೮೭, ಪುರಾತನ ಜಗತ್ತಿನ ಇತಿಹಾಸ, ಪ್ರಗತಿ ಪ್ರಕಾಶನ, ಸೋವಿಯತ್ ಒಕ್ಕೂಟ, ಮಾಸ್ಕೊ,

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್, ಬೆಂಗಳೂರು

೨೪. ಕಾಳೇಗೌಡ ನಾಗವಾರ (ಸಂ) : ಸಹಸ್ರಮಾನ ಜಾನಪದ ೮, ಜಾನಪದದ ತುಂಬು ಹೊಳೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೨೫. ಕಾಳೇಗೌಡ ನಾಗವಾರ (ಸಂ) : ೧೯೭೩, ಬಯಲು ಸೀಮೆಯ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨೬. ಕಾಳೇಗೌಡ ನಾಗವಾರ : ೧೯೯೦, ಜುಂಜಪ್ಪ, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು

೨೭. ಕಾಳೇಗೌಡ ನಾಗವಾರ (ಸಂ) : ೧೯೯೬, ಸ್ವಾತಂತ್ರ್ಯದ ಅಂತರ್ಜಲ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೨೮. ಕಾಳೇಗೌಡ ನಾಗವಾರ : ೧೯೯೬, ಜನಪದ ಸಾಹಿತ್ಯ, ಯುಗಾದಿ ಪ್ರಕಾಶನ, ಬೆಂಗಳೂರು

೩೦. ಕಾಳೇಗೌಡ ನಾಗವಾರ (ಸಂ) : ೨೦೦೦, ಗಿರಿಜನ ಸಂಸ್ಕೃತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೩೧. ಕಾಳೇಗೌಡ ನಾಗವಾರ (ಸಂ) : ೨೦೦೦, ಜೀಶಂಪ ಅವರ ಜಾನಪದ ಬರಹಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೩೨. ಕಾಳೇಗೌಡ ನಾಗವಾರ (ಸಂ) : ೨೦೦೦, ಗಿರಿಜನ ಕಾವ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೩೩. ಕೇಶವನ್ ಪ್ರಸಾದ್ ಕೆ. (ಸಂ) : ೧೯೯೭, ಮಲೆಮಾದೇಶ್ವರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩೪. ಕುಂತೂರು ಸಂಗಪ್ಪ ಶಾಸ್ತ್ರಿ : ೧೯೯೧, ಶ್ರೀ ಸುತ್ತೂರು ವೀರಸಿಂಹಾಸನ ಗುರುಪರಂಪರೆ, ಜಗದ್ಗುರು ಶ್ರೀಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು

೩೫. ಕೃಷ್ಣಮೂರ್ತಿ ಹನೂರು (ಸಂ) : ೧೯೮೨, ಜನಪದ ವೀರಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೩೬. ಕೃಷ್ಣಮೂರ್ತಿ ಹನೂರು (ಸಂ) : ೧೯೯೮, ಜನಪದ ಮತ್ತು ಬುಡಕಟ್ಟು ಗೀತೆಗಳು, ಸಾಹಿತ್ಯ ಅಕಾದಮಿ, ಬೆಂಗಳೂರು

೩೭. ಕೃಷ್ಣಯ್ಯ ಎಸ್.ಎ (ಸಂ) : ೧೯೯೨, ಬಾಚಿಗೊಂಡನ ಹಳ್ಳಿ ಮತ್ತು ಏಣಿಗಿ ಬಸಾಪುರದ ಜನಪದ ಗೀತೆಗಳು, ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ

೩೬. ಕೃಷ್ಣ ಶಾಸ್ತ್ರಿ ಎ.ಅರ್. : ೧೯೯೭, ವಚನ ಭಾರತ, ಗೀತಾ ಬುಕ್‌ಹೌಸ್, ಮೈಸೂರು

೩೮. ಕೃಷ್ಣಮೂರ್ತಿ ಹನೂರು (ಸಂ) : ೧೯೮೧, ಕತ್ತಲದಾರಿ ದೂರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೯. ಕ್ಯಾತನಹಳ್ಳಿ ರಾಮಣ್ಣ : ೧೯೮೫, ಕೊಂತಿ ಪೂಜೆ : ಒಂದು ಅಧ್ಯಯನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೪೦. ಖಂಡೋಬ ಪಿ.ಕೆ (ಸಂ) : ೧೯೯೭, ಹಲಸಂಗಿ ಗೆಳೆಯರು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೪೧. ಗಂಗಾಧರ ದೈವಜ್ಞ : ೧೯೯೯, ಮಾಳಿಂಗರಾಯನ ಕಾವ್ಯ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೪೨. ಗಂಗಾಧರ ದೈವಜ್ಞ : ೨೦೦೦, ಬುಡಕಟ್ಟು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೪೩. ಗದ್ದಿಗಿಮಠ ಬಿ.ಎಸ್. : ೧೯೮೮, ಗದ್ದಗಿಮಠರ ಬರಹಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೪೪. ಗಾಯತ್ರಿ ಎನ್. : ೧೯೯೬, ಮಹಿಳೆ ಬಿಡುಗಡೆಯ ಹಾದಿಯಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೪೫. ಗಾಯತ್ರಿ ನಾವಡ : ೧೯೯೯, ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ರಾಷ್ಟ್ರಕವಿ ಗೋವಿಂದಪೈ ಸಂಶೋಧನ ಕೇಂದ್ರ, ಉಡುಪಿ, ಸಿರಿಪ್ರಕಾಶನ, ಹೊಸಪೇಟೆ

೪೬. ಗಾಯತ್ರಿ ನಾವಡ : ೨೦೦೦, ಭಾರತೀಯ ಸ್ತ್ರೀವಾದ, ಒಂದು ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೪೭. ಗಿರಡ್ಡಿ ಗೋವಿಂದರಾಜ : ೧೯೯೪, ಜನಪದ ಕಾವ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೪೮. ಗುಂಡ್ಮಿ ಚಂದ್ರಶೇಖರ ಐತಾಳ : ೧೯೭೦, ಕೈಲಿಯ ಕರೆದ ನೊರೆಹಾಲು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೪೯. ಗುರುಪ್ರಸಾದ್ ಸಿ.ಟಿ : ೨೦೦೨, ನೀಲಗಾರರು: ಒಂದು ಧಾರ್ಮಿಕ ಸಮುದಾಯದ ಅಧ್ಯಯನ (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೪೮. ಗೋಪಾಲಕೃಷ್ಣಯ್ಯ ಕೆ.ಎಲ್. : ೧೯೯೮, ಪುರಾಣ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪೯. ಚಂದ್ರಶೇಖರ ಕಂಬಾರ : ೧೯೭೮, ಜನಪದ ಸಾಹಿತ್ಯ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

೫೦. ಚಂದ್ರು ಕಾಳೇನಹಳ್ಳಿ : ೧೯೯೩, ಸೋಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಆಕಾಡೆಮಿ, ಬೆಂಗಳೂರು

೫೧. ಚಕ್ಕರೆ ಶಿವಶಂಕರ್ : ೧೯೮೭, ಮಹಾಕಾವ್ಯಗಳು ಲೇಖನಗಳು, ಕಲ್ಯಾಣಿ ಪ್ರಕಾಶನ, ಬೆಂಗಳೂರು

೫೨. ಚಕ್ಕರೆ ಶಿವಶಂಕರ್ : ೧೯೮೮, ಕೋರಣ್ಯ ನೀಡವ್ವ ಕೋಡುಗಲ್ಲಯ್ಯನಿಗೆ, ಕಲ್ಯಾಣಿ ಪ್ರಕಾಶನ, ಬೆಂಗಳೂರು

೫೪. ಚಲುವರಾಜು : ೧೯೯೬, ಜೀ.ಶಂ.ಪರಮಶಿವಯ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೫೫. ಚಲುವರಾಜು (ಸಂ) : ೧೯೯೭, ಜುಂಜಪ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೫೬. ಚಿಕ್ಕಣ್ಣಯಣ್ಣೆ ಕಟ್ಟೆ : ೨೦೦೧, ತುಮಕೂರು ಜಿಲ್ಲೆ : ಜಾನಪದೀಯ ಅಧ್ಯಯನ, ಗಡಿನಾಡ ಜಾನಪದ ಸಂಪರ್ಕ ಕೇಂದ್ರ, ಕಾಳಿದಾಸನಗರ, ಸಿರಾ

೫೭. ಚೆನ್ನಕ್ಕ ಎಲಿಗಾರ : ೧೯೯೦, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೫೮. ಚೆನ್ನಬಸಪ್ಪ ಕೋ : ೧೯೯೯, ಶ್ರೀರಾಮಾಯಣ ದರ್ಶನಂ ಮಹಾಕಾವ್ಯ ಸಮೀಕ್ಷೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೫೯. ಜವಳಿ ಬಿ.ಸಿ. : ೧೯೮೩, ಹರಿಹರ ಕವಿಯ ಸ್ತ್ರೀಪಾತ್ರ ದರ್ಶನ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೬೦. ಜವರೇಗೌಡ ದೇ. : ೧೯೮೬, ಜಾನಪದ ವಾಹಿನಿ, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು

೬೧. ಜವರೇಗೌಡ ದೇ. : ೧೯೮೯, ಜಾನಪದ ಸೌಂದರ್ಯ, ಸಹ್ಯಾದ್ರಿ ಪ್ರಕಾಶನ, ಶ್ರೀಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು

೬೨. ಜವರೇಗೌಡ ದೇ. (ಸಂ) : ೧೯೯೦, ಜನಪದ ಗೀತಾಂಜಲಿ, ಸಾಹಿತ್ಯ ಅಕಾಡೆಮಿ, ನವದೆಹಲಿ

೬೩. ಜವರೇಗೌಡ ದೇ. : ೧೯೯೧, ಜಾನಪದ ಅಧ್ಯಯನ, ಚೇತನ ಬುಕ್‌ಹೌಸ್, ಮೈಸೂರು

೬೪. ಜವರೇಗೌಡ ದೇ. : ೧೯೯೬, ಗದುಗಿನ ಭಾರತ–ಒಂದು ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೬೫. ಜವರೇಗೌಡ ದೇ. : ೧೯೯೭, ವಚನಚಂದ್ರಿಕೆ, ಡಿ.ವಿ.ಕೆ.ಮೂರ್ತಿ, ಮೈಸೂರು

೬೬. ಜ್ಯೋತ್ಸ್ನಾಕಾಮತ್ : ೧೯೯೯, ಮಹಿಳೆ ಒಂದು ಅಧ್ಯಯನ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೬೭. ಡಿ.ವಿ.ಜಿ. (ಗುಂಡಪ್ಪ ಡಿ.ವಿ) : ೧೯೯೬, ಸಂಸ್ಕೃತಿ, ಕಾವ್ಯಾಲಯ ಪ್ರಕಾಶಕರು, ಮೈಸೂರು

೬೮. ತಪಸ್ವಿಕುಮಾರ್ ನಂ : ೧೯೯೯, ಜಾನಪದ ಅಧ್ಯಯನದ ಸಂಕ್ಷಿಪ್ತ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೬೯. ತಮಂಪ ಮೂರ್ತಿ : ೧೯೮೦, ಧರೆಗೆ ದೊಡ್ಡವರ ಕಾವ್ಯ, ತಲಕಾಡು ಮಂಲಯ್ಯ ಪರಶಿವಮೂರ್ತಿ, ಬೆಂಗಳೂರು

೭೦. ತಿಪ್ಪೇಸ್ವಾಮಿ ಜಿ.ಆರ್. : ೧೯೯೬, ಕೋಲಾರಮ್ಮ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೭೧. ದುರ್ಗಾದಾಸ್ ಕೆ.ಆರ್. (ಸಂ) : ೧೯೯೬, ಮೂರು ದಲಿತ ಕಮ್ಮಟಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೭೨. ದೇವೇಂದ್ರಕುಮಾರ ಹಕಾರಿ (ಸಂ) : ೨೦೦೦, ಗ್ರಾಮೀಣ ವೃತ್ತಿಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೭೩. ಧರಣೀದೇವಿ ಮಾಲಗತ್ತಿ : ೧೯೯೮, ಸ್ತ್ರೀವಾದ ಮತ್ತು ಭಾರತೀಯತೆ, ಚೇತನ ಬುಕ್ ಹೌಸ್, ಬೆಂಗಳೂರು

೭೪. ನಂಜುಂಡಾರಾಧ್ಯ ಎಂ.ಜಿ. : ೧೯೯೦, ಶಿವರಾತ್ರಿ ಶಿವಾಚಾರ್ಯ, ಜಗದ್ಗುರು ಶ್ರೀಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು

೭೫. ನಟರಾಜ್ ಹುಳಿಯಾರ್ (ಸಂ) : ೧೯೯೮, ಉತ್ತರ ಧಕ್ಷಿಣ ರಾಮಮನೋಹರ ಲೋಹಿಯಾ ಬರಹಗಳು ಸಂಪುಟ : ಎರಡು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೭೬. ನಾಗರಾಜ ಮೈ.ನ : ೧೯೮೮, ಸೋಲಿಗರು, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು

೭೭. ನಾಗೇಶ್ ಹೆಚ್.ಕೆ. (ಸಂ) : ೨೦೦೦, ಕಾಳಿಂಗರಾಯನ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೭೮. ನಾಗರಾಜು ಸಿ. : ೧೯೮೮, ಶ್ರೀ ಮಲೆಮಾದೇಶ್ವರ ಕ್ಷೇತ್ರ, ಶ್ರೀಶಾಂತ ಮಲ್ಲಿಕಾರ್ಜುನಸ್ವಾಮಿ ಪ್ರಕಾಶನ, ಸಾಲೂರು ಮಠ

೭೯. ನಾಯಕ ಹಾ.ಮಾ. : ೧೯೭೧, ಜಾನಪದ ಸ್ವರೂಪ, ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು

೮೦. ನಾಯಕ ಹಾ.ಮಾ : ೧೯೭೪, ಕನ್ನಡ ಜಾನಪದ ಗ್ರಂಥಸೂಚಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೮೧. ನಾಯಕ ಹಾ.ಮಾ : ೧೯೮೯, ಸಪ್ತಕ, ಕಾವ್ಯಾಲಯ, ಮೈಸೂರು

೮೨. ನಾಗೇಗೌಡ ಎಚ್.ಎಲ್ : ೧೯೯೧, ಗ್ರಾಮದೇವತೆ ಮಾರಮ್ಮ, ಕರ್ನಾಟಕ ಜಾನಪದ ಟ್ರಸ್ಟ್, ಬೆಂಗಳೂರು

೮೩. ನಾಗೇಗೌಡ ಎಚ್.ಎಲ್ (ಸಂ) : ೧೯೯೮, ಕನ್ನಡ ಜಾನಪದ ಕೋಶ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು

೮೪. ನಾವಡ ಎ.ವಿ. (ಸಂ) : ೧೯೯೨, ಜಾನಪದ ವರ್ಷ ೧೯೯೬, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೮೫. ನಾಯಕ ಎನ್.ಆರ್. : ೧೯೮೨, ಕಾರವಾರ ಜಿಲ್ಲೆಯ ಜನಪದ ಗೀತೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೮೬. ನಾಯಕ ಎನ್.ಆರ್. : ೧೯೮೩, ಕರ್ನಾಟಕದ ಶಕ್ತಿದೇವತೆಗಳು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

೮೭. ನಾಯಕ ಎನ್.ಆರ್. : ೧೯೮೯, ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟು ಜನಾಂಗಗಳ ಜಾನಪದ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೮೮. ನಾಯಕ ಎನ್.ಆರ್. (ಸಂ) : ೧೯೯೨, ಗಾಮೊಕ್ಕಲ ಮಹಾಭಾರತ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೮೯. ನಾಯಕ ಎನ್.ಆರ್. : ೨೦೦೦, ಹಳ್ಳೇರ ಜಾನಪದ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೯೦. ನಾಗರಾಜ್ ಡಿ.ಆರ್. : ೨೦೦೧, ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ

೯೧. ನೇಗಿನಹಾಳ ಎಂ.ಬಿ. : ೧೯೯೯, ನೇಗಿನಹಾಳ ಪ್ರಬಂಧಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೯೨. ಪರಮಶಿವಯ್ಯ ಜೀ.ಶಂ. (ಸಂ) : ೧೯೭೩, ಶ್ರೀ ಮಂಟೇಸ್ವಾಮಿ ಕಾವ್ಯ, ಸಾಹಿತ್ಯ ಸದನ, ಮೈಸೂರು

೯೩. ಪರಮಶಿವಯ್ಯ ಜೀ.ಶಂ. : ೧೯೭೫, ಜಾನಪದ ಕೆಲವು ಮುಖಗಳು, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ ನಿಯಮಿತ, ಬೆಂಗಳೂರು

೯೪. ಪರಮಶಿವಯ್ಯ ಜೀ.ಶಂ. : ೧೯೭೮, ಜಾನಪದ, ಸಾಹಿತ್ಯ ಸದನ, ಮೈಸೂರು

೯೫. ಪರಮಶಿವಯ್ಯ ಜೀ.ಶಂ. : ೧೯೭೯, ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೯೬. ಪರಮಶಿವಯ್ಯ ಜೀ.ಶಂ. : ೧೯೮೦, ಮಂಟೇಸ್ವಾಮಿಯ ನೀಲಗಾರರು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

೯೭. ಪರಮಶಿವಯ್ಯ ಜೀ.ಶಂ. : ೧೯೮೨, ಕರ್ನಾಟಕ ಜಾನಪದ ಸಮೀಕ್ಷೆ, ವಿಶ್ವಕನ್ನಡ ಸಮ್ಮೇಳನ, ನೃಪತುಂಗ ರಸ್ತೆ, ಬೆಂಗಳೂರು

೯೮. ಪರಮಶಿವಯ್ಯ ಜೀ.ಶಂ. : ೧೯೯೦, ಜನಪದ ಕಾವ್ಯ ಕಥೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೯೯. ಪರಮಶಿವಯ್ಯ ಜೀ.ಶಂ. : ೧೯೯೬, ಜನಪದ ಖಂಡಕಾವ್ಯ, ಚೇತನ ಬುಕ್ ಹೌಸ್, ಮೈಸೂರು

೧೦೦. ಪರಮಶಿವಯ್ಯ ಜೀ.ಶಂ. : ೧೯೯೬, ಜಾನಪದ ಕೆಲವು ಮುಖಗಳು, ಚೇತನ ಬುಕ್ ಹೌಸ್, ಮೈಸೂರು

೧೦೧. ಪರಮಶಿವಯ್ಯ ಜೀ.ಶಂ. : ೧೯೯೮, ಜಾನಪದ, ಚೇತನ ಬುಕ್ ಹೌಸ್, ಮೈಸೂರು

೧೦೨. ಪರಮಶಿವಯ್ಯ ನಡುಬೆಟ್ಟ : ೧೯೮೯, ಧರೆಗೆ ದೊಡ್ಡವರು, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು

೧೦೩. ಪಾಟೀಲ ಬಿ.ಪಿ. : ೧೯೯೬, ಗ್ರಾಮದೇವತೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೦೪. ಪುರುಷೋತ್ತಮ ಬಿಳಿಮಲೆ : ೧೯೯೨, ಕೂಡು ಕಟ್ಟು, ಆನಂದ ಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ

೧೦೫. ಫ್ರೆಡರಿಕ್ ಎಂಗೆಲ್ಸ್ : ೧೯೮೦, ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ, ಪ್ರಗತಿ ಪ್ರಕಾಶನ, ಮಾಸ್ಕೋ

೧೦೬. ಪ್ರಭಾಕರ ಎ.ಎಸ್ (ಸಂ) : ೧೯೯೯, ಮ್ಯಾಸಬೇಡರ ಕಥನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೦೭. ಪ್ರಭಾಕರ ಎ.ಎಸ್. : ೨೦೦೦, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೦೮. ಪ್ರಭಾವತಿ ಎಸ್.ವಿ. : ೧೯೯೬, ದ್ರೌಪದಿ–ಒಂದು ಅಧ್ಯಯನ, ಅಪರ್ಣಾ ಪ್ರಕಾಶನ, ಬೆಂಗಳೂರು

೧೦೯. ಪ್ರಭಾವತಿ ಎಸ್.ವಿ. ೧೯೯೭, ದ್ರೌಪದಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೧೦. ಪ್ರಭಾವತಿ ಎಸ್.ವಿ. : ೧೯೯೨, ಕುಂತಿ, ಭಾರತೀಯ ಸಂಸ್ಕೃತಿ ವಿದ್ಯಾಪೀಠ, ಬೆಂಗಳೂರು

೧೧೧. ಪ್ರಭಾವತಿ ಎಸ್.ವಿ. : ೨೦೦೦, ಸ್ತ್ರೀವಾದದ ಪ್ರಸ್ತುತತೆ, ಭಾರತೀಯ ಸಂಸ್ಕೃತಿ ವಿದ್ಯಾಪೀಠ, ಬೆಂಗಳೂರು

೧೧೨. ಪ್ರಭಾವತಿ ಎಸ್.ವಿ. : ೨೦೦೦, ಸೀತಾ, ವಸಂತ ಪ್ರಕಾಶನ, ಬೆಂಗಳೂರು

೧೧೩. ಬಸವರಾಜ ಪೋಲಿಸ ಪಾಟೀಲ : ೧೯೯೦, ಜಾನಪದ ಸಿರಿ, ವಿದ್ಯಾಸಾಗರ ಪ್ರಕಾಶನ, ಗುಲ್ಬರ್ಗ

೧೧೪. ಬಸವಲಿಂಗ ಸೊಪ್ಪಿಮಠ (ಸಂ) : ೧೯೯೮, ಕೊಡೇಕಲ್ಲ ವಚನವಾಕ್ಯ ಸಂಪುಟ೧ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೧೫. ಬಸವಲಿಂಗ ಸೊಪ್ಪಿಮಠ : ೧೯೯೫, ಕೊಡೇಕಲ್ಲ ಬಸವಣ್ಣ–ಒಂದು ಅಧ್ಯಯನ, ಶ್ರೀ ಕೋಡೆಕಲ್ಲ ಬಸವೇಶ್ವರ ಅಧ್ಯಯನ ಸಂಸ್ಥೆ, ಕೊಡೇಕಲ್ಲು.

೧೧೬. ಬಸವರಾಜ ನೆಲ್ಲಿಸರ (ಸಂ) : ೧೯೮೪, ಜಾನಪದ ಕಾವ್ಯ ಸಂಚಯ, ಕುವೆಂಪು ವಿಶ್ವವಿದ್ಯಾಲಯ, ಸ್ನಾತಕೋತ್ತರ ಕೇಂದ್ರ, ಬಿ.ಆರ್. ಪ್ರಾಜೆಕ್ಟ್, ಶಿವಮೊಗ್ಗ.

೧೧೭. ಬಸವರಾಜ ನೆಲ್ಲಿಸರ (ಸಂ) : ೧೯೯೧, ಜಾನಪದ ಮತ್ತು ಪೂರಕ ಕ್ಷೇತ್ರಗಳು, ಬಿ.ಆರ್.ಪ್ರಾಜೆಕ್ಟ್, ಶಿವಮೊಗ್ಗ.

೧೧೮. ಬಸವರಾಜ ನೆಲ್ಲಿಸರ (ಸಂ) : ೧೯೯೬, ಜಾನಪದ ೧೯೯೬, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೧೯. ಬೋರಲಿಂಗಯ್ಯ ಹಿ.ಚಿ. : ೧೯೮೧, ದಾಸಪ್ಪ–ಜೋಗಪ್ಪ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೨೦ ಬೋರಲಿಂಗಯ್ಯ ಹಿ.ಚಿ. : ೧೯೯೧, ಗಿರಿಜನ ನಾಡಿಗೆ ಪಯಣ, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು

೧೨೧. ಬೋರಲಿಂಗಯ್ಯ ಹಿ.ಚಿ. : ೧೯೯೩, ಸಿದ್ದಿಯವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೨೨. ಬೋರಲಿಂಗಯ್ಯ ಹಿ.ಚಿ. : ೧೯೯೪, ಗಿರಿಜನರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೨೩. ಬೋರಲಿಂಗಯ್ಯ ಹಿ.ಚಿ. : ೧೯೯೫, ಕಾಡು ಕಾಂಕ್ರೀಟ್ ಮತ್ತು ಜಾನಪದ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ

೧೨೪. ಬೋರಲಿಂಗಯ್ಯ ಹಿ.ಚಿ. (ಸಂ) : ೧೯೯೬, ಕರ್ನಾಟಕ ಜಾನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೨೫. ಬೋರಲಿಂಗಯ್ಯ ಹಿ.ಚಿ. (ಸಂ) : ೧೯೯೭, ಮಂಟೇಸ್ವಾಮಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೨೬. ಬೋರಲಿಂಗಯ್ಯ ಹಿ.ಚಿ. (ಸಂ) : ೧೯೯೮, ಮಂಟೇಸ್ವಾಮಿ ಕಾವ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೨೭. ಬೋರಲಿಂಗಯ್ಯ ಹಿ.ಚಿ. (ಸಂ) : ೧೯೯೯, ಗೊಂಡರ ರಾಮಾಯಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೨೮. ಬೋರಲಿಂಗಯ್ಯ ಹಿ.ಚಿ. : ೨೦೦೦, ಬುಡಕಟ್ಟು ದೈವಾರಾಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೨೯. ಬೋರಲಿಂಗಯ್ಯ ಹಿ.ಚಿ. : ೨೦೦೧, ವಿಸ್ಮೃತಿ ಮತ್ತು ಸಂಸ್ಕೃತಿ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು

೧೩೦. ಬೋರಲಿಂಗಯ್ಯ ಹಿ.ಚಿ. : ೨೦೦೧, ಉಜ್ಜನಿ ಚೌಡಮ್ಮ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೩೧. ಬೋರಲಿಂಗಯ್ಯ ಹಿ.ಚಿ. : ೨೦೦೨, ಹಾಲಕ್ಕಿ ಒಕ್ಕಲಿಗರ ಜ್ಞಾನ ಪರಂಪರೆ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು

೧೩೨. ಭಟ್ಟ ಜಿ.ಎಸ್. (ಸಂ) : ೧೯೯೨, ಜಾನಪದ ೧೯೯೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೩೩. ಭಟ್ಟ ಜಿ.ಎಸ್. (ಸಂ) : ೧೯೯೬, ಮಹಾಕಾವ್ಯ ಒಂದು ಅವಲೋಕನ, ಚೇತಾನ ಬುಕ್ ಹೌಸ್, ಮೈಸೂರು

೧೩೪. ಭಾರತದ ಗ್ಯಾಸೆಟಿಯರ್ : ಭಾರತದ ದೇಶ–ಕೋಶ ಸಂಪುಟ–೨, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೧೩೫. ಮಂಗಳಾ ಚಿ.ನ. : ೧೯೯೪, ಮಾತೃ ಪೂಜೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೩೬. ಮಂಗಳಾ ಚಿ.ನ. : ೨೦೦೧, ಎಚ್ಚೆತ್ತ ಹಾದಿಯಲ್ಲಿ ಮಹಿಳೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೧೩೭. ಮಂಜುಳಾದೇವಿ ಎಂ.ಎಸ್. : ೧೯೯೭, ಧರೆಗೆ ದೊಡ್ಡವರು, ರೂಪರಾಜ್ ವೇದವಿಜ್ಞಾನ ಸಂಶೋಧನ ಪ್ರತಿಷ್ಠಾನ, ಮೈಸೂರು

೧೩೮. ಮಂಜುನಾಥ ಬೇವಿನಕಟ್ಟಿ (ಸಂ) : ೧೯೯೩, ಜನಪದ ಸಂಸ್ಕೃತಿ, ತೇಜಸ್ವಿ ಪ್ರಕಾಶನ, ಹ್ಯಾರಡ

೧೩೯. ಮಣಿಮಾಲಿನಿ ವಿ.ಕೆ. : ೧೯೯೬, ದ್ರೌಪದೀ ಸಮೀಕ್ಷೆ, ಕನ್ನಡ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ, ಮುಂಬಯಿ

೧೪೦. ಮತಿಘಟ್ಟ ಕೃಷ್ಣಮೂರ್ತಿ (ಸಂ) : ೧೯೮೨, ಕನ್ನಡ ಜನಪದ ಸಾಹಿತ್ಯ ಭಂಡಾರ ಸಂಪುಟ ೨, ಮತಿಘಟ್ಟ ಕೃಷ್ಣಮೂರ್ತಿ, ಬೆಂಗಳೂರು

೧೪೧. ಮುದ್ದುಕೃಷ್ಣ ವೈ.ಕೆ. (ಸಂ) : ೧೯೯೮, ಅತ್ತಿಮಬ್ಬೆ ಮತ್ತು ಸಮಕಾಲೀನ ಸ್ತ್ರೀ ಸಂಸ್ಕೃತಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೧೪೨. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ೧೯೯೪, ಸಂಕ್ಷಿಪ್ತ ವಾಲ್ಮೀಕಿ ರಾಮಾಯಣ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು

೧೪೩. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ೧೯೯೫, ಆದಿಕವಿ ವಾಲ್ಮೀಕಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಜೀವನ ಕಾರ್ಯಾಲಯ ಟ್ರಸ್ಟ್ (ರಿ), ಬೆಂಗಳೂರು

೧೪೪. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ೨೦೦೦, ಅಂತರಗಂಗೆ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು

೧೪೫. ಮೀರಸಾಬಿಹಳ್ಳಿ ಶಿವಣ್ಣ : ೧೯೯೯, ಗೊಲ್ಲಕಡಗ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು

೧೪೬. ಮುಕ್ತಾಯಕ್ಕ ಎಚ್.ಎಸ್. : ೧೯೯೭, ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೪೭. ಮೈತ್ರಿ ಕೆ.ಎಂ. (ಸಂ) : ೨೦೦೦, ಕೃಷ್ಣಗೊಲ್ಲರ ಕಥನ ಕಾವ್ಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೪೮. ಮೊಗಳ್ಳಿ ಗಣೇಶ್ (ಸಂಗ್ರಹ) : ೧೯೯೬, ಮಲೆಮಾದೇಶ್ವರ ಕಾವ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೪೯. ಯೋಗೀಶ್ ಡಿ.ಎನ್ (ಸಂ) : ೨೦೦೨, ಜಯಮಂಗಲಿ (೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ–ತುಮಕೂರು) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೫೦. ರಮೇಶ್ ಸ.ಚಿ. (ಸಂ) : ೧೯೯೯, ಸ್ವಾಸಿ ಚಿನ್ನಮ್ಮನ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೫೧. ರಮೇಶ್ ಸ.ಚಿ. (ಸಂ) : ೨೦೦೩, ಮಾಟ ಮಂತ್ರ ಮೋಡಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫೨. ರಹಮತ್ ತರೀಕೆರೆ : ೨೦೦೧, ಕರ್ನಾಟಕದ ಸೂಫಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೫೩. ರಹಮತ್ ತರೀಕೆರೆ : ೨೦೦೨, ಮರದೊಳಗಣ ಕಿಚ್ಚು, ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್, ಮೈಸೂರು

೧೫೪. ರಾಮಚಂದ್ರೇಗೌಡ ಹಿ.ಶಿ (ಸಂ) : ೧೯೯೮, ಸುವರ್ಣ ಜಾನಪದ (ಸಂಪುಟ–೧) ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೫೫. ರಾಜಶೇಖರ ಪಿ.ಕೆ (ಸಂ) : ೧೯೯೧, ಮಲೆಯಮಾದೇಶ್ವರ ಭಾಗ–೨, ಹೊನ್ನಾರು ಜನಪದ ಗಾಯಕರು, ಮಾನಸಗಂಗೋತ್ರಿ, ಮೈಸೂರು

೧೫೬. ರಾಗೌ (ಸಂ) : ೧೯೭೨, ಜನಪದ ರಾಮಾಯಣ

೧೫೭. ರುದ್ರಪ್ಪ : ೧೯೯೫, ಜನಪದ ಸಾಹಿತ್ಯದಲ್ಲಿ ಮಂಟೇಸ್ವಾಮಿ, ವಿಶ್ವ ಆಧ್ಯಾತ್ಮ ವಿಕಾಸ ಪ್ರತಿಷ್ಠಾನ, ಬೆಂಗಳೂರು

೧೫೮. ಲಕ್ಕಪ್ಪಗೌಡ ಎಚ್.ಜೆ (ಸಂ) : ೧೯೮೩, ಮಲೆನಾಡು ಜಾನಪದ, ಬಿ.ಆರ್. ಪ್ರಾಜೆಕ್ಟ, ಶಿವಮೊಗ್ಗ

೧೫೯. ಲಕ್ಕಪ್ಪಗೌಡ ಎಚ್.ಜೆ (ಸಂ) : ೧೯೯೩, ಮಲ್ಲಿಗೆ ಮೊಗ್ಗು ಸುರಿದಾವೆ, ಚೈತ್ರಶ್ರೀ ೯೩, ಚಿಕ್ಕಮಗಳೂರು ಜಿಲ್ಲೆ, ತರೀಕೆರೆ

೧೬೦. ಲಕ್ಕಪ್ಪಗೌಡ ಎಚ್.ಜೆ (ಸಂ) : ೧೯೯೫, ಜೀಶಂಪ ಸಂಸ್ಮರಣೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೬೧. ಲಕ್ಕಪ್ಪಗೌಡ ಎಚ್.ಜೆ (ಪ್ರ.ಸಂ) : ೧೯೯೮, ಸುವರ್ಣ ಜಾನಪದ (ಸಂಪುಟ–೨) ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೬೨. ಲಕ್ಕಪ್ಪಗೌಡ ಎಚ್.ಜೆ (ಪ್ರ.ಸಂ) : ೧೯೯೮,ಕರ್ನಾಟಕ ಬುಡಕಟ್ಟುಗಳು ಸಂಪುಟ –೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೬೩. ಲಿಂಗಯ್ಯ ಡಿ. : ೧೯೬೭, ಕೊಂತಿ ಪೂಜೆ, ದಿನಕರ ಪ್ರಕಾಶನ, ಪಿ.ಹಳ್ಳಿ ಕೋಡಿಯಾಲ ಪೋಸ್ಟ್, ಮಂಡ್ಯ

೧೬೪. ವರದಾ ಶ್ರೀನಿವಾಸ್ : ೧೯೯೯, ಮಹಿಳೆಯ ಸ್ಥಿತಿ–ಗತಿ ಅಂದು ಇಂದು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೧೬೫. ವಿಠಲರಾವ್ ಗಾಯಾಕ್ವಾಡ್ : ೨೦೦೧, ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೬೬. ವಿವಿಧ ಲೇಖಕರು : ೧೯೯೩, ಕನ್ನಡ ಸಾಹಿತ್ಯದಲ್ಲಿ ಹಿಂಸೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೬೭. ವಿವಿಧ ಲೇಖಕರು : ೧೯೯೩, ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೬೮. ವಿವಿಧ ಲೇಖಕರು : ೧೯೯೩, ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೬೯. ವೀರಣ್ಣ ದಂಡೆ (ಸಂ) : ೨೦೦೦, ಜನಪದ ಹಾಲುಮತ ಮಹಾಕಾವ್ಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೭೦. ವೀರಣ್ಣ ಸಿ. : ೧೯೯೯, ಕನ್ನಡ ಕಾವ್ಯ ಕಂಡ ಹೆಣ್ಣು, ಶಕ್ತಿ ಮುದ್ರಣ ಮತ್ತು ಪ್ರಕಾಶನ, ಬೆಂಗಳೂರು

೧೭೧. ವೃಷಭೇಂದ್ರಸ್ವಾಮಿ ಎಸ್.ಎಂ (ಸಂ): ೧೯೮೮, ಜನಪದ ಸಾಹಿತ್ಯ ದರ್ಶನ ಭಾಗ–೯, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೭೨. ವೆಂಕಟಾಚಲ ಶಾಸ್ತ್ರೀ ಟಿ.ವಿ. : ೨೦೦೧, ಮಹಾಕಾವ್ಯ ಲಕ್ಷಣ, ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು

೧೭೩. ವೆಂಕಟೇಶ ಇಂದ್ವಾಡಿ ರಾ. : ೧೯೯೬, ಧರೆಗೆ ದೊಡ್ಡವರ ಕತೆ, ವಿಶ್ವಾಲಯ ಪ್ರಕಾಶನ, ಬೆಂಗಳೂರು

೧೭೪. ವೆಂಕಟೇಶ ಇಂದ್ವಾಡಿ ರಾ. : ೧೯೯೯, ಮಂಟೇಸ್ವಾಮಿ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೧೭೫. ವೆಂಕಟೇಶ ಇಂದ್ವಾಡಿ ರಾ. : ೨೦೦೦, ಸಾಂಸ್ಕೃತಿಕ ಪದಕೋಶ ನೀಲಗಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೭೬. ಶಂಕರನಾರಾಯಣ ತೀ.ನಂ. : ೧೯೮೨, ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೭೭. ಶಂಕರನಾರಾಯಣ ತೀ.ನಂ. (ಸಂ): ೧೯೮೫, ದ್ರಾವಿಡ ಜಾನಪದ, ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ, ಬಿ.ಆರ್. ಪ್ರಾಜೆಕ್ಟ್, ಮೈಸೂರು ವಿಶ್ವವಿದ್ಯಾನಿಲಯ.

೧೭೮. ಶಂಕರನಾರಾಯಣ ತೀ.ನಂ. : ೧೯೮೮, ಕಾಡುಗೊಲ್ಲರು, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು

೧೭೯. ಶಂಕರನಾರಾಯಣ ತೀ.ನಂ. : ೧೯೯೬, ಜನಪದ ಮಹಾಕಾವ್ಯ, ಕರ್ನಾಟಕ ಸಂಘ, ಪುತ್ತೂರು ಸಂಘ, ಪುತ್ತೂರು, ದ.ಕ.

೧೮೦. ಶಂಕರನಾರಾಯಣ ತೀ.ನಂ. (ಸಂ): ೧೯೯೮, ಕರ್ನಾಟಕ ಜನಪದ ಮಹಾಕಾವ್ಯಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೮೧. ಶಂಕರನಾರಾಯಣ ತೀ.ನಂ. : ೧೯೯೯, ಜಾನಪದ ಸಮೀಕ್ಷೆ – ವಿಶ್ಲೇಷಣೆ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು

೧೮೨. ಶಶಿಕಲಾ ವೀರಯ್ಯಸ್ವಾಮಿ (ಸಂ) : ೧೯೯೫, ಸಂವೇದನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೮೩. ಶಿವರುದ್ರಪ್ಪ ಜಿ.ಎಸ್. : ೧೯೯೬, ಸಮಗ್ರ ಗದ್ಯ ಸಂಪುಟ–೩, ಕಾಮಧೇನು, ಬೆಂಗಳೂರು

೧೮೪. ಶಿವಪ್ರಕಾಶ್ ಎಚ್.ಎಸ್. : ೨೦೦೦, ಮಂಟೇಸ್ವಾಮಿ ಕಥಾಪ್ರಸಂಗ, ನೆಲಮನೆ ಪ್ರಕಾಶನ, ಮಂಡ್ಯ ಜಿಲ್ಲೆ

೧೮೫. ಶಿವಪ್ರಕಾಶ್ ಎಚ್.ಎಸ್ (ಅನು) : ೧೯೯೨, ಯುಗಾಂತ, ಓರಿಯಂಟ್ ಲಾಂಗ್‌ಮನ್, ಬೆಂಗಳೂರು

೧೮೬. ಶ್ರೀಕಂಠ ಕೂಡಿಗೆ (ಸಂ) : ಸಹಸ್ರಮಾನ ಜಾನಪದ : ೧೦, ಜಾನಪದದ ವಿವಿಧ ಮುಖಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೮೭. ಶ್ರೀಕಂಠ ಕೂಡಿಗೆ : ೧೯೭೩, ಅಂಟಿಕೆ–ಪಂಟಿಕೆ ಪದಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ,

೧೮೮. ಶ್ರೀಮತಿ ನಗರಕರ ಡಿ.ಡಿ. : ೨೦೦೦, ಜನಪದ ಗೀತೆಗಳಲ್ಲಿ ತಾಯಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೮೯. ಸಂಗಮೇಶ ಸವದತ್ತಿ ಮಠ : ೨೦೦೦, ವೀರಶೈವ ವಿನ್ಯಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೯೦. ಸಂಧ್ಯಾರೆಡ್ಡಿ ಕೆ.ಆರ್. : ೧೯೯೫, ಜನಪದ ಸಾಹಿತ್ಯದಲ್ಲಿ ಮಹಿಳೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೯೧. ಸಣ್ಣರಾಮ : ೨೦೦೧, ಬುಡಕಟ್ಟು ಸಂಸ್ಕೃತಿ, ಪ್ರಸಾರಾಂಗ

೧೯೨. ಸರಸ್ವತಿ ಎನ್.ಎಸ್. : ೧೯೯೭, ಜನಪದ ಸಾಹಿತ್ಯದಲ್ಲಿ ಪವಾಡಗಳು ಒಂದು ಅಧ್ಯಯನ (ಅಪ್ರಕಟಿತ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೧೯೩. ಸ್ವಾಮಿ ಬಿ.ಎಸ್. : ೧೯೯೩, ಮಲೆಯ ಮಾದೇಶ್ವರ – ಒಂದು ಅಧ್ಯಯನ, ನವೀನ ಪ್ರಕಾಶನ, ಬೆಂಗಳೂರು

೧೯೪. ಸ್ವಾಮಿ ಬಿ.ಎಸ್. : ೧೯೯೫, ಮಲೆಯ ಮಾದೇಶ್ವರ, ಕರ್ನಾಟಕ ಜಾನಪದಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೯೫. ಸ್ವಾಮಿ ಬಿ.ಎಸ್. (ಸಂ) : ೧೯೯೯, ಜಾನಪದ ವೈವಿಧ್ಯ, ನವೀನ ಪ್ರಕಾಶನ, ಬೆಂಗಳೂರು

೧೯೬. ಸ್ವಾಮಿ ಬಿ.ಎಸ್ (ಸಂ) : ೨೦೦೧, ಮಲೆಯಮಾದೇಶ್ವರ, ದಾಮಿನಿ ಸಾಹಿತ್ಯ, ಬೆಂಗಳೂರು

೧೯೭. ಸಿದ್ಧಗಂಗಯ್ಯ ಬಿ. (ಸಂಗ್ರಹ) : ೧೯೯೬, ಜುಂಜಪ್ಪನ ಕಾವ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೯೮. ಸಿದ್ಧಗಂಗಯ್ಯ : ೧೯೯೩, ಗ್ರಾಮದೇವತೆಗಳು, ಮೂಲಭಾರತಿ ಪ್ರಕಾಶನ, ಬೆಂಗಳೂರು

೧೯೯. ಸೀತಾರಾಮಯ್ಯ .ವಿ : ೧೯೯೬, ವಾಲ್ಮೀಕಿ ರಾಮಾಯಣ, ಸಾಹಿತ್ಯ ಅಕಾಡೆಮಿ, ನವದೆಹಲಿ

೨೦೦. ಸುಶೀಲಾ ಪಿ.ಉಪಾಧ್ಯಾಯ : ೧೯೮೯, ಜನಪದ ಆರಾಧನೆ ಮತ್ತು ರಂಗಕಲೆ, ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ

೨೦೧. ಸುಶೀಲಾ ಪಿ.ಉಪಾಧ್ಯಾಯ : ೧೯೯೮, ದಕ್ಷಿಣ ಭಾರತ ಜಾನಪದ, ರಾಷ್ಟ್ರಕವಿ ಗೋವಿಂದಪೈ ಸಂಶೋಧನ ಕೇಂದ್ರ, ಉಡುಪಿ

೨೦೨. ಸುಮಿತ್ರಬಾಯಿ ಬಿ.ಎನ್. : ೧೯೯೯, ಸ್ತ್ರೀವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೦೩. ಸೋಮಶೇಖರ ಇಮ್ರಾಪುರ (ಸಂ): ೧೯೭೬, ಜನಪದ ಮಹಾಭಾರತ, (ಆದಿಪರ್ವ–ಸಭಾಪರ್ವ), ಚೇತನಾ ಪ್ರಕಾಶನ, ಧಾರವಾಡ

